

ದೇವಶಿಖಾಮಣಿ - ಅಳಸಿಂಗರಾಚಾರ್ಯರು.

ಗ್ರಂಥಕರ್ತರು.

ಆನಂದ ಕರ್ಣಾಟಕ ಗ್ರಂಥರತ್ನಮಾಲೆ. ನಂ. ೨.

ಶ್ರೀ.

ಶ್ರೀ ವ್ಯಾ ಸ ಮ ಹ ರ್ಷಿ ಪ್ರ ಣೀ ತ

# ಶ್ರೀಮದ್ಭಾಗವತವು

## ದಶಮಸ್ಕಂಧವು.

(ಪೂ ರ್ವ ಭಾ ಗ ವು)

ಕರ್ಣಾಟಕ ವಚನವು

---

ಶ್ರೀಮದ್ಯದುಶೈಲನಿವಾಸರಸಿಕ
ಪಂಡಿತ ದೇವಶಿಖಾಮಣಿ ಆಳಸಿಂಗರಾಚಾರ್ಯವಿರಚಿತವು.

**Vol VI.**

ಮ ದ್ರಾ ಸು
ಆನಂದಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿ
ಆರ್. ವೇಂಕಟೇಶ್ವರ ಕಂಪೆನಿಯವರಿಂದ
ಪ್ರಕಟಿಸಲ್ಪಟ್ಟಿದೆ.

---

1918

# ವಿ ಷ ಯಾ ನು ಕ್ರ ಮ ಣಿ ಕೆ.

---

# ಪ ಟ ಗ ಳ ಪ ಟ್ಟಿ.



ಶ್ರೀಃ.

ಶ್ರೀಕೃಷ್ಣಾಯ ನಮಃ.

ಅವಿಘ್ನಮಸ್ತು.

# ಶ್ರೀಮದ್ಭಾಗವತವು

# ದಶಮಸ್ಕಂಧವು.

## ಶ್ರೀಕೃಷ್ಣಾವತಾರ ಕಾರಣವು.

ತಿರುಗಿ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು. “ಓ ಮು
ನೀಂದ್ರಾ! ನಿನ್ನಿಂದ ನಾನು ಸೂರ್ಯಚಂದ್ರರ ವಂಶವಿಸ್ತಾರವನ್ನು ಕೇಳಿ
ದಂತಾಯಿತು. ಆ ಎರಡುವಂಶಗಳಲ್ಲಿಯೂ ಪ್ರಸಿದ್ಧರಾದ ಅನೇಕ
ರಾಜರ ಅದ್ಭುತಚರಿತ್ರಗಳನ್ನೂ ತಿಳಿದೆನು. ಪರಮಧಾರ್ಮಿಕನಾದ ಯದು
ವಿನ ಚರಿತ್ರವನ್ನೂ ಕೇಳಿದೆನು. ಆ ಯದುವಂಶದಲ್ಲಿ ಭಗವಂತನು, *ನಿಜಾಂ
ಶಭೂತನಾದ ಬಲರಾಮನೊಡನೆ ಅವತರಿಸಿ, ಲೋಕಾದ್ಭುತಕಾರ್ಯಗಳನ್ನು
ನಡೆಸಿದುದಾಗಿ ಸೂಚಿಸಿದೆಯಲ್ಲವೆ? ಆ ಶ್ರೀಕೃಷ್ಣನ ವೀರ್ಯಚರಿತ್ರಗಳೆಲ್ಲ
ವನ್ನೂ ನನಗೆ ಸವಿಸ್ತರವಾಗಿ ತಿಳಿಸಬೇಕು. ಸಮಸ್ತಭೂತಗಳ ಸ್ಥಿತಿಗತಿ
ಗಳಿಗೆ ನಿರ್ವಾಹಕನಾಗಿ, ವಿಶ್ವಾತ್ಮಕನೆನಿಸಿಕೊಂಡ ಶ್ರೀಮಹಾವಿಷ್ಣುವು,
ಯದುವಂಶದಲ್ಲಿ ಕೃಷ್ಣರೂಪದಿಂದವತರಿಸಿದಾಗ, ಯಾವಯಾವ ಅದ್ಭುತ

* ನೃಸಿಂಹ ರಾಮಕೃಷ್ಣಾದ್ಯವತಾರಗಳು ಪೂರ್ಣಾವತಾರಗಳೆಂದೂ, ಪರಶು
ರಾಮ, ಬಲರಾಮಾದ್ಯವತಾರಗಳು ಅಂಶಾವತಾರಗಳೆಂದೂ ಹೇಳಲ್ಪಡುವುವು.

ಕಾರ್ಯಗಳನ್ನು ನಡೆಸಿರುವನೋ ಅವೊಂದೊಂದನ್ನೂ ವಿವರವಾಗಿ ನನಗೆ ತಿಳಿಸಬೇಕು. ಆ ಭಗವಂತನ ಗುಣಾಮೃತವನ್ನು ಎಷ್ಟೆಷ್ಟು ಪಾನಮಾಡಿದರೂ, ಮೇಲೆಮೇಲೆ ಆಸೆಯನ್ನೇ ಹೆಚ್ಚಿಸುವುದೇಹೊರತು, ತೃಪ್ತಿಯುಂಟಾಗದು. ಸ್ವರ್ಗಲೋಕದಲ್ಲಿ ದೇವತೆಗಳಿಗೆ ಲಭಿಸುವ ಅಮೃತಕ್ಕಿಂತಲೂ ಈ ಭಗವದ್ಗುಣಾಮೃತವೆಂಬುದು ಎಷ್ಟೋ ಅತಿಶಯವಾದುದು! ಇದರ ರುಚಿಯೇ ಬೇರೆ ! ಇದರ ಗುಣಗಳೇ ಬೇರೆ ! ಹೇಗೆಂದರೆ! ಆ ಅಮೃತವು ವಿಷಯಾಸಕ್ತರಾದ ಭೋಗಿಗಳಿಗೆ ಪ್ರಿಯವಾದುದು. ಇದು ವಿಷಯವಿಮುಖರಾದ ಯೋಗಿಗಳಿಗೆ ಪ್ರಿಯವಾಗಿರುವುದು. ಅದು ಸಂಸಾರವೆಂಬ ವ್ಯಾಧಿಯನ್ನು ಹೆಚ್ಚಿಸುವುದು. ಈ ಅಮೃತವು ಅದನ್ನು ನೀಗಿಸುವುದು. ಅದು ನಾಲಗೆಗೆಮಾತ್ರ ರುಚಿಕರವಾಗಿರುವುದು. ಇದಾದರೋ ನಾಲಗೆಗೆ ಮಾತ್ರವಲ್ಲದೆ, ಕಿವಿಗಳಿಗೂ, ಮನಸ್ಸಿಗೂ ಉಲ್ಲಾಸಕರವಾಗಿರುವುದು. ಇಂತಹ ವಿಲಕ್ಷಣಗುಣವುಳ್ಳ ಭಗವಚ್ಚರಿತ್ರಾಮೃತವನ್ನು ಪಾನಮಾಡುವ ವಿಷಯದಲ್ಲಿ, ವಿವೇಕಬುದ್ಧಿಯುಳ್ಳ ಯಾವನಿಗೆ ತಾನೇ ಬೇಸರವುಂಟಾಗುವುದು? ಪಶುಘಾತಿಯಾದ ಕ್ರೂರನು, ಪಶುಪ್ರಾಯನಾದ ಮೂರ್ಖನು, ಉಪಕಾರಸ್ಮರಣೆಯಿಲ್ಲದ ಕೃತಘ್ನನು, ಇಂತವರುಹೊರತು ಬೇರೆ ಯಾರೂ ಆ ಭಗವದ್ಗುಣಾನುವಾದದಲ್ಲಿ ಬೇಸರಹೊಂದಲಾರರು. ಅದರಲ್ಲಿಯೂ ಮುಖ್ಯವಾಗಿ ಆ ಶ್ರೀಕೃಷ್ಣನಿಂದ ಮಹೋಪಕಾರವನ್ನು ಪಡೆದ ನನಗೆ, ಆತನ ಚರಿತ್ರಗಳನ್ನು ಎಷ್ಟು ಕೇಳಿದರೆತಾನೇ ತೃಪ್ತಿಯುಂಟಾಗುವುದು? ಪೂರ್ವದಲ್ಲಿ ನಮ್ಮ ತಾತಂದಿರಾದ ಪಾಂಡವರು, ಯಾವ ಶ್ರೀಕೃಷ್ಣನ ಪಾದಾಶ್ರಯವನ್ನೇ ನಾವೆಯಾಗಿ ಮಾಡಿಕೊಂಡು, ದೇವತೆಗಳಿಗೂ ದುರ್ಜಯರಾದ ಭೀಷ್ಮದ್ರೋಣಾದ್ಯತಿರಥರೆಂಬ ತಿಮಿಂಗಿಲಗಳಿಂದ ತುಂಬಿದುದಾಗಿಯೂ, ದಾಟಲಸಾಧ್ಯವಾಗಿಯೂ ಇದ್ದ ಕೌರವಸೈನ್ಯವೆಂಬ ಮಹಾಸಾಗರವನ್ನು ಗೋಷ್ಪದದಂತೆ (ಹಸುಗಳ ಹೆಜ್ಜೆಯಿಂದುಂಟಾದ ಹಳ್ಳದಂತೆ) ನಿರಾಯಾಸವಾಗಿ ದಾಟಿದರೋ, ಮತ್ತು ನಾನು ತಾಯಿಯ ಗರ್ಭದಲ್ಲಿರುವಾಗ, ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ನನ್ನ ದೇಹವು ದಗ್ಧವಾಗುವುದನ್ನು ತಿಳಿದು, ನನ್ನ ತಾಯಿಯು "ಕೃಷ್ಣಾ ! ರಕ್ಷೆ

ಸು” ಎಂದು ಮೊರೆಯಿಡಲು, ಯಾವನು ಚಕ್ರಧಾರಿಯಾಗಿ ಆ ಗರ್ಭದಲ್ಲಿ ಪ್ರವೇಶಿಸಿ, ಕೌರವ ಪಾಂಡವವಂಶಗಳೆರಡಕ್ಕೂ ಒಂದೇ ಬೀಜದಂತಿದ್ದ ನನ್ನನ್ನು ಬದುಕಿಸಿದನೋ, ಅಂತಹ ಮಹೋಪಕಾರಿಯಾದ ಶ್ರೀಕೃಷ್ಣನ ಚರಿತ್ರವನ್ನು ಎಷ್ಟಾವರ್ತಿ ಕೇಳಿದರೆತಾನೇ ನನಗೆ ತೃಪ್ತಿಯುಂಟಾಗುವು ದು? ಪುರುಷ 'ಕ್ಷೇತ್ರಜ್ಞ' ರೂಪದಿಂದ, ಸಮಸ್ತಪ್ರಾಣಿಗಳ ಒಳಗೂ, ಕಾಲರೂಪದಿಂದ ಹೊರಗೂ ವ್ಯಾಪಿಸಿ, ಅವುಗಳ ಸ್ಥಿತಿವಿನಾಶಗಳನ್ನು ನಡೆಸುತ್ತ, ಜಗತ್ಕಾರಣನೆನಿಸಿಕೊಂಡ ಪರಮಪುರುಷನು, ಕೃಷ್ಣ ನೆಂಬ ಹೆಸರಿನಿಂದ ಮಾಯಾಮನುಷ್ಯನಾಗಿ ಅವತರಿಸುವುದಕ್ಕೆ ಮುಖ್ಯ ಕಾರಣವೇನು? ಸಂಕರ್ಷಣಾಂಶದಿಂದವತರಿಸಿದ ಬಲರಾಮನು, ದೇವಕಿ ಯ ಗರ್ಭದಲ್ಲಿ ಬೆಳೆಯುತಿದ್ದು, ರೋಹಿಣಿಯ ಮಗನಾಗಿ ಹುಟ್ಟಿದನೆಂದು ಹೇಳಿದೆಯಲ್ಲವೆ? ಇವನಿಗೆ ಒಂದೇ ಶರೀರದಿಂದ ಎರಡುಗರ್ಭಗಳ ಸಂಬಂ ಧವುಂಟಾದುದು ಹೇಗೆ? ಆ ಕೃಷ್ಣನು ಮಥುರೆಯಲ್ಲಿ ಹುಟ್ಟಿ, ನಂದಗೋ ಕುಲದಲ್ಲಿ ಬಳೆದನೆಂದು ಹೇಳಿದೆಯಲ್ಲವೆ? ಅವನು ಹೆತ್ತತಂದೆಯ ಮನೆಯ ನ್ನು ಬಿಟ್ಟು, ಗೋಪ್ಲರ ಹಳ್ಳಿಗೆ ಹೋಗಬೇಕಾದ ಕಾರಣವೇನು? ಆಮೇಲೆ ಆ ನಂದಗೋಕುಲವನ್ನು ಬಿಟ್ಟು, ತನ್ನ ಜ್ಞಾತಿಗಳಾದ ಯಾದವರೊಡನೆ ಯಾ ವಾಗ, ಎಲ್ಲೆಲ್ಲಿ ಕಲೆತಿದ್ದನು? ಅವನು ನಂದಗೋಕುಲದಲ್ಲಿಯೂ, ಮಥು ರಾಪುರಿಯಲ್ಲಿಯೂ ನಡೆಸಿದ ಕಾರ್ಯಗಳಾವುವು? ಮತ್ತು ಅವನು ತನ್ನ ತಾಯಿಗೆ ಸಾಕ್ಷಾತ್ಸಹೋದರನಾದ ಕಂಸನನ್ನು ಕೊಂದುದೇಕೆ? ಅವನು ಹೀಗೆ ತನ್ನ ಸೋದರಮಾವನನ್ನೇ ಕೊಂದುದು ಯುಕ್ತವೆ? ಆ ಭಗವಂತನು ಮನುಷ್ಯರೂಪದಿಂದ ವೃಷ್ಣಿಗಳೊಡನೆ ಕಲೆತು ಮಥುರಾಪುರಿಯಲ್ಲಿ ಎಷ್ಟು ವರ್ಷಗಳಿದ್ದನು? ಆ ಕೃಷ್ಣನಿಗೆ ಎಷ್ಟುಮಂದಿ ಪತ್ನಿಯರಿದ್ದರು? ಈ ವಿಚಾರಗಳೆಲ್ಲವನ್ನೂ ನನಗೆ ವಿವರವಾಗಿ ತಿಳಿಸಬೇಕು ಮತ್ತು ನೀನು ಸರ್ವಜ್ಞನಾದುದರಿಂದ ಆ ಶ್ರೀಕೃಷ್ಣನ ವಿಷಯವಾಗಿ ಇನ್ನೇನಾದರೂ ವಿಶೇಷ ವಿಷಯಗಳಿದ್ದರೆ, ಅವುಗಳನ್ನೂ ತಿಳಿಸಬೇಕು. ಅವೆಲ್ಲವನ್ನೂ ಕೇಳಿ ತಿಳಿಯಬೇಕೆಂಬ ಶ್ರದ್ಧೆಯು ನನಗೆ ಬಹಳವಾಗಿರುವುದು. ಓ ಮಹರ್ಷೀ! ನಾನು ಪ್ರಾಯೋಪವೇಶದಿಂದ ಅನ್ನಪಾನಗಳನ್ನು ಬಿಟ್ಟು, ಸಹಿಸಲಸಾ

ಧ್ಯವಾದ ಹಸಿವುಬಾಯಾರಿಕೆಗಳಿಂದ ದಹಿಸಲ್ಪಡುತಿದ್ದರೂ, ನಿನ್ನ ಮುಖಾರವಿಂದದಿಂದ ಹೊರಡುವ' ಹರಿಕಥಾಮೃತವನ್ನು ಪಾನಮಾಡುತ್ತಿರುವವರೆಗೆ, ನನಗೆ ಆ ಬಾಧೆಯೊಂದೂ ತೋರುವಹಾಗಿಲ್ಲ." ಎಂದನು. ಇದನ್ನು ಕೇಳಿ ಶುಕಮಹರ್ಷಿಯು, ಆ ಪರೀಕ್ಷಿದ್ರಾಜನ ಶ್ರದ್ಧಾಭಕ್ತಿಗಳನ್ನು ಮನಸ್ಸಿನಲ್ಲಿ ಕೊಂಡಾಡುತ್ತ, ಆತನನ್ನು ಮನ್ನಿಸಿ, ಸಮಸ್ತಪಾಪನಿವಾರಕವಾದ ಶ್ರೀಕೃಷ್ಣಚರಿತ್ರವನ್ನು ಆತನಿಗೆ ಸವಿಸ್ತರವಾಗಿ ಹೇಳತೊಡಗಿದನು.

"ಓ ಪರೀಕ್ಷಿದ್ರಾಜಾ ಕೇಳು? ಭಗವಚ್ಚರಿತ್ರವನ್ನು ಕೇಳಬೇಕೆಂಬ ಶ್ರದ್ಧೆಯು ನಿನಗೆ ಸಂಪೂರ್ಣವಾಗಿರುವುದರಿಂದ, ನಿನ್ನ ಬುದ್ಧಿಯು ಚೆನ್ನಾಗಿ ಪರಿಪಕ್ವವಾಗಿರುವುದು. ಆ ಭಗವಂತನ ಚರಿತ್ರವಿಷಯವಾಗಿ ಕೇವಲಪ್ರಶ್ನಮಾತ್ರವೇ, ಲೋಕದಲ್ಲಿ ಆ ಶ್ರೀಹರಿಯ ಪಾದತೀರ್ಥವಾದ ಗಂಗಾನದಿಯಂತೆ, ಸಮಸ್ತ ಸ್ತ್ರೀಪುರುಷರನ್ನೂ ಪಾವನಮಾಡುವುದು. ಆ ವಿಷಯವಾಗಿ ಪ್ರಶ್ನೆಮಾಡಿದವನೂ, ಅದಕ್ಕೆ ಪ್ರತ್ಯುತ್ತರವನ್ನು ಹೇಳತಕ್ಕವನೂ, ಅವರಿಬ್ಬರ ಸಲ್ಲಾಪವನ್ನು ಕಿವಿಯಿಂದ ಕೇಳಿದವನೂ, ಈ ಮೂವರೂ ಅದರಿಂದ ಪಾವನರಾಗುವರು. ಇನ್ನು ಆತನ ಚರಿತ್ರಗಳನ್ನೇ ಕೊಂಡಾಡತಕ್ಕವರ ಪುಣ್ಯವಿಶೇಷವನ್ನು ಕೇಳಬೇಕಾದುದೇನು ? ರಾಜಾ! ಇನ್ನು ಕೃಷ್ಣಾವತಾರಕಾರಣವನ್ನು ತಿಳಿಸುವೆನು ಕೇಳು! ಹಿಂದೆ ಅನೇಕಕೋಟಿದಾನವರು ಭೂಮಿಯಲ್ಲಿ ಕ್ಷತ್ರಿಯರಾಗಿ ಹುಟ್ಟಿ, ರಾಜರೂಪದಿಂದ ಲೋಕಕಂಟಕರಾಗಿ ವರ್ತಿಸುತಿದ್ದರು. ಮದಾಂಧರಾದ ಆ ದುಷ್ಟಕ್ಷತ್ರಿಯರಿಂದ ತನಗುಂಟಾದ ಭಾರವನ್ನು ತಡೆಯಲಾರದೆ, ಭೂದೇವಿಯು ಗೋರೂಪದಿಂದ, ಚತುರ್ಮುಖಬ್ರಹ್ಮನ ಬಳಿಗೆ ಬಂದು, ಕೈಮುಗಿದು ನಿಂತು, ದುಃಖದಿಂದ ಕಣ್ಣೀರನ್ನು ಸುರಿಸುತ್ತ, ತನ್ನ ಕಷ್ಟವನ್ನು ಹೇಳಿಕೊಂಡು ಮೊರೆಯಿಟ್ಟಳು. ಬ್ರಹ್ಮನು ಅವಳ ದುಃಖವನ್ನು ನೋಡಿ ಕನಿಕರಗೊಂಡು, ಅದಕ್ಕೆ ತಾನು ಯಾವ ಪ್ರತೀಕಾರವನ್ನೂ ಮಾಡಲಾರದೆ, ಆ ಭೂದೇವಿಯನ್ನೂ, ರುದ್ರನನ್ನೂ, ಇತರದೇವತೆಗಳನ್ನೂ ತನ್ನೊಡನೆ ಕರೆದುಕೊಂಡು,ಕ್ಷೀರಸಮುದ್ರಕ್ಕೆ ಬಂದನು. ಅಲ್ಲಿ ದೇವದೇವನಾಗಿಯೂ, ಲೋಕನಾಯಕನಾಗಿಯೂ ಇರುವ ಶ್ರೀಮನ್ನಾರಾಯಣನನ್ನು ಪುರುಷ

ಸೂಕ್ತಮಂತ್ರದಿಂದ ಸ್ತುತಿಸಿ, ಸ್ವಲ್ಪಹೊತ್ತಿನವರೆಗೆ ಬದ್ಧಾಂಜಲಿಯಾಗಿ ಧ್ಯಾನಿಸುತ್ತ ನಿಂತನು. ಹೀಗೆ ಬ್ರಹ್ಮನು ಸಮಾಧಿಯಲ್ಲಿರುವಾಗ, ಆತನ ಕಿವಿಗೆಮಾತ್ರ ಕೇಳಿಸುವಂತೆ ಒಂದಾನೊಂದು ಅಶರೀರವಾಣಿಯು ಹೊರಟಿತು. ಅದನ್ನು ಕೇಳಿದೊಡನೆ ಬ್ರಹ್ಮನು ಸಂತೋಷದಿಂದ ಸಮೀಪದಲ್ಲಿದ್ದ ದೇವತೆಗಳನ್ನು ಕುರಿತು “ಎಲೈ ದೇವತೆಗಳಿರಾ! ನಾವು ಬಂದ ಕಾರ್ಯವು ಸಫಲವಾಯಿತು! ನಾನು ಈ ಸಮಾಧಿಯಲ್ಲಿರುವಾಗ, ಭಗವಂತನ ಮುಖಾರವಿಂದದಿಂದ ಹೊರಟ ಅಭಯವಾಕ್ಯಗಳನ್ನು ಕೇಳಿದೆನು. ಅದನ್ನು ನಿಮಗೆ ತಿಳಿಸುವೆನು! ನೀವೆಲ್ಲರೂ ಅದರಂತೆಯೇ ನಡೆದುಕೊಳ್ಳಬೇಕು. ಈ ವಿಷಯದಲ್ಲಿ ವಿಳಂಬಮಾಡಬಾರದು. ಭಗವಂತನು ಭೂದೇವಿಗುಂಟಾಗಿರುವ ಈ ಕಷ್ಟವನ್ನು ಮೊದಲೇ ತಿಳಿದಿರುವನು. ಅದಕ್ಕೆ ಪರಿಹಾರೋಪಾಯವನ್ನೂ ಮೊದಲೇ ಸಂಕಲ್ಪಿಸಿರುವನು. ಈ ವಿಚಾರದಲ್ಲಿ ನೀವು ನಡೆಸಬೇಕಾದ ಕಾರ್ಯವೇನೆಂದರೆ, ನೀವೆಲ್ಲರೂ ನಿಮ್ಮ ನಿಮ್ಮ ಅಂಶಗಳಿಂದ ಯದುವಂಶದಲ್ಲಿ ಹುಟ್ಟಬೇಕು. ಆ ಸರ್ವೇಶ್ವರನೂ ತನ್ನ ಕಾಲಶಕ್ತಿಯಿಂದ ಭೂಭಾರವನ್ನು ಪರಿಹರಿಸುವುದಕ್ಕಾಗಿ ಅದೇ ಯಾದವ ಕುಲದಲ್ಲಿ ಮನುಷ್ಯರೂಪದಿಂದವತರಿಸುವನು. ಆ ಭಗವಂತನು ತನ್ನ ಪೂರ್ಣಾಂಶದಿಂದ ಇನ್ನು ಶೀಘ್ರಕಾಲದಲ್ಲಿಯೇ ವಸುದೇವನ ಮಗನಾಗಿ ಹುಟ್ಟುವುದರಿಂದ, ಅದಕ್ಕೆ ಮೊದಲೇ ನೀವು ಯಾದವರಾಗಿ ಜನಿಸಿರಬೇಕು! ಅವನ ಸೇವಾರ್ಥವಾಗಿ ಕೆಲವು ದೇವಸ್ತ್ರೀಯರೂ ಅಲ್ಲಿಯೇ ಸ್ತ್ರೀರೂಪದಿಂದ ಹುಟ್ಟಲಿ! ಋಷಿಗಳು ಗೋರೂಪದಿಂದ ನಂದಗೋಕುಲದಲ್ಲಿ ಜನಿಸಿ, ತಪಸ್ಸಿನಿಂದ ಹೇಗೋ ಹಾಗೆ, ಹಾಲು, ಬೆಣ್ಣೆ, ತುಪ್ಪ ಮೊದಲಾದ ದ್ರವ್ಯಗಳಿಂದ ಅವನನ್ನು ಸಂತೋಷಪಡಿಸಬೇಕು. ಆ ಭಗವಂತನ ಕಳೆಯೆನಿಸಿಕೊಂಡವನಾಗಿಯೂ, ಸಹಸ್ರಫಣೆಗಳಿಂದ ಶೋಭಿತನಾಗಿಯೂ, ಸರ್ವಶಕ್ತನಾಗಿಯೂ ಇರುವ ಆದಿಶೇಷನೂ, ಆ ಭಗವಂತ ಸಹಾಯಾರ್ಥವಾಗಿ ಅವನಿಗೆ ಅಣ್ಣನಾಗಿ ಜನಿಸುವನು. ಲೋಕವೆಲ್ಲವನ್ನೂ ಮೋಹಗೊಳಿಸತಕ್ಕ ವಿಷ್ಣುಮಾಯೆಯೂಕೂಡ, ಆತನ ಆಜ್ಞೆಯಿಂದ ಅಲ್ಲಿಯೇ ಸ್ತ್ರೀರೂಪದಿಂದವತರಿಸುವಳು. ಭಗವಂತನು ಈ

ವಿಚಾರಗಳೆಲ್ಲವನ್ನೂ ತಾನಾಗಿಯೇ ಸೂಚಿಸಿರುವನು. ಆದುದರಿಂದ ನಾವು ಬೇಗನೆ ಮುಂದಿನ ಕಾರ್ಯಕ್ಕೆ ಯತ್ನಿಸಬೇಕು" ಎಂದನು. ಪ್ರಜಾಧಿಪತಿಯಾದ ಬ್ರಹ್ಮನು ದೇವತೆಗಳಿಗೆ ಹೀಗೆಂದಾಜ್ಞಾಪಿಸಿ, ಅಭಯವಾಕ್ಯಗಳಿಂದ ಭೂದೇವಿಯನ್ನೂ ಸಮಾಧಾನಗೊಳಿಸಿ, ತನ್ನಲೋಕಕ್ಕೆ ಸೇರಿದನು.

ಓ ಪರೀಕ್ಷಿದ್ರಾಜಾ! ಅತ್ತಲಾಗಿ ಮಥುರಾಪುರಿಯಲ್ಲಿ ಮೊದಲು ಯದುವಂಶಜನಾದ ಶೂರಸೇನನೆಂಬವನು, ಯಾದವರೆಲ್ಲರಿಗೂ ಪ್ರಭುವಾಗಿ ಮಾಥುರ ಶೂರಸೇನಗಳೆಂಬ ದೇಶಗಳೆರಡನ್ನೂ ಪಾಲಿಸುತಿದ್ದನು. ಅದು ಮೊದಲು ಯಾದವರೆಲ್ಲರಿಗೂ ಮಥುರೆಯೇ ರಾಜಧಾನಿಯಾಯಿತು. ರಾಜೇಂದ್ರಾ! ಆ ಮಥುರೆಯೇ ಶ್ರೀಕೃಷ್ಣನ ಅವತಾರಸ್ಥಾನವಾದುದರಿಂದ, ಈಗಲೂ ಭಗವಂತನು ಅಲ್ಲಿ ನಿತ್ಯಸಾನ್ನಿಧ್ಯವನ್ನು ಮಾಡುತ್ತಿರುವನು. ಒಮ್ಮೆ ಆ ಪಟ್ಟಣದಲ್ಲಿ ಶೂರನ ಮಗನಾದ ವಸುದೇವನೆಂಬ ಯಾದವನಿಗೆ, ಉಗ್ರಸೇನನ ಮಗಳಾದ ದೇವಕಿಯನ್ನುಕೊಟ್ಟು ವಿವಾಹವು ನಡೆಯಿತು. ಈ ವಿವಾಹವು ನಡೆದಮೇಲೆ, ವಸುದೇವನು, ನವೋಢೆಯಾದ ಆ ಪತ್ನಿಯನ್ನು ತನ್ನ ಮನೆಗೆ ಕರೆದುಕೊಂಡು ಹೋಗುವುದಕ್ಕಾಗಿ ರಥವನ್ನೇರಿದನು. ಆಗ ಉಗ್ರಸೇನನ ಮಗನಾದ ಕಂಸನು, ತನಗೆ ತಂಗಿಯಲ್ಲಿಯೂ, ಭಾವನಲ್ಲಿಯೂ ಇರುವ ಪ್ರೀತಿಗೌರವಗಳನ್ನು ತೋರಿಸುವುದಕ್ಕಾಗಿ, ತಾನೇ ಕುದುರೆಯ ಹಗ್ಗವನ್ನುಹಿಡಿದು,ರಥವನ್ನೋಡಿಸುವುದಕ್ಕೆ ಸಿದ್ಧನಾದನು. ಸುವರ್ಣಮಯವಾದ ನೂರಾರುರಥಗಳು ಆ ವಸುದೇವದೇವಕಿಯರ ರಥದ ಸುತ್ತಲೂ ನೆರೆದು ಬರುತಿದ್ದುವು. ಯಾದವರಾಜನಾದ ಉಗ್ರಸೇನನಿಗೆ ದೇವಕಿಯಲ್ಲಿ ಎಣೆಯಿಲ್ಲದ ಪ್ರೇಮವಿದ್ದುದರಿಂದ, ಅವನು ತನ್ನ ಮಗಳಲ್ಲಿ ತನಗಿದ್ದ ಪ್ರೀತಿವಿಶೇಷಕ್ಕೆ ತಕ್ಕಂತೆ, ಸುವರ್ಣಾಲಂಕೃತಗಳಾದ ನಾನೂರು ಆನೆಗಳನ್ನೂ, ಹತ್ತುಸಾವಿರಕುದುರೆಗಳನ್ನೂ, ಸಾವಿರದೆಂಟುನೂರು ರಥಗಳನ್ನೂ, ಸರ್ವಾಭರಣಭೂಷಿತರಾದ ಇನ್ನೂರುಮಂದಿ ಗೌಡಿಯರನ್ನೂ, ಆ ದೇವಕಿಗೆ ಬಳುವಳಿಯಾಗಿ ಕಳುಹಿಸಿಕೊಟ್ಟನು. ಆ ದೇವಕೀವಸುದೇವರು ಪ್ರಯಾಣಮಾಡಿಬರುವ ಕಾಲದಲ್ಲಿ, ಶಂಖ, ದುಂದುಭಿ, ತೂರ್ಯ, ಮೃದಂಗ, ಮೊದಲಾದ ಮಂಗಳವಾದ್ಯಗಳೆಲ್ಲವೂ ನುಡಿಸಲ್ಪಡು

ತಿದ್ದುವು. ಹೀಗೆ ಹೊಸವಧೂವರರಿಬ್ಬರೂ ಮಹಾವೈಭವದಿಂದ ಪ್ರಯಾಣಮಾಡಿ ಬರುತ್ತಿರುವಾಗ, ದಾರಿಯಲ್ಲಿ, ಕುದುರೆಯ ಹಗ್ಗವನ್ನು ಹಿಡಿದು ಅತ್ಯುತ್ಸಾಹದಿಂದ ರಥವನ್ನು ನಡೆಸುತಿದ್ದ ಕಂಸನ ಕಿವಿಗೆ ಬೀಳುವಂತೆ ಒಂದಾನೊಂದು ಆಕಾಶವಾಣಿಯು ಕೇಳಿಸಿತು. ‘‘ಓ ಕಂಸಾ ! ನೀನು ಇಷ್ಟೊಂದು ಮಹೋತ್ಸಾಹದಿಂದ ಯಾವಳನ್ನು ಪತಿಗೃಹಕ್ಕೆ ಕರೆದುಕೊಂಡು ಹೋಗುತ್ತಿರುವೆಯೋ, ಆಕೆಯ ಎಂಟನೆಯ ಗರ್ಭದಲ್ಲಿ ಜನಿಸುವ ಶಿಶುವೇ ನಿನಗೆ ಮೃತ್ಯುವಾಗುವುದು.” ಈ ವಾಕ್ಯಗಳು ಕಿವಿಗೆ ಬಿದ್ದಾಗ ಆ ಕಂಸನ ಮನೋಭಾವವನ್ನು ಕೇಳಬೇಕೆ? ಆತನು ಮೊದಲೇ ಬಹಳ ಪಾಪಸ್ವಭಾವವುಳ್ಳವನು! ಮೂರ್ಖನು ! ಭೋಜಕುಲಕ್ಕೆ ಕಳಂಕಪ್ರಾಯನಾಗಿ ಹುಟ್ಟಿದವನು ! ಅಂತವನಿಗೆ ಈ ಸಮಯದಲ್ಲಿ ದಯಾದಾಕ್ಷಿಣ್ಯಗಳು ತೋರುವುವೆ? ತನ್ನ ಕಿವಿಗಳಿಗೆ ಶೂಲಪ್ರಾಯವಾಗಿದ್ದ ಈ ಮಾತನ್ನು ಕೇಳಿದೊಡನೆ, ಕ್ರೂರಬುದ್ಧಿಯುಳ್ಳ ಆ ಕಂಸನು, ತಾನು ಹಿಡಿದಿದ್ದ ಕುದುರೆಯ ಹಗ್ಗವನ್ನು ಹಾಗೆಯೇ ಬಿಸುಟು, ಅದೇ ಕೈಯಲ್ಲಿ ಕತ್ತಿಯನ್ನೆತ್ತಿಕೊಂಡು, ಮತ್ತೊಂದು ಕೈಯಿಂದ ತನ್ನ ತಂಗಿಯ ತುರುಬನ್ನು ಹಿಡಿದು, ಅವಳನ್ನು ಕೊಲ್ಲುವುದಕ್ಕಾಗಿ ಕೈಯೆತ್ತಿದನು. ಹೀಗೆ ಘಾತಕನಾದ ಕಂಸನು, ನಿರ್ಲಜ್ಜನಾಗಿ, ಲೋಕನಿಂದಿತವಾದ ಕ್ರೂರಕಾರ್ಯಕ್ಕೆ ಯತ್ನಿಸುತ್ತಿರುವುದನ್ನು ನೋಡಿ, ವಸುದೇವನು, ಭಯಗ್ರಸ್ತನಾಗಿ ಆ ಕಂಸನನ್ನು ಮೃದುವಾಕ್ಯಗಳಿಂದ ಸಮಾಧಾನಪಡಿಸುವನು. ‘‘ಕುಮಾರಾ! ಇದೇನಿದು! ಲೋಕದಲ್ಲಿ ಶೂರರೆಲ್ಲರೂ ನಿನ್ನ ಗುಣಪರಾಕ್ರಮಗಳನ್ನು ಕೊಂಡಾಡುತ್ತಿರುವರು. ನಿನ್ನಿಂದಲೇ ಭೋಜವಂಶವು ಲೋಕವಿಖ್ಯಾತವಾದ ಕೀರ್ತಿಯನ್ನು ಹೊಂದಬೇಕಾಗಿರುವುದು! ಹೀಗಿರುವಾಗಲೂ ನೀನು, ಅಬಲೆಯಾದ ಈ ಹೆಂಗಸನ್ನು ವಧಿಸುವುದಕ್ಕೆ ಯತ್ನಿಸುವೆಯಲ್ಲಾ ! ಇದರಮೇಲೆ ಈಕೆಯು ನಿನ್ನ ಒಡಹುಟ್ಟಿದವಳು ! ಈಗಲೇ ವಿವಾಹಿತಳಾಗಿ ಬಂದವಳು ! ಇಂತಹ ಸ್ಥಿತಿಯಲ್ಲಿ ಇವಳನ್ನು ಕೊಲ್ಲುವೆಯಾ ? ‘‘ ತಂಗಿಯಾಗಿದ್ದರೇನು ? ನನ್ನ ಮರಣಕ್ಕೆ ಕಾರಣಭೂತಗಳಾದ ಇವಳನ್ನು ಕೊಂದೇತೀರಬೇ” ಕೆಂದು ಹೇಳುವೆಯೇನು ? ಪ್ರಾಣಿಗಳಿಗೆ ಮರಣವೆಂಬುದು ಆಯಾ ದೇಹದೊ

ಡನೆಯೇ ಹಿಂಬಾಲಿಸಿಬರುವುದು. ಭೂಮಿಯಲ್ಲಿ ಹುಟ್ಟಿದಮೇಲೆ ಯಾವ ಪ್ರಾಣಿಗಾದರೂ, ಈಗಲೋ, ನಾಳೆಯೋ, ಕೊನೆಗೆ ನೂರು ವರ್ಷಗಳಮೇಲೆಯೋ ಮೃತ್ಯುವೆಂಬುದು ಸಿದ್ಧವು. ಅದನ್ನು ತಪ್ಪಿಸಿಕೊಳ್ಳಬೇಕೆಂದರೆ ಯಾರಿಂದ ಸಾಧ್ಯವು? ಆದರೆ "ನೂರಾರುವರ್ಷಗಳು ಸುಖವಾಗಿ ಬದುಕಿದಮೇಲೆ, ಜರೆಯಿಂದ ಜೀರ್ಣವಾದ ಈ ದೇಹವು ಹೋದರೂ ಹೋಗಲಿ! ಈ ನಡುವೆ ಅದಕ್ಕೆ ಬರಬಹುದಾದ ಭಯವನ್ನು ತಪ್ಪಿಸಬೇಕಲ್ಲವೆ ?" ಎಂದು ಹೇಳುವೆಯಾ? ಅದೂ ಯುಕ್ತವಲ್ಲ! ಲೋಕದಲ್ಲಿ ಪ್ರಾಣಿಗಳು ಮರಣಕ್ಕಾಗಿ ಭಯಪಡಬೇಕಾದುದೇ ಇಲ್ಲ. ಹಿಂದಿನ ದೇಹವನ್ನು ಬಿಡುವುದೇ ಮರಣವೆನಿಸುವುದಲ್ಲದೆ, ಜೀವನಿಗೆ ಎಂದಿದ್ದರೂ ಸಾವಿಲ್ಲ. ಒಂದು ದೇಹವು ನಷ್ಟವಾಗುವ ಸಂದರ್ಭವು ಬಂದೊಡನೆ, ಆ ದೇಹದೊಳಗಿನ ಜೀವನು, ತನ್ನ ಪೂರ್ವಕರ್ಮಾನುಸಾರವಾಗಿ ಬೇರೊಂದು ದೇಹವನ್ನು ಹಿಡಿದಮೇಲೆಯೇ ಹಿಂದಿನ ದೇಹವನ್ನು ಬಿಡುವನು. ಆದುದರಿಂದ ಒಂದು ದೇಹವು ಹೋದರೂ, ಆ ಜೀವಕ್ಕೆ ಮುಂದೆ ಬೇರೊಂದುದೇಹವು ಸ್ವತಸ್ಸಿದ್ಧವಾಗಿ ಲಭಿಸುವುದು! ಇದರಲ್ಲಿದ್ದರೇನು? ಅದರಲ್ಲಿದ್ದರೇನು? ಮುಂದೆ ಇದಕ್ಕಿಂತಲೂ ಉತ್ತಮವಾದ ದೇಹವನ್ನೇ ಹೊಂದಿದರೂ ಹೊಂದಬಹುದಲ್ಲವೆ! ಹೇಗಿದ್ದರೂ ಪ್ರಾಣಿಗಳು!ಮುಂದೆ ಬರಬಹುದಾದ ಮರಣವನ್ನು ತಪ್ಪಿಸಿಕೊಳ್ಳಲಾರವು! ಹಾಗೆ ಸಾಯುವುದರೊಳಗಾಗಿ, ಸತ್ಕರ್ಮಗಳನ್ನು ನಡೆಸಿ, ಮುಂದೆ.ಇದಕ್ಕಿಂತಲೂ ಉತ್ತಮವಾದ ಜನ್ಮವನ್ನು ಪಡೆಯುವುದಕ್ಕೆ ಯತ್ನಿಸುವವನಲ್ಲವೇ ಬುದ್ಧಿಶಾಲಿಯು! ಇದೊಂದನ್ನೂ ಯೋಚಿಸದೆ ನೀನು,ಈಗ ನಿನ್ನ ತಂಗಿಯನ್ನು ಕೊಲ್ಲುವುದರಿಂದ, ಮುಂದೆ ಪರಮನೀಚಜನ್ಮವನ್ನು ಹೊಂದುವುದಕ್ಕೆ ಯತ್ನಿಸುವುದಕ್ಕಿಂತಲೂ! ಮುಂದೆ ಉತ್ತಮಜನ್ಮವನ್ನು ಹೊಂದುವುದಕ್ಕೆ ತಕ್ಕಂತೆ ಸತ್ಕಾರ್ಯಗಳನ್ನು ನಡೆಸಬೇಡವೆ?ಮರಣವೆಂಬುದು ದೇಹಾಂತರಸಂಬಂಧವಲ್ಲದೆ ಬೇರೆಯಲ್ಲ. ಅದನ್ನು ತಪ್ಪಿಸಿಕೊಳ್ಳುವುದು ಯಾರಿಂದಲೂ ಸಾಧ್ಯವಲ್ಲ. ಆದುದರಿಂದ ಅದಕ್ಕಾಗಿ ಹೆದರಬಾರದು, * ಮನುಷ್ಯನು ನಡೆಯುವಾಗ, ಮುಂದಿನ ಹಜ್ಜೆಯನ್ನು ನೆಲದಲ್ಲಿ

* ಇಲ್ಲಿ ಜೀವನು ಮೊದಲಿನ ದೇಹದಲ್ಲಿದ್ದಂತೆಯೇ ಮತ್ತೊಂದು ದೇಹವನ್ನು ಹಿಡಿಯುವನೆಂದು ಶಂಕಿಸಬಾರದು. ಜೀವನು ಅಣುವಾದುದರಿಂದ ಅದು ಸಾಧ್ಯವಲ್ಲ.

ಚೆನ್ನಾಗಿ ಊರಿದಮೇಲಲ್ಲವೇ ಹಿಂದಿನ ಕಾಲನ್ನೆತ್ತುವನು? ಹಾಗೆಯೇ ಪಲ್ಲಕ್ಕಿಯ ಹುಳು (ಹುಲ್ಲಟ್ಟೆ) ವೆಂಬ ಜಂತುವೂಕೂಡ, ಸಂಚರಿಸುವಾಗ ತನಗೆ ಮುಂದೆ ಆಶ್ರಯವು ಸಿಕ್ಕಿದಮೇಲೆ, ಅದರಲ್ಲಿ ತನ್ನ ಮುಖಭಾಗವನ್ನೂರಿಯೇ, ಹಿಂದಿನ ಪುಚ್ಛಭಾಗವನ್ನೆತ್ತುವುದು. ಇದರಂತೆಯೇ ಕರ್ಮಗತಿಯಲ್ಲಿರುವ ಜೀವನೂ, ಹಿಂದಿನ ದೇಹವನ್ನು ಬಿಡುವಾಗ, ಮುಂದೆ ತನ್ನ ಕರ್ಮಾನುಸಾರವಾದ ಹೊಸದೇಹವನ್ನು ಹಿಡಿದಮೇಲೆಯೇ ಪೂರ್ವದೇಹವನ್ನು ಬಿಡುವನು.

“ಆದರೆ ಮೇಲಿನ ಎರಡು ದೃಷ್ಟಾಂತಗಳಲ್ಲಿಯೂ ದೇಹಕ್ಕೆ ನಾಶವಿಲ್ಲ. ಆಯಾದೇಹದೊಡನೆಯೇ ಮುಂದಿನ ಆಶ್ರಯವು ಹಿಡಿಯಲ್ಪಡುವುದು. ಆದುದರಿಂದ ಅದರಲ್ಲಿ ದೇಹನಾಶವಾಗುವುದೆಂಬ ಭಯಕ್ಕಾಗಲಿ, ದುಃಖಕ್ಕಾಗಲಿ ಅವಕಾಶವಿಲ್ಲ ಮರಣದಲ್ಲಿಯಾದರೋ ಜೀವನು ಮೊದಲಿನ ದೇಹವನ್ನು ಬಿಟ್ಟು ಹೋಗುವುದನ್ನುಮಾತ್ರ ನಾವು ಕಾಣುವೆವೇಹೊರತು, ಮುಂದೆ ಅವನಿಗೆ ದೇಹಾಂತರವುಂಟಾಗುವುದೂ ನಮಗೆ ಕಾಣವುದಿಲ್ಲ. ಆದುದರಿಂದ ಇದರಲ್ಲಿ ದೇಹವು ನಷ್ಟವಾಗುವುದೆಂಬ ಭಯಕ್ಕೂ ದುಃಖಕ್ಕೂ ಕಾರಣವುಂಟಲ್ಲವೆ ?” ಎಂದು ನೀನು ಹೇಳಬಹುದು ಅದೂ ಯುಕ್ತವಲ್ಲ,

---

ಸಂಸಾರಿಯು ಒಂದು ಮನೆಯಿಂದ ಇನ್ನೊಂದುಮನೆಗೆ ಒಕ್ಕಲುಹೋಗುವಾಗ, ಮೊದಲು ತನ್ನ ಉಪಕರಣಗಳನ್ನು ಹೊಸಮನೆಗೆ ಸಾಗಿಸಿ, ಆಮೇಲೆ ತಾನು ಅದರಲ್ಲಿ ನೆಲೆಗೊಳ್ಳುವಂತೆ, ಜೀವನೂಕೂಡ, ಮೊದಲು ತನ್ನ ದೇಹೋಪಕರಣಗಳಾದ ಪ್ರಾಣೇಂದ್ರಿಯಾದಿಗಳನ್ನು ದೇಹಾಂತರಕ್ಕೆ ಸಾಗಿಸುವುದರಿಂದಾಗಲಿ, ಅಥವಾ ತನ್ನ ಧರ್ಮಭೂತವಾದ ಜ್ಞಾನದಮೂಲಕವಾಗಿ ಅವರಲ್ಲಿ ನೆಲಸುವುದರಿಂದಾಗಲಿ, ಅಲ್ಲಿ ಮೊದಲು ಸೇರುವನೆಂದು ಗ್ರಾಹ್ಯವು. ಮತ್ತು ಇಲ್ಲಿ ಪುರುಷನು ಒಂದು ಪಾದದಿಂದ ನಡೆಯುತ್ತ ಮತ್ತೊಂದು ಪಾದದಿಂದ ನಿಂತಲ್ಲಿ ನಿಂತಹಾಗೆಯೇ ಹೋಗುವುದನ್ನು ದೃಷ್ಟಾಂತವಾಗಿ ಹೇಳಿರುವುದರಿಂದ, ಮನುಷ್ಯನು ದೇಹಸಂಬಂಧದಿಂದ ಜೀವಿಸಿದ್ದರೂ, ಮೃತಪ್ರಾಯನಾಗಿಯೇ ಜೀವಿಸುತ್ತಿರುವನೆಂದು ಭಾವವು. ಒಂದು ಕಾಲಿಂದ ನಿಂತಿರುವುದು ಜೀವಿಸಿರುವುದಕ್ಕೂ, ಮತ್ತೊಂದು ಕಾಲನ್ನೆತ್ತಿಡುವುದು ಮರಣಾಭಿಮುಖ್ಯಕ್ಕೂ ಸಮಾನವೆಂದು ಗ್ರಾಹ್ಯವು. ಇವೆರಡೂ ಸಮಾನಕಾಲದಲ್ಲಿಯೇ ನಡೆಯುವುದರಿಂದ, ಪ್ರಾಣಿಗೆ ಜೀವಿತಮರಣಗಳೆರಡೂ ಸಮಕಾಲದಲ್ಲಿಯೇ ಜರುಗುವುವೆಂದೂ ಗ್ರಾಹ್ಯವು.

ಮನುಷ್ಯನು ಕನಸನ್ನು ಕಾಣುವಾಗ, ತನ್ನ ನಿಜವಾದ ದೇಹವು ಸತ್ತಹಾಗೆ ಹಾಸಿಗೆಯಮೇಲೆ ಬಿದ್ದಿರುವಾಗಲೇ, ಕನಸಿನಲ್ಲಿ ತನಗೆ ಯಾವುದೋ ಒಂದು ಹೊಸದೇಹವುಂಟಾದಂತೆ ಕಾಣುವನು. ಅದರಲ್ಲಿದ್ದಂತೆಯೇ ತನ್ನ ಮನಸ್ಸಿನ ಭಾವನೆಗೆ ತಕ್ಕಂತೆ ಪ್ರಪಂಚದಲ್ಲಿ ತಾನು ಕಂಡುಕೇಳಿದ ಮನೋರಥಗಳನ್ನೂ ಅನುಭವಿಸುವನು. ಒಮ್ಮೆ ಸಿಂಹಾಸನದಮೇಲೆ ಕುಳಿತಹಾಗೆ ಕಂಡು ಸಂತೋಷದಿಂದ ಹಿಗ್ಗುವನು. ಮತ್ತೊಮ್ಮೆ ದೇಶಭ್ರಷ್ಟನಾಗಿ ಹೋಗುವಂತೆ ಕಾಣುವನು. ಮತ್ತೊಮ್ಮೆ ತಲೆಯನ್ನು ಕಡಿಸಿಕೊಳ್ಳುವಂತೆ ಕಂಡು ದುಃಖದಿಂದಲೂ ಭಯದಿಂದಲೂ ತಪಿಸುವನು. ಆಗ ಅವನಿಗೆ ಹಾಸಿಗೆಯಮೇಲೆ ಬಿದ್ದಿರುವ ತನ್ನ ದೇಹದ ಸ್ಮರಣೆಯೂ ಇರಲಾರದು. ಆ ದೇಹವು ಹೋಯಿತೆಂಬ ದುಃಖವೂ ತೋರದು. ಮಲಗುವುದಕ್ಕೆಮೊದಲು, ಮುಂದೆ ಕನಸಿನಲ್ಲಿ ತನಗೆ ಯಾವ ದೇಹವುಂಟಾಗುವುದೆಂದೂ ತಿಳಿಯಲಾರದು. ಮಲಗುವುದಕ್ಕೆ ಹೋಗುವಾಗ ಅವನಿಗೆ ತನ್ನ ದೇಹವು ನಷ್ಟವಾಗುವುದೆಂಬ ಭಯವೂ ಹುಟ್ಟಲಾರದಲ್ಲವೆ? ಇದರಂತೆಯೇ ಮನುಷ್ಯನು ದೇಹಾಂತರಪ್ರಾಪ್ತಿಯನ್ನುಕುರಿತು ಭಯಪಡಲೂ ಬಾರದು. ದುಃಖಿಸಲೂ ಬಾರದು. ಮತ್ತು ಮನುಷ್ಯನು ತನ್ನ ಭಾವನಾನುಸಾರವಾಗಿ ಸ್ವಪ್ನವನ್ನು ಕಾಣುವಂತೆ, ಪೂರ್ವಕರ್ಮವಾಸನಾನುಗುಣವಾದ ವಿಕಾರಗಳಿಂದ, ಜೀವನು ಪ್ರಕೃತಿಪರಿಣಾಮರೂಪಗಳಾದ*ಶಬ್ದಾದಿವಿಷಯಗಳಲ್ಲಿ ಯಾವುದನ್ನು ಮನಸ್ಸಿನಲ್ಲಿ ಹೆಚ್ಚಾಗಿ ಸ್ಮರಿಸುತ್ತಿರುವನೋ, ಅದಕ್ಕೆ ತಕ್ಕ ದೇಹದಲ್ಲಿಯೇ ಪ್ರವೇಶಿಸಿ, ಅದರೊಡನೆ ಹುಟ್ಟುವನು. ಜೀವನಿಗೆ ಇದೇ ಉತ್ಪತ್ತಿಯೆನಿಸಿಕೊಳ್ಳುವುದು. ಮತ್ತು ಆಕಾಶದಲ್ಲಿ ಒಂದೇ ರೂಪದಿಂದ ಪ್ರಕಾಶಿಸುತ್ತಿರುವ ಸೂರ್ಯಚಂದ್ರಾದಿತೇಜಸ್ಸುಗಳು, ನೀರಿನಲ್ಲಿಯಾಗಲಿ, ಕನ್ನಡಿಯಲ್ಲಿಯಾಗಲಿ, ಪ್ರತಿಫಲಿಸುವಾಗ, ವಾಯುವೇಗದಿಂದಾದ ಆ ಆಶ್ರಯವಸ್ತುಗಳ ಚಲನೆಗೆ ತಕ್ಕಂತೆ, ದೊಡ್ಡವಾಗಿಯೂ, ಚಿಕ್ಕದಾಗಿಯೂ, ಇನ್ನೂ ನಾನಾವಿಧವಾಗಿಯೂ ಕಾಣುವುವಲ್ಲವೆ? ಅದರಂ

---

*ಇಲ್ಲಿ ''ಯಂಯಂವಾಪಿ ಸ್ಮರರ್ ಭಾವಂ ತ್ಯಜತ್ಯನ್ತೇ ಕಳೇಬರಂ । ತಂತಮೇವೈತಿ ಕೌನ್ತೇಯ ಸದಾ ತದ್ಭಾವ ಭಾವಿತಃ,ಎಂಬ ಗೀತಾವಾಕ್ಯವು ಅನುಸಂಧಿಸಲ್ಪಡುವುದು.

ತೆಯೋ ಜೀವನೂಕೂಡ, ತನಗೆ ಸಹಜವಾಗಿ ಯಾವವಿಕಾರವೂ ಇಲ್ಲದೆ ಒಂದೇವಿಧವಾದ ಜ್ಞಾನಸ್ವರೂಪವುಳ್ಳವನಾಗಿದ್ದರೂ, ಶಬ್ದಾದಿ ವಿಷಯಗ ಳಲ್ಲಿ ತನಗಿರುವ ಆಸೆಗೆ ತಕ್ಕಂತೆ, ಪ್ರಕೃತಿಪರಿಣಾಮರೂಪವಾದ ಶರೀರದ ಲ್ಲಿ ಪ್ರವೇಶಿಸಿದಾಗ, ತಾನು ಮನುಷ್ಯನೆಂದೂ, ತಾನು ದೇವನೆಂದೂ ಭೇದ ಬುದ್ಧಿಯನ್ನಾರೋಪಿಸಿಕೊಳ್ಳುವನು. ಜೀವನಿಗೆ ಎಂದಿದ್ದರೂ ಮರಣವಿಲ್ಲ. ವಸ್ತುಸ್ಥಿತಿಯು ಹೀಗಿರುವುದರಿಂದ, ತತ್ವಜ್ಞನಾದ ಪುರುಷನು, ತನಗೆ ನಿಜ ವಾದ ಕ್ಷೇಮವನ್ನು ಕೋರುವುದಾದರೆ, ಬೇರೆ ಯಾರಿಗೂ ದ್ರೋಹಚಿಂತೆ ಯನ್ನು ಮಾಡಬಾರದು. ಮರಣಭಯದಿಂದ ಮತ್ತೊಬ್ಬರಿಗೆ ದ್ರೋಹವ ನ್ನೆಣಿಸುವವನು, ತನಗೆ ತಾನೇ ದ್ರೋಹವನ್ನೆಣಿಸಿ, ತನ್ನ ಮುಂದಿನ ಕ್ಷೇ ಮವನ್ನು ಕೆಡಿಸಿಕೊಂಡಂತಾಗುವುದೇಹೊರತು ಬೇರೆಯಲ್ಲ. ದ್ರೋಹ ಬುದ್ಧಿಯುಳ್ಳವರಿಗೇ ಇತರರಿಂದ ಭಯವೇಹೊರತು, ಆ ಬುದ್ಧಿಯಿಲ್ಲದವ ನಿಗೆ ಯಾರಿಂದಲೂ ಭಯವಿಲ್ಲ. ಈ ತತ್ವವಿಚಾರವೂ ಹಾಗಿರಲಿ! ನೀನು ಲೋಕಮರ್ಯಾದೆಯನ್ನಾದರೂ ಯೋಚಿಸಬೇಡವೆ? ಈಕೆಯು ನಿನಗೆ ಸಾ ಕ್ಷಾತ್ತಾಗಿ ಒಡಹುಟ್ಟಿದ ತಂಗಿ! ನಿನಗೆ ಮಗಳಂತಿರುವಳು! ಅಬಲೆಯಾದ ಹೆಂಗಸು! ಇನ್ನೂ ಚಿಕ್ಕಹುಡುಗಿ! ದೈನ್ಯದಿಂದ ತತ್ತಳಿಸುವಳು! ಮಂ ಗಳಸ್ವರೂಪಿಣಿಯಾದ ಇಂತಹ ಕನ್ಯೆಯನ್ನು ಕೊಲ್ಲುವುದಕ್ಕೆ ಕೈಯೆತ್ತುವೆ ಯಲ್ಲಾ! ಕುಮಾರಾ! ಇದು ನಿನಗೆ ಧರ್ಮವಲ್ಲ! ನೀನು ದೀನವತ್ಸಲನಲ್ಲ ವೆ? ಬಿಟ್ಟುಬಿಡು!" ಎಂದು ವಸುದೇವನು ನಾನಾವಿಧವಾದ ಸಾಮ ವಾಕ್ಯಗಳಿಂದ ಕಂಸನನ್ನು ನಿವಾರಿಸುತಿದ್ದನು. ಎಷ್ಟು ಹೇಳಿದರೇನು? ಆ ಕಂಸನು ಮನುಷ್ಯರನ್ನು ನುಂಗತಕ್ಕ ರಾಕ್ಷಸರಂತೆ ಕ್ರೂರಸ್ವಭಾವವುಳ್ಳ ವನಾದುದರಿಂದ, ಎತ್ತಿದ ಕತ್ತಿಯನ್ನು ಕೆಳಕ್ಕಿಳಿಸದೆ, ಒಂದೇ ಹಟದಿಂದ ನಿಂತಿದ್ದನು. ಆಗ ವಸುದೇವನು ಕಂಸನ ಮೂರ್ಖಸ್ವಭಾವವನ್ನೂ, ಕ್ರೌ ರ್ಯವನ್ನೂ ಯಾವವಿಧದಿಂದಲೂ ಬಿಡಿಸಲಾರದೆ, ಪ್ರಕೃತದಲ್ಲಿ ಹೇಗಾದ ರೂ ಮಾಡಿ ಆ ಗಂಡವನ್ನು ತಪ್ಪಿಸಿಕೊಳ್ಳಬೇಕೆಂದು ನಿಶ್ಚಯಿಸಿ, ತನ್ನಲ್ಲಿ ತಾನು ಹೀಗೆಂದು ಆಲೋಚಿಸುವನು. "ಲೋಕದಲ್ಲಿ ಬುದ್ಧಿವಂತನಾದ ವನು ಎಂತಹ ಮಹಾವಿಪತ್ತು ಬಂದರೂ, ಧೈರ್ಯಗೆಡದೆ, ತನ್ನಿಂದ ಸಾಧ್ಯವಾ

ದಷ್ಟು ಬುದ್ಧಿಚಾತುರ್ಯವನ್ನೂ, ದೇಹಶಕ್ತಿಯನ್ನೂ ಉಪಯೋಗಿಸಿ, ತಾತ್ಕಾಲಿಕವಾದ ಅಪಮೃತ್ಯುವನ್ನು ತಪ್ಪಿಸಿಕೊಳ್ಳುವುದಕ್ಕೆ ಯತ್ನಿಸಬೇಕು. ಅದಕ್ಕೂ ಕೈಮೀರಿಹೋದರೆ ಆಗ ಅವನ ತಪ್ಪೇನೂ ಇರುವುದಿಲ್ಲ. ಅದಕ್ಕಾಗಿ ಈಗ ನಾನು, ಯಾವುದಾದರೂ ಉಪಾಯದಿಂದ ಇವಳ ವಿಪತ್ತನ್ನು ತಪ್ಪಿಸದೆ ತೀರದು! ಇವಳ ಗರ್ಭದಲ್ಲಿ ಹುಟ್ಟಿದಮಕ್ಕಳಿಂದ ತನಗೆ ಮರಣವಾಗುವುದೆಂದಲ್ಲವೇ ಇವನು ಭಯಪಡುವನು! ಆದುದರಿಂದ ಇವಳಿಗೆ ಹುಟ್ಟುವ ಮಕ್ಕಳೆಲ್ಲರನ್ನೂ ಒಪ್ಪಿಸಿಬಿಡುವೆನೆಂದು ಹೇಳಿ, ಏನೆಯಾದ ಈ ಬಾಲೆಯನ್ನು ಕೊಲೆಯಿಂದ ತಪ್ಪಿಸುವೆನು. "ಬೀಸುವ ದೊಣ್ಣೆಗೆ ತಲೆಯನ್ನು ತಪ್ಪಿಸಿಕೊಂಡರೆ, ಸಾವಿರವರ್ಷದ ಆಯುಸ್ಸೆಂದು" ಹೇಳುವ ಸಾಮತಿಯಂತೆ, ಈಗಿನ ಗಂಡವನ್ನು ತಪ್ಪಿಸಿಕೊಂಡರೆ ಮುಂದಿನ ಸಂಗತಿಯನ್ನು ನೋಡಿಕೊಳ್ಳಬಹುದು. ಆದರೆ "ಹೆತ್ತ ಮಕ್ಕಳನ್ನು ಕೈಯಾರೆ ತಂದು ಕಟುಕನ ಕೈಗೆ ಕೊಡಬಹುದೆ?" ಎಂದರೆ ಈಗ ನಾನು ಅದನ್ನು ಬಾಯಿಂದ ಹೇಳಿದಮಾತ್ರಕ್ಕೆ ದೋಷವೇನೂ ತೋರಲಿಲ್ಲ. ಮೊದಲು ನನಗೆ ಮಕ್ಕಳಾಗವುವೆಂಬ ನಿಶ್ಚಯವೇನು? ಒಂದುವೇಳೆ ಮಕ್ಕಳಾದರೂ, ಅವು ಹುಟ್ಟುವವರೆಗೂ ಈ ದುರಾತ್ಮನು ಬದುಕಿರುವನೆಂಬ ನಿಶ್ಚಯವೇನು? ನನಗೆ ಮಕ್ಕಳೇ ಆಗದಿದ್ದರೂ ಇರಬಹುದು. ಅದಕ್ಕೆ ಮೊದಲೇ ಈತನು ಸತ್ತರೂ ಸಾಯಬಹುದು. ಇವೆರಡೂ ನಡೆದಾಗಲಲ್ಲವೇ ನಾನು ಆ ಮಕ್ಕಳನ್ನು ಇವನ ಕೈಗೆ ಒಪ್ಪಿಸಬೇಕು! ಇವೆರಡೂ ನಿಶ್ಚಯವಿಲ್ಲ. ಈಗ ನಾನು ಪ್ರತಿಜ್ಞೆಮಾಡಿ ಕೊಟ್ಟಮಾತ್ರಕ್ಕೆ ಅದರಿಂದ ದೋಷವೇನೂ ತೋರಲಿಲ್ಲ! ಇಷ್ಟೇ ಅಲ್ಲದೆ ಇವೆಲ್ಲವೂ ಬೇರೆವಿಧವಾಗಿ ತಿರುಗಿ, ನನ್ನ ಮಕ್ಕಳೇ ಈ ಕಂಸನಿಗೆ ಮೃತ್ಯುವಾದರೂ ಆಗಬಹುದು. ಆದರೆ" ಅಶರೀರವಾಣಿಯು ಈಶ್ವರವಾಕ್ಯವೇ ಆಗಿರುವಾಗ, ಅದು ಬೇರೆವಿಧವಾಗಿ ಮಾರುವುದುಂಟೆ. ? ಎಂದರೆ, ಏಕಾಗಬಾರದು? ಈಶ್ವರೇಚ್ಛೆಯನ್ನು ಯಾರು ಬಲ್ಲರು ? ಅವನ ಸಂಕಲ್ಪವನ್ನು ಬದಲಾಯಿಸುವುದಕ್ಕೆ ಬೇರೊಬ್ಬರಿಗೆ ಸಾಧ್ಯವಿಲ್ಲದಿದ್ದರೂ, ಆತನು ಸರ್ವಸ್ವತಂತ್ರನಾದುದರಿಂದ, ತನ್ನ ಸಂಕಲ್ಪವನ್ನು ತಾನೇ ಬೇರೆ ವಿಧವಾಗಿ ತಿರುಗಿಸಬಹುದು! ಅಲ್ಪಾಯುಸ್ಸಿನಿಂದ ಹುಟ್ಟಿದ ಮಾರ್ಕಂಡೇಯ ಸತ್ಯವಂತರೇ ಮೊದಲಾದವರು, ಚಿರಜೀವಿಗಳಾಗಿ ಬದುಕಿ ಬರಲಿಲ್ಲವೆ?

ತಮಗೆ ಎಂದಿಗೂ, ಯಾವ ವಿಧದಿಂದಲೂ ಸಾವಿಲ್ಲವೆಂಬ ನಿಶ್ಚಯದಿಂದಿದ್ದ ರಾವಣ, ಹಿರಣ್ಯಕಶಿಪು ಮುಂತಾದವರು, ಮಧ್ಯಕಾಲದಲ್ಲಿಯೇ ಮೃತಿಹೊಂದಲಿಲ್ಲವೆ? ಅದರಂತೆಯೇ ಭಗವತ್ಸಂಕಲ್ಪವು ಅನುಕೂಲವಾದರೆ ಮೇಲೆಬಿದ್ದ ಮೃತ್ಯುವೂ ಹಿಂತಿರುಗಿ ಹೋಗಬಹುದು! ಅದು ಪ್ರತಿಕೂಲವಾದರೆ ಹಿಂತಿರುಗಿಹೋದ ಮೃತ್ಯುವೂ ಮೇಲೆ ಬಿಳಬಹುದು. ಅಥವಾ ದೈವಸಂಕಲ್ಪದಂತೆಯೇ ಎಲ್ಲವೂ ನಡೆಯುತ್ತಬರುವುದಾದರೆ ನಾನುಪ್ರತಿಜ್ಞೆ ಮಾಡಿದರೂ ಒಂದೇ! ಬಿಟ್ಟರೂ ಒಂದೇ! ಏಕೆಂದರೆ, ಅವರವರ ಕರ್ಮಾನುಸಾರವಾಗಿ ಅವರವರಿಗೆ ಮೃತ್ಯುವುಂಟಾಗಬೇಕೇಹೊರತು, ನನ್ನ ಪ್ರತಿಜ್ಞೆಯು ಅವರ ಮರಣಕ್ಕೆ ಕಾರಣವಾಗಲಾರದು. ನಮ್ಮಂತವರ ಪ್ರತಿಜ್ಞೆಯಿಂದ ದೈವಸಂಕಲ್ಪವು ವ್ಯತ್ಯಸ್ತವಾಗುವುದೆ? ಎಂದಿಗೂ ಇಲ್ಲ! ಅಥವಾ ಈಗ ನನ್ನ ಬಾಯಿಂದ ಹೊರಡತಕ್ಕ ಮಾತು, ದೈವಸಂಕಲ್ಪಾನುಸಾರವಾಗಿಯೇ ಇದ್ದರೂ ಇರಬಹುದು ವನದಲ್ಲಿ ಕಾಡುಗಿಚ್ಚು ಹತ್ತಿಕೊಳ್ಳುವುದಕ್ಕೂ, ನಂದಿಹೋಗುವುದಕ್ಕೂ ಅದೃಷ್ಟವುಹೊರತು ಬೇರೆ ಕಾರಣವು ಹೇಗೆ ತೋರುವುದಿಲ್ಲವೋ, ಹಾಗೆಯೇ ಪ್ರಾಣಿಗಳಿಗೆ ಶರೀರದೊಡನೆ ಸಂಯೋಗವಿಯೋಗಗಳಿಗೆ ಅವರವರ ಕರ್ಮವುಹೊರತು ಬೇರೆ ಕಾರಣವುಂಟೆಂದು ಊಹಿಸುವುದಕ್ಕೂ ಅವಕಾಶವಿಲ್ಲ" ಎಂದಿವು ಮೊದಲಾಗಿ ವಸುದೇವನು ತನ್ನ ಬುದ್ಧಿಯು ಪ್ರಸರಿಸುವವರೆಗೂ ತನ್ನಲ್ಲಿ ತಾನೇ ವಿಮರ್ಶಿಸಿ, ಕೊನೆಗೆ ಪಾಪಿಯಾದ ಆ ಕಂಸನ ಮನಸ್ಸಿಗೆ ಹಿತವಾಗುವಂತೆ ತನ್ನ ಅಭಿಪ್ರಾಯವನ್ನು ತಿಳಿಸಲಾರಂಭಿಸಿದನು ಆಗ ವಸುದೇವನು ತನ್ನ ಮನಸ್ಸಿನಲ್ಲಿ ಅಪಾರವಾದ ದುಃಖವಿದ್ದರೂ, ಅದನ್ನು ಹೊರಕ್ಕೆ ಕಾಣಿಸದೆ, ಪ್ರಯತ್ನಪೂರ್ವಕವಾಗಿ ಮುಖದಲ್ಲಿ ಉಲ್ಲಾಸವನ್ನು ತೋರಿಸುತ್ತ, ದುರಾತ್ಮನಾದ ಆ ಕಂಸನನ್ನು ಬಹಳವಾಗಿ ಗೌರವಿಸಿ, ಮಂದಹಾಸದೊಡನೆ ಅವನನ್ನು ಕುರಿತು ಹೀಗೆಂದು ಹೇಳುವನು

"ಓ ಸೌಮ್ಯಾ! ಓ ಕಂಸರಾಜೇಂದ್ರಾ! ಇದುವರೆಗೆ ನಾನು ಯೋಚಿಸಿ ನೋಡಿದುದರಲ್ಲಿ, ಈಗ ನೀನು ನಿನ್ನ ಕ್ಷೇಮಕ್ಕಾಗಿ ಯತ್ನಿಸುವುದೇನೋ ನನಗೂ ಯುಕ್ತವಾಗಿಯೇ ತೋರಿರುವುದು. ಆದರೆ, ನೀನು ಈ ವಿಚಾರದಲ್ಲಿ

ಸ್ವಲ್ಪಮಟ್ಟಿಗೆ ಯುಕ್ತಾಯುಕ್ತತಾರತಮ್ಯವನ್ನು ಯೋಚಿಸಬೇಕು. ಹೇಗೆಂದರೆ; ಅಶರೀರವಾಣಿಯ ಅರ್ಥವನ್ನು ವಿಮರ್ಶಿಸುವಪಕ್ಷದಲ್ಲಿ, ಇವಳಲ್ಲಿ ಹುಟ್ಟುವ ಮಕ್ಕಳಿಗಾಗಿ ನೀನು ಭಯಪಡಬೇಕೇಹೊರತು, ಇವಳಿಂದ ನಿನಗೇನೂ ಭಯವಿಲ್ಲವಷ್ಟೆ? ಆದುದರಿಂದ ಮುಂದೆ ಇವಳಲ್ಲಿ ಹುಟ್ಟುವ ಮಕ್ಕಳನ್ನೆಲ್ಲಾ ನಿನ್ನವಶಕ್ಕೇ ಕೊಟ್ಟುಬಿಡುವೆನು ಅಷ್ಟಾದರೆ ಸಾಕಲ್ಲವೆ"ಎಂದನು. ಆಮಾತನ್ನು ಕೇಳಿದಮೇಲೆ ಕಂಸನ ಕೋಪವು ಸ್ವಲ್ಪವಾಗಿ ತಗ್ಗಿತು. ವಸುದೇವನ ಮಾತು ಯುಕ್ತವೆಂದೂ ತೋರಿತು ತನ್ನ ಕ್ರೂರಪ್ರಯತ್ನವನ್ನು ಬಿಟ್ಟು ಸುಮ್ಮನಾದನು. ಆಗ ವಸುದೇವನು ಬಹಳ ಸಂತೋಷಭರಿತನಾಗಿ, ಆ ಕಂಸನನ್ನು ಬಹಳವಾಗಿ ಸ್ತೋತ್ರಮಾಡುತ್ತ, ತನ್ನ ನಿವಾಸಕ್ಕೆ ಹೊರಟುಬಂದನು. ಹಾಗೆಯೇ ಕೆಲವುಕಾಲವು ಕಳೆಯಿತು ದೇವಕಿಗೆ ಗರ್ಭಧಾರಣಕಾಲವೂ ಬಂದೊದಗಿತು. ಸಕಲದೇವತಾಂಶಭೂತೆಯಾದ ಆ ನಾರೀಮಣಿಯು, ವರ್ಷಕ್ಕೆ ಒಂದು ಮಗುವಿನಂತೆ, ಎಂಟು ಗಂಡುಮಕ್ಕಳನ್ನೂ, ಒಂದು ಹೆಣ್ಣುಮಗುವನ್ನೂ ಪಡೆಯುತ್ತಬಂದಳು ಪರೀಕ್ಷಿದ್ರಾಜಾ! ಅವಳಲ್ಲಿ ಹುಟ್ಟುವ ಶಿಶುಗಳೆಲ್ಲವನ್ನೂ ಕಂಸನಿಗೆ ಒಪ್ಪಿಸಿಬಿಡುವುದಾಗಿ ವಸುದೇವನು ಪ್ರತಿಜ್ಞೆಮಾಡಿಕೊಟ್ಟಿದ್ದನಲ್ಲವೆ" ಆತನು ಬಹಳ ಸತ್ಯಸಂಧನಾದುದರಿಂದ, ತಾನು ಕೊಟ್ಟ ಮಾತಿನಂತೆ, ಮೊದಲು ತನಗೆ ಹುಟ್ಟಿದ ಕೀರ್ತಿಮಂತನೆಂಬ ಮಗನನ್ನು ಬಹಳವ್ಯಸನದೊಡನೆ ಕಂಸನ ಕೈಗೆ ತಂದೊಪ್ಪಿಸಿದನು. "ಹೊಟ್ಟೆಯಲ್ಲಿ ಹುಟ್ಟಿದ ಮಗುವನ್ನು ತಾನಾಗಿ ತಂದು ಮೃತ್ಯುವಿನ ಕೈಗೆ ಕೊಡಲು,ವಸುದೇವನಿಗೆ ಹೇಗೆತಾನೇ ಮನಸ್ಸು ಬಂದಿತು?"ಎಂದು ನೀನು ಆಶ್ಚರ್ಯಪಡಬಹುದು. ಲೋಕದಲ್ಲಿ ಸತ್ಯಸಂಧರಾದ ಸಾಧುಗಳಿಗೆ ಸಹಿಸಬಾರದ ದುಃಖವಿಲ್ಲ! ಸತ್ಯಕ್ಕಾಗಿ ಎಲ್ಲವನ್ನೂ ಸಹಿಸಕೊಳ್ಳುವರು!ಹಾಗೆಯೇ ಜ್ಞಾನಿಗಳಿಗೆ ಆಸೆಹುಟ್ಟಿಸತಕ್ಕ ವಸ್ತುವಿಲ್ಲ! ದುರಾತ್ಮರಿಗೆ ಮಾಡಬಾರದ ಕೆಲಸವಿಲ್ಲ! ಧೀರರಿಗೆ ಬಿಡಬಾರದ ವಸ್ತುವಿಲ್ಲ! ಆದುದರಿಂದ ವಸುದೇವನು ಸುಖದುಃಖಗಳೆರಡನ್ನೂ ಸಮವಾಗಿ ಭಾವಿಸುತ್ತ, ಆಡಿದ ಮಾತಿಗೆ ತಪ್ಪಲಾರದೆ, ಹೆತ್ತಮಗುವನ್ನು ತಾನೇ ತಂದು ಕಂಸನ ಕೈಗೆ ಕೊಟ್ಟು, ಅವನ ಮುಂದೆ ವಿನೀತನಾಗಿ ನಿಂತಿದ್ದನು ಅದನ್ನು ನೋಡಿ ಕಂಸನು, ವಸು

ದೇವನ ಸತ್ಯಕ್ಕೆ ಮೆಚ್ಚಿ, ಸಂತೋಷಪೂರ್ವಕವಾದ ಮಂದಹಾಸ ದೊಡನೆ ಆತನನ್ನು ಕುರಿತು "ವಸುದೇವಾ! ಇವನಿಂದ ನನಗೇನೂ ಭಯ ವಿಲ್ಲ! ನಿಷ್ಕಾರಣವಾಗಿ ಈ ಮಗುವನ್ನು ನಾನೇಕೆ ಕೊಲ್ಲಲಿ! ಇವನನ್ನು ಹಿಂತಿರುಗಿ ನಿನ್ನ ಮನೆಗೆ ಕರೆದುಕೊಂಡು ಹೋಗಿ ಪೋಷಿಸು! ಆದರೆ ಒಂದು ಮಾತ್ರ ಚೆನ್ನಾಗಿ ನೆನಪಿರಲಿ! ನಿನ್ನ ಎಂಟನೆಯ ಮಗನನ್ನಲ್ಲವೇ ದೈವವು ನನಗೆ ಮೃತ್ಯುವನ್ನಾಗಿ ವಿಧಿಸಿರುವುದು! ಆ ಶಿಶುವನ್ನುಮಾತ್ರ ಹುಟ್ಟಿದ ಕೂಡಲೇ ನನಗೆ ತಂದೊಪ್ಪಿಸಬೇಕು. ಇನ್ನು ನೀನು ಹೊರಡು" ಎಂದನು. ಆಗ ವಸುದೇವನು ಹಾಗೆಯೇ ಆಗಲೆಂದು ಹೇಳಿ; ಆ ಮಗುವನ್ನೆತ್ತಿಕೊಂ ಡು, ತನ್ನ ಮನೆಗೆ ಹಿಂತಿರುಗಿದನು. ಆದರೇನು? ದುರಾತ್ಮನಾದ ಆ ಕಂಸ ನು ಕೇವಲಚಪಲಬುದ್ಧಿಯುಳ್ಳವನಾದುದರಿಂದ, ಯಾವಾಗ, ಏನನರ್ಥ ವನ್ನು ತಂದಿಡುವನೋ ಎಂಬ ಭಯದಿಂದ ವಸುದೇವನು,ಆ ಕಂಸನ ಪ್ರಿಯ ವಾಕ್ಯಗಳನ್ನು ನಂಬದೆ, ಒಳಗೊಳಗೆ ಭಯದಿಂದ ಕಳವಳಿಸುತ್ತಲೇ ಇದ್ದನು.

ಓ ಪರೀಕ್ಷಿದ್ರಾಜಾ! ಈ ಸಂಗತಿಯು ಹೀಗಿರುವಾಗ, ಒಮ್ಮೆ ಪೂಜ್ಯ ನಾದ ನಾರದಮುನಿಯು ಕಂಸನ ಅರಮನೆಗೆ ಬಂದು, ಅವನನ್ನುಕುರಿತು "ಓ ರಾಜಕುಮಾರಾ! ನಿನ್ನ ಹಿತಕ್ಕಾಗಿ ನಾನು ಒಂದು ರಹಸ್ಯವನ್ನು ತಿಳಿಸ ಬೇಕೆಂದು ಬಂದೆನು. ಏನೆಂದು ಕೇಳುವೆಯಾ? ಗೋಕುಲದಲ್ಲಿರತಕ್ಕ ನಂ ದನೇ ಮೊದಲಾದ ಯಾದವರೂ, ಗೋಪಸ್ತ್ರೀಯರೂ, ಯಾದವಾಂಗನೆ ಯರೂ ಅವರೊಡನೆ ಸೇರಿರುವ ಬಂಧುಮಿತ್ರರೂ, ಇವರೆಲ್ಲರೂ ದೇವಾಂಶ ದಿಂದ ಹುಟ್ಟಿದವರು. ನೀನೂ, ನಿನ್ನ ಅನುವರ್ತಿಗಳೂ ದೈತ್ಯಾಂಶದಿಂದ ಹುಟ್ಟಿದವರು. ಓ ಕಂಸಾ! ಪೂರ್ವಜನ್ಮದಲ್ಲಿ ನೀನು ಕಾಲನೇಮಿಯೆಂಬ ರಾಕ್ಷಸನಾಗಿದ್ದು ವಿಷ್ಣುವಿಂದ ಸಂಹೃತನಾದೆ! ಈಗಲೂ ಆ ವಿ ಷ್ಣುವೇ ನಿನ್ನನ್ನೂ, ಲೋಕಕಂಟಕರಾದ ನಿನ್ನಕಡೆಯವರನ್ನೂ ಕೊಲ್ಲು ವುದಕ್ಕಾಗಿ ಯತ್ನಿಸಿರುವನು. ಈ ಉದ್ದೇಶದಿಂದಲೇ ಅವನು ಯಾದ ವಕುಲದಲ್ಲಿ ದೇವಕೀಪುತ್ರನಾಗಿ ಜನಿಸುವನು. ಇತರಯಾದವರೆಲ್ಲರೂ ಅವನಿಗೆ ಸಹಾಯಕರು! ನಿನಗೆ ಜನ್ಮಾಂತರದ್ವೇಷಿಗಳಾಗಿ ಹುಟ್ಟಿ ರುವ ಆ ಯಾದವರವಿಷಯದಲ್ಲಿ ನೀನು ಬಹಳ ಎಚ್ಚರಿಕೆಯಿಂದಿರಬೇಕು.

ಜೋಕೆ! " ಎಂದು ಹೇಳಿ ಹೊರಟುಹೋದನು. ಕರ್ಣಶೂಲಪ್ರಾಯವಾದ ಈ ವಾಕ್ಯಗಳು ಕಿವಿಗೆ ಬಿದ್ದೊಡನೆ, ಕಂಸನಿಗೆ ಮೊದಲು ಸ್ವಲ್ಪಮಟ್ಟಿಗೆ ಶಾಂತವಾಗಿದ್ದ ಕೋಪಾಗ್ನಿಯು ತಿರುಗಿ ಉರಿಯತೊಡಗಿತು. ಆ ಕ್ಷಣಣವೇ ಕಂಸನು ದೇವಕೀವಸುದೇವರಿಬ್ಬರನ್ನೂ ಹಿಡಿದು ತರಿಸಿ, ಅವರ ಕೈಕಾಲುಗಳಿಗೆ ಸಂಕೋಲೆಯನ್ನು ಬಿಗಿದು ಸೆರೆಯಲ್ಲಿರಿಸಿದನು. ತನ್ನನ್ನು ಕೊಲ್ಲತಕ್ಕ ಶಿಶುವು, ಯಾವಾಗ, ಯಾವರೂಪದಿಂದ ಹುಟ್ಟುವನೋ ಎಂಬ ಭಯದಿಂದಲೂ ಅವನಲ್ಲಿ ತನಗೆ ಜನ್ಮಸಿದ್ಧವಾದ ದ್ವೇಷದಿಂದಲೂ ಕುದಿಯುತ್ತ, ಆ ದೇವಕಿಯ ಗರ್ಭದಲ್ಲಿ ಹುಟ್ಟಿದ ಒಂದೊಂದು ಶಿಶುವನ್ನೂ ಆಗಾಗಲೇ ಕೊಲ್ಲುತ್ತಬಂದನು. ಈ ವಿಧವಾಗಿ ಆ ದೇವಕಿಯಲ್ಲಿ ಮೊದಲು ಹುಟ್ಟಿದ ಆರುಮಕ್ಕಳೂ ಕಂಸನಿಂದ ಸಂಹೃತವಾದುವು. ಓ ಪರೀಕ್ಷಿದ್ರಾಜಾ ! ಭೂಮಿಯಲ್ಲಿ ದುಷ್ಟರಾಜರು, ಸ್ವಪ್ರಯೋಜನಾರ್ಥವಾಗಿ, ಹೆತ್ತ ತಾಯ್ತಂದೆಗಳನ್ನಾಗಲಿ, ಒಡಹುಟ್ಟಿದ ಅಣ್ಣತಮ್ಮಂದಿರನ್ನಾಗಲಿ, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನಾಗಲಿ, ಇಷ್ಟಮಿತ್ರರನ್ನಾಗಲಿ, ಎಳಮಕ್ಕಳನ್ನಾಗಲಿ, ಕೊಲ್ಲುವುದಕ್ಕೆ ಹಿಂಜರಿಯುವುದಿಲ್ಲ! ಇನ್ನು ಕೇವಲರಾಕ್ಷಸಾಂಶದಿಂದಲೇ ಹುಟ್ಟಿದ ಈ ಕಂಸನ ಕಾರ್ರ್ಯವನ್ನು ಕೇಳಬೇಕೆ? ಆ ಕಂಸನು, ತಾನು ಪೂರ್ವಜನ್ಮದಲ್ಲಿ ಕಾಲನೇಮಿಯೆಂಬ ರಾಕ್ಷಸನಾಗಿದ್ದು, ವಿಷ್ಣುವಿನಿಂದ ಹತನಾದುದನ್ನೂ, ಈ ಜನ್ಮದಲ್ಲಿಯೂ ಆ ವಿಷ್ಣುವೇ ಯಾದವಕುಲದಲ್ಲಿ ತನಗೆ ಮೃತ್ಯುವಾಗಿ ಹುಟ್ಟುವನೆಂಬುದನ್ನೂ, ನಾರದನ ಮುಖದಿಂದ ಕೇಳಿದಮೇಲೆ, ಅವನಿಗೆ ಯಾದವಕುಲದಲ್ಲಿ ಪೂರ್ಣವೈರವು ಬೆಳೆದುಹೋಯಿತು. ಯಾದವರಿಗೂ, ಭೋಜರಿಗೂ ಅಂಧಕರಿಗೂ ಮುಖ್ಯಾಧಿಪತಿಯೆನಿಸಿಕೊಂಡಿದ್ದ ತನ್ನ ತಂದೆಯಾದ ಉಗ್ರಸೇನದಲ್ಲಿಯೇ ಅವನಿಗೆ ನಂಬಿಕೆಯು ತಪ್ಪಿಹೋಯಿತು, ಒಡನೆಯೇ ಆತನು ತನ್ನ ತಂದೆಯನ್ನೂ ನಿಗ್ರಹಿಸಿ,ಶೂರಸೇನದೇಶವೆಲ್ಲವನ್ನೂ ತನ್ನ ಕೈವಶಮಾಡಿಕೊಂಡು, ತಾನೇ ರಾಜ್ಯವನ್ನು ಪಾಲಿಸುತಿದ್ದನು. ಇದು ಮೊದಲನೆಯ ಅಧ್ಯಾಯವು.

---

(ದೇವಕಿಯ ಎಂಟನೆಯ ಗರ್ಭದಲ್ಲಿ ಭಗವಂತನು ನಿ ಜಾಂಶದಿಂದ ಪ್ರವೇಶಿಸಿದುದು. ಗರ್ಭಸ್ಥನಾದ ವಿ ಷ್ಣುವನ್ನು ಬ್ರಹ್ಮಾದಿದೇವತೆಗಳು ಸ್ತುತಿಸಿದುದು.)

ಓ ರಾಜೇಂದ್ರಾ! ಹೀಗೆ ಕಂಸನು ನಿರಂಕುಶವಾದ ಬಲದಿಂದ ರಾಜ್ಯವನ್ನು ನಡೆಸುತ್ತಿರುವಾಗ, ಅವನಿಗೆ ತಕ್ಕಂತೆ ರಾಕ್ಷಸಾಂಶದಿಂದ ಹುಟ್ಟಿದ ಪ್ರಲಂಬ, ಬಕ, ಚಾಣೂರ, ತೃಣಾವರ್ತ, ಗರ್ದಭ, ಮುಷ್ಟಿಕ, ಅರಿಷ್ಟ, ದ್ವಿವಿದ, ಕೇಶಿ, ಧೇನುಕ, ಮೊದಲಾದವರೂ, ಪೂತನೆಯೆಂಬವಳೂ, ಬಾಣ. ನರಕ, ಮೊದಲಾದ ಅಸುರಪ್ರಕೃತಿಯುಳ್ಳ ರಾಜರೂ, ಆ ಕಂಸನಿಗೆ ಸಹಾಯಕರಾಗಿ, ಅವನನ್ನನುವರ್ತಿಸುತಿದ್ದರು. ಮಹಾಬಲಾಢ್ಯನಾದ ಜರಾಸಂಧನೂ ಕಂಸನಿಗೆ ಬೆಂಬಲವಾಗಿದ್ದನು. ಇವರೆಲ್ಲರೊಡನೆ ಕಂಸನು ಉನ್ಮಾರ್ಗಪ್ರವರ್ತಕನಾಗಿ, ಆಗಾಗ ಯಾದವರೊಡನೆ ಕಲಹವನ್ನು ತೆಗೆದು, ಅವರನ್ನು ನಾನಾವಿಧದಿಂದ ಹಿಂಸಿಸುತಿದ್ದನು. ಇವನ ಬಾಧೆಯನ್ನು ತಡೆಯಲಾರದೆ ಅನೇಕಯಾದವರು ದೇಶವನ್ನು ಬಿಟ್ಟು, ಕುರು, ಪಾಂಚಾಲ, ಕೇಕಯ, ಸಾಲ್ವ, ವಿದರ್ಭ, ನಿಷಧ, ಮಗಧ, ಕೋಸಲ, ಮೊದಲಾದ ಬೇರೆಬೇರೆದೇಶಗಳಿಗೆ ಓಡಿಹೋಗಿ, ಅಲ್ಲಲ್ಲಿಯೇ ನೆಲೆಯಾಗಿ ನಿಂತರು. ಕೆಲವರು ಬೇರೆ ಮಾರ್ಗವನ್ನು ಕಾಣದೆ, ಆ ಕಂಸನಲ್ಲಿಯೇ ಶರಣಾಗತರಾಗಿ ಅವನನ್ನನುವರ್ತಿಸಿ ಸೇವಿಸುತಿದ್ದರು. ಇಷ್ಟರಲ್ಲಿ ದೇವಕಿಗೆ ಏಳನೆಯಗರ್ಭವು ಬೆಳೆಯಲಾರಂಭಿಸಿತು, ಓ ರಾಜೇಂದ್ರಾ! ಈ ಏಳನೆಯ ಗರ್ಭವೂ ಆ ಭಗವಂತನ ಅಂಶವೆಂದೇ ತಿಳಿ! ಈ ಅಂಶವನ್ನೇ (ಆದಿಶೇಷ(ನೆಂದು ಕರೆಯುವರು. ಈ ಗರ್ಭವು ಬೆಳೆಯುತ್ತ ಬಂದಹಾಗೆಲ್ಲಾ, ದೇವಕಿಗೆ ಮನಸ್ಸಿನಲ್ಲಿ ಪುತ್ರೋತ್ಸವವಾಗುವುದೆಂಬ ಹರ್ಷವೂ, ಕಂಸನಿಂದ ಅದಕ್ಕುಂಟಾಗುವ ಭಯವನ್ನು ಕುರಿತು ದುಃಖವೂ ಹೆಚ್ಚುತ್ತ ಬಂದಿತು. ಇಷ್ಟರಲ್ಲಿ ವಿಶ್ವಾತ್ಮಕನಾದ ಶ್ರೀಹರಿಯು, ಯಾದವರಿಗೆ ಕಂಸನಿಂದುಂಟಾದ ಭಯವನ್ನು ನೀಗಿಸುವುದಕ್ಕಾಗಿ ತನ್ನ ಯೋಗಮಾಯೆಯನ್ನು ನೋಡಿ ಹೀಗೆಂದು ನಿಯಮಿಸುವನು. “ಎಲೆ ಭದ್ರೆ! ಈಗಲೇ ನೀನು ಗೋಪಾಲಕರಿಂದಲೂ, ಗೋಸಮೂಹಗಳಿಂದಲೂ, ಅಲಂಕೃತವಾದ ಗೋಕುಲಕ್ಕೆ

ಹೋಗು! ವಸುದೇವನ ಪತ್ನಿಯಾದ ರೋಹಿಣಿಯು ಈಗ ನಂದಗೋಕುಲದಲ್ಲಿರುವಳು. ಇವಳಂತೆಯೇ ವಸುದೇವನ ಇನ್ನೂ ಕೆಲವುಮಂದಿ ಪತ್ನಿಯರೂ, ಕಂಸನ ಭಯಕ್ಕಾಗಿ ಅಲ್ಲಲ್ಲಿನ ಬೆಟ್ಟದ ಗವಿಗಳಲ್ಲಿ!ಅಡಗಿಕೊಂಡಿರುವರು. ಈಗ ನನ್ನ ಅಂಶಭೂತನಾದ ಆದಿಶೇಷನು, ಕಂಸನ ಸೆರೆಯಲ್ಲಿ ಸಿಕ್ಕಿಬಿದ್ದಿರುವ ದೇವಕಿಯ ಗರ್ಭದಲ್ಲಿ ಬೆಳೆಯುತ್ತಿರುವನು. ಆಶಿಶುವು ಪ್ರಸವವಾಗುವುದಕ್ಕೆಮೊದಲೇ ನೀನು ಆ ಗರ್ಭಪಿಂಡವನ್ನು ಸಾಗಿಸಿ, ನಂದಗೋಕುಲದಲ್ಲಿರುವ ರೋಹಿಣಿಯ ಗರ್ಭದಲ್ಲಿಡು! ಆಮೇಲೆ ನಾನೇ ನನ್ನ ಪೂರ್ಣಾಂಶದಿಂದ ಆ ದೇವಕಿಯ ಗರ್ಭದಲ್ಲಿ ಪ್ರವೇಶಿಸಿ, ಅವಳಿಗೆ ಮಗನಾಗಿ ಹುಟ್ಟುವೆನು. ಇಷ್ಟರೊಳಗಾಗಿ ನೀನೂ ನಂದಗೋಪನ ಹೆಂಡತಿಯಾದ ಯಶೋದೆಯ ಗರ್ಭದಲ್ಲಿ ಸೇರಿ, ನನ್ನ ಜನನಕಾಲಕ್ಕೆ ಸರಿಯಾಗಿ, ಅವಳ ಗರ್ಭದಿಂದ ಹೆಣ್ಣುಮಗುವಾಗಿ ಜನಿಸಬೇಕು! ನೀನು ಆ ರೂಪದಿಂದ ಹುಟ್ಟಿದಮೇಲೆ, ಲೋಕಕ್ಕೆ ಸರ್ವಾಭೀಷ್ಟಪ್ರದೆಯೆನಿಸಿಕೊಂಡು,ವರಪ್ರದರಾದ ಇತರಶಕ್ತಿ ದೇವತೆಗಳಿಗೆಲ್ಲಾ ಅಧೀಶ್ವರಿಯೆನಿಸಿಕೊಳ್ಳುವೆ!ಮನುಷ್ಯರು ನಾನಾಬಗೆಯ ಉಪಹಾರಗಳಿಂದಲೂ, ಬಲಿದ್ರವ್ಯಗಳಿಂದಲೂ ನಿನ್ನನ್ನು ಪೂಜಿಸುವರು. ಮತ್ತು ನಿನಗೆ ನಾನಾವಿಧಗಳಾದ ನಾಮಧೇಯಗಳನ್ನೂ, ಸ್ಥಾನಗಳನ್ನೂ ಕಲ್ಪಿಸುವರು. ಆದರಿಂದ ನಿನಗೆ, ದುರ್ಗೆ, ಕಾಳಿ, ಭದ್ರಕಾಳಿ, ವಿಜಯೆ, ವೈಷ್ಣವಿ, ಕುಮುದೆ, ಚಂಡಿ, ಕೃಷ್ಣೆ, ಮಾಧವಿ, ಕನ್ಯಕೆ, ಮಾಯೆ, ನಾರಾಯಣಿ, ಈಶಾನೆ, ಶಾರದೆ, ಅಂಬಿಕೆ, ಮೊದಲಾದ ನಾಮಗಳು ಏರ್ಪಡುವುವು. ಮತ್ತು ನೀನು ದೇವಕಿಯ ಗರ್ಭದಲ್ಲಿ ಬಳೆಯುತಿದ್ದ ಶಿಶುವನ್ನು ಸೆಳೆತಂದುರೋಹಿಣಿಯ ಗರ್ಭದಲ್ಲಿಡುವುದರಿಂದ, ಆ ಶಿಶುವಿಗೆ ಸಂಕರ್ಷಣನೆಂಬ ಹೆಸರು ಪ್ರಸಿದ್ಧವಾಗುವುದು. ಮತ್ತು ಆ ಶಿಶುವು ಲೋಕವನ್ನು ರಂಜಿಸತಕ್ಕ ತನ್ನ ಅಭಿರಾಮಗುಣಗಳಿಂದ ರಾಮನೆಂದೂ, ಬಲಾತಿಶಯದಿಂದ ಬಲಭದ್ರನೆಂದೂ ಜನರಿಂದ ಕರೆಯಲ್ಪಡುವನು. ಇನ್ನು ನೀನು ಹೊರಡು" ಎಂದನು. ಈ ಭಗವದಾಜ್ಞೆಯನ್ನು ಕೇಳಿ ಯೋಗಮಾಯೆಯು "ಹಾಗೆಯೇ ಆಗ" ಲೆಂದು ಹೇಳಿ, ಭಗವಂತನಿಗೆ ಪ್ರದಕ್ಷಿಣನಮಸ್ಕಾರಗಳನ್ನುಮಾಡಿ, ಭೂಲೋಕಕ್ಕೆ ಬಂದು,

ಭಗವಂತನು ತನಗೆ ಆಜ್ಞಾಪಿಸಿದ್ದ ಕ್ರಮದಲ್ಲಿಯೇ ದೇವಕಿಯಲ್ಲಿದ್ದ ಗರ್ಭ ಪಿಂಡವನ್ನು ಸೆಳೆತಂದು,ರೋಹಿಣಿಯ ಉದರದಲ್ಲಿರಿಸಿದಳು. ಪೂರ್ಣಗರ್ಭಿಣಿ ಯಾಗಿದ್ದ ದೇವಕಿಗೆ ಇದ್ದಕ್ಕಿದ್ದಹಾಗೆ ಗರ್ಭವು ಬತ್ತಿ ಹೋಗಿರುವುದ ನ್ನು ನೋಡಿ, ಪುರವಾಸಿಗಳೆಲ್ಲರೂ ದೇವಕಿಗೆ ಗರ್ಭಸ್ರಾವವಾಯಿತೆಂದೇ ನಿಶ್ಚ ಯಿಸಿಬಿಟ್ಟರು. ಎಲ್ಲೆಲ್ಲಿಯೂ ಈ ಪ್ರವಾದವೇ ಹರಡಿಕೊಂಡಿತು. ಕಂಸ ನಿಗೂ ಅದರಲ್ಲಿ ನಂಬಿಕೆಯು ಹುಟ್ಟಿತು.

ಇಷ್ಟರಲ್ಲಿಯೇ ವಿಶ್ವಾತ್ಮಕನಾದ ಭಗವಂತನು, ಹಿಂದೆ ತಾನು ದೇವತೆಗಳಿಗೆ ಅಭಯವನ್ನು ಕೊಟ್ಟಿದ್ದಂತೆ, ತನ್ನ ಪೂರ್ಣಾಂಶದಿಂದ ವ ಸುದೇವನ ಹೃದಯದಲ್ಲಿ ಪ್ರವೇಶಿಸಿದನು ಹೀಗೆ ಪರಮಪುರುಷನ ತೇಜಸ್ಸು ತನ್ನಲ್ಲಿ ಸೇರಿದ್ದಾಗ, ವಸುದೇವನು, ಸೂರ್ಯನಂತೆ ಅಪೂರ್ವವಾದ ಒಂದು ಕಾಂತಿವಿಶೇಷದಿಂದ ಪ್ರಕಾಶಿಸುತ್ತ,ಕಂಸಾದಿದುಷ್ಟ ಕ್ಷತ್ರಿಯರಿಗೆ ಆಗಲೇ ಭಯವನ್ನು ಹುಟ್ಟಿಸುವಂತಿದ್ದನು. ಸ್ವಲ್ಪಕಾಲದಲ್ಲಿಯೇ ಆ ವಸುದೇವ ನಲ್ಲಿದ್ದ ಶ್ರೀವಿಷ್ಣುತೇಜಸ್ಸು ದೇವಕಿಯ ಗರ್ಭದಲ್ಲಿ ಪ್ರವೇಶಿಸಿತು. ಸಮ ಸ್ತಲೋಕಕ್ಕೂ ಮಂಗಳಪ್ರದನಾಗಿಯೂ, ಅಮೋಘವಾದ ಸಂಕಲ್ಪ ಜ್ಞಾನವುಳ್ಳವನಾಗಿಯೂ, ಸಮಸ್ತಚೇತನಾಚೇತನಶರೀರಕನಾಗಿಯೂ ಇರುವ ಭಗವಂತನು ಗರ್ಭದಲ್ಲಿ ಪ್ರವೇಶಿಸಿದ್ದಾಗ, ಅವಳು ಚಂದ್ರಕಳೆ ಯೊಡಗೂಡಿದ ಪೂರ್ವದಿಕ್ಕಿನಂತೆ ಪ್ರಕಾಶಿಸುತಿದ್ದಳು. ಸಮಸ್ತಲೋಕಗ ಳಿಗೂ ನಿವಾಸಭೂತನಾದ ಪರಮಪುರುಷನನ್ನೇ ತನ್ನ ಗರ್ಭದಲ್ಲಿ ಧರಿಸಿದ್ದ ಆ ದೇವಕೀದೇವಿಯು, ಕಂಸನ ಸೆರೆಯಲ್ಲಿ ಸಿಕ್ಕಿಬಿದ್ದುದ್ದರಿಂದ, ಉರಿ ಯಡಗಿದ ಅಗ್ನಿಯಂತೆಯೂ, ನೀಚರಲ್ಲಿರುವ ಉಪನಿಷದ್ವಾಕ್ಯದಂತೆಯೂ, ಕಾಣುತಿದ್ದಳು. ಹೀಗಿದ್ದರೂ ಆ ದೇವಕಿಯು ಸಮಸ್ತದಿಕ್ಕುಗಳನ್ನೂ ಬೆಳಗುವಂತಿರುವ ಅಪೂರ್ವವಾದ ಒಂದು ದಿವ್ಯತೇಜಸ್ಸಿನಿಂದ, ತನ್ನ ಅರ ಮನೆಯೆಲ್ಲವನ್ನೂ ಪ್ರಕಾಶಗೊಳಿಸುತ್ತಿರುವುದನ್ನು ಕಂಡು, ಕಂಸನ ಮನಸ್ಸಿಗೆ ಆಗಲೇ ಭಯವು ಹುಟ್ಟಿತು. ಆ ಭಯದಿಂದ ಕಂಸನು ತನ್ನಲ್ಲಿ ತಾನು “ಅಹಾ! ಹಿಂದೆ ಯಾವಾಗಲೂ ನಾನು ಈಕೆಯಲ್ಲಿ ಈ ವಿಧವಾದ ಕಾಂತಿವಿಶೇಷವನ್ನು ನೋಡಿರಲಿಲ್ಲ. ಆದುದರಿಂದ ನನಗೆ ಮೃತ್ಯುವಾದ

ವಿಷ್ಣುವು ಇವಳ ಗರ್ಭದಲ್ಲಿ ಪ್ರವೇಶಿಸಿರುವನೆಂಬುದರಲ್ಲಿ ಸಂದೇಹವಿಲ್ಲ. ಹಾಗಿಲ್ಲದಪಕ್ಷದಲ್ಲಿ, ಇವಳಿಗೆ ಈ ವಿಧವಾದ ಅಪೂರ್ವಕಾಂತಿಯೆಲ್ಲಿಯದು?ದೇವತೆಗಳ ಕಾರ್ಯಾರ್ಥವಾಗಿ ಯತ್ನಿಸಿರುವ ವಿಷ್ಣುವೇ ಅವನು. ಅವನಿಂದ, ನನ್ನ ವೀರ್ಯಕ್ಕೆ ಹಾನಿ ಬಾರದಂತೆ, ಈಗಲೇ ತಕ್ಕ ಉಪಾಯವನ್ನು ಮಾಡುವುದು ಮೇಲು! ಇದಕ್ಕೇನು ಮಾಡಲಿ! ಈಗ ಈಕೆಯನ್ನೇ ಕೊಂದುಬಿಡಲೆ! ಅದು ಯುಕ್ತವಾಗಿ ತೋರಲಿಲ್ಲ! ಈಕೆಯಾದರೋ ಅಬಲೆಯಾದ ಹೆಂಗಸು! ಇದರಮೇಲೆ ನನಗೆ ಸಾಕ್ಷಾತ್ತಾಗಿ ಒಡಹುಟ್ಟಿದ ತಂಗಿ! ಇದರಮೇಲೆ ಗರ್ಭಿಣಿ! ಇಂತಹ ಸ್ಥಿತಿಯಲ್ಲಿ ನಾನು ಇವಳನ್ನು ಕೊಂದರೆ, ಇದರಿಂದಲೇ ನನ್ನ ಯಶಸ್ಸಿಗೂ, ನನ್ನ ಐಶ್ವರ್ಯಕ್ಕೂ, ನನ್ನ ಆಯುಸ್ಸಿಗೂ ನಾನೇ ಹಾನಿಯನ್ನು ತಂದುಕೊಂಡಂತಾಗುವುದು. ಗರ್ಭಿಣಿಯಾದ ಹೆಂಗಸನ್ನು ಕೊಲ್ಲತಕ್ಕವನು ಬದುಕಿದ್ದರೂ ಮೃತಪ್ರಾಯನೆನಿಸಿಕೊಳ್ಳುವನು. ಮತ್ತು ದೇಹಾಭಿಮಾನದಿಂದ ಇಂತಹ ಕ್ರೂರಕಾರ್ಯವನ್ನು ನಡೆಸತಕ್ಕವರು ಇಹಲೋಕದಲ್ಲಿ ಎಲ್ಲೆಲ್ಲಿಯೂ ನಿಂದಿಸಲ್ಪಡುವುದಲ್ಲದೆ, ಆ ದೇಹವು ಬಿದ್ದುಹೋದಮೇಲೆ ಪರಲೋಕದಲ್ಲಿಯೂ ಅವರ ಆತ್ಮವು ಅಂಧತಮಸ್ಸೆಂಬ ನರಕದಲ್ಲಿ ಬಿದ್ದುನರಳುವುದು. ಇದಕ್ಕೇನು ಮಾಡಲಿ"ಎಂದು ಯೋಚಿಸುತ್ತ, ಕೊನೆಗೆ ಗರ್ಭವತಿಯಾದ ತನ್ನ ತಂಗಿಯನ್ನು ಕೊಲ್ಲುವುದಕ್ಕೆ ಮನಸ್ಸುಬಾರದೆ ಹಿಂತಿರುಗಿಬಿಟ್ಟನು. ತನಗೆ ಜನ್ಮದ್ವೇಷಿಯಾದ ಆ ಶಿಶುವಿನ ಜನನಕಾಲವನ್ನೇ ನಿರೀಕ್ಷಿಸುತ್ತ, ಆ ಶಿಶುವಿನಮೇಲೆ ಹಗೆತೀರಿಸಿಕೊಳ್ಳಬೇಕೆಂದು ಎಚ್ಚರಿಕೆಯಿಂದ ಕಾದಿದ್ದನು. ಆ ಕಂಸನು ಎಚ್ಚರಗೊಂಡಿರುವಾಗಲೂ, ಮಲಗಿದಾಗಲೂ, ಸುಮ್ಮನೆ ನಿಂತಾಗಲೂ, ನಡೆಯುವಾಗಲೂ, ಆಹಾರವನ್ನು ತೆಗೆದುಕೊಳ್ಳುವಾಗಲೂ, ಜಲಪಾನವನ್ನು ಮಾಡುವಾಗಲೂ, ಬದ್ಧದ್ವೇಷದಿಂದ ಆ ಶ್ರೀಹರಿಯನ್ನೇ ನೆನೆಸುತ್ತಿದ್ದನು. ಈ ವೈರಾನುಬಂಧದಿಂದ ಅವನಿಗೆ ಜಗತ್ತೆಲ್ಲವೂ ವಿಷ್ಣುಮಯವಾಗಿಯೇ ತೋರುತಿದ್ದಿತು. ಇಷ್ಟರಲ್ಲಿ ಇತ್ತಲಾಗಿ ದೇವಕಿಯ ಗರ್ಭದಲ್ಲಿ ಶ್ರೀಹರಿಯು ಶಿಶುರೂಪದಿಂದ ಬೆಳೆಯುತ್ತಿರುವುದನ್ನು ತಿಳಿದು, ಬ್ರಹ್ಮರುದ್ರಾದಿದೇವತೆಗಳೆಲ್ಲರೂ, ಮಹರ್ಷಿಗಳೊಡನೆಯೂ, ತಮ್ಮ ತಮ್ಮ ಅನುಚರರೊಡನೆಯೂ

ಸೇರಿ, ದೇವಕಿಯಿದ್ದ ಸೆರೆಮನೆಗೆ ಬಂದು, ಗರ್ಭಸ್ಥನಾದ ಶ್ರೀಹರಿಯನ್ನು ದ್ದೇಶಿಸಿ ಹೀಗೆಂದು ಸ್ತುತಿಸುವರು.

{ ಬ್ರಹ್ಮರುದ್ರಾದಿಗಳು ದೇವಕೀಗರ್ಭಸ್ಥನಾದ ಹರಿಯನ್ನು ಸ್ತುತಿಸಿದುದು. }

* ಓ ದೇವಾ! ನೀನು ಸತ್ಯಸಂಕಲ್ಪನು. ಸತ್ಯವೆಂದು ಕರೆಯಲ್ಪಡುವ ಚಿದಚಿದಾತ್ಮಕವಾದ ಈ ಸಮಸ್ತಪ್ರಪಂಚಕ್ಕಿಂತಲೂ ವಿಲಕ್ಷಣನು. ಮತ್ತು ಪ್ರಕೃತಿ ಪುರುಷ ಕಾಲ ಶರೀರಕನು. ಸತ್ಯರೂಪವಾದ ಈ ಜಗತ್ತಿಗೆ ನೀನೇ ಉತ್ಪತ್ತಿಸ್ಥಾನವು. ನಿರ್ವಿಕಾರವಾದ ಪರಮಾಕಾಶದಲ್ಲಿ ನೆಗೆಲೊಂಡ ವನು. ನಿನಗೆ ಇತರಜೀವಗಳಂತೆ ಜ್ಞಾನಸಂಕೋಚಾದಿಗಳಿಲ್ಲದುದರಿಂದ, ನೀನು ಸತ್ಯವೆನಿಸಿಕೊಂಡ ಜೀವನಿಗಿಂತಲೂ ಅತಿಶಯವಾದ ಸತ್ಯಸ್ವರೂಪ ವುಳ್ಳವನು. ಸೂರ್ಯಚಂದ್ರರಿಬ್ಬರನ್ನೂ ನೇತ್ರವಾಗಿ ಉಳ್ಳವನು. ವಿಕಾರವಿ ಲ್ಲದ ಸತ್ಯಸ್ವರೂಪನು. ಇಂತಹ ನೀನು ಮರೆಹೊಕ್ಕ ನಮ್ಮನ್ನು ಅನುಗ್ರ ಹಿಸಬೇಕು.

ಓ ದೇವಾ! ಕಾರ್ಯಕಾರಣರೂಪವಾದ ಈ ಪ್ರಪಂಚವೆಂಬ ವೃಕ್ಷಕ್ಕೆ ನೀನೊಬ್ಬನೇ ಆಧಾರದಂಡವು! ಸುಖದುಃಖಗಳೆಂಬಿವೆರಡೂ ಅದರ ಫಲ ಗಳು! ಸತ್ವರಜಸ್ತಮಸ್ಸುಗಳೆಂಬ ಗುಣಗಳು ಮೂರೂ ಮೂರು ಬೇ ರುಗಳು! ಧರ್ಮಾದಿಪುರುಷಾರ್ಥಗಳು ನಾಲ್ಕೂ ನಾಲ್ಕುರಸಗಳು! ಭೂ ತಸೂಕ್ಷ್ಮಗಳೈದೂ ಐದು ಬಿಳಲುಗಳು! ಹಸಿವು, ಬಾಯಾರಿಕೆ, ಶೋ ತ, ಮೋಹ, ಜರೆ, ಮರಣಗಳೆಂಬ ಷಡೂರ್ಮಿಗಳೂ ಆರು ಇಂದ್ರಿಯ ಗಳು! ಚರ್ಮ, ಮಾಂಸ, ರಕ್ತ, ಕೆನ್ನೀರು, ಮೇದಸ್ಸು, ಮಜ್ಜೆ, ಅಸ್ಥಿಗಳೆಂಬ ಸಪ್ತಧಾತುಗಳೂ, ಅದರ ಏಳು ತೊಗಟೆಗಳು! ಕೈಗಳೆರಡು, ಕಾಲುಗಳೆರಡು ತಲೆ, ಕಂಠ, ಎದೆ, ಜಠರಗಳೆಂಬಿವೆಂಟೂ ಎಂಟುಶಾಖೆಗಳು! ಕಣ್ಣು,

* ಕ್ಷೀರಾಬ್ಧಿಶಾಯಿಯಾದ ಪರಮಪುರುಷನು, ಹಿಂದೆ ತನಗೆ ಕೊಟ್ಟ ಅಭ ಯವಾಕ್ಯವನ್ನು ಸತ್ಯವಾಗಿ ಮಾಡಿದುದನ್ನು ನೋಡಿ, ಬ್ರಹ್ಮಾದಿದೇವತೆಗಳು ಪರಮ ಸಂತೋಷದಿಂದುಬ್ಬಿದವರಾಗಿ, ಕೇವಲ ಸತ್ಯಸ್ವರೂಪನನ್ನಾಗಿಯೇ ಅವನನ್ನು ಸ್ತುತಿ ಸುವರೆಂದು ಶ್ರೀಧರೀಯವ್ಯಾಖ್ಯಾನವು.

ಕಿವಿ, ಮೊದಲಾದ ನವರಂಧ್ರಗಳೂ ಅದರ ಪೊಟ್ಟರೆಗಳು! ಪ್ರಾಣ, ಅಪಾನ, ವ್ಯಾನ ಉದಾನ, ಸಮಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯಗಳೆಂಬ ದಶಪ್ರಾಣಗಳೂ ಹತ್ತು ಎಲೆಗಳು! ಜೀವಾತ್ಮ ಪರಮಾತ್ಮಗಳೆಂಬಿವೆರಡೂ ಅದರಲ್ಲಿ ವಾಸಮಾಡುವ ಎರಡುಪಕ್ಷಿಗಳು! ಇಂತಹ ಜಗದ್ರೂಪವಾದ ವೃಕ್ಷಕ್ಕೆ ಆಧಾರಭೂತನಾದ ನಿನ್ನನ್ನು ವಂದಿಸುವೆವು.

ದೇವಾ! ಈ ಸಮಸ್ತಪ್ರಪಂಚದ ಉತ್ಪತ್ತಿ ಸ್ಥಿತಿ ಲಯಗಳೆಲ್ಲಕ್ಕೂ ನೀನೆ ಕಾರಣವು. ನೀನು ಜೀವನಿಗಿಂತಲೂ ಬೇರೆಯಾಗಿದ್ದರೂ ನಿನ್ನ ಮಾಯೆಯಿಂದ ಮೋಹಿತರಾದ ಮೂಢರು, ನಿನ್ನನ್ನೇ ಅನೇಕಜೀವರೂಪದಿಂದಿರುವುದಾಗಿ ಭ್ರಮಿಸುವರೇಹೊರತು, ನಿನ್ನ ಪರಸ್ವರೂಪವನ್ನು ತಿಳಿಯಲಾರರು

ದೇವಾ! ಕೇವಲಜ್ಞಾನಾನಂದಸ್ವರೂಪನಾದ ನೀನು ಲೋಕಕ್ಷೇಮಕ್ಕಾಗಿ, ಶುದ್ಧಸತ್ವಮಯವಾಗಿಯೂ, ಸಾಧುಗಳಿಗೆ ಕ್ಷೇಮಪ್ರದವಾಗಿಯೂ, ದುರ್ಜನರಿಗೆ ಹಾನಿಕರವಾಗಿಯೂ ಇರುವ ಬೇರೆಬೇರೆ ಅವತಾರಗಳನ್ನೆತ್ತಿ ಲೋಕವನ್ನುದ್ಧರಿಸುವೆ.

ಓ ಪುಂಡರೀಕಾಕ್ಷಾ! ಹೀಗೆ ನೀನು ಲೋಕಕ್ಷೇಮಾರ್ಥವಾಗಿ ಬೇರೆಬೇರೆ ಅವತಾರಗಳನ್ನೆತ್ತಿದಾಗಲೂ, ಕೆಲವು ಜ್ಞಾನಿಗಳು, ತಮ್ಮ ಸಮಾಧಿ(ಯೋಗ) ಬಲದಿಂದ ಶುದ್ಧಸತ್ವಮಯವಾದ ನಿನ್ನ ಪರಸ್ವರೂಪವನ್ನು ತಮ್ಮ ಮನಸ್ಸಿನಲ್ಲಿ ಸಾಕ್ಷಾತ್ಕರಿಸುತ್ತ, ನಿನ್ನ ಪಾದಾರವಿಂದವೆಂಬ ನಾವೆಯನ್ನು ಹಿಡಿದು, ಸದಾಚಾರ್ಯನೆಂಬ ನಾವಿಕನ ಸಹಾಯದಿಂದ, ಸಂಸಾರವೆಂಬ ಮಹಾಸಮುದ್ರವನ್ನು ಗೋಷ್ಪದದಂತೆ ನಿರಾಯಾಸವಾಗಿ ದಾಟುವರು

ಓ ದೇವಾ! ಹೀಗೆ ಜ್ಞಾನಿಗಳು ತಾವುಮಾತ್ರ ಭಯಂಕರವಾದ ಆ ಸಂಸಾರಸಮುದ್ರವನ್ನು ದಾಟುವುದಲ್ಲದೆ, ನಿನ್ನ ಪಾದಭಕ್ತಿಯೇ ಸಂಸಾರಸಾಗರವನ್ನು ದಾಟಿಸತಕ್ಕ ನಾವೆಯೆಂಬುದನ್ನು ಇತರಜೀವರಾಶಿಗೂ ತೋರಿಸಿ ಲೋಕವನ್ನುದ್ಧರಿಸುವರು. ಹೀಗೆ ಸಾಧುಗಳನ್ನೂ, ಅವರ ಮೂಲಕವಾಗಿ ಇತರಲೋಕಗಳನ್ನೂ ಅನುಗ್ರಹಿಸತಕ್ಕ ನೀನು, ಶರಣಾಗತರಾದ ನಮ್ಮನ್ನು ರಕ್ಷಿಸಬೇಕು.

ಓ ಪದ್ಮನಾಭಾ! ಬೇರೆ ಕೆಲವರು ಸಂಸಾರಬದ್ಧರಾಗಿದ್ದರೂ,ತಾವು ಮುಕ್ತರೆಂಬ ವೃಥಾಭಿಮಾನದಿಂದ ಬೀಗಿ ಬೆರೆಯುವರು. ಅವರು ನಿನ್ನಲ್ಲಿ ಭಕ್ತಿಹೀನರಾದುದರಿಂದ ಮನಶ್ಶುದ್ಧಿಯಿಲ್ಲದವರಾಗಿದ್ದರೂ, ಪೂರ್ವಾರ್ಜಿತ ವಾದ ಅಲ್ಪಸ್ವಲ್ಪಸುಕೃತವಿಶೇಷದಿಂದ ಉತ್ತಮಜನ್ಮವನ್ನು ಪಡೆಯು ವುದುಂಟು. ಅತಿಪ್ರಯಾಸದಿಂದ ಈ ಉತ್ತಮಪದವನ್ನೇರಿರುವಾಗಲೂ, ನಿನ್ನಲ್ಲಿ ವಿಮುಖರಾಗುವುದರಿಂದ, ತಿರುಗಿ ನೀಚಜನ್ಮವನ್ನೇ ಹೊಂದುವರು ಮಾಧವಾ ! ನಿನ್ನಲ್ಲಿ ಪೂರ್ಣಭಕ್ತಿಯನ್ನು ಸಾಧಿಸಿದವರಾದರೋ, ಎಂದಿ ಗೂ ಈ ವಿಧವಾಗಿ ದಾರಿತಪ್ಪಿಹೋಗಲಾರರು. ಅಂತವರು ಯಾವಾಗಲೂ ನಿನ್ನ ಅನುಗ್ರಹದಿಂದ ರಕ್ಷಿತರಾಗಿ, ತಮ್ಮ ಭಕ್ತಿನಿರೋಧಕಗಳಾದ ವಿಘ್ನ ದೇವತೆಗಳನ್ನು ಕಾಲಿಂದ ಮೆಟ್ಟುತ್ತ ನಿರ್ಭಯವಾಗಿ ಸಂಚರಿಸುವರು.

ಪುರುಷೋತ್ತಮಾ! ನೀನು ಈ ವಿಧವಾದ ಶರೀರಗಳನ್ನೆತ್ತುವುದ ಕ್ಕೆ ಲೋಕರಕ್ಷಣವೆಂಬುದು ವ್ಯಾಜವೇಹೊರತು, ನಿಜವಾಗಿ ಅದರ ಉ ದ್ದೇಶವು ಲೋಕರಕ್ಷಣವಲ್ಲ! ಸಂಕಲ್ಪಮಾತ್ರದಿಂದಲೇ ಸಮಸ್ತ ಕಾರ್ಯವ ನ್ನೂ ನಿರ್ವಹಿಸಬಲ್ಲ ನಿನಗೆ, ಅದಕ್ಕಾಗಿ ಇಷ್ಟುಪ್ರಯಾಸವೇಕೆ? ನೀನು ಆ ಯಾ ಶರೀರವನ್ನೆತ್ತಿದಾಗ, ಜನರು ನಿನ್ನ ಆಯಾ ಅವತಾರಚರಿತ್ರೆಗಳನ್ನು ಕೇಳಿ, ನಿನ್ನನ್ನುಪಾಸನೆಮಾಡಿ, ಶ್ರೇಯಸ್ಸನ್ನು ಪಡೆಯಬೇಕೆಂಬುದೇ ಇದರ ಉದ್ದೇಶವೇಹೊರತು ಬೇರೆಯಲ್ಲ. ನೀನು ಈ ವಿಧವಾದ ಶರೀರಗಳನ್ನೆತ್ತಿದಾ ಗಲೇ ಜನರು,ಯಜ್ಞಾದಿಕ್ರಿಯೆಗಳಿಂದಲೂ,ಉಪಾಸನದಿಂದಲೂ, ನಿನ್ನನ್ನು ಸುಲಭವಾಗಿ ಆರಾಧಿಸಬಲ್ಲರು. ಹಾಗಿಲ್ಲದಪಕ್ಷದಲ್ಲಿ,ನಿನ್ನ ಪರಸ್ವರೂಪವನ್ನು ತಿಳಿಯಲಾರದವರಿಗೆ, ನಿನ್ನನ್ನು ಆರಾಧಿಸುವ ಬಗೆಯೇನು ? ಅಂತವರನ್ನನು ಗ್ರಹಿಸುವುದಕ್ಕಾಗಿಯೇ ನೀನು ಈ ವಿಧವಾದ ಶರೀರಗಳನ್ನು ಕೈಕೊಳ್ಳುವೆ.

ಓ ಲೋಕಕಾರಣಾ ! ಹೀಗೆ ನೀನು ಅವತಾರವನ್ನೆತ್ತುವುದು, ಇತರ ಜನರಿಗೆ ಜ್ಞಾನಪ್ರಕಾಶಕವಾಗಿ, ಅಜ್ಞಾನದಿಂದ ತೋರುವ ದೇವಮನು ಷ್ಯಾದಿ ಭೇದಬುದ್ಧಿಯನ್ನು ನೀಗಿಸತಕ್ಕುದಾಗಿಯೂ ಇರುವುದು. ಶುದ್ಧಸ ತ್ವಮಯವಾದ ಈ ಶರೀರದಿಂದ ನೀನು ಅವತರಿಸದಿದ್ದರೆ, ಆಗ ಲೋಕದಲ್ಲಿ ಯಾವಯಾವ ಮನುಷ್ಯನಿಗೆ ಅವನವನ ಕರ್ಮಾನುಗುಣವಾಗಿ ಸತ್ವಾದಿಗು

ಣಗಳಲ್ಲಿ ಯಾವಯಾವಗುಣಗಳು ತಲೆಯೆತ್ತಿರುವುವೋ, ಆಯಾಗುಣಕ್ಕೆ ತಕ್ಕಂತೆ ನಿನ್ನನ್ನೂ ಇತರ ದೇವಮನುಷ್ಯಾದಿಗಳೊಡನೆ ಸಮಾನವಾಗಿಯೇ ಭಾವಿಸುವನು. ನೀನು ಈ ಅವತಾರಶರೀರಗಳಿಂದ ನಿನ್ನ ಪರಸ್ವರೂಪವನ್ನು ಮರೆಸಿಕೊಂಡಿದ್ದರೂ, ಸ್ಫಟಿಕದ ಬರಣಿಯಲ್ಲಿ ಬಚ್ಚಿಟ್ಟಾಗಲೂ ಬಂಗಾರವು, ತನ್ನ ಕಾಂತಿಯನ್ನು ಹೊರಕ್ಕೆ ತೋರಿಸುವಂತೆ, ಅದರಲ್ಲಿಯೇ ಆಗಾಗ ನಿನ್ನ ಅದ್ಭುತಶಕ್ತಿಯನ್ನು ಹೊರಪಡಿಸುವುದರಿಂದ, ಅವುಗಳನ್ನು ನೋಡಿ ಜನರು ನಿನ್ನನ್ನು ಪರಮಪುರುಷನೆಂದೂ, ಸರ್ವಲೋಕಕಾರಣನೆಂದೂ ಧ್ಯಾನಿಸಿ ಪೂಜಿಸುವರು.

ದೇವಾ! ನೀನು ಹೀಗೆ ದೇವತಿರ್ಯಙ್ಮನುಷ್ಯಾದಿರೂಪದಿಂದ ಅವತಾರವನ್ನೆತ್ತಿದರೂ, ನಿನ್ನ ಸ್ವರೂಪಸ್ವಭಾವಗಳನ್ನು ವೇದವಾಕ್ಯಗಳಿಂದಲೂ, ತದನುಸಾರವಾದ ಮನಸ್ಸಿನಿಂದಲೂ ಅನುಮಾನಿಸಿ ತಿಳಿಯಬೇಕೇಹೊರತು, ಅವು ಇಂದ್ರಿಯಗಳಿಗೆ ಗೋಚರಿಸತಕ್ಕವುಗಳಲ್ಲ. ಆ ನಿನ್ನ ನಾಮ, ರೂಪ, ಗುಣ, ಕರ್ಮ, ಜನ್ಮಗಳೊಂದನ್ನೂ ಇತರದೇವಮನುಷ್ಯಾದಿಗಳಿಗೆ ಸರಿಹೋಲಿಸಿ ಹೇಳುವುದಕ್ಕಿಲ್ಲ. ನಿನ್ನಲ್ಲಿರತಕ್ಕ ಅಸಾಧಾರಣಗುಣಗಳೇ ಬೇರೆ! ನಿನ್ನ ಸ್ವಭಾವವೇ ಬೇರೆ! ಹೀಗೆ ನೀನು ವಿಲಕ್ಷಣಸ್ವರೂಪವುಳ್ಳವನಾಗಿದ್ದರೂ, ಯಜ್ಞಾದಿಕ್ರಿಯೆಗಳನ್ನು ನಡೆಸತಕ್ಕವರು, ನಿನ್ನನ್ನು ಅಗ್ನೀಂದ್ರಾದಿದೇವತೆಗಳ ರೂಪದಿಂದಲೇ ಭಾವಿಸಿ ಪೂಜೆಗಳನ್ನು ಸಮರ್ಪಿಸುವರು. ಆದರೇನು ? ಆಸಮಸ್ತದೇವತೆಗಳಿಗೂ ನೀನೇ ಅಂತರಾತ್ಮನಾಗಿದ್ದು ಆಯಾಪೂಜೆಗಳನ್ನೂ ನೀನೇ ಗ್ರಹಿಸುವೆ.

ದೇವಾ! ನಿನ್ನ ಮಂಗಳಗುಣಗಳನ್ನು ಕಿವಿಯಿಂದ ಕೇಳುವುದು, ಅದನ್ನು ಮತ್ತೊಬ್ಬರಿಗೆ ಹೇಳುವುದು, ಅವುಗಳನ್ನು ತನಗೆ ಹೇಳತಕ್ಕವರೂ, ತನ್ನಿಂದ ಕೇಳತಕ್ಕವರೂ ಸಿಕ್ಕದಿದ್ದಾಗ, ನಿನ್ನ ನಾಮರೂಪಗಳನ್ನು ಮನಸ್ಸಿನಲ್ಲಿಟ್ಟು, ತಮಗೆ ತಾವೇ ಧ್ಯಾನಿಸುತ್ತಿರುವುದು, ತಾವು ಮಾಡತಕ್ಕ ಸಮಸ್ತಕಾರ್ಯಗಳಲ್ಲಿಯೂ ನಿನ್ನ ಚರಣಾರವಿಂದಗಳಲ್ಲಿಯೇ ಮನಸ್ಸನ್ನು ನೆಲೆಗೊಳಿಸುವುದು, ಹೀಗೆ ಮಾಡುವವರು, ಎಂದಿಗೂ ಸಂಸಾರಬಂಧದಲ್ಲಿ ಸಿಕ್ಕಿಬೀಳದೆ ಮುಕ್ತಿಯನ್ನೇ ಹೊಂದುವರು. ಓ ದೇವಾ! ಆಶ್ರಿತರ ದುಃಖವನ್ನು ನೀಗಿ

ಸತಕ್ಕ ನೀನು, ನಮ್ಮೆಲ್ಲರ ಭಾಗ್ಯವಶದಿಂದ, ಈಗ ಈ ದೇವಕಿಯ ಗರ್ಭದಲ್ಲಿ ಆವಿರ್ಭವಿಸುತ್ತಿರುವೆ! ಈಗ ನೀನು ಈವಿಧವಾಗಿ ಅವತರಿಸಿದಮಾತ್ರಕ್ಕೆ, ನಿನ್ನ ಪಾದಭೂತೆಯಾದ ಈ ಭೂಮಿಯ ಭಾರವು ನೀಗಿದಂತೆಯೇ ಭಾವಿಸುವೆವು. ಆಹಾ! ಏನುಭಾಗ್ಯವು! ಧ್ವಜವಜ್ರಾಂಕುಶಾದಿಶುಭಲಕ್ಷಣಗಳುಳ್ಳ ನಿನ್ನ ಪಾದ ರೇಖೆಯಿಂದ ಅಂಕಿತವಾದ ಈ ಭೂಮಿಯೇ, ಈಗ ನಮಗೆ, ನಿನ್ನ ನಿತ್ಯವಿಭೂತಿಯಾದ ವೈಕುಂಠಕ್ಕೆ ಸಮಾನವಾಗಿ ತೋರುವುದು

ಓ ಪ್ರಭೂ ! ನೀನು ಸರ್ವೇಶ್ವರನು! ಕರ್ಮಾಧೀನವಾದ ಉತ್ಪತ್ತಿಯಿಲ್ಲದವನು! ಹಾಗಿದ್ದರೂ ನೀನು ಈಗ ಈ ಮನುಷ್ಯಗರ್ಭದಲ್ಲಿ ಜನಿಸುವುದು, ನಿನ್ನ ವಿನೋದಾರ್ಥವಾಗಿಯೇಹೊರತು ಇದಕ್ಕೆ ಬೇರೆ ಕಾರಣವೊಂದನ್ನೂ ಹೇಳುವುದಕ್ಕಿಲ್ಲ. ಆಹಾ! ಇದಲ್ಲವೇ ಆಶ್ಚರ್ಯವು! ನಿನ್ನ ಮಾಯೆಯಿಂದ ಮೋಹಿತವಾದ ಈ ಜಗತ್ತಿಗೆ, ಉತ್ಪತ್ತಿ, ಸ್ಥಿತಿ, ಲಯ, ಮೊದಲಾದ ವಿಕಾರಗಳೆಲ್ಲವೂ ಹುಟ್ಟುವುದಕ್ಕೆ, ಯಾವ ನಿನ್ನ ಲೀಲೆಯೇ ಕಾರಣವೆನಿಸಿರುವುದೋ, ಆ ಲೀಲೆಯೇ ಈ ವಿಧವಾದ ನಿನ್ನ ಅವತಾರಗಳಿಗೂ ಕಾರಣವಲ್ಲದೆ ಬೇರೆಯಲ್ಲ! ನಿರ್ವಿಕಾರನಾದ ನಿನ್ನಲ್ಲಿ ಈ ವಿಕಾರಗಳು ತೋರುವುದಕ್ಕೆ ನಿನ್ನ ಲೀಲೆಯೇ ಕಾರಣವು.

ಓ ದೇವಾ ! ಮತ್ಸ್ಯ, ಅಶ್ವ (ಹಯಗ್ರೀವ) ಕಚ್ಛಪ, ವರಾಹ, ನೃಸಿಂಹ, ಹಂಸ, ಕ್ಷತ್ರಿಯ, (ರಾಮ) ಬ್ರಾಹ್ಮಣ, ದೇವತಾರೂಪದಿಂದ ನೀನು ಹಿಂದೆ ಬೇರೆಬೇರೆ ಅವತಾರಗಳನ್ನೆತ್ತಿ, ನಮ್ಮನ್ನೂ, ತ್ರೈಲೋಕ್ಯವನ್ನೂ ಕಾಪಾಡುತ್ತ ಬಂದಂತೆಯೇ, ಈಗಲೂ ಈ ಅವತಾರವನ್ನೆತ್ತಿ ಭೂಭಾರವನ್ನು ನೀಗಿಸಬೇಕು! ಓ ಯದೂತ್ತಮಾ ! ನಿನಗೆ ವಂದನವು.” ಎಂದು ದೇವತೆಗಳೆಲ್ಲರೂ ಭಗವಂತನನ್ನು ಸ್ತುತಿಸಿದಮೇಲೆ, ದೇವಕಿಯನ್ನು ಕುರಿತು “ಅಮ್ಮಾ ! ನಮ್ಮ ಶ್ರೇಯಸ್ಸಿಗಾಗಿ ಪರಮಪುರುಷನು, ತನ್ನ ಸಂಕಲ್ಪದಿಂದ ನಿನ್ನ ಗರ್ಭದಲ್ಲಿ ಪ್ರವೇಶಿಸಿರುವನು. ಇದರಿಂದಲೇ ಕಂಸನಿಗೆ ಮೃತ್ಯುವು ಸನ್ನಿಹಿತವಾಯಿತೆಂಬುದು ಸ್ಪಷ್ಟವು. ಇನ್ನು ನೀನು ಅವನಿಗಾಗಿ ಸ್ವಲ್ಪಮಾತ್ರವೂ ಭಯಪಡಬೇಕಾದುದಿಲ್ಲ. ಈ ನಿನ್ನ ಗರ್ಭಶಿಶುವೇ ಸಮಸ್ತಯಾದವರ ಕಷ್ಟವನ್ನೂ ನೀಗಿಸಿ ಕಾಪಾಡುವವನೆಂದು ತಿಳಿ!” ಎಂದರು. ಓ ಪರೀಕ್ಷಿ

ದ್ರಾಜಾ! ಬ್ರಹ್ಮರುದ್ರಾದಿ ದೇವತೆಗಳೆಲ್ಲರೂ ಹೀಗೆ, ತಮಗೆ ತೋರಿದಮಟ್ಟಿಗೆ ಭಗವಂತನನ್ನು ಸ್ತುತಿಸಿ, ತಮ್ಮತಮ್ಮ ಸ್ಥಾನಗಳಿಗೆ ಹೋಗಿ ಸೇರಿದರು. ಇದು ಎರಡನೆಯ ಅಧ್ಯಾಯವು.

---

(ಶ್ರೀ ಕೃಷ್ಣಾವತಾರವು. ನಿಜಸ್ವರೂಪದಿಂದ ಆವಿರ್ಭವಿಸಿದ ಭಗವಂತನನ್ನು ನೋಡಿ ವಸುದೇವ ದೇವಕಿಯರು ಸ್ತುತಿಸಿದುದು)

ಓ ಪರೀಕ್ಷಿನ್ನೃಪಾ! ಇಷ್ಟರಲ್ಲಿಯೇ ಭಗವದವತಾರಕ್ಕೆ ತಕ್ಕಂತೆ ಸರ್ವಗುಣವಿಶಿಷ್ಟವಾದ, ಮತ್ತು ಪರಮಂಗಳಕರವಾದ ಕಾಲವು ಸನ್ನಿಹಿತವಾಯಿತು. ಮಾನವರಿಗೆ ಮೃತ್ಯುಸೂಚಕವಾಗಿ, ಭಗವಂತನ ಜನ್ಮನಕ್ಷತ್ರವಾದ ರೋಹಿಣಿಯೂ ಸಂಭವಿಸಿತು. ಸೂರ್ಯಾದಿಗ್ರಹಗಳೂ, ಇತರನಕ್ಷತ್ರಗಳೂ ಅನುಕೂಲಸ್ಥಾನವನ್ನು ಸೇರಿರುವ ದಿಕ್ಕುಗಳೆಲ್ಲವೂ ಪ್ರಸನ್ನವಾಗಿ ಅಪೂರ್ವಕಾಂತಿಯಿಂದ ಬೆಳಗುತ್ತಿದ್ದುವು. ಆಕಾಶವು ನಿರ್ಮಲವಾಗಿ ಪ್ರಕಾಶವಿಶಿಷ್ಟವಾದ ನಕ್ಷತ್ರಸಮೂಹಗಳಿಂದ ಕಂಗೊಳಿಸುತಿತ್ತು. ಪಟ್ಟಣಗಳು, ಗ್ರಾಮಗಳು, ಗೋಕುಲಗಳು. ಇವುಗಳಿಂದ ತುಂಬಿದ ಸಮಸ್ತಭೂಮಿಯೂ ಮಂಗಳಕರವಾಗಿ ತೋರುತಿತ್ತು. ನದಿಗಳೆಲ್ಲವೂ ಸ್ವಚ್ಛಜಲದಿಂದ ಶೋಭಿಸುತಿದ್ದುವು. ಕೊಳಗಳೆಲ್ಲವೂ ಕಮಲಕಾಂತಿಯಿಂದಲೂ, ವನಗಳೆಲ್ಲವೂ ಫಲಪುಷ್ಪಸಮೃದ್ಧವಾಗಿ. ಭ್ರಮರಝುಂಕಾರಗಳಿಂದಲೂ,ಪಕ್ಷಿಗಳ ಗಾನದಿಂದಲೂ,ಕಣ್ಣುಗಳಿಗೂ ಕಿವಿಗಳಿಗೂ ಆನಂದಕರವಾಗಿದ್ದುವು. ಗಾಳಿಯು ಸುಖಸ್ಪರ್ಶವಾಗಿ, ಸುಗಂಧವಿಶಿಷ್ಟವಾಗಿ, ಸ್ವಚ್ಛವಾಗಿ ಬೀಸತೊಡಗಿತು. ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ತ್ರೈವರ್ಣಿಕರ ಗೃಹಗಳಲ್ಲಿ, ಅದುವರೆಗೆ ಶಾಂತವಾಗಿದ್ದ ಹೋಮಾಗ್ನಿಗಳೆಲ್ಲವೂ, ಪ್ರಕಾಶವಿಶಿಷ್ಟವಾದ ಜ್ವಾಲೆಗಳಿಂದ ಉರಿಯಲಾರಂಭಿಸಿದುವು. ಸಾಧುಜನಗಳ ಮತ್ತು ದೇವತೆಗಳ ಮನಸ್ಸಿನಲ್ಲಿದ್ದ ಕಳಂಕವು ಹೋಗಿ, ಆಕಸ್ಮಿಕವಾದ ಒಂದು ಬಗೆಯ ಉಲ್ಲಾಸವು ತೋರಿತು. ಜನ್ಮರಹಿತನಾದ ಆ ಭಗವಂತನ ಜನನಕಾಲವು ಸಮೀಪಿಸಿದೊಡನೆ, ಆಕಾಶದಲ್ಲಿ ದೇವದುಂದುಭಿಗಳು ತನಗೆ



೧೭೪೩. ಶ್ರೀಕೃಷ್ಣಾವತಾರವು.

ತಾನೇ ಮೊಳಗಲಾರಂಭಿಸಿದುವು! ಗಂಧರ್ವ ಕಿನ್ನರ ಸಿದ್ಧಚಾರಣಾದಿಗಳೆಲ್ಲರೂ ಸಂತೋಷದಿಂದ ಗಾನಮಾಡುತ್ತ ಭಗವಂತನನ್ನು ಸ್ತುತಿಸುತಿದ್ದರು. ವಿದ್ಯಾಧರಸ್ತ್ರೀಯರೂ, ಅಪ್ಸರಸ್ಸುಗಳೂ ನರ್ತಿಸುತಿದ್ದರು. ದೇವತೆಗಳೂ, ದೇವರ್ಷಿಗಳೂ ಸಂತೋಷದಿಂದ ಪುಷ್ಪವೃಷ್ಟಿಯನ್ನು ಕರೆಯುತಿದ್ದರು. ಭಗವಂತನ ಅವತಾರಕಾಲಕ್ಕೆ ಸರಿಯಾಗಿ, ಆಕಾಶದಲ್ಲಿ ಮೇಘಗಳು ಸಮುದ್ರಘೋಷದಂತೆ ಗಂಭೀರವಾದ ಮೃದುಧ್ವನಿಯಿಂದ ಮೊಳಗುತಿದ್ದುವು. ಆಗ ಅರ್ಧರಾತ್ರಸಮಯವಾದುದರಿಂದ ಲೋಕವೆಲ್ಲವೂ ಅಂಧಕಾರಪ್ರಚುರವಾಗಿದ್ದಿತು

## ಶ್ರೀ ಕೃಷ್ಣಾವತಾರಘಟ್ಟವು

ಸರ್ವಲೋಕಶುಭಪ್ರದವಾದ ಇಂತಹ ಸಮಯದಲ್ಲಿ, ಸಕಲಕಲ್ಯಾಣಗುಣಪರಿಪೂರ್ಣನಾದ ಶ್ರೀಮಹಾವಿಷ್ಣುವು, ಪೂರ್ವದಿಕ್ಕಿನಲ್ಲಿ ಹುಟ್ಟಿಬರುವ ಪೂರ್ಣಚಂದ್ರನಂತೆ, ದೇವತಾಂಶಭೂತೆಯಾದ ದೇವಕೀದೇವಿಯ ಗರ್ಭದಿಂದ ಅವತರಿಸಿದನು. ಆಗ ಹುಟ್ಟಿದ ಶಿಶುವಿನ ಅದ್ಭುತರೂಪವನ್ನು ಕೇಳಬೇಕೆ! ಕಮಲದಂತೆ ವಿಶಾಲವಾದ ಕಣ್ಣುಗಳು! ನಾಲ್ಕು ಭುಜಗಳು! ಆ ನಾಲ್ಕುಭುಜಗಳಲ್ಲಿಯೂ ಶಂಖಚಕ್ರಾದಿದಿವ್ಯಾಯುಧಗಳು! ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆ! ಕಂಠದಲ್ಲಿ ಕೌಸ್ತುಭಮಣಿ? ನಡುವಿಗೆ ಸುತ್ತಿದ ಪೀತಾಂಬರವೆಂಬ ಪಟ್ಟೆಮಡಿ! ಜಲಪೂರ್ಣವಾದ ಮೇಘದಂತೆ ಶ್ಯಾಮಲವಾಗಿಯೂ, ಸುಂದರವಾಗಿಯೂ ಇರುವ ದೇಹಕಾಂತಿ! ವಜ್ರವೈಡೂರ್ಯಾದಿನವರತ್ನಖಚಿತಗಳಾದ ಕಿರೀಟಕುಂಡಲಗಳ ಕಾಂತಿಯಿಂದ ಝಗಝಗಿಸುವ ಮುಂಗುರುಳುಗಳು! ಉತ್ತಮವಾದ ತೋಳ್ಬಳೆ, ಕೈಬಳೆ ಕಾಂಚೀದಾಮ, ಮೊದಲಾದ ಆಭರಣಗಳಿಂದ ಶೋಭಿತಗಳಾದ ಸರ್ವಾವಯವಗಳು! ಇಂತಹ ಅಸಾಧಾರಣಲಕ್ಷಣಗಳಿಂದೊಪ್ಪುತ್ತಿರುವ, ಲೋಕಾದ್ಭುತವಾದ ಆ ಶಿಶುವನ್ನು ನೋಡಿ ವಸುದೇವನು, ಆಶ್ಚರ್ಯದಿಂದ ಬೆರಗಾಗಿ, ನಟ್ಟ ಕಣ್ಣಿನಿಂದ ಆ ಶಿಶುವನ್ನೇ ಎವೆಮುಚ್ಚದೆ ನೋಡುತಿದ್ದನು. ಸಾಕ್ಷಾನ್ಮಹಾವಿಷ್ಣುವೇ ತನಗೆ ಪುತ್ರರೂಪದಿಂದ ಜನಿಸಿದುದನ್ನು ನೋಡಿದಾಗ, ಅವನ ಮಹೋತ್ಸಾಹವನ್ನು ಕೇಳಬೇಕೆ? ಆಗಲೇ ವಸುದೇವನು ಸ್ನಾನಮಾಡಿಬಂದು,

ತಾನು ಕಂಸನ ಸೆರೆಯಲ್ಲಿ ಸಿಕ್ಕಿಬಿದ್ದುದರಿಂದ,ಪುತ್ರಜನ್ಮೋತ್ಸವ ಕಾಲದಲ್ಲಿ ನಡೆಸಬೇಕಾದ ಗೋದಾನಾದಿಗಳನ್ನು ನಡೆಸುವುದಕ್ಕೆ ಸಾಧ್ಯವಿಲ್ಲದೆ, ಮುಂದೆ ಅನುಕೂಲಕಾಲದಲ್ಲಿ ಹತ್ತುಸಾವಿರ ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡುವುದಾಗಿ ಮನಸ್ಸಿನಲ್ಲಿ ಸಂಕಲ್ಪಿಸಿದನು. ಮತ್ತು ಆಗ ವಸುದೇವನು, ನಿಜದೇಹಕಾಂತಿಯಿಂದಲೇ ಆ ಸೂತಿಕಾಗೃಹವನ್ನು ಬೆಳಗುವಂತಿದ್ದ ಆ ಶುವನ್ನು ಕಂಡು, ಅತನೇ ಪರಮಪುರುಷನೆಂದು ನಿಶ್ಚಯಿಸಿ, ಅದುವರೆಗೆ ಕಂಸನ ವಿಷಯದಲ್ಲಿ ತನಗಿದ್ದ ಭಯವನ್ನು ಬಿಟ್ಟು, ಆ ಶಿಶುವಿನಮುಂದೆ ವಿನಯದಿಂದ ಕೈಜೋಡಿಸಿ ನಿಂತು ಹೀಗೆಂದು ಸ್ತುತಿಸುವನು.

"ಓ ಮಹಾತ್ಮಾ! ನೀನು ಚಿದಚಿದಾತ್ಮಕವಾದ ಪ್ರಪಂಚಕ್ಕಿಂತಲೂ ಬೇರೆಯಾದವನು. ಕೇವಲ ಜ್ಞಾನಾನಂದಸ್ವರೂಪನು. ಸಮಸ್ತಪ್ರಾಣಿಗಳ ಬುದ್ಧಿವ್ಯಾಪಾರವನ್ನೂ ಏಕಕಾಲದಲ್ಲಿ ಕಂಡುಕೊಳ್ಳತಕ್ಕ ಸರ್ವಸಾಕ್ಷಿಯಾದ ಪರಮಪುರುಷನೇ ನೀನೆಂಬುದು ಈಗ ನನಗೆ ವ್ಯಕ್ತವಾಯಿತು. ಆ ನೀನೇ ನಿನಗೆ ಶರೀರಭೂತವಾದ ಪ್ರಕೃತಿಯಿಂದ, ಮೊದಲು ತ್ರಿಗುಣಾತ್ಮಕವಾದ ಈ ಪ್ರಪಂಚವನ್ನು ಸೃಷ್ಟಿಸುವೆ! ಹೀಗೆ ಪ್ರಪಂಚವನ್ನು ಸೃಷ್ಟಿಸಿದಮೇಲೆಯೂ, ನೀನೇ ಅದರಲ್ಲಿ ನಿನ್ನ ಸಂಕಲ್ಪರೂಪಜ್ಞಾನದಿಂದ ಅಂತರ್ಯಾಮಿಯಾಗಿ ಪ್ರವೇಶಿಸಿ, ಸ್ಥಿತಿಯನ್ನೂ ನಿರ್ವಹಿಸುವೆ. ಹೀಗೆ ನೀನು ಆಯಾವಸ್ತುಗಳಲ್ಲಿ ಅಂತರ್ಯಾಮಿಯಾಗಿದ್ದಾಗಲೂ, ಆ ವಸ್ತುಗತವಾದ ವಿಕಾರಗಳೊಂದಕ್ಕೂ ಈಡಾಗದೆ, ಅವುಗಳ ಸಂಪರ್ಕವೇ ಇಲ್ಲದವನಂತೆ ಕಾಣುವೆ! ಆದರೆ "ಕಾರ್ಯರೂಪವಾದ ಈ ಪ್ರಪಂಚದಲ್ಲಿಯೇ ನಾನೂ ಒಬ್ಬನಾಗಿ ಸೇರಿರುವಾಗ, ಮೊದಲೇ ಅದಕ್ಕೆ ನಾನು ಕಾರಣನಾಗಿದ್ದೆನೆಂದೂ, ಆಯಾವಸ್ತುಗಳಲ್ಲಿ ಸೇರಿರುವಾಗಲೂ ನನಗೆ ಅವುಗಳಿಗುಂಟಾಗುವ ವಿಕಾರಗಳು ಸಂಭವಿಸಲಾರವೆಂದೂ ಹೇಳುವುದು ಹೇಗೆ?" ಎಂದರೆ, ಪ್ರಕೃತಿಯಿಂದುಂಟಾಗತಕ್ಕ ಮಹತ್ತು, ಅಹಂಕಾರ, ಪಂಚತನ್ಮಾತ್ರಗಳೆಂಬೀ ಏಳುಬಗೆಯ ತತ್ವಗಳೂ, ಇವುಗಳ ವಿಕಾರರೂಪಗಳಿಂದಾಗುವ ಆಕಾಶಾದಿ ಸ್ಥೂಲಭೂತಗಳೂ, ಆಯಾ ಅಧಿದೇವತೆಗಳೊಡಗೂಡಿದ ಇಂದ್ರಿಯಗಳೂ ಇವೆಲ್ಲವೂ ಮೊದಲು ಪರಸ್ಪರಸಂಬಂಧವಿಲ್ಲದೆ ಬೇರೆಬೇರೆಯಾಗಿದ್ದಾಗ,

ತನತನಗಿರುವ ಬೇರೆಬೇರೆ ಶಕ್ತಿಯಿಂದ, ಈ ಬ್ರಹ್ಮಾಂಡವನ್ನು ಸೃಷ್ಟಿ ಸುವುದಕ್ಕೆ ತಕ್ಕ ಸಾಮರ್ಥ್ಯವಿಲ್ಲವೆ, ಕೊನೆಗೆ ನೀನು ಮಾಡಿದ ಪಂಚೀ ಕರಣದಮೂಲಕವಾಗಿ ಒಂದಕ್ಕೊಂದು ಸೇರಿದಮೇಲೆಯೇ, ನಿನಗೆ ಶಯನ ಸ್ಥಾನವಾದ ಈ ಬ್ರಹ್ಮಾಂಡವು ಏರ್ಪಡುವುದಿಲ್ಲವೆ ? ಹೀಗೆ ಇವೆಲ್ಲವೂ ತ ಮ್ಮ ಪರಸ್ಪರಸಂಯೋಗದಿಂದ ಬ್ರಹ್ಮಾಂಡವನ್ನು ಸೃಷ್ಟಿಸಿದಮೇಲೆ, ಅದರಲ್ಲಿಯೇ ತಾವೂ ಸೇರಿರುವುದರಿಂದ,ತಾವೇ ಈ ಬ್ರಹ್ಮಾಂಡದಲ್ಲಿ ಹುಟ್ಟಿ ದಂತೆ ಕಾಣುತ್ತಿರುವುವು ಸಹಜವು ಆದರೆ ಅವು ಬ್ರಹ್ಮಾಂಡಸೃಷ್ಟಿಗೆ ಮೊದಲೇ ಇದ್ದುದರಿಂದ, ಅವುಗಳಿಗೆ ಬ್ರಹ್ಮಾಂಡದಲ್ಲಿ ಉತ್ಪತ್ತಿಯು ಅಸಂ ಭವವಲ್ಲವೆ? ಅದರಂತೆ ನೀನೂ ದೇವಮನುಷ್ಯಾದಿಶರೀರಗಳಲ್ಲಿ* ಪ್ರವೇ ಶಿಸಿ, ಇಂದ್ರಿಯಗಳಿಗೆ ಗೋಚರಿಸತಕ್ಕವುಗಳಾಗಿಯೂ, ಗುಣಕಾರ್ಯಗ ಳಾಗಿಯೂ ಇರುವ ಆ ದೇವಾದಿಶರೀರಗಳೊಡನೆ ಒಂದಾಗಿ ಕಲೆತಿದ್ದರೂ, ನೀನೇ ಅವಕ್ಕೆಲ್ಲಾ ಅಧಿಕಾರಣನು! ಅವುಗಳಿಗುಂಟಾಗತಕ್ಕ ವಿಕಾರಗಳೊಂ ದೂ ನಿನ್ನನ್ನು ಮುಟ್ಟಲಾರವು! ದೇವಾ ! ಸಮಸ್ತಪ್ರಪಂಚಕ್ಕೂ ನೀನೇ ಆತ್ಮವಸ್ತುವಾಗಿ.ಪ್ರಪಂಚವೆಲ್ಲವೂ ನಿನ್ನ ಶರೀರವಾಗಿರುವುದರಿಂದ ಸರ್ವವೂ ನೀನೇ ! ಶರೀರಗತವಾದ ವಿಕಾರಗಳು ಆತ್ಮನಿಗೆ ಹೇಗೆ ಸಂಬಂಧಿಸುವು ದಿಲ್ಲವೋ, ಹಾಗೆಯೇ ಪ್ರಾಪಂಚಿಕವಾದ ದೋಷಗಳೊಂದೂ ನಿನ್ನನ್ನು ಮುಟ್ಟಲಾರವು. ಮತ್ತು ಇತರಜೀವಾತ್ಮಗಳ ಜ್ಞಾನದಂತೆ ನಿನ್ನ ಜ್ಞಾನ ಕ್ಕೆ ಸಂಕೋಚವಿಕಾಸಾದಿವಿಕಾರಗಳೊಂದೂ ಇಲ್ಲದುದರಿಂದ, ಹೊರ ಗೊಳಗೆಂಬ ಭೇದವಿಲ್ಲದೆ, ನೀನು ಯಾವಾಗಲೂ ಸರ್ವವ್ಯಾಪಿಯಾಗಿರತ ಕ್ಕವನು. ಆದುದರಿಂದ ನೀನು ಒಂದು ವಸ್ತುವಿನಲ್ಲಿದ್ದಮಾತ್ರಕ್ಕೆ ಅಷ್ಟ ರಲ್ಲಿಯೇ ಅಡಗಿರುವವನಲ್ಲ. ಆ ವಸ್ತುವಿಗುಂಟಾಗತಕ್ಕ ವಿಕಾರಗಳೂ ನಿ ನ್ನನ್ನು ಮುಟ್ಟಲಾರವು. ಇತರಜೀವಗಳಂತೆ ನೀನು ನಿನ್ನ ನಿಜಸ್ವರೂಪವ ನ್ನು ಎಂದಿಗೂ ಮರೆಯುವವನಲ್ಲ ನಿನಗಿಂತಲೂ ಬೇರೆಯಾಗಿಯೂ, ಇಂ ದ್ರಿಯಗ್ರಾಹ್ಯಗಳಾಗಿಯೂ, ಸತ್ವಾದಿಗುಣಗಳ ಕಾರ್ಯರೂಪವಾಗಿಯೂ ಇರುವ ದೇವಾದಿಶರೀರಗಳಲ್ಲಿ ನೀನು ಆತ್ಮಭೂತನಾಗಿದ್ದರೂ, ದೋಷ ರಹಿತವಾಗಿಯೂ, ಕೇವಲಜ್ಞಾನಾನಂದರೂಪವಾಗಿಯೂ, ನಿರ್ವಿಕಾರ

ವಾಗಿಯೂ ಇರುವ ನಿನ್ನ ಸ್ವರೂಪವನ್ನು ನೀನು ಪ್ರತ್ಯೇಕಿಸಿ ತಿಳಿಯಬಲ್ಲ ವನು. ಆದುದರಿಂದ ನಿನಗೆ ದೇಹಾತ್ಮಭ್ರಾಂತಿಯೆಂಬುದೂ ಹುಟ್ಟಲಾರದು. ಅಜ್ಞಾನಿಗಳಿಗೆಮಾತ್ರವೇ ದೇವಮನುಷ್ಯಾದಿಭೇದಬುದ್ಧಿಯುಂಟಾಗುವುದು ವಿವೇಕಿಗಳು ಈಮತವನ್ನು ಪೂರ್ವಪಕ್ಷಕ್ಕಾಗಿಮಾತ್ರ ಉಪಯೋಗಪಡಿಸುವರಲ್ಲದೆ ಬೇರೆಯಲ್ಲ, ದೇಹಾತ್ಮಭ್ರಾಂತಿಯುಳ್ಳ ಮನುಷ್ಯನಾದರೋ ಹೇಯೋಪಾದೇಯಗಳನ್ನು ತಿಳಿಯಲಾರದೆ, ವಿವೇಕಿಗಳು ಹೇಯವೆಂದು ನಿಷೇಧಿಸುವುದನ್ನೇ ತನಗೆ ಹಿತವೆಂಬ ಬುದ್ಧಿಯಿಂದ ಕೈಕೊಳ್ಳುವನು.

ಓ ಪ್ರಭೂ ! ನೀನು ಮನಸ್ಸಂಕಲ್ಪವೊಂದುಹೊರತು ಬೇರೆ ವ್ಯಾಪಾರವಿಲ್ಲದವನು. ಸತ್ವಾದಿಗುಣಗಳಿಗೆ ಈಡಾಗದವನು. ನಿರ್ವಿಕಾರಸ್ವರೂಪವನು. ಈ ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳೆಲ್ಲವೂ ನಿನ್ನಲ್ಲಿಯೇ ನಡೆಯುವುವು. ಆದರೆ "ನಿರ್ವಿಕಾರನಾದ ನಿನ್ನಲ್ಲಿ ಈ ವಿಕಾರಗಳನ್ನು ಹೇಳುವುದು ವಿರುದ್ಧವಲ್ಲವೆ?" ಎಂದರೆ, ನೀನು ಸ್ವರೂಪದಿಂದ ನಿರ್ವಿಕಾರನಾಗಿದ್ದರೂ, ನಿನಗೆ ಶರೀರಭೂತಗಳಾದ ಪ್ರಕೃತಿಪುರುಷರಮೂಲಕವಾಗಿ, ನೀನೇ ಆ ನಿನ್ನ ಶರೀರಕ್ಕೆ ಈ ವಿಕಾರಗಳನ್ನುಂಟುಮಾಡಿಕೊಳ್ಳುವೆಯೇಹೊರತು, ಸಾಕ್ಷಾತ್ತಾಗಿ ನೀನು ಆ ವಿಕಾರಗಳಿಗೆ ಈಡಾಗತಕ್ಕವನಲ್ಲ. ಹೀಗೆ ಆಗಾಗ ವಿಕಾರವನ್ನು ಹೊಂದತಕ್ಕ ಚಿದಚಿತ್ತುಗಳಲ್ಲಿ ನೀನು ಅಂತರಾತ್ಮರೂಪದಿಂದಿದ್ದು, ಅವುಗಳಿಗೆ ಧಾರಕನಾಗಿರುವುದರಿಂದ, ಅವುಗಳಲ್ಲಿ ನಡೆಯತಕ್ಕ ಉತ್ಪತ್ತಿ ಮೊದಲಾದ ವಿಕಾರಗಳೆಲ್ಲವೂ ತಚ್ಛರೀರಕನಾದ ನಿನ್ನಲ್ಲಿ ಉಪಚರಿಸಲ್ಪಡುವುವೇಹೊರತು ಬೇರೆಯಲ್ಲ. ಆದರೆ "ಈ ಪ್ರಪಂಚದ ಉತ್ಪತ್ತಿ ಲಯಗಳಿಗೆ ಬ್ರಹ್ಮರುದ್ರರು ಕಾರಣರಾಗಿರುವಾಗ, ಸೃಷ್ಟಿಸ್ಥಿತಿಲಯಗಳೆಲ್ಲಕ್ಕೂ ನನ್ನೊಬ್ಬವನ್ನೇ ಕಾರಣವಾಗಿ ಹೇಳಬಹುದೇ?" ಎಂದರೆ, ದೇವಾ ! ಲೋಕರಕ್ಷಣಕ್ಕಾಗಿ ನೀನೇ ನಿನ್ನ ಸಂಕಲ್ಪರೂಪವಾದ ಮಾಯೆಯಿಂದ ಕೇವಲಸತ್ವಮಯವಾದ ಮತ್ತು ಶುಭ್ರವರ್ಣವುಳ್ಳ ಶರೀರವನ್ನು ಹೊಂದಿ ರಕ್ಷಣಕಾರ್ಯವನ್ನು ನಡೆಸುವೆ? ರಜೋಗುಣದಿಂದ ರಕ್ತವರ್ಣವುಳ್ಳ ಶರೀರವನ್ನು ಹೊಂದಿ, ಚತುರ್ಮುಖನೆಂಬ ಹೆಸರಿನಿಂದ ಸೃಷ್ಟಿಕಾರ್ಯವನ್ನು ನಡೆಸುವೆ! ತಮೋಗುಣದಿಂದ ಕೃಷ್ಣವರ್ಣವುಳ್ಳ ಶರೀರವನ್ನು

ಹೊಂದಿ! ರುದ್ರನೆಂಬ ಹೆಸರಿನಿಂದ ಲೋಕವನ್ನು ಸಂಹರಿಸುವೆ! ಹೀಗೆ ನೀನೊಬ್ಬನೇ ಬ್ರಹ್ಮರುದ್ರರೆಂಬ ಜೀವಗಳಲ್ಲಿ ಅನುಪ್ರವೇಶಮಾಡಿ, ಉತ್ಪತ್ತಿಲಯಗಳನ್ನೂ, ನಿಜರೂಪದಿಂದ ರಕ್ಷಣಕಾರ್ಯವನ್ನೂ ನಡೆಸತಕ್ಕವನು. ಓ ಲೋಕೇಶ್ವರಾ! ಈಗ ನೀನು ಲೋಕರಕ್ಷಣಾರ್ಥವಾಗಿಯೇ ಈ ನನ್ನ ಕ್ಷೇತ್ರದಲ್ಲಿ ಈ ರೂಪದಿಂದವತರಿಸಿರುವೆ! ಕ್ಷತ್ರಿಯರೂಪದಿಂದ ಈ ಲೋಕದಲ್ಲಿ ಜನಿಸಿರುವ ಕೋಟ್ಯನುಕೋಟಿ ದಾನವಸೈನ್ಯಗಳೆಲ್ಲವನ್ನೂ ನೀನು ಶೀಘ್ರಕಾಲದಲ್ಲಿಯೇ ನಿರ್ಮೂಲಮಾಡುವುದರಲ್ಲಿ ಸಂದೇಹವಿಲ್ಲ! ಓ ದೇವದೇವಾ! ಆದರೆ ಸಾಧುಗಳು ಮನಸ್ಸಿನಿಂದಲೂ ಸ್ಮರಿಸಬಾರದ ಕ್ರೂರನಾದ ಕಂಸನು, ನೀನು ಹೀಗೆ ನನ್ನ ಗೃಹದಲ್ಲಿ ಅವತರಿಸುವ ವಿಷಯವನ್ನು ಮೊದಲಿಂದಲೂ ಕೇಳಿಬಲ್ಲನು. ಇದಕ್ಕಾಗಿಯೇ ನಿನಗೆ ಮೊದಲು ಹುಟ್ಟಿದ ನನ್ನ ಮಕ್ಕಳೆಲ್ಲರನ್ನೂ ಸಂಹರಿಸಿರುವನು. ಈಗ ನಿನ್ನ ಜನ್ಮವೃತ್ತಾಂತವನ್ನು ತನ್ನ ಕಡೆಯ ದೂತರಮುಖದಿಂದ ಕೇಳಿದಕೂಡಲೆ, ಅವನು ಆಯುಧಪಾಣಿಯಾಗಿ ನಿನ್ನನ್ನು ಕೊಲ್ಲುವುದಕ್ಕೆ ಬರುವನು. ಆದುದರಿಂದ ಈಗಲೇ ನೀನು ಈ ರೂಪವನ್ನು ಮರೆಸಿಕೊಳ್ಳಬೇಕು." ಎಂದನು

ಓ ಪರೀಕ್ಷಿದ್ರಾಜಾ! ಆಗ ದೇವಕೀದೇವಿಯು, ತನ್ನ ಗರ್ಭದಲ್ಲಿ ಸಾಕ್ಷಾದ್ವಿಷ್ಣುಸ್ವರೂಪದಿಂದ ಜನಿಸಿದ ಶಿಶುವನ್ನು ನೋಡಿದೊಡನೆ, ಸಂತೋಷದಿಂದ, ಕಂಸನ ವಿಷಯವಾಗಿ ತನ್ನ ಮನಸ್ಸಿನಲ್ಲಿದ್ದ ಭಯವನ್ನೂ ಮರೆತು, ಮುಖದಲ್ಲಿ ಮುಗುಳ್ನಗೆಯನ್ನು ಬೀರುತ್ತ, ಹೀಗೆಂದು ಸ್ತುತಿಸುವಳು. "ಓಮಹಾತ್ಮಾ! ನಿನ್ನ ಪರಸ್ವರೂಪವು, ಸ್ಥೂಲಪ್ರಕೃತಿಯಂತೆ ಇಂದ್ರಿಯಗಳಿಗೆ ಗೋಚರವಲ್ಲದೆ, ಸೂಕ್ಷ್ಮಪ್ರಕೃತಿಗೂ ಕಾರಣವಾಗಿ, ಸತ್ವಾದಿಗುಣರಹಿತವಾಗಿ, ಯಾವಾಗಲೂ ಏಕರೂಪವಾಗಿಯೂ ಇರುವುದರಿಂದ, ಸ್ಥೂಲಸೂಕ್ಷ್ಮಪ್ರಕೃತಿಗಿಂತಲೂ ಬೇರೆಯಾದುದೆಂದೂ, ಮತ್ತು ಸ್ವಯಂಪ್ರಕಾಶವಾಗಿಯೂ, ಪುಣ್ಯಾಪಾಪರಹಿತವಾಗಿಯೂ, ಅಸಂಕುಚಿತ ಜ್ಞಾನವುಳ್ಳದಾಗಿಯೂ, ಸ್ವರೂಪದಿಂದಲೂ, ಗುಣದಿಂದಲೂ ಬೃಹತ್ತಾಗಿ ಬ್ರಹ್ಮಶಬ್ದವಾಚ್ಯವಾಗಿಯೂ ಇರುವುದರಿಂದ, ಬದ್ಧಮುಕ್ತನಿತ್ಯಜೀವರಿಗಿಂತಲೂ ಬೇರೆಯಾದುದೆಂದೂ ವೇದಾಂತಿಗಳು ನಿರ್ಣಯಿಸಿರುವರು. ಆ ಶ್ರೀ

ಹರಿಯೇ ನೀನೆಂಬುದನ್ನು ಈಗ ಸ್ಪಷ್ಟವಾಗಿ ತಿಳಿದೆನು. ಮತ್ತು ಓ ಲೋಕನಾಥಾ ! ಚತುರ್ಮುಖಬ್ರಹ್ಮನಿಗೆ ಎರಡು ಪರಾರ್ಧಕಾಲವು ಕಳೆದಮೇಲೆ, ಪ್ರಳಯವುಂಟಾಗಿ, ಲೋಕವೆಲ್ಲವೂ ನಷ್ಟವಾದಾಗ, ಕಾಲಗತಿಯಿಂದ ಪೃಥಿವಿ ಮೊದಲಾದ ಮಹಾಭೂತಗಳೆಲ್ಲವೂ ತಮ್ಮ ತಮ್ಮ ಕಾರಣವಸ್ತುವಿನಲ್ಲಿ ಐಕ್ಯಹೊಂದುತ್ತ ಬಂದು, ಕೊನೆಗೆ ಪ್ರಕೃತಿಯೂ ಸೂಕ್ಷ್ಮಾವಸ್ಥೆಯನ್ನು ಹೊಂದಿ, ಅವ್ಯಕ್ತವೆನಿಸಿ, ನಿನ್ನಲ್ಲಿ ಲೀನವಾದಮೇಲೆ, ನೀನೊಬ್ಬನೇ ಉಳಿಯತಕ್ಕವನು. ಆದುದರಿಂದಲೇ ನಿನ್ನನ್ನು ಶೇಷನೆಂದು ಹೇಳುವರು. ''ಆದರೆ ಅವ್ಯಕ್ತವಾಗಿಯಾದರೂ ಪ್ರಕೃತಿಯು ನನ್ನೊಡನೆ ಇರುವಾಗ, ಪ್ರಳಯದಲ್ಲಿ ನಾನೊಬ್ಬನೇ ಇರುವನೆಂಬುದು ಹೇಗೆ" ಎಂದರೆ, ಅವ್ಯಕ್ತವೆಂಬುದು ಆಗಲೂ ನಿನ್ನನ್ನು ಬಿಟ್ಟು ಬೇರೆಯಾಗಿರಲಾರದೆ, ನಿನ್ನಲ್ಲಿಯೇ ಐಕ್ಯಹೊಂದಿ, ನಿನಗೆ ಶರೀರವಾಗಿ ನಿನ್ನ ಆಧಾರದಿಂದಲೇ ಇರುವುದರಿಂದ ಆಗಲೂ ಅದನ್ನು ನಿನಗಿಂತಲೂ ಬೇರೆಯೆಂದು ಹೇಳುವುದಕ್ಕಿಲ್ಲ. ಇದರಿಂದ ಆ ಪ್ರಳಯದಶೆಯಲ್ಲಿಯೂ ಚಿದಚಿಚ್ಛರೀರಕನಾದ ನೀನೊಬ್ಬನೇ ಇರುವೆಯೆಂಬುದು ವಿರುದ್ಧವಲ್ಲ. ''ಕಾಲವೆಂಬುದಾದರೂ ಆಗ ನನ್ನೊಡನೆ ನಡೆಯುತ್ತಿರುವಾಗ, ಆ ಕಾಲವೂ ಇದ್ದಹಾಗಾಯಿತಲ್ಲವೆ'? ಎಂದರೆ ನಿಮೇಷವು ಮೊದಲಾಗಿ ಮಹಾಕಾಲದವರೆಗೆ ಗಣಿಸಲ್ಪಡತಕ್ಕುದಾಗಿಯೂ, ಮಹತ್ತಾಗಿ ಬ್ರಹ್ಮಶಬ್ದವಾಚ್ಯವಾಗಿಯೂ ಸಮಸ್ತವಿಶ್ವವನ್ನೂ ನಿಯಮಿಸತಕ್ಕುದಾಗಿಯೂ ಇರುವ ಆ ಕಾಲವೂಕೂಡ, ನಿನ್ನ ಚೇಷ್ಟಾಮಾತ್ರವೆಂದೇ ಹೇಳುವರು. ಹೀಗೆ ಕಾಲವೂ ನಿನ್ನ ವ್ಯಾಪಾರಮಾತ್ರವಾದುದರಿಂದ ನಿನ್ನ ಏಕತ್ವಕ್ಕೆ ಅದರಿಂದಲೂ ವಿರೋಧವು ಬಾರದು. ಹೀಗೆ ಕಾಲವನ್ನೇ ತನ್ನ ಚೇಷ್ಟೆಯಾಗಿ ಹೊಂದಿ, ಆ ಕಾಲಕ್ಕೂ ನಿಯಾಮಕನಾಗಿ, ಲೋಕಕ್ಷೇಮವನ್ನುಂಟುಮಾಡುವ ನಿನ್ನನ್ನು ಶರಣುಹೊಂದುವೆನು. ಜನನಮರಣರೂಪವಾದ ಸಂಸಾರದಲ್ಲಿ ಬಿದ್ದವನು, ಬೇರೆ ಯಾವ ಉಪಾಯಗಳನ್ನು ನಡೆಸಿಯೂ ಅದನ್ನು ತಪ್ಪಿಸಿಕೊಳ್ಳಲಾರನು. ಕೊನೆಗೆ ಯಾದೃಚ್ಛಿಕವಾದ ಪುಣ್ಯವಿಶೇಷದಿಂದ ಅವನ ಮನಸ್ಸು ನಿನ್ನ ಪಾದಾರವಿಂದದಲ್ಲಿ ಪ್ರವರ್ತಿಸಿದರೆ, ಆಗಲೇ ಅವನು ನಿರ್ಭಯನಾಗಿ ನೆಮ್ಮದಿಯಿಂದಿರಬಹುದು. ಅಂತವನನು

ಕಂಡರೆ ಮೃತ್ಯುವೂ ತಾನಾಗಿಯೇ ಭಯಪಟ್ಟು ಓಡುವುದು. ಹೀಗೆ ಆಶ್ರಿತರ ಭಯವನ್ನು ಬಿಡಿಸತಕ್ಕ ನೀನು ಕಂಸನಿಂದ ನಮಗುಂಟಾಗಿರುವ ಭಯವನ್ನು ನೀಗಿಸಬೇಕು. ಹೇ ಲೋಕನಾಥಾ! ಮಹಾಯೋಗಿಗಳಿಗೆ ಕೇವಲಧ್ಯಾನಯೋಗದಿಂದಮಾತ್ರವೇ ಗೋಚರಿಸತಕ್ಕ ಈ ನಿನ್ನ ಪರಸ್ವರೂಪವನ್ನು, ಮಾಂಸಚಕ್ಷುಸ್ಸುಗಳಾದ ನಮಗೆ ಹೀಗೆ ಪ್ರತ್ಯಕ್ಷವಾಗಿ ಕಾಣಿಸಿದರೆ, ಅದನ್ನು ನಾವು ಹೇಗೆ ನೋಡಬಲ್ಲೆವು? ಆದುದರಿಂದ ನೀನು ಒಡನೆಯೇ ಈ ರೂಪವನ್ನು ಮರೆಸಿಕೊಂಡು, ನಮ್ಮ ಕಣ್ಣಿಗೆ ಸಾಮಾನ್ಯ ರೂಪದಿಂದ ಕಾಣಿಸಿಕೊಳ್ಳಬೇಕು! ಓ ಮಧುಸೂದನಾ! ಪಾಪಿಯಾದ ಕಂಸನು, ನಿನಗಾಗಿಯೇ ಕಣ್ಣಿಟ್ಟು ಕಾದಿರುವನು ಈಗ ನೀನು ನನ್ನ ಗರ್ಭದಲ್ಲಿ ಜನಿಸಿದ ಸಂಗತಿಯು ಆ ನೀಚನಿಗೆ ತಿಳಿಯದಂತೆ ಮಾಡು! ದೇವಾ! ನೀನಿರುವಾಗ ನಾನು ಸ್ವಲ್ಪಮಾತ್ರವೂ ಭಯಪಡಬೇಕಾದುದಿಲ್ಲವಾದರೂ, ಸಹಜವಾಗಿ ಭೀರುಸ್ವಭಾವವುಳ್ಳ ನನಗೆ, ಆ ಕಂಸನ ಭಯವು ಹೆಚ್ಚುತ್ತಿರುವುದು. ಓ ವಿಶ್ವಾತ್ಮಾ! ಚತುರ್ಭುಜಗಳಿಂದಲೂ, ಶಂಖಚಕ್ರಗದಾಪದ್ಮಗಳಿಂದಲೂ ಶೋಭಿತವಾದ ಈ ನಿನ್ನ ಪರಸ್ವರೂಪವನ್ನು ಈಗಲೇ ನೀನು ಮರೆಸಿಕೊಳ್ಳಬೇಕು! ಆಹಾ! ಇದಲ್ಲವೇ ಪರಮಾಶ್ಚರ್ಯವು! ಪ್ರಳಯವಾದಮೇಲೆ ಪುನಸ್ಸೃಷ್ಟಿಗೆಮೊದಲು, ನಿನ್ನ ದೇಹದ ಯಾವುದೋ ಒಂದು ಭಾಗದಿಂದ ಹೊರಟ ತಾವರೆಹೂವಿನ ತುದಿಯಲ್ಲಿ, ಚಿದಚಿದಾತ್ಮಕವಾದ ಸಮಸ್ತಪ್ರಪಂಚವೂ ಅಡಗಿ ನಿಲ್ಲುವುದು. ಹೀಗೆ ಸಮಸ್ತಜಗತ್ತನ್ನೂ ಗರ್ಭದಲ್ಲಿ ಧರಿಸಿರತಕ್ಕ ನೀನು, ಕೇವಲ ಸಾಮಾನ್ಯಸ್ತ್ರೀಯಾದ ನನ್ನ ಗರ್ಭದಲ್ಲಿ ಅಡಗಿದ್ದೆಯಲ್ಲವೆ? ಅಹಾ! ನಿನ್ನ ಆಶ್ಚರ್ಯಲೀಲೆಯನ್ನು ನಾನೇನೆಂದು ಹೇಳಲಿ!" ಎಂದಳು.

ಆಗ ಭಗವಂತನು ದೇವಕಿಯನ್ನು ಕುರಿತು "ಅಮ್ಮ ದೇವಕಿ! ನಾನು ಯಾರೆಂಬುದನ್ನು ತಿಳಿಸುವುದಕ್ಕಾಗಿಯೇ ಈಗ ಈ ಸ್ವರೂಪವನ್ನು ನಿಮಗೆ ತೋರಿಸಬೇಕಾಯಿತು. ಆ ನನ್ನ ಸ್ವರೂಪವನ್ನು ಈಗ ನಿಮಗೆ ತಿಳಿಸಬೇಕಾದ ಕಾರಣವೇನೆಂದು ಕೇಳುವೆಯಾ? ನೀನು ಹಿಂದೆ ಸ್ವಾಯಂಭುವಮನ್ವಂತರದಲ್ಲಿ ಪೃಶ್ನಿಯೆಂಬ ಮಹಾಪತಿವ್ರತೆಯಾಗಿದ್ದೆ! ಈ ನಿನ್ನ ಪತಿಯಾದ

ವಸುದೇವನೂ, ಆಗ ಸುತಪಸೆಂಬ ಪ್ರಜಾಧಿಪತಿಯಾಗಿ, ನಿನ್ನ ಭರ್ತನಾಗಿದ್ದ ನು. ಆಗ ಬ್ರಹ್ಮನು, ದಂಪತಿಗಳಾದ ನಿಮ್ಮಿಬ್ಬರನ್ನೂ ಪ್ರಜಾಸೃಷ್ಟಿಕಾರ್ಯಕ್ಕಾಗಿ ನಿಯಮಿಸಿದನು. ಆ ಕಾರ್ಯನಿರ್ವಾಹಕ್ಕಾಗಿ ನೀವಿಬ್ಬರೂ ಇಂದ್ರಿಯಗಳನ್ನು ನಿಗ್ರಹಿಸಿ, ದೃಢತಪಸ್ಸನ್ನು ಮಾಡತೊಡಗಿದಿರಿ! ಆ ತಪಸ್ಸಿನಲ್ಲಿದ್ದಾಗ ನೀವು, ಮಳೆ, ಗಾಳಿ, ಚಳಿ, ಮುಂತಾದ ಋತುಧರ್ಮಗಳೊಂದನ್ನೂ ಲಕ್ಷ್ಯ ಮಾಡದೆ, ಶೀತೋಷ್ಣಾದಿದ್ವಂದ್ವದುಃಖಗಳೆಲ್ಲವನ್ನೂ ಸಹಿಸಿಕೊಂಡು, ರಜಸ್ತಮೋಗುಣಗಳಿಗೆ ಅವಕಾಶಕೊಡದಂತೆ, ಪ್ರಾಣವಾಯುವನ್ನು ನಿರೋಧಿಸಿ, ಆಗಾಗ ಮರದಿಂದುದಿರಿದ ಹಣ್ಣೆಲೆಗಳನ್ನೂ, ಗಾಳಿಯನ್ನೂ ಆಹಾರವಾಗಿ ತೆಗೆದುಕೊಳ್ಳುತ್ತ, ನನ್ನನ್ನು ಕುರಿತು ದೃಢತಪಸ್ಸನ್ನು ಮಾಡುತಿದ್ದಿರಿ! ಹೀಗೆ ನೀವಿಬ್ಬರೂ ಹನ್ನೆರಡುಸಾವಿರದಿವ್ಯವರ್ಷಗಳವರೆಗೆ ನನ್ನಲ್ಲಿಯೇ ನಟ್ಟಮನಸ್ಸುಳ್ಳವರಾಗಿ, ದೃಢಭಕ್ತಿಯಿಂದ ಧ್ಯಾನಿಸುತ್ತಿದ್ದಾಗ, ನಾನು ನಿಮ್ಮ ಭಕ್ತಿಗೂ, ಶ್ರದ್ಧೆಗೂ, ಸಂತುಷ್ಟನಾಗಿ, ನಿಮ್ಮ ಕೋರಿಕೆಯನ್ನು ಸಲ್ಲಿಸಬೇಕೆಂಬ ಉದ್ದೇಶದಿಂದ, ಇದೇ ದಿವ್ಯಸ್ವರೂಪದೊಡನೆ ನಿಮಗೆ ಪ್ರತ್ಯಕ್ಷನಾಗಿ, ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳುವಂತೆ ನಿಮ್ಮನ್ನು ಪ್ರೇರಿಸಿದೆನು. ಆಗ ನೀವಿಬ್ಬರೂ ನನಗೆ ಸಮಾನನಾದ ಪುತ್ರನನ್ನೇ ಪಡೆಯಬೇಕೆಂದು ಪ್ರಾರ್ಥಿಸಿದಿರಿ! ಅಮ್ಮ ದೇವಕಿ! ನೀವಿಬ್ಬರೂ ಬಹುಕಾಲದಿಂದ ತಪಸ್ಸಿನಲ್ಲಿದ್ದು, ಗ್ರಾಮ್ಯಸುಖಗಳ ಆಸೆಯನ್ನೇ ತೊರೆದವರಾಗಿದ್ದರೂ, ನನ್ನ ಮಾಯೆಯಿಂದ ಮೋಹಿತರಾಗಿ, ಮೋಕ್ಷಪ್ರದನಾದ ನಾನು ಪ್ರತ್ಯಕ್ಷವಾಗಿರುವಾಗಲೂ, ನೀವು ನನ್ನಲ್ಲಿ ಉತ್ತಮಪುರುಷಾರ್ಥವಾದ ಮುಕ್ತಿಯನ್ನು ಕೇಳಿಕೊಳ್ಳದೆ, ಅತ್ಯಲ್ಪವಾದ ಸಂತಾನಸುಖವನ್ನಪೇಕ್ಷಿಸಿದಿರಿ! ನಿಮ್ಮ ಇಷ್ಟದಂತೆಯೇ ನಾನು ವರವನ್ನು ಕೊಟ್ಟು ಹೊರಟುಬಂದೆನು. ನಿಮ್ಮ ಕೋರಿಕೆಯು ಕೈಗೂಡಿದುದರಿಂದ, ನೀವು ಸಂತುಷ್ಟರಾಗಿ, ತಿರುಗಿ ಗ್ರಾಮ್ಯಭೋಗಗಳಲ್ಲಿ ಬಿದ್ದು, ಯಥೇಷ್ಟವಾದ ವಿಷಯಸುಖಗಳನ್ನನುಭವಿಸುತಿದ್ದಿರಿ! ಹಿಂದೆ ನಾನು ನಿಮಗೆ ಕೊಟ್ಟುಬಂದ ವರವನ್ನು ಈಡೇರಿಸುವ ಕಾಲವು ಬಂದಾಗ, ಶೀಲೌದಾರ್ಯಾದಿಗುಣಗಳಲ್ಲಿ ನನಗೆ ಸಮಾನನಾದವರೊಬ್ಬನನ್ನೂ ಕಾಣದೆ, ನಾನೇ ನಿಮ್ಮ ಗರ್ಭದಲ್ಲಿ ಜನಿಸಿ, ಪೃಶ್ನಿಗರ್ಭನೆಂಬ

ಹೆಸರಿನಿಂದ ಪ್ರಸಿದ್ಧನಾಗಿದ್ದೆನು. ಆಮೇಲೆ ನೀವಿಬ್ಬರೇ ಮುಂದಿನ ಜನ್ಮ ದಲ್ಲಿ ಅದಿತಿಕಶ್ಯಪರಾಗಿ ಹುಟ್ಟಿದಿರಿ! ಆಗಲೂ ನಾನು ನಿಮ್ಮ ಗರ್ಭದಲ್ಲಿ ಉಪೇಂದ್ರನೆಂಬ ಹೆಸರಿನಿಂದ ಹುಟ್ಟಿದೆನು. ನಾನು ನಿಮ್ಮ ಗರ್ಭದಲ್ಲಿ ಹು ಟ್ಟಿದಾಗ, ಬಹಳ ಚಿಕ್ಕವನಾಗಿದ್ದುದರಿಂದ, ನನ್ನನ್ನು ವಾಮನನೆಂದೂ ಕರೆ ಯುತಿದ್ದರು ಹೀಗೆ ಎರಡುಜನ್ಮಗಳನ್ನು ಕಳೆದಮೇಲೆ, ನೀವೇ ತಿರುಗಿ ಈ ಮೂರನೆಯ ಜನ್ಮದಲ್ಲಿ ದೇವಕೀವಸುದೇವರೆಂಬ ಹೆಸರಿನಿಂದ ಹುಟ್ಟಿರುವಿರಿ! ಈ ಜನ್ಮದಲ್ಲಿಯೂ ನಾನು ನಿಮಗೆ ಮಗನಾಗಿ ಹುಟ್ಟಿದೆನು. ಹೀಗೆ ಹಿಂದಿನ ಜನ್ಮಗಳಲ್ಲಿ ನಮಗಿದ್ದ ಪರಸ್ಪರಸಂಬಂಧವನ್ನು ನಿಮ್ಮಸ್ಮರಣೆಗೆ ತರುವುದ ಕ್ಕಾಗಿಯೇ, ನಾನು ಈಗ ನಿಮಗೆ ನನ್ನ ನಿಜಸ್ವರೂಪವನ್ನು ತೋರಿಸಬೇಕಾ ಯಿತು. ಅಮ್ಮಾ ! ನನ್ನ ಮಾತು ಎಂದಿಗೂ ತಪ್ಪಲಾರದೆಂದು ಇದರಿಂದ ನೀವು ಚೆನ್ನಾಗಿ ತಿಳಿಯಬಹುದು. ಈಗ ನಾನು ಕೇವಲಪ್ರಾಕೃತಶಿ ಶುವಿನಂತೆಯೇ ಹುಟ್ಟಿದ್ದಪಕ್ಷದಲ್ಲಿ, ಮನುಷ್ಯರಾದ ನಿಮಗೆ ನನ್ನ ನಿಜಸ್ಥಿತಿ ಯು ತಿಳಿಯುವುದಕ್ಕೇ ಅವಕಾಶವಿಲ್ಲದಂತಾಗುತಿತ್ತು! ಈಗ ನೀವು ಪುತ್ರಭಾ ವದಿಂದ ನನ್ನಲ್ಲಿ ಮೋಹವನ್ನಾಗಲಿ, ಪರಬ್ರಹ್ಮವೆಂಬ ಭಾವದಿಂದ ಒಮ್ಮೊ ಮ್ಮೆ ಭಕ್ತಿಯನ್ನಾಗಲಿ ತೋರಿಸುವುದರಿಂದ, ನಿಮಗೆ ಉತ್ತಮಪುರುಷಾರ್ಥ ವಾದ ನನ್ನ ಸಾಯುಜ್ಯವು ಲಭಿಸುವುದರಲ್ಲಿ ಸಂದೇಹವಿಲ್ಲ" ಎಂದು ಹೇಳಿ ಭಗವಂತನು, ಆ ದೇವಕೀವಸುದೇವರಿಬ್ಬರೂ ನೋಡುತ್ತಿರುವಹಾಗೆಯೇ ಮಾಯೆಯಿಂದ ತನ್ನ ಪರಸ್ವರೂಪವನ್ನು ಮರೆಸಿಕೊಂಡು, ಸಾಮಾನ್ಯವಾದ ಸಣ್ಣಮಗುವಿನಂತೆ ಕಾಣಿಸಿಕೊಂಡನು. ಈ ಸಮಯಕ್ಕೆ ಸರಿಯಾಗಿ ಅತ್ತ ಲಾಗಿ ಗೋಕುಲದಲ್ಲಿ ನಂದನೆಂಬ ಗೊಲ್ಲನ ಭಾರ್ಯೆಯಾದ ಯಶೋದೆಯೆಂಬ ವಳಲ್ಲಿ ಒಂದು ಹೆಣ್ಣುಮಗುವು ಜನಿಸಿತು ಓ ರಾಜಾ! ಆ ಭಗವಂತನ ಮಾ ಯಾಶಕ್ತಿಯೇ ಆ ರೂಪದಿಂದ ಹುಟ್ಟಿತೆಂದು ತಿಳಿ! ಆಮೇಲೆ ಇತ್ತಲಾಗಿ ವಸು ದೇವನು, ಶಿಶುರೂಪದಲ್ಲಿದ್ದ ಭಗವಂತನು ತನಗೆ ಸೂಚಿಸಿದಕ್ರಮದಿಂದ, ಆ ಶಿಶುವನ್ನು ಗೋಕುಲದಲ್ಲಿದ್ದ ನಂದನೆಂಬ ಗೊಲ್ಲನ ಮನೆಗೆ ಸಾಗಿಸುವುದ ಕ್ಕಾಗಿ ಯತ್ನಿಸಿದನು. ಆಗ ಭಗವಂತನ ಸಂಕಲ್ಪಶಕ್ತಿಯನ್ನು ಕೇಳಬೇಕೆ? ವಸುದೇವನು ಆ ಶಿಶುವನ್ನೆತ್ತಿಕೊಂಡು ಪ್ರಸವಗೃಹದಿಂದ ಹೊರಗೆ ಹೊ

ರಡುದಕ್ಕೆ ಯತ್ನಿಸಿದೊಡನೆ, ಅಲ್ಲಿ ದೃಢವಾದ ಕದಗಳಿಂದಲೂ, ದೊಡ್ಡ
ದೊಡ್ಡ ಅಗಳಿಗಳಿಂದಲೂ, ಉಕ್ಕಿನ ಸರಪಣಿಗಳಿಂದಲೂ ಬಿಗಿಯಲ್ಪಟ್ಟಿದ್ದ
ಆ ಸೆರೆಮನೆಯ ಬಾಗಿಲುಗಳೆಲ್ಲವೂ ತಾನಾಗಿಯೇ ತೆರೆದುಕೊಂಡುವು. ಅಲ್ಲಿ
ರಾತ್ರಿಹಗಲೆನ್ನದೆ ಎಚ್ಚರದಿಂದ ಕಾಯುತಿದ್ದ ಕಾವಲಿನವರೆಲ್ಲರೂ, ಗಾಢ
ನಿದ್ರೆಯಿಂದ ಮೈಮರೆತು, ಶವಪ್ರಾಯರಾಗಿ ಬಿದ್ದಿದ್ದರು. ಪುರಜನರೆಲ್ಲ
ರೂ ಮೈಮೇಲೆ ಪ್ರಜ್ಞೆಯಿಲ್ಲದೆ ನಿದ್ರಿಸುತಿದ್ದರು. ವಸುದೇವನು ಆ ಶಿಶುವ
ನ್ನು ಕೈಗೆತ್ತಿಕೊಂಡು ನಿಂತೊಡನೆ, ಸೂರ್ಯೋದಯವಾದಾಗ ಅಂಧಕಾರ
ವು ಹೇಗೋಹಾಗೆ ಅಲ್ಲಲ್ಲಿದ್ದ ಅಡಚಣೆಗಳೆಲ್ಲವೂ ತಪ್ಪಿಹೋದುವು. ಬೀದಿ
ಯಲ್ಲಿ ಜನಸಂಚಾರಕ್ಕೆ ಅವಕಾಶವಿಲ್ಲದಂತೆ, ಸಿಂಹಗುಡುಗುಗಳೊಡನೆ ಮೇ
ಘಗಳು ದೊಡ್ಡ ಮಳೆಯನ್ನು ಕರೆಯಲಾರಂಭಿಸಿದುವು. ಹೀಗೆ ಗಾಢಾಂಧ
ಕಾರದಲ್ಲಿ, ದೊಡ್ಡಮಳೆಯು ಸುರಿಯುತ್ತಿರುವಾಗ, ವಸುದೇವನು ಶಿಶು
ವನ್ನೆತ್ತಿಕೊಂಡು ಹೊರಗೆ ಬರುವಷ್ಟರಲ್ಲಿ, ಆದಿಶೇಷನು, ಆ ಶಿಶುವಿನಮೇ
ಲೆ ಮಳೆಯ ಹನಿಗಳು ಬೀಳದಂತೆ,ಕೊಡೆಯಹಾಗೆ, ತನ್ನ ಹೆಡೆಗಳನ್ನು ಬಿಚ್ಚಿ
ಕೊಂಡು ವಸುದೇವನನ್ನು ಹಿಂಬಾಲಿಸಿಬರುತಿದ್ದನು. ಹೀಗೆ ವಸುದೇವನು
ಶಿಶುವನ್ನೆತ್ತಿಕೊಂಡು ಬರುವದಾರಿಯಲ್ಲಿ ಯಮುನಾನದಿಯು ಅಡ್ಡಲಾಗಿ
ಪ್ರವಹಿಸುತಿತ್ತು. ಆಗ ಎಡೆಬಿಡದೆ ಮಳೆಯು ಸುರಿಯುತ್ತಿದ್ದುದರಿಂದ,ಅದ
ರಲ್ಲಿ ಪ್ರವಾಹವು ಉಕ್ಕಿಬರುತಿತ್ತು. ಅಲೆಗಳಿಂದಲೂ, ಸುಳಿಗಳಿಂದಲೂ
ಆ ನದೀಪ್ರವಾಹವು ನೋಡುವಾಗಲೇ ಬಹಳಭಯವನ್ನು ಹುಟ್ಟಿಸುವಂತಿ
ದ್ದರೂ, ವಸುದೇವನು ಆ ಶಿಶುವನ್ನೆತ್ತಿಕೊಂಡು, ಅಪರ ತೀರಪ್ರದೇಶಕ್ಕೆ
ಬಂದೊಡನೆ, ಪೂರ್ವದಲ್ಲಿ ಶ್ರೀರಾಮನಿಗೆ ಸಮುದ್ರವು ಹೇಗೋಹಾಗೆ ಯ
ಮುನಾನದಿಯು ತನ್ನ ಪ್ರವಾಹವನ್ನು ಅಡಗಿಸಿಕೊಂಡು, ನಡುವೆ ದಾರಿಯನ್ನು
ಕೊಟ್ಟಿತು. ವಸುದೇವನು ಆ ನದಿಯನ್ನೂ ಸುಲಭವಾಗಿ ದಾಟಿ, ನಂದನ
ಮನೆಗೆ ಬರುವಷ್ಟರಲ್ಲಿ, ಅಲ್ಲಿದ್ದ ಗೋಪಾಲಕರೆಲ್ಲರಿಗೂ, ಮೈಮರೆಯು
ವಂತೆ ಗಾಢನಿದ್ರೆಯುಂಟಾಯಿತು. ಹೀಗೆ ಯಶೋದೆ ಮುಂತಾಗಿ ಅಲ್ಲಿದ್ದ
ವರೆಲ್ಲರೂ ಮೈಮೇಲೆ ಪ್ರಜ್ಞೆಯಿಲ್ಲದೆ ನಿದ್ರಿಸುತ್ತಿರುವಾಗ, ವಸುದೇವನು
ತನ್ನ ಕೈಯಲ್ಲಿದ್ದ ಶಿಶುವನ್ನು ಆ ಯಶೋದೆಯ ಮಗ್ಗುಲಲ್ಲಿ ಮೆಲ್ಲಗೆ ಮಲ



೧೭೫.೨. ವಸುದೇವನು ಕೃಷ್ಣನನ್ನೆತ್ತಿಕೊಂಡು ಯಮುನಾನದಿಯನ್ನು ದಾಟಿದುದು.

ಗಿಸಿ, ಅಲ್ಲಿದ್ದ ಹೆಣ್ಣುಕೂಸನ್ನು ಕೈಗೆತ್ತಿಕೊಂಡು, ಹಿಂತಿರುಗಿ ಬಂದು, ದೇವಕಿಯ ಪಕ್ಕದಲ್ಲಿ ಮಲಗಿಸಿದನು. ವಸುದೇವನು ಪ್ರಸವಗೃಹವನ್ನು ಸೇರಿದೊಡನೆ, ಇಲ್ಲಿನ ಬಾಗಿಲುಗಳೆಲ್ಲವೂ ತಮಗೆತಾವೇ ಮುಚ್ಚಿಕೊಂಡುವು. ಉಕ್ಕಿನ ಸರಪಣಿಗಳೂ, ಅಗಳಿಗಳೂ ಮೊದಲಿನಂತೆ ತನಗೆತಾನೇ ಬಿಗಿದುಕೊಂಡುವು. ಓ ರಾಜಾ! ಇತ್ತಲಾಗಿ ನಂದಪತ್ನಿಯಾದ ಯಶೋದೆಯು ಪ್ರಸವವಾದೊಡನೆ ಆಯಾಸದಿಂದ ಮೈಮರೆತು ಮಲಗಿಬಿಟ್ಟುದರಿಂದ, ತನಗೆ ಮಗುವು ಹುಟ್ಟಿದುದನ್ನುಮಾತ್ರ ಬಲ್ಲಳೇಹೊರತು, ತನಗೆ ಹುಟ್ಟಿದ ಶಿಶುವು ಗಂಡೋ ಅಥವಾ ಹೆಣ್ಣೋ ಎಂಬುದನ್ನು ತಿಳಿಯುವುದಕ್ಕೂ ಅವಳಿಗೆ ಅವಕಾಶವಾಗಲಿಲ್ಲ. ಇದು ಮೂರನೆಯ ಅಧ್ಯಾಯವು

---

(ಕಂಸನು ಯೋಗಮಾಯಾರೂಪವಾದ ಸ್ತ್ರೀಶಿಶುವನ್ನು ಕೊಲ್ಲುವುದಕ್ಕೆ ಯತ್ನಿಸುವಷ್ಟರಲ್ಲಿ, ಅದು ದೇವತಾರೂಪವಾದ ಆಕಾರಕ್ಕೆ ಹೋಗಿ, ಕಣ್ಮರೆಯಾದುದು. ಕಂಸನು ನಿರಾಶನಾಗಿ ದೇವಕೀವಸುದೇವರನ್ನು ಸೆರೆಯಿಂದ ಬಿಡಿಸಿ ಸಮಾಧಾನಪಡಿಸಿದುದು)

ವಸುದೇವನು ತನ್ನ ನಿವಾಸಕ್ಕೆ ಸೇರುವಷ್ಟರಲ್ಲಿ ಪಟ್ಟಣದ ಹೊರಬಾಗಿಲು ಮೊದಲಾಗಿ, ಸೆರೆಮನೆಯ ಒಳಬಾಗಿಲಿನವರೆಗಿದ್ದ ದ್ವಾರಗಳೆಲ್ಲವೂ ಮೊದಲಿನಂತೆ ಮುಚ್ಚಿಕೊಂಡುವು. ಮೊದಲಿನಂತೆ ಆಯಾಬಾಗಿಲಿನ ಅಗಳಿ, ಸರಪಣಿ ಮುಂತಾದುವೆಲ್ಲವೂ ತನಗೆತಾನೇ ಬಿಗಿದುಕೊಂಡುವು, ಹೀಗೆ ಪೂರ್ವಸ್ಥಿತಿಗೆ ಬಂದಮೇಲೆ, ದೇವಕಿಯ ಪಕ್ಕದಲ್ಲಿ ಮಲಗಿದ್ದ ಮಗುವು, ಉಚ್ಚಧ್ವನಿಯಿಂದ ಅಳುವುದಕ್ಕಾರಂಭಿಸಿತು. ಈ ಧ್ವನಿಯನ್ನು ಕೇಳಿ ಆ ಮನೆಯ ಕಾವಲಿನವರೆಲ್ಲರಿಗೂ ಎಚ್ಚರವುಂಟಾಯಿತು. ಒಡನೆಯೇ ಅವರಲ್ಲಿ ಕೆಲವರು ಆತುರದಿಂದ ಕಂಸನಬಳಿಗೆ ಓಡಿಬಂದು, “ರಾಜೇಂದ್ರಾ! ಬೇಗ ಬಾ! ಬೇಗಬಾ! ದೇವಕಿಗೆ ಶಿಶುಜನನವಾಗಿರುವುದು” ಎಂದು ಹೇಳಿದರು. ರಾತ್ರಿಹಗಲೂ ನಿದ್ರೆಯಿಲ್ಲದೆ, ಇದನ್ನೇ ಅತ್ಯಾತುರದಿಂದ ನಿರೀಕ್ಷಿಸುತಿದ್ದ ಕಂಸನು ಆ ಮಾತನ್ನು ಕೇಳಿದೊಡನೆ ಹಾಸಿಗೆಯಿಂದೆದ್ದು “ಆಹಾ! ಈ ಶಿಶುವನ್ನು ಕೊಲ್ಲುವವಿಷಯದಲ್ಲಿಮಾತ್ರ ಕ್ಷಣಮಾತ್ರವೂ ತಾಮಸಮಾಡಬಾರದು!

ಇದೇ ದೇವಕಿಯ ಎಂಟನೆಯ ಗರ್ಭಶಿಶುವಾದುದರಿಂದ, ಈಗಲೇ ಅದನ್ನು ತೀರಿಸಿಬಿಡಬೇಕು" ಎಂದು ನಿಶ್ಚಯಿಸಿ, ಬಿಚ್ಚಿದ ತಲೆಯೊಡನೆ ತತ್ತರಿಸಿ ಬೀಳುತ್ತ, ಪ್ರಸವಗೃಹಕ್ಕೆ ಓಡಿಬಂದನು. ಕಂಸನು ಬಂದುದನ್ನು ಕಂಡೊಡನೆ ದೇವಕಿಯು ಭಯದಿಂದ ನಡುಗುತ್ತ, ಬಹಳದೈನ್ಯದಿಂದ ಅವನಿಗೆ ಕೈಮುಗಿದುನಿಂತು ಹೀಗೆಂದು ಪ್ರಾರ್ಥಿಸಿದಳು "ಅಣ್ಣಾ! ನೀನು ನನಗೆ ಕ್ಷೇಮಚಿಂತಕನಲ್ಲವೆ? ಇದು ಹೆಣ್ಣುಕೂಸು! ಇದರಮೇಲೆ ನಿನಗೆ ಸೋದರಸೊಸೆ! ಇದು ನಿನ್ನನ್ನೇನು ಮಾಡಬಲ್ಲುದು?ಇದನ್ನು ಕೊಲ್ಲಬೇಡ? ಅಣ್ಣಾ! ನನ್ನ ಹೊಟ್ಟೆಯಲ್ಲಿ ಹುಟ್ಟಿದಮಕ್ಕಳಲ್ಲಿ ಇದುವರೆಗೆ ನೀನು ಕೊಂದುದು ಒಂದಲ್ಲ! ಎರಡಲ್ಲ! ಅಗ್ನಿಜ್ವಾಲೆಗಳಂತಿದ್ದ ಆರೇಳುಮಕ್ಕಳನ್ನೂ ನಿನ್ನ ಕೈಯಿಂದಲೇ ಕೊಂದೆಯಲ್ಲಾ! ಅಯ್ಯೋ! ಹಾಳುದೈವವು ನನ್ನಮಕ್ಕಳಿಗೆ ನಿನ್ನನ್ನೇ ಮೃತ್ಯುವನ್ನಾಗಿ ಏರ್ಪಡಿಸಿತೆ! ನಿನಗೆ ಮನಸ್ಸಿನಲ್ಲಿ ಸ್ವಲ್ಪವಾದರೂ ಮರುಕವೇ ಬೇಡವೆ? ಅಣ್ಣಾ! ಇದುವರೆಗೆ ನನಗೆ ಹುಟ್ಟಿದ ಗಂಡು ಮಕ್ಕಳೆಲ್ಲರನ್ನೂ ಕೊಂದೆಯಲ್ಲವೆ? ಹೋದುದುಹೋಗಲಿ? ಇದೊಂದು ಮಗುವನ್ನಾದರೂ ಬಿಟ್ಟುಕೊಡು! ಈ ಕೊನೆಯ ಶಿಶುವನ್ನಾದರೂ ನೋಡಿ ಮನಸ್ಸಮಾಧಾನಮಾಡಿಕೊಳ್ಳುವೆನು! ಕೈಮುಗಿದು ಬೇಡುವೆನು." ಎಂದು ದೀನಧ್ವನಿಯಿಂದ ಮೊರೆಯಿಟ್ಟಳು ಹೀಗೆ ದೇವಕಿಯು ಆ ಕೂಸನ್ನು ಬಿಡಲಾರದೆ ಎದೆಯಮೇಲಿಟ್ಟು, ಎರಡು ತೋಳುಗಳಿಂದಲೂ ಬಿಗಿಯಾಗಿ ಅಪ್ಪಿ ಹಿಡಿದುಕೊಂಡು, ಬಹಳ ದೈನ್ಯದಿಂದ ಪ್ರಾರ್ಥಿಸುತಿದ್ದರೂ, ಕ್ರೂರಾತ್ಮನಾದ ಕಂಸನು, ಅವಳ ಮಾತಿಗೆ ಲಕ್ಷ್ಯಕೊಡದೆ, ಮನಸ್ಸಿನಲ್ಲಿ ಸ್ವಲ್ಪಮಾತ್ರವೂ ಮರುಕವಿಲ್ಲದೆ, ಆ ದೇವಕಿಯನ್ನು ಹುಂಕಾರದಿಂದ ಹೆದರಿಸಿ, ಇನ್ನೂ ಕಣ್ಣುತೆರೆಯದ ಆ ಸಣ್ಣಕೂಸನ್ನು, ಬಲಾತ್ಕಾರಪೂರ್ವಕವಾಗಿ ಅವಳ ಕೈಯಿಂದ ಕಿತ್ತುಕೊಂಡನು. ಹೀಗೆ ನೀಚನಾದ ಕಂಸನು ಸ್ವಪ್ರಯೋಜನಾಪೇಕ್ಷೆಯಿಂದ ಸಹೋದರಪ್ರೀತಿಯನ್ನೂ ತೊರೆದು, ಆ ಕೂಸನ್ನು ಕಿತ್ತುಕೊಂಡಮೇಲೆ, ಹಿಂದಿನ ಶಿಶುಗಳನ್ನು ಕೊಂದಂತೆಯೇ, ಅದನ್ನೂ ಕೊಲ್ಲುವುದಕ್ಕಾಗಿ, ಆ ಕೂಸಿನ ಕಾಲುಗಳೆರಡನ್ನೂ ಜೋಡಿಸಿ ತಲೆಕೆಳಗಾಗಿ ಹಿಡಿದು, (ಅಗಸರು ಬಟ್ಟೆಯನ್ನೊಗೆಯುವಂತೆ) ಅದನ್ನು ಒಂದು ಕಲ್ಲುಬಂ

ಡೆಯಮೇಲೆ ಅಪ್ಪಳಿಸಿಬಡಿದನು. ಇಷ್ಟರಲ್ಲಿಯೇ ಭಗವಂತನ ಮಾಯೆ ಯಾದ ಆ ಶಿಶುವು, ಕಂಸನ ಕೈಯಿಂದ ಮೇಲಕ್ಕೆ ಪುಟಹಾರಿ, ಆಕಾಶದಲ್ಲಿ ತನ್ನ ನಿಜಸ್ವರೂಪದಿಂದ ಕಾಣಿಸಿಕೊಂಡಿತು. ಆ ಅದ್ಭುತಾಕೃತಿಯನ್ನು ಕೇಳಬೇಕೆ? ಪರ್ವತದಂತೆ ದೊಡ್ಡ ಆಕೃತಿ! ಆ ಆಕೃತಿಗೆ ತಕ್ಕಂತೆ ಆಯುಧಸಹಿತವಾದ ಅಷ್ಟಭುಜಗಳು! ಕಂಠದಲ್ಲಿ ದಿವ್ಯಪುಷ್ಪಮಾಲಿಕೆ! ದಿವ್ಯವಸ್ತ್ರಾನುಲೇಪನಗಳು! ಸರ್ವಾಂಗಗಳಲ್ಲಿಯೂ ದಿವ್ಯರತ್ನಾಭರಣಗಳು! ಎಂಟುಭುಜಗಳಲ್ಲಿಯೂ ಕ್ರಮವಾಗಿ, ಬಿಲ್ಲು, ಬಾಣ, ಶೂಲ, ಕತ್ತಿ! ಗುರಾ ಣಿ, ಶಂಖ, ಚಕ್ರ, ಗದೆಗಳೆಂಬ ಎಂಟು ದಿವ್ಯಾಯುಧಗಳು.! ಇಂತಹ ಅದ್ಭುತಾಕೃತಿಯಿಂದ ಕಾಣಿಸಿಕೊಂಡ ಆ ಮಾಯಾದೇವಿಯನುತ್ತಲೂ, ಸಿ ದ್ಧಚಾರಣ, ಗಂಧರ್ವ, ಕಿನ್ನರ,ಅಪ್ಸರಸ್ಸುಗಳೇ ಮೊದಲಾದ ದೇವಜಾತಿಯ ವರೆಲ್ಲರೂ, ನಾನಾವಿಧವಾದ ಕೈಕಾಣಿಕೆಗಳನ್ನು ತಂದೊಪ್ಪಿಸಿ, ಸ್ತುತಿ ಸುತಿದ್ದರು.ಇಂತಹ ಮಹಾವೈಭವದೊಡನೆ, ಆ ದೇವಿಯು ಆಕಾಶದಲ್ಲಿ ಕಾ ಣಿಸಿಕೊಂಡು, ಕಂಸನನ್ನು ಕುರಿತು? "ಎಲೆಮೂಢಾ! ನನ್ನನ್ನು ನೀನು ಕೊಲ್ಲ ಬಲ್ಲೆಯಾ? ಅಥವಾ ನನ್ನನ್ನು ಕೊಂದರೂ ನಿನಗೆ ಪ್ರಯೋಜನವೇನು? ಮೊ ದಲು ಆಶರೀರವಾಣಿಯು ನಿನಗೆ ಸೂಚಿಸಿದಂತೆ, ನಿನ್ನನ್ನು ಕೊನೆಕಾಣಿಸ ತಕ್ಕ ಶತ್ರುವು ಬೇರೊಂದುಕಡೆಯಲ್ಲಿ ಬೆಳೆಯುತ್ತಿರುವನು. ಆದುದರಿಂದ ಈ ನಿನ್ನ ಹಣೆಯಬರಹವನ್ನು ತಪ್ಪಿಸಿಕೊಳ್ಳುವುದಕ್ಕೆ ನಿನ್ನಿಂದ ಸಾಧ್ಯವೆ?ಇನ್ನು ಮೇಲಾದರೂ ವ್ಯರ್ಥವಾಗಿ ನೀನು ಇಂತಹ ಹಿಂಸಾಕಾರ್ಯವನ್ನು ಮಾಡ ಬೇಡ!" ಎಂದಳು. ಹೀಗೆಂದು ಹೇಳಿ, ಭಗವತಿಯಾದ ಯೋಗಮಾಯೆಯು ಆಸ್ಥಳವನ್ನು ಬಿಟ್ಟು, ಕನ್ಯಾರಿಯಾಗಿ,ದುರ್ಗೆ, ಕಾಳಿ, ಮುಂತಾದ ಬೇರೆಬೇರೆ ನಾಮಾಂತರಗಳಿಂದ ಬೇರೆಬೇರೆ ಸ್ಥಳಗಳಲ್ಲಿ ನೆಲೆಗೊಂಡಳು. ರಾಜೇಂದ್ರಾ! ಆ ವಿಷ್ಣುಶಕ್ತಿಯೇ ಈಗಲೂ ಜನರಿಂದ ಗ್ರಾಮದೇವತೆಗಳ ರೂಪದಿಂದ ಪೂಜಿಸಲ್ಪಡುವಳು. ಇತ್ತಲಾಗಿ ಕಂಸನಿಗೆ ನಡೆದ ಸಂಗತಿಗಳೆಲ್ಲವನ್ನೂ ನೋ ಡಿ ಅತ್ಯಾಶ್ಚರ್ಯವುಂಟಾಯಿತು. ಇನ್ನುಮೇಲೆ ಆತ್ಮರಕ್ಷಣಾರ್ಥವಾಗಿ ತಾನು ಯಾವ ಉಪಾಯವನ್ನು ನಡೆಸಿದರೂ ಪ್ರಯೋಜನವಿಲ್ಲವೆಂದು ತೋರಿತು. ಶಿಶುಹತ್ಯೆ ಮೊದಲಾಗಿ ಅದುವರೆಗೆ ತಾನು ನಡೆಸಿದ ಘೋರಕೃತ್ಯಗಳ ವಿಷ

ಯದಲ್ಲಿ ಪಶ್ಚಾತ್ತಾಪವೂ ಹುಟ್ಟಿತು. ಒಡನೆಯೇ ದೇವಕೀವಸುದೇವರಿಬ್ಬರನ್ನೂ ಸಮಾಧಾನಪಡಿಸಿ, ವಿನಯಪೂರ್ವಕವಾಗಿ ಅವರನ್ನು ಕುರಿತು ಹೀಗೆಂದು ಹೇಳುವನು. “ಓ ತಂಗೀ! ಓ ಬಾವಾ! ಆಹಾ! ಪಾಪಿಯಾದ ನಾನು ನಿಮ್ಮಲ್ಲಿ ಮಹಾಪರಾಧವನ್ನು ನಡೆಸಿಬಿಟ್ಟೆನು! ಕ್ರೂರರಾಕ್ಷಸನಂತೆ ನಿಮಗೆ ಹುಟ್ಟಿದ ಅನೇಕ ಶಿಶುಗಳನ್ನು ನನ್ನ ಕೈಯಾರೆ ನಾನೇ ಕೊಂದೆನು ಅಯ್ಯೋ! ನಾನು ಸ್ವಲ್ಪಮಾತ್ರವೂ ಕರುಣೆಯಿಲ್ಲದೆ ! ಬಂಧುಗಳೆಂದೂ, ಮಿತ್ರರೆಂದೂ ನೋಡದೆ ನಿಮ್ಮನ್ನು ಅನೇಕವಿಧವಾಗಿ ಹಿಂಸಿಸಿದೆನು. ಹೀಗೆ ಪುತ್ರಘಾತುಕನಾದ ನಾನು ಯಾವ ನರಕದಲ್ಲಿ ಬೀಳುವೆನೋ ! ಬ್ರಹ್ಮಹತ್ಯೆಯನ್ನು ಮಾಡಿದವನಂತೆ ನಾನು ಬದುಕಿದ್ದರೂ ಮೃತಪ್ರಾಯನೇಹೊರತು ಬೇರೆಯಲ್ಲ. ಆಹಾ ! ಅಶರೀರವಾಕ್ಯೂ ಸುಳ್ಳುಹೇಳಿ ನನ್ನನ್ನು ವಂಚಿಸುತ್ತಿರುವುದಲ್ಲಾ ! ಅಶರೀರವಾಣಿಯನ್ನು ನಂಬಿ ನಾನು ನನ್ನ ಒಡಹುಟ್ಟಿದ ತಂಗಿಯ ಮಕ್ಕಳನ್ನೇ ಕೊಂದೆನು. ಆದುದಾಯಿತು! ವಿವೇಕಿಗಳಾದ ನೀವು ನಿಮ್ಮ ಮಕ್ಕಳ ಸಾವಿಗಾಗಿ ದುಃಖಿಸದೆ ಸಮಾಧಾನವನ್ನು ತಂದುಕೊಳ್ಳಬೇಕು ! ಒಬ್ಬೊಬ್ಬರೂ ಅವರವರ ಕರ್ಮಫಲವನ್ನು ಅನುಭವಿಸಿಯೇ ತೀರಿಸಬೇಕು ಪ್ರಾಣಿಗಳು ತಮ್ಮ ಕರ್ಮಾನುಸಾರವಾಗಿಯೇ ದೈವದಿಂದ ನಡೆಸಲ್ಪಡುವುವು. ಆ ಕರ್ಮಾನುಸಾರವಾಗಿಯೇ ಜನನಮರಣಗಳಲ್ಲಿ ತೊಳಲುತ್ತಿರುವುವು. ಆ ಕರ್ಮವಶದಿಂದಲೇ ಒಮ್ಮೊಮ್ಮೆ ಪುತ್ರಕಳತ್ರಾದಿರೂಪವಾದ, ಬಂಧುತ್ವಸಂಬಂಧದಿಂದ ಒಂದಾಗಿ ಸೇರಿದ್ದು, ಸ್ವಲ್ಪಕಾಲದಮೇಲೆ ಅಗಲಿ ಹೋಗುವುವು. ಯಾರೂ ಒಂದುಕಡೆಯಲ್ಲಿ ಸ್ಥಿರವಾಗಿರತಕ್ಕವರಲ್ಲ ! ವಾಯುವಶದಿಂದ ಬಂದು, ನೆಲದಮೇಲೆ ಒಂದು ಕಡೆಯಲ್ಲಿ ಸೇರಿದಧೂಳು, ಮತ್ತೊಮ್ಮೆ ಆಗಾಳಿಯಿಂದಲೇ ನಾನಾಕಡೆಗೆ ಚದರಿಹೋಗುವಂತೆ, ಭೂತಗಳಿಗೆ ಕರ್ಮವಶದಿಂದಲೇ ಆಗಾಗ ಶರೀರಸಂಬಂಧವುಂಟಾಗಿ, ಅದರಮೂಲಕವಾಗಿ ಒಂದಾಗಿ ಕಲೆತಿದ್ದು, ತಿರುಗಿ ಕದಲಿಹೋಗುವುವು. ಹೀಗೆ ಒಂದಾಗಿ ಸೇರುವುದೂ, ಅಗಲಿ ಹೋಗುವುದೂ ರೇಣುಗಳಿಗೆ ಸಹಜವಾಗಿದ್ದರೂ, ತದಾಶ್ರಯವಾದ ಭೂಮಿಯು ಒಂದೇ ನೆಲೆಯಲ್ಲಿರುವಂತೆ, ಜನನಮರಣಾದಿವಿಕಾರಗಳು ಶರೀರಮಾತ್ರಕ್ಕಲ್ಲದೆ, ಆದಕ್ಕೆ

ಧಾರಕನಾಥ ಜೀವನಿಗೆ ಆ ವಿಕಾರಗಳೊಂದೂ ಇರುವುದಿಲ್ಲ. ಆ ಜೀವನು ಯಾವಾಗಲೂ ಒಂದೇ ಸ್ಥಿತಿಯಲ್ಲಿರುವನು. ಆದುದರಿಂದ ಜನನಮರಣಾದಿ ವಿಕಾರಗಳನ್ನು ಹೊಂದುವುದೇ ತನ್ನ ಸ್ವಭಾವವಾಗಿ ಉಳ್ಳ ದೇಹವನ್ನು ಕುರಿತಾಗಲಿ,ಒಂದೇ ನೆಲೆಯಲ್ಲಿರತಕ್ಕ ಆತ್ಮವನ್ನು ಕುರಿತಾಗಲಿ ನಾವು ದುಃಖಿಸು ವುದಕ್ಕೆ ಕಾರಣವಿಲ್ಲ. ದೇಹಕ್ಕೂ, ಆತ್ಮಕ್ಕೂ ಇರುವ ಈ ಸ್ವರೂಪಭೇದವು ಮನಸ್ಸಿಗೆ ಚೆನ್ನಾಗಿ ತೋರಿಬರುವವರೆಗೆ, ಮನುಷ್ಯನಿಗೆ ದೇಹವೇ ಆತ್ಮವೆಂಬ ಭ್ರಾಂತಿಯೂ, ಆ ಭ್ರಾಂತಿಯಿಂದ ದೇಹದಲ್ಲಿ ತನ್ನದೆಂಬ ಅಭಿಮಾನವೂ, ಆ ಅಭಿಮಾನದಿಂದ ದುಃಖಮೋಹಾದಿಗಳೂ ಅನುಸರಿಸಿಬರುವುವು. ಈ ದೇಹಾತ್ಮಾಭಿಮಾನವು ಬಿಟ್ಟುಹೋಗಿ, ಆತ್ಮತತ್ವಜ್ಞಾನವುಂಟಾಗುವವರೆಗೆ ದೇಹ ಸಂಯೋಗ ವಿಯೋಗ ರೂಪವಾದ ಸಂಸಾರವೂ ನೀಗಲಾರದು.

ಓ ತಂಗೀ ! ನಿನ್ನ ಮಕ್ಕಳ ವಧಕ್ಕೆ ನಾನೇ ಕಾರಣನೆಂದೂ ತಿಳಿಯಬೇಡ ! ದೇಹಾತ್ಮಾಭಿಮಾನವಿದ್ದಾಗಲೇ ಈ ವಿಧವಾದ ಭಾವವುಂಟಾಗುವುದು. ಈ ಲೋಕದಲ್ಲಿ ಕೊಲ್ಲತಕ್ಕವರಾರು ? ಕೊಲ್ಲಿಸಿಕೊಳ್ಳುವರಾರು ? ಅವರವರ ಕರ್ಮವೇ ಅವರನ್ನು ಹುಟ್ಟಿಸಿ ಕೊಲ್ಲುತ್ತಿರುವುದು ಆದುದರಿಂದ ಎಲೆಭದ್ರೆ ! ಆ ನಿನ್ನ ಪುತ್ರರಿಗಾಗಿ ನೀನು ಚಿಂತಿಸಬೇಡ ! ಈ ಲೋಕದಲ್ಲಿ ಜೀವರಾಶಿಗಳು ಯಾವವಿಧದಲ್ಲಿಯೂ ಸ್ವತಂತ್ರವಲ್ಲ!ಅವರವರು ತಮ್ಮ ಪ್ರಾರಬ್ಧವನ್ನನುಸರಿಸಿಯೇ ಜನನಮರಣಗಳನ್ನು ಹೊಂದುವರು. ಲೋಕದಲ್ಲಿ ಆತ್ಮಸ್ವರೂಪವನ್ನು ಪರ್ಯಾಲೋಚಿಸದಿದ್ದವರು, ಒಬ್ಬನು ಕೊಂದವನೆಂದೂ, ಮತ್ತೊಬ್ಬನು ಕೊಲ್ಲಿಸಿಕೊಂಡವನೆಂದೂ ಆತ್ಮನಲ್ಲಿ ದೇಹಧರ್ಮವನ್ನಾರೋಪಿಸುವರು. ಆ ಭ್ರಾಂತಿಯಿರುವವರೆಗೂ ದುಃಖಮೋಹಾದಿಗಳೂ ಅನುಸರಿಸಿ ಬರುವುವು. ಆದುದರಿಂದ ನೀವು ಪುತ್ರಶೋಕವನ್ನು ಮರೆತುಬಿಡಬೇಕು! ಪರಮಸಾಧುಗಳಾಗಿಯೂ, ಬಂಧುವತ್ಸಲರಾಗಿಯೂ ಇರುವ ನೀವು ನನ್ನ ಮಹಾಪರಾಧವನ್ನೂ ಕ್ಷಮಿಸಬೇಕು" ಎಂದು ಹೇಳಿ ಕಂಸನು, ಕಣ್ಣುಗಳಲ್ಲಿ ಧಾರೆಧಾರೆಯಾಗಿ ನೀರನ್ನು ಸುರಿಸುತ್ತಾ, ದೇವಕೀವಸುದೇವರ ಪಾದಗಳಮೇಲೆ ಬಿದ್ದು ಬಾರಿಬಾರಿಗೂ ಪ್ರಾರ್ಥಿಸಿಕೊಂಡನು. ಹಿಂದೆ ಯೋಗಮಾಯೆಯು ವ್ಯರ್ಥವಾಗಿ ಅವರನ್ನು

ಹಿಂಸಿಸಬೇಡವೆಂದು ಹೇಳಿದ ಮಾತನ್ನೂ ಸ್ಮರಿಸಿಕೊಂಡು, ಅವರಲ್ಲಿದ್ದ ವೈರಬುದ್ಧಿಯನ್ನು ಬಿಟ್ಟು, ಅವರ ಸಂಕೋಲೆಗಳನ್ನು ತಾನೇ ಕೈಯಿಂದ ಬಿಚ್ಚಿ, ಹಿಂದೆ ಯಾವಾಗಲೂ ಇಲ್ಲದ ಬಂಧುಪ್ರೀತಿಯನ್ನೂ ತೋರಿಸುತ್ತಿದ್ದನು. ಹೀಗೆ ಕಂಸನು ಹಿಂದೆ ತಾನು ಮಾಡಿದ ಅಕೃತ್ಯಗಳಿಗಾಗಿ ಪಶ್ಚಾತ್ತಾಪಗೊಂಡು, ಕಾಲಮೇಲೆ ಬಿದ್ದು ಕ್ಷಮೆಯನ್ನು ಬೇಡುತ್ತಿರುವುದನ್ನು ನೋಡಿ, ದೇವಕಿಗೂ ಅವನಲ್ಲಿ ಕನಿಕರವು ಹುಟ್ಟಿತು. ಅವಳು ಮನಸ್ಸಿನಲ್ಲಿದ್ದ ಕೋಪವನ್ನು ಮರೆತು ಅವನನ್ನು ಮನ್ನಿಸಿ ಸುಮ್ಮನಾದಳು. ವಸುದೇವನೂ ಆ ಕಂಸನ ದುರ್ಬುದ್ಧಿಗಾಗಿ ಪಶ್ಚಾತ್ತಾಪಪಡುತ್ತ, ಹಾಸ್ಯಪೂರ್ವಕವಾಗಿ ಅವನನ್ನು ಕುರಿತು "ಓ ಮಹಾರಾಜಾ! ನೀನು ಹೇಳಿದುದೇ ವಾಸ್ತವವು! ಪ್ರಾಣಿಗಳಿಗೆ ಅಹಂಭಾವವೆಂಬುದು ಅಜ್ಞಾನದಿಂದಲೇ ಉಂಟಾಗುವುದು. ಈ ಅಹಂಭಾವವಿದ್ದಾಗಲೇ ತಾನೆಂದೂ, ಇತರನೆಂದೂ ಭೇದಬುದ್ಧಿಯು ಹುಟ್ಟುವುದು. ಆತ್ಮಕ್ಕಿಂತಲೂ, ಬೇರೆಯಾದ ಶರೀರವನ್ನೇ ಆತ್ಮವೆಂದು ತಿಳಿದಿರುವವನಿಗೆ, ದುಃಖ, ಹರ್ಷ, ಭಯ, ದ್ವೇಷ, ಲೋಭ, ಮೋಹ, ಮದ, ಮೊದಲಾದ ವಿಕಾರಗಳೆಲ್ಲವೂ ಹುಟ್ಟುತ್ತಿರುವುವು. ಈ ದೇಹಾಭಿಮಾನವುಳ್ಳವನಿಗೆ ತಾನೆಂದೂ, ಇತರರೆಂದೂ ಭೇದಬುದ್ಧಿಯೊಂದುಮಾತ್ರ ಇರುವುದೇ ಹೊರತು, ತಮ್ಮೆಲ್ಲರಿಗೂ ನಿಯಾಮಕನಾದ ಈಶ್ವರನೊಬ್ಬನುಂಟೆಂಬ ಭಾವವೇ ಮರೆತುಹೋಗುವುದು. ಇದಕ್ಕೆ ನೀನೇ ನಿದರ್ಶನವಾಗಿರುವೆ" ಎಂದನು. ಹೀಗೆ ದೇವಕೀವಸುದೇವರಿಬ್ಬರೂ ಕೋಪವನ್ನು ಮರೆತು, ತನ್ನಲ್ಲಿ ಪ್ರಸನ್ನರಾಗಿ ಸಲಿಗೆಯಿಂದ ಮಾತಾಡಿದಮೇಲೆ, ಕಂಸನು ಅವರ ಅನುಮತಿಯನ್ನು ಪಡೆದು, ಅಲ್ಲಿಂದ ಹಿಂತಿರುಗಿ ತನ್ನ ನಿವಾಸಕ್ಕೆ ಬಂದು ಸೇರಿದನು.

ಆ ರಾತ್ರಿಯು ಕಳೆದು ಬೆಳಗಾದಕೂಡಲೆ, ಕಂಸನು ತನ್ನ ಮಂತ್ರಿಗಳನ್ನು ಕರೆದು, ರಾತ್ರಿಯಲ್ಲಿ ನಡೆದ ಸಂಗತಿಗಳನ್ನೂ, ಯೋಗಮಾಯೆಯು ತನಗೆ ಸೂಚಿಸಿದ ವಿಷಯವನ್ನೂ ಅವರಿಗೆ ತಿಳಿಸಿದನು. ಅನಂತರವೇ ಅವನ ಸಹವಾಸಿಗಳೆಲ್ಲರೂ, ದೇವಶತ್ರುಗಳಾಗಿ, ರಾಕ್ಷಸಾಂಶದಿಂದಲೇ ಹುಟ್ಟಿದವರಾದುದರಿಂದ, ಯುಕ್ತಾಯುಕ್ತವಿವೇಚನೆಯಿಲ್ಲದೆ, ಕಂಸನಿಗೆ ದುರ್ಬೋಧನೆಯನ್ನು ಮಾಡತೊಡಗಿ ಹೀಗೆಂದು ಹೇಳುವರು "ಓ ಕಂಸರಾಜಾ!

ನಿನ್ನ ಶತ್ರುವು ಬೇರೆಲ್ಲಿಯೋ ಹುಟ್ಟಿ ಬೆಳೆಯುತ್ತಿರುವುದಾಗಿ ಆ ಮಾಯೆ
ಯು ಸೂಚಿಸಿತಲ್ಲವೆ? ಯೋಗಮಾಯೆಯು ಹಾಗೆ ಹೇಳಿದ್ದಪಕ್ಷದಲ್ಲಿ, ನ
ಮಗೆ ಅನುಕೂಲವೇ ಆಯಿತು! ಇನ್ನುಮೇಲೆ ನಮ್ಮ ಪಟ್ಟಣದಲ್ಲಿಯೂ,
ಹಳ್ಳಿಗಳಲ್ಲಿಯೂ, ಗೋಕುಲದಲ್ಲಿಯೂ, ಹುಡುಕಿ ಹುಡುಕಿ, ಕಣ್ಣಿಗೆ ಕಂಡ
ಸಣ್ಣಮಕ್ಕಳನ್ನು ಕೊಲ್ಲುತ್ತ ಬರಬೇಕು. ಇನ್ನೂ ಹುಟ್ಟಿ ಹತ್ತುದಿನಗಳಾ
ಗದ ಮಕ್ಕಳಾಗಿರಲಿ! ಹತ್ತುದಿನಗಳು ಕಳೆದ ಸಣ್ಣಮಕ್ಕಳಾಗಿರಲಿ! ಕೈಗೆ
ಸಿಕ್ಕಿದ ಮಕ್ಕಳನ್ನು ಸಮಯೋಚಿತವಾದ ಉಪಾಯಗಳಿಂದ ಕೊಲ್ಲಿಸುತ್ತ
ಬರುವುದೇ ಈಗ ನಮಗೆ ಮೇಲಾದ ಉಪಾಯವು. “ದೇವತೆಗಳು ನಮಗೆ
ಪ್ರಬಲಶತ್ರುಗಳಾಗಿರುವಾಗ, ಸಣ್ಣಮಕ್ಕಳನ್ನು ಕೊಂದ ಮಾತ್ರಕ್ಕೇನು?”
ಎಂದು ನೀನು ಯೋಚಿಸಬೇಡ! ನಿನ್ನಮೇಲೆ ದೇವತೆಗಳ ಪ್ರಯತ್ನವೇನೂ
ಸಾಗದು! ನಿನ್ನೊಡನೆ ಯುದ್ಧವೆಂದರೆ ದೇವತೆಗಳು ಭಯಪಟ್ಟು ನಡುಗುವ
ರು. ನಿನ್ನ ಧನುಷ್ಟಂಕಾರವನ್ನು ಕೇಳಿದಾಗೆಲ್ಲಾ ಅವರ ಎದೆಯು ನಡು
ಗುವುದು. ಮತ್ತು ಓ ವೀರಾಗ್ರಣೀ! ಎಷ್ಟೋಸಲ ದೇವತೆಗಳು ನಿನ್ನ
ಬಾಣಪ್ರಹಾರವನ್ನು ತಡೆದು ನಿಲ್ಲಲಾರದೆ, ಪ್ರಾಣಭೀತಿಯಿಂದ ತಲೆತಪ್ಪಿ
ಸಿಕೊಂಡು ಹೋಗಿ ಎಲ್ಲಿಯೋ ಅಡಗಿರುವರು. ಬೇರೆ ಕೆಲವರು ಇನ್ನುಮೇಲೆ
ನಿನ್ನಮುಂದೆ ಶಸ್ತ್ರವನ್ನು ಹಿಡಿಯಲಾರೆವೆಂದು ಶಸ್ತ್ರಪರಿತ್ಯಾಗವನ್ನು ಮಾಡಿ,
ನಿನ್ನಲ್ಲಿಗೆ ಬಂದು, ಕೈಮುಗಿದು ಶರಣಾಗತಿಯನ್ನೂ ಮಾಡಿರುವರು. ಮತ್ತೆ
ಕೆಲವರು ನಿನ್ನ ಭಯದಿಂದ ಕೆದರಿದಕೇಶಪಾಶಗಳನ್ನೂ, ಕಡಲಿದವಸ್ತ್ರವನ್ನೂ
ತಿಳಿಯದೆ, ಪಲಾಯನಮಾಡುತ್ತ, ಕೊನೆಗೆ ನಿನ್ನ ಕಾಲಲ್ಲಿಯೋ ಬಿದ್ದು ಅಭಯ
ವನ್ನು ಬೇಡಿರುವರು. ನೀನು ಪರಮದಯಾಳುವಾದುದರಿಂದ, ಹೀಗೆ ಶಸ್ತ್ರ
ತ್ಯಾಗಮಾಡಿದವರಾಗಿಯೂ, ವಿರಥರಾಗಿಯೂ, ಭಯಗ್ರಸ್ತರಾಗಿಯೂ, ಬಂ
ದು ನಿನ್ನಲ್ಲಿ ಶರಣಾಗತರಾದ ಅನೇಕದೇವತೆಗಳನ್ನು ಕೊಲ್ಲಲಾರದೆ
ಮನ್ನಿಸಿ ಕಳುಹಿಸಿರುವೆ? ಮತ್ತು ನೀನು ಧರ್ಮಜ್ಞನಾದುದರಿಂದ, ಇದಿ
ರಾಗಿ ನಿಲ್ಲದವರನ್ನೂ, ಆಯುಧವಿಲ್ಲದವರನ್ನೂ ನಿಷ್ಕಾರಣವಾಗಿ ಕೊಲ್ಲ
ತಕ್ಕವನಲ್ಲ. ಹೀಗಿರುವಾಗ ಆ ದೇವತೆಗಳ ವಿಷಯವಾದ ಚಿಂತೆಯು ನಿನ
ಗೇಕೆ? ಮತ್ತು ಆ ದೇವತೆಗಳ ಪರಾಕ್ರಮವೆಲ್ಲವೂ ಅವರವರ ಮನೆಯಲ್ಲಿಯೋ

ಹೊರತು ನಿನ್ನ ಮುಂದೆ ಸಾಗದು! ಮನೆಯಲ್ಲಿ ಹೆಂಗಸರಮುಂದೆ ಪರಾಕ್ರಮವನ್ನು ಕೊಚ್ಚಿಕೊಳ್ಳತಕ್ಕ ಆ ದೇವತೆಗಳು ನಿನ್ನೊಡನೆ ಯುದ್ಧಕ್ಕೆ ನಿಲ್ಲುವುದೆಂದರೇನು? ಸಾಮಾನ್ಯದೇವತೆಗಳ ಮಾತೂ ಹಾಗಿರಲಿ! ಶಂಕರಬ್ರಹ್ಮೇಂದ್ರಾದಿಗಳೂ ನಿನ್ನ ಮುಂದೆ ನಿಲ್ಲಲಾರರು! ವಿಷ್ಣುವು ನಿನ್ನ ಭಯದಿಂದಲೇ ಯಾರ ಕಣ್ಣಿಗೂ ಬೀಳದೆ ಏಕಾಂತಸ್ಥಳದಲ್ಲಿ ಸೇರಿರುವನು. ನಿನ್ನ ಪರಾಕ್ರಮದ ಮುಂದೆ ಇಂದ್ರನ ವೀರ್ಯವು ಅತ್ಯಲ್ಪವಾಗಿರುವುದು. ಬ್ರಹ್ಮನೂ ನಿನ್ನ ಭಯಕ್ಕಾಗಿಯೇ ಯುದ್ಧಾಸೆಯನ್ನು ಬಿಟ್ಟು, ಶ್ರೋತ್ರಿಯನಂತೆ ಯಾವಾಗಲೂ ಶುಷ್ಕವೇದವನ್ನು ಪಠಿಸುತ್ತ, ವೈದಿಕವೇಷವನ್ನವಲಂಬಿಸಿರುವನು! ಹೀಗಿರುವಾಗ ಯಾವ ದೇವತೆಗಳಿಂದ ನಿನಗೆ ಯಾವ ಭಯವುಂಟು! ರಾಜೇಂದ್ರಾ! ಹೀಗಿದ್ದರೂ ವಂಚಕರಾದ ಆ ದೇವತೆಗಳವಿಷಯದಲ್ಲಿ ನಾವು ಉದಾಸೀನರಾಗಿರಬಾರದು. ಆ ದೇವತೆಗಳು ನಮಗೆ ಆಜನ್ಮದ್ವೇಷಿಗಳಾದುದರಿಂದ, ಆ ಶತ್ರುಶೇಷವನ್ನು ಉಪೇಕ್ಷಿಸಿ ಬಿಡುವುದು ಯುಕ್ತವಲ್ಲ! ಅವರನ್ನು ನಿರ್ಮೂಲಮಾಡುವವಿಷಯದಲ್ಲಿ ನಮಗೆ ಆಜ್ಞೆಯನ್ನು ಕೊಡು! ನಾವು ಅವರನ್ನು ನೋಡಿಕೊಳ್ಳುವೆವು. ದೇಹದಲ್ಲಿ ಹುಟ್ಟಿದ ರೋಗವನ್ನು ಮೊಳೆಯಲ್ಲಿಯೇ ಅಡಗಿಸದೆ ಉದಾಸೀನವಾಗಿ ಬಿಟ್ಟರೆ, ಅದು ದೇಹದಲ್ಲಿ ಚೆನ್ನಾಗಿ ಬೇರೂರಿ,ಎಂತಹ ಚಿಕಿತ್ಸೆಗೂ ಬಗ್ಗದೆ,ಮನುಷ್ಯನನ್ನು ಕೊಲ್ಲುವುದು. ಯೋಗಿಗಳು ತಮ್ಮ ಇಂದ್ರಿಯವರ್ಗಗಳನ್ನು ಮೊದಲಿಂದಲೇ ನಿಗ್ರಹಿಸದೆ, ಅದರ ಪ್ರವರ್ತನೆಗೆ ಸ್ವಲ್ಪವಾಗಿ ಅವಕಾಶವನ್ನು ಕೊಟ್ಟರೆ, ಕಾಲಕ್ರಮದಿಂದ ಅದು ದುರ್ಜಯವಾಗುವುದು. ಅದರಂತೆಯೇ ನಾವೂ ಈಗ ಶತ್ರುಶೇಷವನ್ನು ಅಲ್ಪವೆಂದು ಅಲಕ್ಷ್ಯವಾಗಿ ಬಿಟ್ಟರೆ,ಆ ಶತ್ರುಗಳು ದಿನಕ್ರಮದಿಂದ ಪ್ರಬಲಿಸಿ ದುರ್ಜಯರಾಗುವರು. ಆದುದರಿಂದ ಎಷ್ಟೇ ಅಲ್ಪವೆಂದು ತೋರಿದರೂ ಶತ್ರುಶೇಷವನ್ನು ಆಗಾಗಲೇ ನಿಗ್ರಹಿಸಬೇಕು. ಆದುದರಿಂದ ಈಗ ನಾವು ಬೀದಿಯಲ್ಲಿ ತಿರುಗುವ ಯಾವಮಕ್ಕಳನ್ನೂ ಉದಾಸೀನವಾಗಿ ಬಿಡಬಾರದು. ಇದಲ್ಲದೆ ಸನಾತನಧರ್ಮಗಳಿಗೆ ಆಶ್ರಯಭೂತನಾದ ವಿಷ್ಣುವೇ, ದೇವತೆಗಳಿಗೆ ಮೂಲಾಧಾರದಂತಿರುವನು. ಅವನಿರತಕ್ಕ ಸ್ಥಳವು ನಮಗೆ ಪ್ರತ್ಯಕ್ಷವಾಗಿ ತಿಳಿಯದಿದ್ದರೂ, ಅದನ್ನು

ಊಹಿಸಿ ಕಂಡುಕೊಳ್ಳಬಹುದು. ವೇದಗಳೂ, ಗೋಬ್ರಾಹ್ಮಣರೂ, ತಪಸ್ಸೂ, ಯಜ್ಞಯಾಗಾದಿಕರ್ಮಗಳೂ, ಅವನಿಗೆ ನಿವಾಸಸ್ಥಾನವಾಗಿರುವುವು. ಆದುದರಿಂದ ನಾವು ಸರ್ವಪ್ರಯತ್ನದಿಂದಲೂ ಅಲ್ಲಲ್ಲಿ ಹುಡುಕಿ, ಬ್ರಹ್ಮವಾದಿಗಳಾಗಿಯೂ, ತಪಸ್ವಿಗಳಾಗಿಯೂ, ಯಜ್ಞಶೀಲರಾಗಿಯೂ, ಇರುವ ಬ್ರಾಹ್ಮಣರನ್ನು ಸಿಕ್ಕಿದಕಡೆಯಲ್ಲಿ ಕೊಲ್ಲಬೇಕು! ಯಾಗಾದಿಕರ್ಮಗಳಿಗೆ ಹವಿಸ್ಸನ್ನು ಒದಗಿಸಿಕೊಡತಕ್ಕ ಗೋವುಗಳನ್ನು ಕಂಡಕಂಡ ಕಡೆಯಲ್ಲಿ ಧ್ವಂಸಮಾಡಬೇಕು. ಬ್ರಾಹ್ಮಣರು, ಗೋವುಗಳು, ವೇದಗಳು, ತಪಸ್ಸು, ಸತ್ಯ, ಶಮ, ದಮ, ಶ್ರದ್ಧೆ, ದಯೆ, ತಿತಿಕ್ಷೆ, ಯಾಗಾದಿಕರ್ಮಗಳು, ಇವೆಲ್ಲವೂ ಆ ವಿಷ್ಣುವಿನ ಶರೀರಗಳೆನಿಸಿಕೊಂಡಿರುವುವು. ಆ ವಿಷ್ಣುವೇ ಸಮಸ್ತದೇವತೆಗಳಿಗೂ ಅಧ್ಯಕ್ಷನಾಗಿದ್ದು, ನಮ್ಮಲ್ಲಿ ಬದ್ಧದ್ವೇಷವನ್ನಿಟ್ಟಿರುವನು. ಅವನು ಸಮಸ್ತಪ್ರಾಣಿಗಳ ಹೃದಯಗುಹೆಯಲ್ಲಿಯೂ ಅಡಗಿರತಕ್ಕವನು. ಅವನನ್ನು ನಿಗ್ರಹಿಸಿದರೆ ಸಮಸ್ತದೇವತೆಗಳನ್ನೂ ನಿಗ್ರಹಿಸಿದಂತಾಗುವುದು. ಆದುದರಿಂದ ಈಗ ನಾವು ಮಾಡಬೇಕಾದ ಉಪಾಯವೇನೆಂದರೆ, ತಪಸ್ವಿಗಳಾದ ಋಷಿಗಳನ್ನು ಕಂಡಕಂಡಕಡೆಯಲ್ಲಿ ನಿರ್ದಾಕ್ಷಿಣ್ಯವಿಲ್ಲದೆ ಕೊಲ್ಲುತ್ತ ಬರಬೇಕು. ಆಗ ವಿಷ್ಣುವಿನ ಸೊಕ್ಕು ಮುರಿಯುವುದು. ದೇವತೆಗಳ ಪ್ರಾಬಲ್ಯವೂ ಅಡಗಿಹೋಗುವುದು" ಎಂದರು. ಓ ಪರೀಕ್ಷಿದ್ರಾಜಾ! ಕಂಸನು ಚಪಲಬುದ್ಧಿಯುಳ್ಳವನಾದುದರಿಂದ, ಅವರ ದುರ್ಬೋಧನೆಗೂ, ಮುಖಸ್ತುತಿಗೂ ಮರುಳಾಗಿ, ಅವರ ಮಾತಿನಂತೆ ಬ್ರಾಹ್ಮಣವಧವೇ ತನಗೆ ಶ್ರೇಯಸ್ಕರವೆಂದು ನಿಶ್ಚಯಿಸಿಬಿಟ್ಟನು. ಕಂಸನ ಕೊರಳಿಗೆ ಕಾಲಪಾಶವು ಸುತ್ತಿದ್ದುದರಿಂದಲೇ ಅವನು ಹೀಗೆ ವಿವೇಕಹೀನನಾಗಿ, ಪ್ರಾಣಿಹಿಂಸೆಯಲ್ಲಿ ವಿಶೇಷಪ್ರೀತಿಯುಳ್ಳವರಾಗಿಯೂ, ಮಾಯಾಬಲದಿಂದ ತಮತಮಗೆ ಇಷ್ಟಬಂದ ರೂಪವನ್ನು ಧರಿಸಬಲ್ಲವರಾಗಿಯೂ ಇರುವ ಕೆಲವು ದುಷ್ಟರಾಕ್ಷಸರನ್ನು ಕರೆದು, ಸಾಧುಗಳಾದ ಬ್ರಾಹ್ಮಣರನ್ನು ಹಿಂಸಿಸುವ ಕಾರ್ಯಕ್ಕಾಗಿಯೇ ನಾನಾದಿಕ್ಕಿಗೆ ಕಳುಹಿಸಿ, ತಾನು ತನ್ನ ಅರಮನೆಗೆ ಬಂದು ಸೇರಿದನು. ಇತ್ತಲಾಗಿ ಕಂಸನಿಂದ ಆಜ್ಞಪ್ತರಾದ ರಾಕ್ಷಸರೆಲ್ಲರೂ ಕೇವಲರಜಸ್ತಮೋಗುಣವುಳ್ಳವರಾದು

ದರಿಂದ, ತಮ್ಮ ಹಿಂದೆ ಬೆನ್ನಟ್ಟಿ ಬರುತ್ತಿರುವ ಮೃತ್ಯುವನ್ನು ತಿಳಿಯದೆ, ಸಾಧುಗಳನ್ನು ಹಿಂಸಿಸತೊಡಗಿದರು. ಓ ರಾಜೇಂದ್ರಾ! ಮಹಾತ್ಮರವಿಷಯದಲ್ಲಿ ನಡೆಸತಕ್ಕ ಈ ಅಪರಾಧವು ಅವರಿಗೆ ಮರಣಕಾರಣವೆಂದು ಮಾತ್ರ ತಿಳಿಯಬೇಡ! ಆಯುಸ್ಸು, ಲಕ್ಷ್ಮಿ, ಕೀರ್ತಿ, ಸದ್ಗತಿ, ಹಿಂದೆಗಳಿಸಿದ ಪುಣ್ಯಫಲ, ಮುಂತಾದ ಸಮಸ್ತಶ್ರೇಯಸ್ಸುಗಳನ್ನೂ ಕೆಡಿಸುವುವು. ಇದು ನಾಲ್ಕನೆಯ ಅಧ್ಯಾಯವು.

---

## ನಂದಗೋಕುಲವೃತ್ತಾಂತವು.

ಓ ಪರೀಕ್ಷಿದ್ರಾಜಾ! ವಸುದೇವನು ದೇವಕಿಯಲ್ಲಿ ಹುಟ್ಟಿದ ಗಂಡುಮಗುವನ್ನು ಯಾರಿಗೂ ತಿಳಿಯದಂತೆ ತಂದು, ನಂದಪತ್ನಿಯಾದ ಯಶೋದೆಯ ಪಕ್ಕದಲ್ಲಿ ಮಲಗಿಸಿ ಹೋದನಷ್ಟೆ? ಬೆಳಗಾದಮೇಲೆ ನಂದನು ಆ ಮಗುವನ್ನು ನೋಡಿ, ತನಗೆ ಗಂಡುಮಗುವು ಹುಟ್ಟಿತೆಂದು ಪರಮಸಂತೋಷಗೊಂಡನು ಒಡನೆಯೇ ಆತನು ಸ್ನಾನಮಾಡಿ ಬಂದು ಯಥೋಚಿತವಸ್ತ್ರಾಭರಣಾದಿಗಳಿಂದ ದೇಹವನ್ನಲಂಕರಿಸಿಕೊಂಡು, ವೇದವಿದರಾದ ಬ್ರಾಹ್ಮಣರನ್ನು ಕರೆಸಿ, ಸ್ವಸ್ತಿವಾಚನಪೂರ್ವಕವಾಗಿ, ಆ ಶಿಶುವಿಗೆ ಶಾಸ್ತ್ರೋಕ್ತವಾದ ಜಾತಕರ್ಮವನ್ನು ನಡೆಸಿದನು. ಪಿತೃದೇವತೆಗಳನ್ನೂ ದೇವತೆಗಳನ್ನೂ ಪೂಜಿಸಿದನು. ಸುವರ್ಣಾಲಂಕೃತಗಳಾದ ಎರಡುಲಕ್ಷ (ಅನೇಕ) ಧೇನುಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು. ರತ್ನಗಳನ್ನೂ, ಬೆಳ್ಳಿಬಂಗಾರದ ನಾಣ್ಯಗಳನ್ನೂ, ಸರಿಗೆಯ ವಸ್ತ್ರಗಳನ್ನೂ ದಕ್ಷಿಣೆಯಾಗಿಟ್ಟು, ಏಳುಕಡೆಗಳಲ್ಲಿ ಪರ್ವತದಂತೆ ಎಳ್ಳನ್ನು ರಾಶಿಹಾಕಿ, ತಿಲದಾನಗಳನ್ನೂ ದಾನಮಾಡಿದನು ಪರಮಾತ್ಮೋಪಾಸನೆಯಿಂದ ಜೀವಾತ್ಮನು, ಹೇಯಗಂಧವುಳ್ಳ ಶರೀರಸಂಬಂಧವನ್ನು ಬಿಟ್ಟು ಸ್ವರೂಪಶುದ್ಧಿಯನ್ನು ಹೊಂದುವಂತೆ, ಮನುಷ್ಯನಿಗೆ * ಆಶೌಚಕಾಲವನ್ನು ಕಳೆಯುವುದರಿಂದಲೂ,

---

* ಸೂತಕದಿನಗಳನ್ನು ಕಳೆಯುವುದರಿಂದ ಗೃಹಶುದ್ಧಿ, ಸ್ನಾನದಿಂದ ದೇಹಶುದ್ಧಿ, ಸಂಸ್ಕಾರದಿಂದ ಅಪತ್ಯಶುದ್ಧಿ, ತಪಸ್ಸು (ಮಂತ್ರಜಪನಿಂದ) ಗೃಹದೇವತಾಶುದ್ಧಿ, ದಾನದಿಂದ ಪಶು ಹಿರಣ್ಯಾದಿಶುದ್ಧಿ, ಮನಸ್ತುಷ್ಟಿಯಿಂದ ಅಂತರಂಗಶುದ್ಧಿಯೆಂದು ಗ್ರಾಹ್ಯವು

ಸ್ನಾನಶೌಚಾದಿಗಳಿಂದಲೂ, ಜಾತಕರ್ಮಾದಿಸಂಸ್ಕಾರಗಳಿಂದಲೂ, ಮಂತ್ರಜಪದಿಂದಲೂ, ಯಾಗದಿಂದಲೂ, ದಾನಧರ್ಮಗಳಿಂದಲೂ, ಮನಸ್ಸಂತುಷ್ಟಿಯಿಂದಲೂ, ಅವನ ದೇಹಕ್ಕೂ, ಮನೆಗೂ, ಗೃಹದೇವತೆಗೂ, ಪಶು ಹಿರಣ್ಯ,ಮೊದಲಾದ ಇತರದ್ರವ್ಯಗಳಿಗೂ ಆಶೌಚಶುದ್ಧಿಯಾಗುವುದು. ನಂದನು ಈ ನಿಯಮವನ್ನು ಬಲ್ಲವನಾದುದರಿಂದ, ಅದೇಕ್ರಮದಿಂದ ಶುದ್ಧಿಕಾರ್ಯಗಳೆಲ್ಲವನ್ನೂ ನಡೆಸಿದನು ಬ್ರಾಹ್ಮಣರು ಸ್ವಸ್ತಿವಾಚನಗಳನ್ನು ನಡೆಸಿದರು. * ಸೂತ ಮಾಗಧ, ವಂದಿ, ಗಾಯಕರು ಗಾನಮಾಡುತ್ತಿದ್ದರು. ಭೇರಿ, ದುಂದುಭಿ, ಮೊದಲಾದ ಮಂಗಳವಾದ್ಯಗಳು ಮೊಳಗುತ್ತಿದ್ದುವು.

ನಂದನಿಗೆ ಪುತ್ರೋತ್ಸವವಾಯಿತೆಂಬ ಸಂತೋಷದಿಂದ, ಆ ಗೋಕುಲದಲ್ಲಿದ್ದವರೆಲ್ಲರೂ, ಮನೆಮನೆಯ ಬಾಗಿಲುಗಳನ್ನೂ,ಅಂಗಳಗಳನ್ನೂ ಸಾರಿಸಿ, ಸುಗಂಧಜಲವನ್ನು ಸೇಚನಮಾಡಿ,ರಂಗೋಲೆಗಳಿಂದ ಅಲಂಕರಿಸಿಟ್ಟರು.ಎಲ್ಲಿ ನೋಡಿದರೂ, ಚಿತ್ರವಿಚಿತ್ರಗಳಾದ ಧ್ವಜಪತಾಕೆಗಳೂ, ಪುಷ್ಪಹಾರಗಳೂ, ಚಿಗುರಿನ ತೋರಣಗಳೂ, ಪಟ್ಟೆಮಡಿಯ ಜಾಲರಿಗಳೂ ಕಂಗೊಳಿಸುತ್ತಿದ್ದುವು. ಗೋಕುಲದಲ್ಲಿದ್ದ ಹಸುಗಳನ್ನೂ, ಎತ್ತುಗಳನ್ನೂ, ಕರುಗಳನ್ನೂ, ಅರಿಸಿನ ಕುಂಕುಮಗಳಿಂದಲೂ, ಅರದಳ ಮುಂತಾದ ಬಣ್ಣಗಳಿಂದಲೂ, ನವಿಲುಗರಿಗಳಿಂದಲೂ, ವಸ್ತ್ರಗಳಿಂದಲೂ, ಸುವರ್ಣಮಾಲಿಕೆಗಳಿಂದಲೂ ಅಲಂಕರಿಸಿದರು. ಆ ಹಳ್ಳಿಯಲ್ಲಿದ್ದ ಗೋಪಾಲಕರೆಲ್ಲರೂ, ಅಂಗಿ, ತಲೆಪಾಗು, ಮುಂತಾದ ಬೆಲೆಯುಳ್ಳ ವಸ್ತ್ರಗಳಿಂದಲೂ, ಆಭರಣಗಳಿಂದಲೂ,ತಮ್ಮ ದೇಹವನ್ನಲಂಕರಿಸಿಕೊಂಡು,ಬಗೆಬಗೆಯ ಕೈಕಾಣಿಕೆಗಳನ್ನು ತಂದು ನಂದನಿಗೆ ಒಪ್ಪಿಸುತ್ತಿದ್ದರು ಗೋಪಸ್ತ್ರೀಯರೂಕೂಡ, ಯಶೋದೆಗೆ ಗಂಡುಮಗುವಾದುದನ್ನು ಕೇಳಿ, ಪರಮಸಂತೋಷಗೊಂಡವರಾಗಿ, ವಸ್ತ್ರಾಭರಣಗಳಿಂದಲೂ, ಕಣ್ಣುಕಪ್ಪು ಮೊದಲಾದ ಅನುಲೇಪನಗಳಿಂದಲೂ ತಮ್ಮ ದೇಹವನ್ನು ಶೃಂಗರಿಸಿಕೊಂಡು, ಕುಂಕುಮಾನುಲೇಪ

---

* ಪುರಾಣ ಹೇಳತಕ್ಕವರಿಗೂ, ವಂಶಾವಳಿಯನ್ನು ಕೀರ್ತಿಸತಕ್ಕವರಿಗೂ. ಸ್ತುತಿಪಾಠಕ (ಹೊಗಳುಭಟ್ಟ)ರಿಗೂ ಕ್ರಮವಾಗಿ, ಸೂತ, ಮಾಗಧ, ವಂದಿಗಳೆಂದು ಹೆಸರು.

ನದಿಂದ ಕಮಲವನ್ನು ಹೋಲುತ್ತಿರುವ ಮುಖಕಾಂತಿಯಿಂದೊಪ್ಪುತ್ತಾ, ಕೈಕಾಣಿಕೆಯ ತಟ್ಟೆಗಳೊಡನೆ ಯಶೋದೆಯನ್ನು ನೋಡುವುದಕ್ಕಾಗಿ ಆ ತುರದಿಂದ ಹೊರಟರು. ಆಗ ಆ ಗೋಪಸ್ತ್ರೀಯರ ಸಡಗರವನ್ನು ಕೇಳ ಬೇಕೆ? ಜಗ್ಗುನಡೆಯಿಂದ ನಡೆಯುವಾಗ ಭಾರದಿಂದ ಅದಿರುತ್ತಿ ರುವ ಉಬ್ಬಿದ ನಿತಂಬಗಳು! ಕುಲುಕುತ್ತಿರುವ ಸ್ತನಗಳು! ಥಳಥಳಿಸು ತ್ತಿರುವ ರತ್ನಕುಂಡಲಗಳು! ಕಂಠದಲ್ಲಿ ತೂಗಾಡುತ್ತಿರುವ ಮುತ್ತಿನಹಾ ರದ ಪದಕಗಳು! ವಾರಿಯುದ್ಧಕ್ಕೂ ತಲೆಯಿಂದ ಉದುರಿಬೀಳುತ್ತಿರುವ ಹೂಗ ಳು! ಘುಲ್ಘುಲನೆ ಧ್ವನಿಮಾಡುತ್ತಿರುವ ಬಳೆಗಳು! ನಡೆಯ ವೇಗದಿಂದ ಕದ ಲುತ್ತಿರುವ ಮುಂಗುರುಳುಗಳು! ಸ್ತನದಿಂದ ಜಾರುವ ವಸ್ತ್ರಾಭರಣಗಳು! ಹೀಗೆ ಆ ಗೋಪಾಂಗನೆಯರು, ಆಗಿನ ಮಹೋತ್ಸಾಹಸಂಭ್ರಮಗಳಿಂದ ಅಪೂರ್ವಶೋಭೆಯನ್ನು ಬೀರುತ್ತಾ, ಯಶೋದೆಯ ಮನೆಗೆ ಬಂದರು. ಅಲ್ಲಿ ಒ ಬ್ಬೊಬ್ಬರೂ ಯಶೋದೆಯ ಮಗುವನ್ನು ನೋಡಿ “ಓ ಮುದ್ದುಕುಮಾರಾ! ನೀನು ನಮಗೆ ಪ್ರಭುವಾಗಿ ಬಹುಕಾಲದವರೆಗೆ ನಮ್ಮನ್ನು ಕ್ಷೇಮದಿಂದ ಕಾ ಪಾಡತಕ್ಕವನಾಗು” ಎಂದು ಆಶೀರ್ವಾದಮಾಡಿದರು. ಮತ್ತು ತಮ್ಮ ಪ್ರಾಚಾರಕ್ಕೆ ತಕ್ಕಂತೆ, ಆ ಸಂತೋಷಕಾಲದಲ್ಲಿ ಹಾಡುಗಳನ್ನು ಹೇಳುತ್ತಾ, ಒಬ್ಬ ರಮೇಲೊಬ್ಬರು ಅರಿಸಿನಪುಡಿಯನ್ನೂ, ಗಂಧಪುಡಿಗಳನ್ನೂ, ಸುಗಂಧವುಳ್ಳ ಮಂಗಳಚೂರ್ಣಗಳನ್ನೂ, ದಧಿಮಿಶ್ರವಾದ ತೀರ್ಥವನ್ನೂ ಎರಚಿ, ವಸಂತವಾಡುತಿದ್ದರು. ನಾನಾಕಡೆಗಳಲ್ಲಿಯೂ ಮಂಗಳವಾದ್ಯಗಳು ನುಡಿಸಲ್ಪಡುತಿದ್ದುವು. ಸಕಲಲೋಕನಾಯಕನಾದ ಭಗವಂತನು, ಶಿಶುರೂಪದಿಂದ ಆ ನಂದನ ಮನೆಯಲ್ಲಿದ್ದಾಗ, ಅಲ್ಲಿನ ಗೋಪಾಲಕರ ಮನಸ್ಸಿನಲ್ಲಿ ಅಪೂರ್ವವಾದ ಒಂದು ಮಹೋತ್ಸಾಹವುಂಟಾಯಿತು. ಕೆಲವು ಗೋಪಾ ಲಕರು ಮಿತಿಮೀರಿದ ಸಂತೋಷದಿಂದ, ಹಾಲು, ಮೊಸರು, ತುಪ್ಪ, ಬೆಣ್ಣೆ, ಮೊದಲಾದುವುಗಳನ್ನೇ ಒಬ್ಬರಮೇಲೊಬ್ಬರು ಎರಚಾಡುತ್ತಾ, ಅವುಗಳಿಂದ ಲೇ ವಸಂತವನ್ನಾಡುತಿದ್ದರು. ನಂದನು ಬಹಳ ಉದಾರಮನಸ್ಸುಳ್ಳವನಾ ದುದರಿಂದ, ಆ ಉತ್ಸವದಲ್ಲಿ ತನ್ನನ್ನು ನೋಡುವುದಕ್ಕಾಗಿ ಬಂದ ಒಬ್ಬೊಬ್ಬ ಗೋಪಾಲಕನಿಗೂ, ಬಗೆಬಗೆಯ ವಸ್ತ್ರಗಳನ್ನೂ, ಆಭರಣಗಳನ್ನೂ, ಗೋವು

ಗಳನ್ನೂ ಬಹುಮಾನಿಸಿ ಕಳುಹಿಸಿದನು. ಮತ್ತು ಆ ಉತ್ಸವಕಾಲದಲ್ಲಿ ಗಾನಮಾಡುವುದಕ್ಕಾಗಿ ಬಂದ ಗಾಯಕರಿಗೂ, ವಂದಿಮಾಗಧರಿಗೂ, ಇನ್ನೂ ಬೇರೆಬೇರೆ ಚತುರವಿದ್ಯೆಯನ್ನು ತೋರಿಸಿದವರಿಗೂ, ಅವರವರ ಮನಸ್ತೃಪ್ತಿಯಾಗುವಂತೆ, ಬೇಕುಬೇಕಾದ ವಸ್ತುಗಳನ್ನು ಕೊಟ್ಟು ಮನ್ನಿಸಿದನು ಮಹಾಭಾಗ್ಯವತಿಯಾದ ರೋಹಿಣೀದೇವಿಯೂ ಆ ಗೋಕುಲದಲ್ಲಿಯೇ ಇರುತಿದ್ದುದರಿಂದ ಈ ಉತ್ಸವಕಾಲದಲ್ಲಿ ದಿವ್ಯವಸ್ತ್ರಗಳಿಂದಲಂಕೃತಳಾಗಿ, ಗೃಹದೇವತೆಯಾದ ಶ್ರೀವಿಷ್ಣುವಿನ ಪ್ರೀತ್ಯರ್ಥವಾಗಿಯೂ, ತನ್ನ ಪುತ್ರನ ಕ್ಷೇಮಕ್ಕಾಗಿಯೂ ನಡೆಸಬೇಕಾದ ಮಂಗಳಕಾರ್ಯಗಳನ್ನು ನಡೆಸುತ್ತ, ನಂದನಿಂದಲೂ, ಇತರ ಗೋಪಾಲಕರಿಂದಲೂ ಸೇವಿತಳಾಗಿ ಸಂತೋಷದಿಂದಿರುತಿದ್ದಳು ಭಗವಂತನು ನಂದಗೋಕುಲದಲ್ಲಿ ನೆಲೆಸಿದಂದಿನಿಂದ, ಆ ಪ್ರದೇಶವೆಲ್ಲವೂ ಸಕಲವಸ್ತುಸಮೃದ್ಧವಾಗಿ, ಭಾಗ್ಯಲಕ್ಷ್ಮಿಗೆ ವಿಹಾರಸ್ಥಾನವೆಂಬಂತೆ ತೋರುತಿತ್ತು

ಓ ಪರೀಕ್ಷಿದ್ರಾಜಾ! ಹೀಗೆ ನಾಲ್ಕಾರುದಿನಗಳು ಕಳೆದಮೇಲೆ, ನಂದನು, ಸಮರ್ಥರಾದ ಕೆಲವು ಗೋಪಾಲಕರನ್ನು ಆ ಗೋಕುಲದ ರಕ್ಷಣಾರ್ಥವಾಗಿ ನಿಯಮಿಸಿ, ರಾಜನಾದ ಕಂಸನಿಗೆ ತನ್ನ ಗ್ರಾಮದಿಂದ ಸಲ್ಲಬೇಕಾದ ಆ ವರ್ಷದ ಪೊಗದಿಯನ್ನೊಪ್ಪಿಸುವುದಕ್ಕಾಗಿ, ಮಥುರಾಪುರಿಗೆ ಹೋದನು ಆಗ ಮಥುರಾಪುರಿಯಲ್ಲಿದ್ದ ವಸುದೇವನು, ತನಗೆ ಭ್ರಾತೃಸಮಾನನಾದ ನಂದನು ಬಂದಿರುವುದನ್ನು ಕೇಳಿ, ಅವನನ್ನು ನೋಡುವುದಕ್ಕಾಗಿ ಬಂದನು ವಸುದೇವನನ್ನು ಕಂಡೊಡನೆ ನಂದನು. ಪುನರ್ಜೀವವನ್ನು ಹೊಂದಿದ ಮೃತಶರೀರದಂತೆ, ಅತ್ಯಾತ್ರದಿಂದ ತಟ್ಟನೆ ಮೇಲೆದ್ದು, ಇದಿರುಗೊಂಡು ಬಂದು. ಆ ವಸುದೇವನನ್ನು ಅತ್ಯಂತಪ್ರೇಮಾತಿಶಯದಿಂದ ಕೈಹಿಡಿದು ಆಲಿಂಗಿಸಿಕೊಂಡನು. ವಸುದೇವನು ಹೀಗೆ ಯಥೋಚಿತವಾಗಿ ಸತ್ಕಾರವನ್ನು ಪಡೆದು, ಸುಖಾಸೀನನಾಗಿ ಕುಳಿತು, ಕುಶಲಪ್ರಶ್ನವನ್ನು ಮಾಡಿ, ತನ್ನ ಮಕ್ಕಳ ಕ್ಷೇಮಲಾಭವನ್ನು ತಿಳಿಯಬೇಕೆಂಬ ಆತುರದಿಂದ ಹೀಗೆಂದು ಹೇಳುವನು “ಅಣ್ಣಾ! ಬಹುಕಾಲದಿಂದ ಮಕ್ಕಳಿಲ್ಲದೆ ಸಂತಾನದ ಆಶೆಯನ್ನೇ ಬಿಟ್ಟಿದ್ದ ನಿನಗೆ, ಈ ವಾರ್ಧಕದಶೆಯಲ್ಲಿ ಪುತ್ರರ

ತ್ನವು ಜನಿಸಿದುದು,ನಿನ್ನ ಭಾಗ್ಯವಿಶೇಷವಲ್ಲದೆ ಬೇರೆಯಲ್ಲ! ಈ ಶುಭೋದಂತ ವನ್ನು ಕೇಳಿ ನಾವು ಬಹಳ ಸಂತೋಷಗೊಂಡೆವು. ಪುರುಷನು ತಾನೇ ಪುತ್ರರೂಪದಿಂದ ಹುಟ್ಟುವನು. ಸಂಸಾರಚಕ್ರದಲ್ಲಿ ಸುತ್ತುತ್ತಿರುವವನಿಗೆ, ಇದೊಂದು ದೊಡ್ಡಭಾಗ್ಯವಿಶೇಷವು! ನಾನು ಕಂಸನ ಬಾಧೆಯಿಂದ ತಪ್ಪಿ ಪುನ ರ್ಜೀವತೊಂದಿದಂತೆ ಬದುಕಿಬಂದುದೂ ನನ್ನ ಭಾಗ್ಯವು! ಈಗ ನಾನು ನಿನ್ನನ್ನು ನೋಡುವಂತಾದುದೂ ದೊಡ್ಡಭಾಗ್ಯವಿಶೇಷವೇ ! ನದೀಪ್ರವಾಹ ದಲ್ಲಿ ನಾನಾವಿಧಗತಿಯಿಂದ ಕೊಚ್ಚಿಕೊಂಡು ಹೋಗುತ್ತಿರುವ ವಸ್ತು ಗಳು, ಒಂದು ಕಡೆಯಲ್ಲಿ ಸೇರಿ ನೆಲೆಯಾಗಿ ನಿಲ್ಲುವುದು ಹೇಗೆ ದುರ್ಲಭವೋ. ಅದರಂತೆಯೇ ಸಂಸಾರವೆಂಬ ಮಹಾಪ್ರವಾಹದಲ್ಲಿ, ಅವರವರ ಕರ್ಮಗತಿಗೆ ತಕ್ಕಂತೆ ಚದರಿಹೋಗುತ್ತಿರುವ ಬಂಧುಮಿತ್ರಾದಿಗಳು, ತಿರುಗಿ ಒಂದಾ ಗಿ ಸೇರಿ ಕೂಡಾಡುವುದೂ ಎಷ್ಟೋ ದುರ್ಲಭವು! ಮಹಾ ಭಾಗ್ಯವಿಶೇಷದಿಂ ದಲ್ಲದೆ ಇಂತಹ ಪ್ರಿಯಸಮಾಗಮವು ಲಭಿಸಲಾರದು. ನೀನು ನಿನ್ನ ಬಂಧು ಮಿತ್ರರೊಡನೆ ವಾಸಮಾಡತಕ್ಕ ಆ ಮಹಾವನಪ್ರದೇಶವೆಲ್ಲವೂ ಸುಭಿಕ್ಷ ವಾಗಿರುವುದಷ್ಟೆ? ಅಲ್ಲಿ ಪಶುಗಳಿಗೆ, ಬೇಕಾದ ಹುಲ್ಲು ಕಡ್ಡಿಗಳಿಗೂ, ನೀರಿಗೂ ಏನೂ ಕೊರತೆಯಿಲ್ಲವಷ್ಟೆ?ನಿನ್ನ ಮಂದೆಯಲ್ಲಿ ರೋಗಾದ್ಯುಪದ್ರ ವಗಳೇನೂ ಇಲ್ಲದೆ ಗೋಧನವೆಲ್ಲವೂ ಕ್ಷೇಮದಿಂದಿರುವುದಷ್ಟೆ ? ಅಣ್ಣಾ! ನನ್ನ ಮಗನಾದ ಬಲರಾಮನು ತಾಯಿಯೊಡನೆ ನಿನ್ನ ಮನೆಯಲ್ಲಿ ಸುಖ ವಾಗಿರುವನಷ್ಟೆ ? ಅವನು ನಿನ್ನನ್ನೇ ತಂದೆಯೆಂದು ಭಾವಿಸಿ, ನಿನ್ನ ಮನೆ.ಅ ನುವರ್ತಿಯಾಗಿರುವನಷ್ಟೆ ? ಲೋಕದಲ್ಲಿ ಯಾವಪುರುಷನು ತನ್ನ ದೇಹಾನುಬಂಧಿಗಳೊಡನೆ ಸೇರಿಯೇ ಧರ್ಮಾರ್ಥಕಾಮಗಳೆಂಬ ಪುರುಷಾ ರ್ಥಗಳನ್ನನುಭವಿಸುವನೋ, ಅವನಿಗೆಮಾತ್ರವೇ ಅವು ಯುಕ್ತವಾ ಗಿಯೂ, ಶಾಸ್ತ್ರಸಮ್ಮತವಾಗಿಯೂ ಆಗುವುವು ಹಾಗಿಲ್ಲದೆ ಅವನು ಆ ಪುರುಷಾರ್ಥಗಳನ್ನು ತಾನುಮಾತ್ರವೇ ಅನುಭವಿಸುತ್ತಿದ್ದು, ಅವನ ಬಂಧುಗಳೆಲ್ಲರೂ ಅದರ ಸುಖವನ್ನು ಕಾಣದೆ ದೀನದಶೆಯಿಂದ ಚಿಂತಿಸುತಿ ದ್ದರೆ, ಅಂತವನಿಗೆ ಆ ಮೂರುಪುರುಷಾರ್ಥಗಳೂ ನಿಷ್ಪ್ರಯೋಜನಗಳೆಂ ದೇ ಎಣಿಸಬೇಕು. ಈಗ ನನ್ನ ಸ್ಥಿತಿಯೂ ಹಾಗೆಯೇ ಇರುವುದು." ಎಂದ

ನು. ಆಗ ನಂದನು ವಸುದೇವನನ್ನು ಕುರಿತು. "ಆರ್ಯ ವಸುದೇವಾ! ನಮ್ಮ ನಮ್ಮ ಅದೃಷ್ಟಕ್ಕೆ ಯಾರೇನು ಮಾಡಬಲ್ಲರು? ನಿನ್ನ ವೃತ್ತಾಂತವು ನನಗೆ ಬಹಳ ಸಂಕಟಕರವಾಗಿದೆ! ನಿನಗೆ ದೇವಕಿಯಲ್ಲಿ ಹುಟ್ಟಿದ ಗಂಡುಮಕ್ಕಳೆಲ್ಲರನ್ನೂ ಕಂಸನು ಕೊಂದುಬಿಟ್ಟನು. ಕೊನೆಗಾಲಕ್ಕೆ ಒಂದು ಹೆಣ್ಣು ಕೂಸು ಹುಟ್ಟಿ, ಅದಾದರೂ ನಿನ್ನ ಕೈಗೆ ದಕ್ಕಿತೆ? ಹುಟ್ಟಿದಾಗಲೇ ಗಾಳಿಯಂತೆ ಆಕಾಶಕ್ಕೆ ಹಾರಿಹೋಯಿತು. ಲೋಕದ ಜನವೆಲ್ಲವೂ ಅದೃಷ್ಟಾನುಸಾರವಾಗಿ ಸುಖದುಃಖಗಳನ್ನು ಅನುಭವಿಸದೆ ತೀರದು! ವಿವೇಕಿಗಳು ಇದನ್ನು ತಿಳಿದೇ ಸುಖದುಃಖಗಳೆರಡನ್ನೂ ಸಮವಾಗಿ ಭಾವಿಸಿ, ಅವುಗಳಿಂದ ಮನಸ್ಸು ಕಲಗದಿರುವರು" ಎಂದನು. ತಿರುಗಿ ವಸುದೇವನು ನಂದನನ್ನು ಕುರಿತು, "ನಂದಾ! ಅವೆಲ್ಲವೂ ಹಾಗಿರಲಿ! ನೀನು ರಾಜನಿಗೆ ಸಲ್ಲಿಸಬೇಕಾದ ಪೊಗುದಿಯನ್ನು ಸಲ್ಲಿಸಿದುದಾಯಿತಷ್ಟೆ! ಭಾಗ್ಯವಶದಿಂದ ನಾವಿಬ್ಬರೂ ಸೇರಿ ಪರಸ್ಪರಯೋಗಕ್ಷೇಮಗಳನ್ನೂ ತಿಳಿದಂತಾಯಿತು! ಇನ್ನು ಬಹಳದಿನಗಳವರೆಗೆ ನೀನು ಇಲ್ಲಿರಬಾರದು. ಈಗ ಗೋಕುಲದಲ್ಲಿ ಉತ್ಪಾತಗಳೇನೋ ತೋರುತ್ತಿರುವಹಾಗಿದೆ! ನೀನು ಅಲ್ಲಿನ ಯೋಗಕ್ಷೇಮವನ್ನು ನೋಡು ಹೋಗು!" ಎಂದನು. ವಸುದೇವನು ಈ ಮಾತನ್ನು ಹೇಳಿದೊಡನೆ, ನಂದನೇ ಮೊದಲಾಗಿ ಅಲ್ಲಿಗೆ ಬಂದಿದ್ದ ಗೋಪಾಲಕರೆಲ್ಲರೂ, ತಾವು ತಂದಿದ್ದ ಎತ್ತಿನ ಬಂಡಿಗಳನ್ನೇರಿ, ವಸುದೇವನ ಅನುಮತಿಯನ್ನು ಪಡೆದು, ಗೋಕುಲದಕಡೆಗೆ ಹೊರಟರು. ಇದು ಐದನೆಯ ಅಧ್ಯಾಯವು.

---




ನಂದನು ಹಿಂತಿರುಗಿ ಬರುವಾಗ ದಾರಿಯಲ್ಲಿಯೇ, ಕೆಲಕೆಲವು ಉತ್ಪಾತಗಳು ಕಂಡು ಬಂದುವು. ಆದರಿಂದ, ವಸುದೇವನ ಮಾತು ಸುಳ್ಳಲ್ಲವೆಂದೆಣಿಸಿ, ಅನಿಷ್ಟನಿವಾರಣೆಗಾಗಿ ತನಗೆ ಕುಲದೈವವಾದ ಶ್ರೀಹರಿಯನ್ನು ಧ್ಯಾನಮಾಡುತ್ತಲೇ ಬಂದನು. ನಂದನು ಗೋಕುಲಕ್ಕೆ ಬಂದು ಸೇರುವಷ್ಟರಲ್ಲಿ, ಇತ್ತಲಾಗಿ ಕ್ರೂರಸ್ವಭಾವವುಳ್ಳ ಪೂತನೆಯೆಂಬ ಘೋರರಾಕ್ಷಸಿಯೊಬ್ಬಳು, ಕಂಸನಿಂದ ಪ್ರೇರಿತಳಾಗಿ, ಪಟ್ಟಣಗಳಲ್ಲಿಯೂ,

ಗ್ರಾಮಗಳಲ್ಲಿಯೂ, ಸಣ್ಣಹಳ್ಳಿಗಳಲ್ಲಿಯೂ ಪ್ರವೇಶಿಸಿ, ಕಂಡಕಂಡ ಮಕ್ಕಳನ್ನು ಕೊಲ್ಲುತ್ತ ಅಲ್ಲಲ್ಲಿ ಸುತ್ತುತಿದ್ದಳು. ಆದರೇನು? ಭಕ್ತಪಾಲಕನಾದ ಆ ಭಗವಂತನ ಗುಣಶ್ರವಣಕೀರ್ತನಾದಿಗಳಿಂದಲೇ ಸಮಸ್ತಭೂತ ಬೇತಾಳಾದಿಗ್ರಹಗಳೂ, ರಾಕ್ಷಸರೂ ನಾಶಹೊಂದುವರು. ಯಾವ ದೇಶದಲ್ಲಿ ಜನರು ತಮ್ಮತಮ್ಮ ಇತರಕಾರ್ಯಗಳೊಡನೆ, ಆ ಭಗವಂತನ ಗುಣಕೀರ್ತನಗಳನ್ನೂ ಒಂದು ನಿಯತಕಾರ್ಯವನ್ನಾಗಿ ನಡೆಸದಿರುವರೋ, ಅಂತಹ ಸ್ಥಳಗಳಲ್ಲಿ, ರಾಕ್ಷಸರು ಸುಲಭವಾಗಿ ಪ್ರವೇಶಿಸಬಲ್ಲರು. ಹೀಗಿರುವಾಗ ಭಗವಂತನು ಕೃಷ್ಣರೂಪದಿಂದ ತಾನೇ ಸಾಕ್ಷಾತ್ತಾಗಿ ವಾಸಮಾಡುತ್ತಿರುವ ನಂದಗೋಕುಲದಲ್ಲಿ, ಅಂತಹ ರಾಕ್ಷಸಿಯರು ಏನುಮಾಡಬಲ್ಲರು.? ಆದರೆ ಪೂತನೆಯು ಅಲ್ಲಿಯೂ ತನ್ನ ಚೇಷ್ಟೆಯನ್ನು ತೋರಿಸದೆ ಬಿಡಲಿಲ್ಲ. ಆ ಕ್ರೂರರಾಕ್ಷಸಿಯು, ಒಮ್ಮೆ ಮಾಯೆಯಿಂದ ತನ್ನ ನಿಜಸ್ವರೂಪವನ್ನು ಮರೆಸಿಕೊಂಡು. ಸಾಮಾನ್ಯಗೋಪಸ್ತ್ರೀಯಂತೆ ಆಕಾರವನ್ನು ತಾಳಿ, ನಂದಗೋಕುಲವನ್ನು ಪ್ರವೇಶಿಸಿದಳು. ಈ ಕಪಟವೇಷದಲ್ಲಿ ಅವಳು ತೋರಿಸುತಿದ್ದ ಬೆಡಗನ್ನು ಕೇಳಬೇಕೆ? ಅಂದವಾದ ತಲೆತುರುಬು! ಅದರಮೇಲೆ ಮಲ್ಲಿಗೆಹೂವಿನ ದಂಡೆ? ಉಬ್ಬಿದ ನಿತಂಬಗಳು! ಬುಗುರಿಯಂತಿರುವ ಸ್ತನಗಳು! ಈ ಸ್ತನನಿತಂಬಗಳ ಭಾರದಿಂದ ಬಳುಕುವಂತಿರುವ ಸಣ್ಣನಡು! ಅಂದವಾದ ಸೀರೆ! ಕರ್ಣಾಭರಣಗಳ ಕಾಂತಿಯಿಂದ ಕಳೆಯೇರಿದ ಮುಖದ ಸೊಗಸು! ಇಂತಹ ಸುಂದರಾಕಾರವನ್ನು ತಾಳಿ ಆ ರಾಕ್ಷಸಿಯು. ಅಂದವಾದ ತನ್ನ ಮುಗುಳ್ನಗೆಯಿಂದಲೂ, ಓರೆನೋಟದಿಂದಲೂ, ಆ ಗೋಕುಲದಲ್ಲಿ ಗೋಪಸ್ತ್ರೀಯರೆಲ್ಲರ ಮನಸ್ಸನ್ನೂ ಆಕರ್ಷಿಸುವಂತೆ ಅವರ ಮುಂದೆ ಅಲ್ಲಲ್ಲಿ ನಲಿದಾಡುತಿದ್ದಳು. ಕೈಯಲ್ಲಿ ಲೀಲಾರ್ಥವಾದ ಕಮಲವನ್ನು ಹಿಡಿದು ಅಲ್ಲಲ್ಲಿ ಸುತ್ತುತಿದ್ದ ಈ ರಾಕ್ಷಸಿಯನ್ನು ನೋಡಿ ಗೋಪಸ್ತ್ರೀಯರು, ಗೋಕುಲದಲ್ಲಿ ಕೃಷ್ಣರೂಪದಿಂದ ಅವತರಿಸಿದ ತನ್ನ ಪತಿಯನ್ನು ನೋಡುವುದಕ್ಕಾಗಿ, ಸಾಕ್ಷಾಲ್ಲಕ್ಷ್ಮೀದೇವಿಯೇ ಆ ರೂಪದಿಂದ ಬಂದಿರಬಹುದೆಂದು ಭಾವಿಸುತಿದ್ದರು. ಮಕ್ಕಳಿಗೆ ಕ್ರೂರಗ್ರಹದಂತಿದ್ದ ಆ ಪೂತನೆಯು, ಹೀಗೆ ಕಪಟವೇಷದಿಂದ ಅಲ್ಲಲ್ಲಿ ಮಕ್ಕಳನ್ನು ಹಿಡಿದುಕೊ



೧೭೬೮. ಪೂತನಾಸಂಹಾರವು.

ಲ್ಲುತ್ತಾ, ಒಮ್ಮೆ ನಂದನ ಮನೆಗೂ ಪ್ರವೇಶಿಸಿದಳು. ಅಲ್ಲಿ ಇವಳನ್ನು ನೋಡಿದ ಗೋಪಸ್ತ್ರೀಯರೆಲ್ಲರೂ, ಅವಳ ನಿಜವನ್ನು ತಿಳಿಯಲಾರದೆ, ಆಕೆಯನ್ನು ಸಾಧುಸ್ತ್ರೀಯೆಂದೇ ನಂಬಿ ಸುಮ್ಮನಿರುತಿದ್ದುದರಿಂದ, ಈ ರಾಕ್ಷಸಿಯು, ಅಲ್ಲಲ್ಲಿ ಯಥೇಚ್ಛವಾಗಿ ತಿರುಗಿ ನೋಡುವುದಕ್ಕೆ ಅವಕಾಶವಾಯಿತು. ಹೀಗೆ ಪೂತನೆಯು ಅಲ್ಲಲ್ಲಿ ಹುಡುಕುತ್ತ ಬರುವಾಗ, ಆ ನಂದಗೃಹದಲ್ಲಿ, ಬೂದಿ ಮುಚ್ಚಿದ ಕೆಂಡದಂತೆ ತನ್ನ ದಿವ್ಯತೇಜಸ್ಸನ್ನು ಮರೆಸಿಕೊಂಡು, ಸಣ್ಣ ಶಿಶುವಾಗಿ ಹಾಸಿಗೆಯಲ್ಲಿ ಮಲಗಿದ್ದ ಶ್ರೀಕೃಷ್ಣನನ್ನು ಕಂಡಳು. ಸಕಲ ಚರಾಚರಗಳಿಗೂ ಅಂತರ್ಯಾಮಿಯಾದ ಶ್ರೀಕೃಷ್ಣನು, ಆ ಪೂತನೆಯು ಮಕ್ಕಳ ಮಾರಿಯೆಂಬುದನ್ನು ತಿಳಿದಿದ್ದರೂ, ತನ್ನ ಸರ್ವೇಶ್ವರತ್ವವನ್ನು ಹೊರಪಡಿಸದೆ, ಆಗಲೂ ಬಾಲಭಾವವನ್ನೇ ನಟಿಸುತ್ತ, ನಿದ್ರೆಮಾಡುವಂತೆ ಕಣ್ಣುಗಳನ್ನು ಮುಚ್ಚಿಕೊಂಡು ಸುಮ್ಮನೆ ಮಲಗಿದ್ದನು. ತನ್ನ ಮೃತ್ಯುವೇ ಆತನೆಂಬುದನ್ನು ತಿಳಿಯದೆ,ಆ ರಾಕ್ಷಸಿಯು, ಮೆಲ್ಲಗೆ ಮುಂದೆ ಹೋಗಿ, ಮಲಗಿದ ಹಾವನ್ನು ಹಗ್ಗವೆಂದು ತಿಳಿದು ಕೈಗೆತ್ತಿಕೊಳ್ಳುವ ಮೂಢರಂತೆ, ತನಗೆ ಮೃತ್ಯುರೂಪಿಯಾಗಿ ಹುಟ್ಟಿರುವ ಆ ಶಿಶುವನ್ನೆತ್ತಿ ತನ್ನ ತೊಡೆಯಮೇಲೆ ಮಲಗಿಸಿಕೊಂಡಳು ಮೃದುವಾದ ಚರ್ಮದ ಒರೆಯಲ್ಲಿ ಮುಚ್ಚಿಟ್ಟ ಖಡ್ಗಧಾರೆಯಂತೆ, ಮೇಲೆಮಾತ್ರ ಸಾಧುಸ್ವಭಾವವನ್ನು ನಟಿಸುತ್ತ, ಅಂತರಂಗದಲ್ಲಿ ಅತಿಕ್ರೂರಹೃದಯೆಯಾದ ಆ ರಾಕ್ಷಸಿಯು ಹೀಗೆ ಸ್ವತಂತ್ರಿಸಿ, ಮಗುವನ್ನೆತ್ತಿ ತೊಡೆಯಲ್ಲಿ ಮಲಗಿಸಿಕೊಂಡಾಗ, ರೋಹಿಣೀ ಯಶೋದೆಯರಿಬ್ಬರೂ, ತಮ್ಮ ಕಣ್ಣಾರೆ ಅದನ್ನು ನೋಡುತಿದ್ದಾಗಲೂ, ಆ ರಾಕ್ಷಸಿಯ ಮುಖಕಾಂತಿಗೆ ಮರುಳಾಗಿ, ಅವಳನ್ನು ಸಾಧುಸ್ತ್ರೀಯೆಂದೇ ತಿಳಿದು. ಬಾಯೆತ್ತದೆ ಸುಮ್ಮನೆ ನಿಂತಿದ್ದರು. ಕ್ರೂರಸ್ವಭಾವವುಳ್ಳ ರಾಕ್ಷಸಿಯು, ಆ ಶಿಶುವನ್ನು ತೊಡೆಯಮೇಲೆ ಮಲಗಿಸಿಕೊಂಡು, ಜೀರ್ಣವಾಗದುದಾಗಿಯೂ, ಪ್ರಾಣಹಾರಕವಾಗಿಯೂ ಇರುವ ಕ್ರೂರವಿಷದಿಂದ ತುಂಬಿದ ತನ್ನ ಸ್ತನವನ್ನು ಆ ಶಿಶುವಿನ ಬಾಯಲ್ಲಿಟ್ಟು, ಅದಕ್ಕೆ ಸ್ತನ್ಯಪಾನಮಾಡಿಸ ತೊಡಗಿದಳು. ಭಗವಂತನಾದ ಶ್ರೀಕೃಷ್ಣನು ಮಕ್ಕಳ ಸ್ವಭಾವಕ್ಕೆ ತಕ್ಕಂತೆ, ಆಕೆಯ ಸ್ತನಗಳನ್ನು ತನ್ನ ಎರಡುಕೈಗಳಿಂದಲೂ ಹಿಡಿದು, ಸಂ

ತೋಷದಿಂದ ಸ್ತನ್ಯಪಾನಮಾಡುವಂತೆ ಅವಳ ಸ್ತನವನ್ನು ಮರ್ದಿಸಿ ಅದೇ ನೆವದಿಂದ ಪ್ರಾಣಗಳನ್ನೇ ಹೀರುತ್ತ ಬಂದನು. ಆ ರಾಕ್ಷಸಿಗೆ ಜೀವಾಧಾರವಾದ ಮರ್ಮಸ್ಥಾನಗಳೆಲ್ಲವೂ ಕದಲಿ, ಅಂಗಾಂಗಗಳಲ್ಲಿಯೂ ಸಹಿಸಲಾರದ ಬಾಧೆಯುಂಟಾಯಿತು. ಆ ನೋವನ್ನು ತಡೆಯಲಾರದೆ "ಅಯ್ಯೋ! ಸಾಕುಸಾಕು! ಬಿಡು ಬಿಡು" ಎಂದು ಆರ್ತಸ್ವರದಿಂದ ಅರಚಿಕೊಳ್ಳುತ್ತ, ಆ ಮಗುವಿನ ಬಾಯಿಂದ ತನ್ನ ಸ್ತನವನ್ನು ಬಿಡಿಸಿಕೊಳ್ಳುವುದಕ್ಕೆ ಯತ್ನಿಸುವಷ್ಟರಲ್ಲಿ, ಅವಳಿಗೆ ಉತ್ಕ್ರಮಣಾವಸ್ಥೆಯಿಂದ ಕಣ್ಣಾಲಿಗಳು ಮೇಲೆ ನಾಟಿಕೊಂಡುವು. ಮೈಯೆಲ್ಲವೂ ಬೆವತುಹೋಯಿತು. ಆರ್ತಧ್ವನಿಯಿಂದ ಕೂಗುತ್ತ ಕೈಕಾಲುಗಳನ್ನಗಲಿಸಿ ಕೆಳಗೆ ಬಿದ್ದು ಪ್ರಾಣವನ್ನೂ ಬಿಟ್ಟಳು. ಅವಳು ಮಾಯೆಯಿಂದ ತೋರಿಸುತಿದ್ದ ಸೌಮ್ಯರೂಪವು ಹೋಗಿ, ಸಹಜವಾದ ಘೋರಸ್ವರೂಪವುಂಟಾಯಿತು. ಇವಳ ಭಯಂಕರವಾದ ಆಕ್ರಂದನಧ್ವನಿಯಿಂದ ಪರ್ವತಸಹಿತವಾದ ಸಮಸ್ತಭೂಮಿಯೂ, ಗ್ರಹನಕ್ಷತ್ರಗಳೊಡಗೂಡಿದ ಆಕಾಶವೂ ಕಂಪಿಸುವಂತಾಯಿತು. ನಾನಾದಿಕ್ಕುಗಳೂ ಆದರ ಪ್ರತಿಧ್ವನಿಯಿಂದ ಮೊಳಗತಿದ್ದುವು. ಗೋಕುಲದಲ್ಲಿ ಆಕಸ್ಮಿಕವಾದ ಸಿಡಿಲುಬಿದ್ದಂತಾಗಿ ಅನೇಕಜನರು ಪ್ರಜ್ಞೆತಪ್ಪಿ ಕೆಳಗೆ ಬಿದ್ದರು. ಹೀಗೆ ಆ ಘೋರರಾಕ್ಷಸಿಯು, ಪ್ರಾಣವನ್ನು ನೀಗಿ, ಕೆದರಿದ ತಲೆಯೊಡನೆ ಕೈಕಾಲುಗಳನ್ನಗಲಿಸಿ ಕೆಳಗೆ ಬಿದ್ದಿದ್ದಾಗ, ಹಿಂದೆ ದೇವೇಂದ್ರನ ವಜ್ರಾಯುಧದಿಂದ ಹತನಾಗಿ ಬಿದ್ದ ವೃತ್ರಾಸುರನಂತೆ ಕಾಣುತಿದ್ದಳು. ಓ ಪರೀಕ್ಷಿದ್ರಾಜಾ! ಮಹಾದೇಹವುಳ್ಳ ಆ ಘೋರರಾಕ್ಷಸಿಯು ಸತ್ತು ಕೆಳಗೆ ಬೀಳುವಾಗ, ಆರುಹರಿದಾರಿಗಳವರೆಗೆ ಸುತ್ತಲೂ ಇದ್ದ ಮರ ಗಿಡು ಬಳ್ಳಿಗಳೆಲ್ಲವೂ ಮುರಿದು ಪುಡಿಪುಡಿಯಾಗಿ, ನೋಡಿದವರೆಲ್ಲರಿಗೂ ಮಹಾದ್ಭುತವಾಗಿ ತೋರಿತು. ಲೋಕಭಯಂಕರವಾಗಿದ್ದ ಆ ವಿಕೃತಾಕಾರವನ್ನು ಕೇಳಬೇಕೆ? ಕಡೆಬಾಯಿಗಳಲ್ಲಿ ನೇಗಿಲಿನಂತಿರುವ ಉದ್ದವಾದ ಕೋರೆದಾಡೆಗಳು! ಬೆಟ್ಟದ ಗವಿಯಂತಿರುವ ಮೂಗಿನ ಸೊಳ್ಳೆಗಳು! ಗುಂಡುಕಲ್ಲುಗಳಂತಿರುವ ದಪ್ಪವೊಲೆಗಳು! ಕೆದರಿದ ತಲೆ! ಹಾಳುಬಾವಿಯಂತೆ ಆಳಕ್ಕಿಳಿದ ಕಣ್ಣುಗಳು! ಮಳ

ಲುದಿಣ್ಣೆಯಂತಿರುವ ಜಘನಗಳು! ದೊಡ್ಡಸೇತುವೆಗಳಂತೆ ಉದ್ದಕ್ಕೆ ನೀಡಿದ ಕೈ ಕಾಲು ತೊಡೆಗಳು! ಒಣಗಿದ ಕೆರೆಯಂತೆ ಬತ್ತಿದ ನಡು! ಈ ಘೋರರಾಕ್ಷಸಿಯು ಸತ್ತುಬೀಳುವುದಕ್ಕೆ ಮೊದಲು, ಆವಳ ಉಸಿರಿನ ಗಾಳಿಯ ವೇಗದಿಂದಲೇ ಎಷ್ಟೋಮಂದಿ ಗೋಪಾಲಕರೂ, ಗೋಪಾಂಗನೆಯರೂ ಅಲ್ಲಲ್ಲಿ ತತ್ತರಿಸಿಬಿದ್ದರು ಬಹಳ ಮಂದಿಗೆ ಕಿವಿಮೂಗುಗಳೆಲ್ಲವೂ ಹರಿದು ಹೋಗಿದ್ದುವು ಈಗ ಆ ಘೋರರಾಕ್ಷಸಿಯ ರೂಪವನ್ನೂ ಕಂಡಮೇಲೆ, ಅವರಿಗೆ ಭಯದಿಂದ ಎದೆಯೊಡೆಯುವಂತಾಯಿತು. ಎಲ್ಲರೂ ಭಯಗ್ರಸ್ತರಾಗಿ, ಇದೇನನರ್ಥವೆಂದು ಮುಂದೆ ಬಂದು,ಅಲ್ಲಿ ಬಿದ್ದಿದ್ದ ರಾಕ್ಷಸಿಯನ್ನೂ, ಆವಳ ಎದೆಯಮೇಲೆ ಬಿದ್ದು ಹೊರಳುತ್ತ ನಿರ್ಭಯವಾಗಿ ಆಡುತಿದ್ದ ಮಗುವನ್ನೂ ಕಂಡರು. ಇದನ್ನು ಕಂಡೊಡನೆ, ಯಶೋದೆ, ರೋಹಿಣಿ, ಮುಂತಾದ ಕೆಲವುಗೋಪಸ್ತ್ರೀಯರು, ಆ ಮಗುವಿನ ಮೇಲಿದ್ದ ಮೋಹದಿಂದ, ತಮ್ಮ ಪ್ರಾಣಭಯವನ್ನೂ ಲಕ್ಷ್ಯಮಾಡದೆ, ಮುಂದೆ ಬಿದ್ದು, ಆ ಮಗುವನ್ನೆತ್ತಿಕೊಂಡು ಹಿಂದಕ್ಕೆ ಕರೆತಂದರು ಆಮೇಲೆ ಆ ಮಗುವಿನ ಸುತ್ತಲೂ ಅನೇಕಸ್ತ್ರೀಯರು ಗುಂಪುಗೂಡಿ, ಆಶ್ಚರ್ಯದಿಂದ ನೋಡುತ್ತ ತಮ್ಮ ಮುದ್ದುಮಗುವು ಬದುಕಿಬಂದುದೇ ಹೆಚ್ಚೆಂದು ಮಾತಾಡಿಕೊಳ್ಳುತ್ತ, ಒಬ್ಬೊಬ್ಬರೂ ತಮತಮಗೆ ತೋರಿದಂತೆ ತಮ್ಮ ಕುಲಾಚಾರವನ್ನನುಸರಿಸಿ ಆ ಮಗುವಿಗೆ ರಕ್ಷೆಗಳನ್ನು ಮಾಡತೊಡಗಿದರು ಕೆಲವರು ಮಗುವನ್ನು ಕರೆತಂದು ಹಸುವಿನ ಬಾಲದಿಂದ ಇಳಿತೆಗೆದರು. ಕೆಲವರು ಗೋಮೂತ್ರವನ್ನು ತಂದು ಪ್ರೋಕ್ಷಿಸಿದರು. ಬೇರೆ ಕೆಲವರು ಗೋವಿನ ಪಾದಧೂಳಿಯನ್ನು ತಂದು ಅದರ ಮೈಗೆ ಲೇಪಿಸಿದರು. ಕೆಲವರು ಗೋಮಯವನ್ನು (ಹಸುವಿನ ಸಗಣಿಯನ್ನು) ತಂದು, ಕೇಶವಾದಿದ್ವಾದಶನಾಮಗಳನ್ನುಚ್ಚರಿಸುತ್ತ, ಆ ಶಿಶುವಿನ ಹಣೆ ಮುಂತಾಗಿ ಹನ್ನೆರಡು ದೇಹಾವಯವಗಳಲ್ಲಿಯೂ ಕ್ರಮವಾಗಿರಕ್ಷೆಯನ್ನಿಕ್ಕಿದರು ಹೀಗೆ ಕೆಲವು ಗೋಪಿಯರು, ಭಯಾತುರದಿಂದ ತಾವು ಆಚಮನಾದಿಗಳನ್ನು ಮಾಡಿ ಶುದ್ಧರಾಗುವುದಕ್ಕೆ ಮೊದಲೇ ಈ ರಕ್ಷಾಕಾರ್ಯಗಳನ್ನು ನಡೆಸಿದ ಮೇಲೆ, ಎಲ್ಲರೂ ತಿರುಗಿ ಯಥಾವಿಧಿಯಾಗಿ ಸ್ನಾನಾದಿಗಳನ್ನು ಮಾಡಿ, ಆಕಾ

ದ್ಧರೂ, ಆ ಶ್ರೀಹರಿಯಲ್ಲಿ ಬದ್ಧವೈರವನ್ನಿಟ್ಟು, ಆ ಕೃಷ್ಣನನ್ನು ಕೊಲ್ಲಬೇ ಕೆಂಬ ಕ್ರೂರಬುದ್ಧಿಯಿಂದ, ಅವನಿಗೆ ಮೊಲೆಯೂಡಿಸುವುದಕ್ಕೆ ಬಂದಳಲ್ಲ ವೆ? ಇಷ್ಟುಮಾತ್ರದಿಂದಲೇ ಅವಳ ಪ್ರಾರಬ್ಧಪಾಪಗಳೆಲ್ಲವೂ ನೀಗಿ ಮು ಕ್ತಿಯುಂಟಾಯಿತು ಇನ್ನು ಭಕ್ತಿಶ್ರದ್ಧೆಗಳಿಂದ ಆ ಪರಮಾತ್ಮನನ್ನುಪಾಸ ನೆಮಾಡುತ್ತ, ಅವನಿಗೆ ಪ್ರಿಯವಾದ ಪತ್ರಪುಷ್ಪಾದಿಗಳನ್ನೇ ಅರ್ಪಿಸತಕ್ಕ ಭಕ್ತರಿಗೆ, ಯಾವ ಸದ್ಗತಿಯುಂಟಾಗುವುದೆಂಬುದನ್ನು ನೀನೇ ಊಹಿಸಿನೋ ಡು! ಭಗವದ್ಭಕ್ತರಾದ ಯೋಗಿಗಳಿಗೆ ಧ್ಯಾನಗೋಚರಗಳಾಗಿಯೂ, ಯಾ ವಾಗಲೂ ಅವರ ಹೃದಯದಲ್ಲಿ ನೆಲೆಗೊಂಡಿರತಕ್ಕವುಗಳಾಗಿಯೂ, ಲೋಕಪೂ ಜ್ಯರಾದ ಬ್ರಹ್ಮರುದ್ರಾದಿ ದೇವತೆಗಳಿಗೂ ಪೂಜಾರ್ಹಗಳಾಗಿಯೂ ಇರುವ ತನ್ನ ಪಾದಾರವಿಂದಗಳಿಂದ ಶ್ರೀ ಕೃಷ್ಣನು, ಯಾವಳ ಎದೆಯನ್ನೊತ್ತಿ, ಕ್ಷಣಕಾಲದವರೆಗೆ ಅವಳ ಸ್ತನ್ಯಪಾನವನ್ನೂ ಮಾಡುತಿದ್ದನೋ, ಅಂತ ವಳಿಗೆ ಸದ್ಗತಿಯುಂಟಾಗುವುದೇನಾಶ್ಚರ್ಯವು ? ಪರಮಪಾಪಿನಿಯಾದ ಈ ರಾಕ್ಷಸಿಯೇ, ಆತನ ಕ್ಷಣಮಾತ್ರಸಂಬಂಧದಿಂದ ಹೀಗೆ, ಆ ಲೋಕನಾಥನ ಸಾನ್ನಿಧ್ಯವನ್ನು ಹೊಂದಿರುವಾಗ, ಯಾವಾಗಲೂ ಆ ಮುದ್ದುಕೃಷ್ಣನ ನ್ನು ತೊಡೆಯಮೇಲೆ ಮಲಗಿಸಿಕೊಂಡು, ಮೊಲೆಯೂಡಿಸುತ್ತಿರುವ ಯ ಶೋದೆ ಮೊದಲಾದ ಜನನಿಯರೂ, ಆ ಕೃಷ್ಣನಿಗಾಗಿ ದಿನದಿನವೂ ಸಮೃ ದ್ಧವಾದ ಹಾಲನ್ನು ಕರೆಯುತ್ತಿರುವ ಗೋವುಗಳೂ ಎಷ್ಟು ಭಾಗ್ಯ ಶಾಲಿಗಳೆಂಬುದನ್ನು ಕೇಳಬೇಕೆ ? ಕೈವಲ್ಯಾದಿಸಕಲಪುರುಷಾರ್ಥಪ್ರದ ನಾದ ಭಗವಂತನು, ಇತರರಿಂದ ತಾನು ಪಡೆದ ಉಪಕಾರಕ್ಕೆ ಯಾವ ಪ್ರ ತ್ಯುಪಕಾರವನ್ನು ಮಾಡುವನೆಂಬುದನ್ನು ಕೇಳಬೇಕೆ ? ಆ ಸಾಕ್ಷಾದ್ಭಗವಂತ ನನ್ನೇ ತಮ್ಮ ಮುದ್ದುಮಗುವೆಂದು ಯಾವಾಗಲೂ ಪ್ರೇಮದಿಂದ ಲಾಲಿ ಸುತ್ತಿರುವ ಗೋಪಸ್ತ್ರೀಯರನ್ನು, ಅಜ್ಞಾನಜನ್ಯವಾದ ಸಂಸಾರವೆಂಬುದು ಇನ್ನೆಂದೆಂದಿಗೂ ಕಟ್ಟಿಡಲಾರದು ಇತ್ತಲಾಗಿ ಗೋಪಾಲಕರೆಲ್ಲರೂ, ಪೂತ ನೆಯ ದಹನಕಾಲದಲ್ಲಿ ಚಿತೆಯಿಂದ ಹೊರಟ ಸುಗಂಧ ವಿಶಿಷ್ಟವಾದ ಹೊ ಗೆಯನ್ನು ನೋಡಿ, ಇದೇನಾಶ್ಚರ್ಯವೆಂದು ಆ ವಿಷಯವನ್ನೇ ಮಾತಾ ಡಿಕೊಳ್ಳುತ್ತ, ಊರಿಗೆ ಬಂದು ಸೇರಿದರು. ಅತ್ತಲಾಗಿ ಮಥುರೆಗೆ ಹೋಗಿ

ದ್ದ ನಂದಾದಿಗಳು, ಇಲ್ಲಿಗೆ ಬಂದಮೇಲೆ ಈ ಸಂಗತಿಯೆಲ್ಲವನ್ನೂ ಆಮೂಲಾಗ್ರವಾಗಿ ಕೇಳಿ, ಅಂತಹ ಭಯಂಕರರಾಕ್ಷಸಿಯ ಸಾವಿಗೂ, ಇನ್ನೂ ಕಣ್ಣುತೆರೆಯಲಾರದ ಸಣ್ಣಕೂಸು ಆವಳ ಕೈಯಿಂದ ಸಾಯದೆ ಬದುಕಿ ಬಂದುದಕ್ಕೂ ಕಾರಣವೇನೆಂದು ತಿಳಿಯದೆ ಆಶ್ಚರ್ಯಪಡುತಿದ್ದರು ನಂದನು ಆತ್ಯಾನಂದದಿಂದ ತನ್ನ ಮುದ್ದುಬಾಲಕನನ್ನೆತ್ತಿಕೊಂಡು, ಬಾರಿಬಾರಿಗೂ ಅವನ ತಲೆಯನ್ನಾಘ್ರಾಣಿಸಿ ಸಂತೋಷದಿಂದ ಮುತ್ತಿಕ್ಕುತ್ತಿದ್ದನು. ಓ ಪರೀಕ್ಷಿದ್ರಾಜಾ! ಪೂತನೆಗೆ ಮುಕ್ತಿಯನ್ನು ಕೊಟ್ಟ ಆ ಶ್ರೀಕೃಷ್ಣನ ಈ ಅದ್ಭುತಚರಿತ್ರವನ್ನು ಯಾವನು ಶ್ರದ್ಧೆಯಿಂದ ಕೇಳುವನೋ, ಅವನು ಉತ್ತಮಪುರುಷಾರ್ಥವನ್ನು ಹೊಂದುವನು ಇದು ಆರನೆಯ ಅಧ್ಯಾಯವು

---

## ಶಕಟಾಸುರಭಂಜನವು

"ಓ ರಾಜಾ! ಹೀಗೆಯೇ ಭಗವಂತನು ಲೋಕಕ್ಷೇಮಕರವಾಗಿಯೂ, ಆಶ್ಚರ್ಯಕರವಾಗಿಯೂ ಇರುವ ಇನ್ನೂ ಅನೇಕಕಾರ್ಯಗಳಿಂದ, ನಂದಗೋಕುಲದಲ್ಲಿರುವ ಗೋಪಾಲಕರಿಗೂ, ಗೋಪಸ್ತ್ರೀಯರಿಗೂ ಆನಂದವನ್ನುಂಟುಮಾಡುತ್ತ ನಂದನ ಮನೆಯಲ್ಲಿ ಬೆಳೆಯುತಿದ್ದನು." ಎಂದು ಹೇಳಿದ ಶುಕಮಹಾಮುನಿಯನ್ನು ಕುರಿತು, ತಿರುಗಿ ಪರೀಕ್ಷಿದ್ರಾಜನು ಪ್ರಶ್ನೆಮಾಡುವನು. "ಓ ಮಹರ್ಷೀ! ಆ ಭಗವಂತನು ಮತ್ಸ್ಯಕೂರ್ಮಾದ್ಯವತಾರಗಳಲ್ಲಿ ನಡೆಸಿದ ಕಾರ್ಯಗಳೆಲ್ಲವನ್ನೂ ಹಿಂದೆ ನಿನ್ನಿಂದಲೇ ನಾನು ಕೇಳಿದೆನು. ಅವೆಲ್ಲವೂ ಕರ್ಣಾಮೃತಪ್ರಾಯವಾಗಿ, ಕೇಳುವವರ ಮನಸ್ಸನ್ನು ಸಂತೋಷಗೊಳಿಸುವುವೆಂಬುದರಲ್ಲಿ ಸಂದೇಹವಿಲ್ಲ. ಈ ಶ್ರೀಕೃಷ್ಣಾವತಾರಚರಿತ್ರವಾದರೋ, ಮನಸ್ಸಿಗೆ ಮೇಲೆಮೇಲೆ ಉಲ್ಲಾಸವನ್ನು ಹೆಚ್ಚಿಸುವುದರೊಡನೆ ಇತರಸುಖಗಳಲ್ಲಿ ವಿರಕ್ತಿಯನ್ನೂ, ಶಬ್ದಾದಿವಿಷಯಗಳಲ್ಲಿ ಜಿಹಾಸೆಯನ್ನೂ ಹುಟ್ಟಿಸುವುದು. ಇದರಿಂದ ಅಂತಃಕರಣವು ಕಲ್ಮಷವನ್ನು ನೀಗಿ ಶುದ್ಧವಾಗುವುದು. ಭಗವಂತನಲ್ಲಿ ಭಕ್ತಿರೂಪವಾದ ಅನುರಾಗವೂ, ಭಗವದ್ಭಕ್ತರಲ್ಲಿ ಪ್ರೀತಿಯೂ ಹುಟ್ಟುವುದು. ಆದುದರಿಂದ ಲೋಕಮನೋಹರಗಳಾದ ಆ ಕೃಷ್ಣನ ವ್ಯಾಪಾರಗಳಲ್ಲಿ, ಒಂದನ್ನೂ ಬಿಡದೆ, ನನಗೆ ವಿವ

ದ್ಧರೂ, ಆ ಶ್ರೀಹರಿಯಲ್ಲಿ ಬದ್ಧವೈರವನ್ನಿಟ್ಟು, ಆ ಕೃಷ್ಣನನ್ನು ಕೊಲ್ಲಬೇಕೆಂಬ ಕ್ರೂರಬುದ್ಧಿಯಿಂದ, ಅವನಿಗೆ ಮೊಲೆಯೂಡಿಸುವುದಕ್ಕೆ ಬಂದಳಲ್ಲವೆ? ಇಷ್ಟುಮಾತ್ರದಿಂದಲೇ ಅವಳ ಪ್ರಾರಬ್ಧಪಾಪಗಳೆಲ್ಲವೂ ನೀಗಿ ಮುಕ್ತಿಯುಂಟಾಯಿತು ಇನ್ನು ಭಕ್ತಿಶ್ರದ್ಧೆಗಳಿಂದ ಆ ಪರಮಾತ್ಮನನ್ನು ಪಾಸನೆಮಾಡುತ್ತ, ಅವನಿಗೆ ಪ್ರಿಯವಾದ ಪತ್ರಪುಷ್ಪಾದಿಗಳನ್ನೇ ಅರ್ಪಿಸತಕ್ಕ ಭಕ್ತರಿಗೆ, ಯಾವ ಸದ್ಗತಿಯುಂಟಾಗುವುದೆಂಬುದನ್ನು ನೀನೇ ಊಹಿಸಿನೋಡು! ಭಗವದ್ಭಕ್ತರಾದ ಯೋಗಿಗಳಿಗೆ ಧ್ಯಾನಗೋಚರಗಳಾಗಿಯೂ, ಯಾವಾಗಲೂ ಅವರ ಹೃದಯಲ್ಲಿ ನೆಲೆಗೊಂಡಿರತಕ್ಕವುಗಳಾಗಿಯೂ, ಲೋಕಪೂಜ್ಯರಾದ ಬ್ರಹ್ಮರುದ್ರಾದಿ ದೇವತೆಗಳಿಗೂ ಪೂಜಾರ್ಹಗಳಾಗಿಯೂ ಇರುವ ತನ್ನ ಪಾದಾರವಿಂದಗಳಿಂದ ಶ್ರೀ ಕೃಷ್ಣನು, ಯಾವಳ ಎದೆಯನ್ನೊತ್ತಿ, ಕ್ಷಣಕಾಲದವರೆಗೆ ಅವಳ ಸ್ತನ್ಯಪಾನವನ್ನೂ ಮಾಡುತಿದ್ದನೋ, ಅಂತವಳಿಗೆ ಸದ್ಗತಿಯುಂಟಾಗುವುದೇನಾಶ್ಚರ್ಯವು ? ಪರಮಪಾಪಿನಿಯಾದ ಈ ರಾಕ್ಷಸಿಯೇ, ಆತನ ಕ್ಷಣಮಾತ್ರಸಂಬಂಧದಿಂದ ಹೀಗೆ, ಆ ಲೋಕನಾಥನ ಸಾನ್ನಿಧ್ಯವನ್ನು ಹೊಂದಿರುವಾಗ, ಯಾವಾಗಲೂ ಆ ಮುದ್ದುಕೃಷ್ಣನನ್ನು ತೊಡೆಯಮೇಲೆ ಮಲಗಿಸಿಕೊಂಡು, ಮೊಲೆಯೂಡಿಸುತ್ತಿರುವ ಯಶೋದೆ ಮೊದಲಾದ ಜನನಿಯರೂ, ಆ ಕೃಷ್ಣನಿಗಾಗಿ ದಿನದಿನವೂ ಸಮೃದ್ಧವಾದ ಹಾಲನ್ನು ಕರೆಯುತ್ತಿರುವ ಗೋವುಗಳೂ ಎಷ್ಟು ಭಾಗ್ಯಶಾಲಿಗಳೆಂಬುದನ್ನು ಕೇಳಬೇಕೆ ? ಕೈವಲ್ಯಾದಿಸಕಲಪುರುಷಾರ್ಥಪ್ರದನಾದ ಭಗವಂತನು, ಇತರರಿಂದ ತಾನು ಪಡೆದ ಉಪಕಾರಕ್ಕೆ ಯಾವ ಪ್ರತ್ಯುಪಕಾರವನ್ನು ಮಾಡುವನೆಂಬುದನ್ನು ಕೇಳಬೇಕೆ ? ಆ ಸಾಕ್ಷಾದ್ಭಗವಂತನನ್ನೇ ತಮ್ಮ ಮುದ್ದುಮಗುನೆಂದು ಯಾವಾಗಲೂ ಪ್ರೇಮದಿಂದ ಲಾಲಿಸುತ್ತಿರುವ ಗೋಪಸ್ತ್ರೀಯರನ್ನು, ಅಜ್ಞಾನಜನ್ಯವಾದ ಸಂಸಾರವೆಂಬುದು ಇನ್ನೆಂದೆಂದಿಗೂ ಕಟ್ಟಿಡಲಾರದು. ಇತ್ತಲಾಗಿ ಗೋಪಾಲಕರೆಲ್ಲರೂ, ಪೂತನೆಯ ದಹನಕಾಲದಲ್ಲಿ ಚಿತೆಯಿಂದ ಹೊರಟ ಸುಗಂಧ ವಿಶಿಷ್ಟವಾದ ಹೊಗೆಯನ್ನು ನೋಡಿ, ಇದೇನಾಶ್ಚರ್ಯವೆಂದು ಆ ವಿಷಯವನ್ನೇ ಮಾತಾಡಿಕೊಳ್ಳುತ್ತ, ಊರಿಗೆ ಬಂದು ಸೇರಿದರು. ಅತ್ತಲಾಗಿ ಮಥುರೆಗೆ ಹೋಗಿ

ದ್ದ ನಂದಾದಿಗಳು, ಇಲ್ಲಿಗೆ ಬಂದಮೇಲೆ ಈ ಸಂಗತಿಯೆಲ್ಲವನ್ನೂ ಆಮೂಲಾಗ್ರವಾಗಿ ಕೇಳಿ, ಅಂತಹ ಭಯಂಕರರಾಕ್ಷಸಿಯ ಸಾವಿಗೂ, ಇನ್ನೂ ಕಣ್ಣುತೆರೆಯಲಾರದ ಸಣ್ಣಕೂಸು ಆವಳ ಕೈಯಿಂದ ಸಾಯದೆ ಬದುಕಿಬಂದುದಕ್ಕೂ ಕಾರಣವೇನೆಂದು ತಿಳಿಯದೆ ಆಶ್ಚರ್ಯಪಡುತಿದ್ದರು ನಂದನು ಅತ್ಯಾನಂದದಿಂದ ತನ್ನ ಮುದ್ದುಬಾಲಕನನ್ನೆತ್ತಿಕೊಂಡು, ಬಾರಿಬಾರಿಗೂ ಅವನ ತಲೆಯನ್ನಾಘ್ರಾಣಿಸಿ ಸಂತೋಷದಿಂದ ಮುತ್ತಿಕ್ಕುತ್ತಿದ್ದನು. ಓ ಪರೀಕ್ಷಿದ್ರಾಜಾ! ಪೂತನೆಗೆ ಮುಕ್ತಿಯನ್ನು ಕೊಟ್ಟ ಆ ಶ್ರೀಕೃಷ್ಣನ ಈ ಅದ್ಭುತಚರಿತ್ರವನ್ನು ಯಾವನು ಶ್ರದ್ಧೆಯಿಂದ ಕೇಳುವನೋ, ಅವನು ಉತ್ತಮಪುರುಷಾರ್ಥವನ್ನು ಹೊಂದುವನು. ಇದು ಆರನೆಯ ಅಧ್ಯಾಯವು

---

## ಶಕಟಾಸುರಭಂಜನವು

"ಓ ರಾಜಾ! ಹೀಗೆಯೇ ಭಗವಂತನು ಲೋಕಕ್ಷೇಮಕರವಾಗಿಯೂ, ಆಶ್ಚರ್ಯಕರವಾಗಿಯೂ ಇರುವ ಇನ್ನೂ ಅನೇಕಕಾರ್ಯಗಳಿಂದ, ನಂದಗೋಕುಲದಲ್ಲಿರುವ ಗೋಪಾಲಕರಿಗೂ, ಗೋಪಸ್ತ್ರೀಯರಿಗೂ ಆನಂದವನ್ನುಂಟುಮಾಡುತ್ತ ನಂದನ ಮನೆಯಲ್ಲಿ ಬಳೆಯುತಿದ್ದನು." ಎಂದು ಹೇಳಿದ ಶುಕಮಹಾಮುನಿಯನ್ನು ಕುರಿತು, ತಿರುಗಿ ಪರೀಕ್ಷಿದ್ರಾಜನು ಪ್ರಶ್ನೆಮಾಡುವನು. "ಓ ಮಹರ್ಷೀ! ಆ ಭಗವಂತನು ಮತ್ಸ್ಯಕೂರ್ಮಾದ್ಯವತಾರಗಳಲ್ಲಿ ನಡೆಸಿದ ಕಾರ್ಯಗಳೆಲ್ಲವನ್ನೂ ಹಿಂದೆ ನಿನ್ನಿಂದಲೇ ನಾನು ಕೇಳಿದೆನು. ಅವೆಲ್ಲವೂ ಕರ್ಣಾಮೃತಪ್ರಾಯವಾಗಿ, ಕೇಳುವವರ ಮನಸ್ಸನ್ನು ಸಂತೋಷಗೊಳಿಸುವುವೆಂಬುದರಲ್ಲಿ ಸಂದೇಹವಿಲ್ಲ. ಈ ಶ್ರೀಕೃಷ್ಣಾವತಾರಚರಿತ್ರವಾದರೋ, ಮನಸ್ಸಿಗೆ ಮೇಲೆಮೇಲೆ ಉಲ್ಲಾಸವನ್ನು ಹೆಚ್ಚಿಸುವುದರೊಡನೆ ಇತರಸುಖಗಳಲ್ಲಿ ವಿರಕ್ತಿಯನ್ನೂ, ಶಬ್ದಾದಿವಿಷಯಗಳಲ್ಲಿ ಜಿಹಾಸೆಯನ್ನೂ ಹುಟ್ಟಿಸುವುದು. ಇದರಿಂದ ಅಂತಃಕರಣವು ಕಲ್ಮಷವನ್ನು ನೀಗಿ ಶುದ್ಧವಾಗುವುದು. ಭಗವಂತನಲ್ಲಿ ಭಕ್ತಿರೂಪವಾದ ಅನುರಾಗವೂ, ಭಗವದ್ಭಕ್ತರಲ್ಲಿ ಪ್ರೀತಿಯೂ ಹುಟ್ಟುವುದು. ಆದುದರಿಂದ ಲೋಕಮನೋಹರಗಳಾದ ಆ ಕೃಷ್ಣನ ವ್ಯಾಪಾರಗಳಲ್ಲಿ, ಒಂದನ್ನೂ ಬಿಡದೆ, ನನಗೆ ವಿವ

ರವಾಗಿ ತಿಳಿಸಬೇಕೆಂದು ಪ್ರಾರ್ಥಿಸುವೆನು. ಆ ಭಗವಂತನು ಭೂಲೋಕದಲ್ಲಿ ಹುಟ್ಟಿ, ಮನುಷ್ಯಸ್ವಭಾವವನ್ನನುಕರಿಸುವಾಗ, ನಡೆಸಿದ ಅದ್ಭುತಕಾರ್ಯಗಳೆಲ್ಲವನ್ನೂ ಕೇಳಬೇಕೆಂಬ ಕುತೂಹಲವು ನನ್ನನ್ನು ಬಹಳವಾಗಿ ಉತ್ಸಾಹಗೊಳಿಸುತ್ತಿರುವುದು. ಆ ಚರಿತ್ರಗಳಲ್ಲಿ. ಯಾವಯಾವುದನ್ನು ನೀನು ನನಗೆ ತಿಳಿಸಬಹುದೋ ಅವೆಲ್ಲವನ್ನೂ ತಿಳಿಸಬೇಕು" ಎಂದನು. ಅದಕ್ಕಾ ಶುಕಮುನಿಯು "ಓ ರಾಜಾ! ಕೇಳು! ಶ್ರೀಕೃಷ್ಣನಿಗೆ ಕ್ರಮಕ್ರಮವಾಗಿ ದಿನಗಳು ಕಳೆದು, ಅಂಬೆಗಾಲಿಂದ ನಡೆಯುವ ಶಕ್ತಿಯುಂಟಾಯಿತು. ಸಣ್ಣಮಕ್ಕಳು ಮೊದಲು ಹೊಸ್ತಿಲನ್ನು ದಾಟುವಾಗ, ಅದಕ್ಕಾಗಿ ಮನೆಯಲ್ಲಿ ಹೆಂಗಸರು ಹಬ್ಬವನ್ನು ಮಾಡುವ ಪದ್ಧತಿಯುಂಟು. ಅದರಂತೆಯೇ ಶ್ರೀಕೃಷ್ಣನು ಮೊದಲು ಹೊಸ್ತಿಲನ್ನು ದಾಟಿ ಹೊರಗೆ ತಿರುಗಾಡುವ ಪ್ರಯತ್ನದಲ್ಲಿರುವುದನ್ನು ನೋಡಿ, ಯಶೋದೆಯು, ಆ ಮಹೋತ್ಸವವನ್ನು ಕೊಂಡಾಡುವುದಕ್ಕಾಗಿ, ಒಮ್ಮೆ ಆ ಶಿಶುವಿನ ಜನ್ಮನಕ್ಷತ್ರ (ರೋಹಿಣೀನಕ್ಷತ್ರ) ದೊಡಗೂಡಿದ ಶುಭದಿನದಲ್ಲಿ, ಸುಮಂಗಲಿಯರನ್ನು ಕರೆದು, ಗೀತವಾದ್ಯಗಳೊಡನೆ ಆ ಕೃಷ್ಣನಿಗೆ ಮಂಗಳಸ್ನಾನವನ್ನು ಮಾಡಿಸಿದಳು. ಅನೇಕಬ್ರಾಹ್ಮಣರನ್ನು ಕರೆಸಿ, ಅವರನ್ನು ಅನ್ನದಾನ, ವಸ್ತ್ರದಾನ ಗೋದಾನಾದಿಗಳಿಂದಲೂ, ಪುಷ್ಪಚಂದನಾದಿಗಳಿಂದಲೂ, ಅವರವರು ಕೋರಿದ ಇತರವಸ್ತುಗಳಿಂದಲೂ ಸಂತೋಷಪಡಿಸಿ, ಅವರಿಂದ ಸ್ವಸ್ತಿವಾಚನವನ್ನು ಮಾಡಿಸಿದಳು. ಈ ಉತ್ಸವವೆಲ್ಲವೂ ನಡೆದಮೇಲೆ, ಆ ಶಿಶುವಿಗೆ ನಿದ್ರೆಬರುವಹಾಗೆ ತೋರಲು, ಹಾಸಿಗೆಯಮೇಲೆ ಮಲಗಿಸಿಟ್ಟು, ತಾನು ಇತರಕಾರ್ಯಗಳನ್ನು ನೋಡುವುದಕ್ಕಾಗಿ ಹೋದಳು. ಈ ಮಹೋತ್ಸವಕಾಲದಲ್ಲಿ ಮನೆಗೆ ಬಂದ ಮುತ್ತೈದೆಯರನ್ನಾದರಿಸುವ ಕಾರ್ಯದಲ್ಲಿ ಆ ಯಶೋದೆಗೆ, ಬಹಳ ಹೊತ್ತಿನವರೆಗೆ ಮಗುವಿನ ಸ್ಮರಣೆಯೇ ಇಲ್ಲದೆಹೋಯಿತು. ಅವಳು ಆ ಉತ್ಸವಸಂಭ್ರಮದಲ್ಲಿಯೇ ಇರುತಿದ್ದಳು. ಇತ್ತಲಾಗಿ ಹಾಸಿಗೆಯಲ್ಲಿ ಮಲಗಿದ್ದ ಮಗುವು ಹಸಿವಿನಿಂದ, ಹಾಲು ಕುಡಿಯುವುದಕ್ಕಾಗಿ ಅಳತೊಡಗಿತು. ಈ ಧ್ವನಿಯೂ ಅವಳ ಕಿವಿಗೆ ಬೀಳಲಿಲ್ಲ. ಶಿಶುವು ಕ್ರಮಕ್ರಮವಾಗಿ ತನ್ನ ರೋದನವನ್ನು ಬಲಪಡಿಸಿ, ಕೈಕಾಲುಗಳನ್ನೊದರುವುದ



೧ — ಶಕಟಾಸುರಭಂಜನವು

ಕ್ಕಾರಂಭಿಸಿತು. ಈ ಸಮಯಕ್ಕೆ ಸರಿಯಾಗಿ, ಕಂಸನಿಂದ ಪ್ರೇರಿತನಾದ ಒಬ್ಬಾನೊಬ್ಬ ರಾಕ್ಷಸನು, ಬಂಡಿಯ ಆಕಾರದಲ್ಲಿ ಆಕಾಶದಿಂದ ಕೆಳಕ್ಕಿಳಿದು, ತನ್ನ ಚಕ್ರಗಳಿಂದ ಆ ಶಿಶುವನ್ನು ಅರೆದು ಕೊಲ್ಲಬೇಕೆಂಬ ಉದ್ದೇಶದಿಂದ ಮುಂದೆ ಬಂದನು. ಮಲಗಿದ್ದ ಕೃಷ್ಣನು ತನ್ನ ಕೈಕಾಲುಗಳನ್ನೊದರುತಿದ್ದಾಗ, ಎಳಚಿಗುರಿನಂತೆ ಕೋಮಲವಾದ ಅವನ ಪಾದವು ತಗುಲಿದೊಡನೆ, ಆ ಬಂಡಿಯು ಛಿನ್ನಭಿನ್ನವಾಗಿ ಮುರಿದು ಚೂರ್ಣವಾಯಿತು. ಆ ಬಂಡಿಯಲ್ಲಿ ನಾನಾವಿಧರಸಗಳಿಂದ ತುಂಬಿದ್ದ, ಕಂಚು, ಹಿತ್ತಾಳೆ,ಮೊದಲಾದ ಲೋಹಪಾತ್ರಗಳೆಲ್ಲವೂ ಒಡೆದುಬಿದ್ದುವು. ಆ ಬಂಡಿಯ ಅಚ್ಚು, ನೊಗ, ಮೂತಿ, ಚಕ್ರ, ಇವೆಲ್ಲವೂ ತುಂಡುತುಂಡಾಗಿ ಕಳಚಿಬಿದ್ದುವು. ಆ ಬಂಡಿಯು ಮುರಿದು ಬೀಳುವುದರಿಂದಾದ ಮಹಾಧ್ವನಿಯು ಗೋಕುಲವೆಲ್ಲವನ್ನೂ ವ್ಯಾಪಿಸಿತು. ಆಗ ಯಶೋದೆ ಮೊದಲಾದವರಿಗೆ ಮಗುವಿನ ನೆನಪುಂಟಾಯಿತು. ಆ ಉತ್ಸವಕ್ಕಾಗಿ ಬಂದಿದ್ದ ಗೋಪಾಂಗನೆಯರೂ, ಯಶೋದೆ ಮುಂತಾದವರೂ, ಭಯಸಂಭ್ರಮಗಳಿಂದ ಕೃಷ್ಣನು ಮಲಗಿದ್ದಕಡೆಗೆ ಬಂದು ನೋಡಿದರು. ಅಲ್ಲಿ ಮಗುವಿನ ಕಾಲಿನ ಕೆಳಗೆ ಒಂದು ದೊಡ್ಡಬಂಡಿಯು ಚೂರುಚೂರಾಗಿ ಮುರಿದುಬಿದ್ದಿರಲು. “ಅಬ್ಬಾ! ಈ ಬಂಡಿಯು ಇಲ್ಲಿಗೆ ಹೇಗೆ ಬಂದಿತು! ಇದು ಹೇಗೆ ಮುರಿಯಿತು” ಎಂದು ಎಲ್ಲರೂ ಆಶ್ಚರ್ಯದಿಂದ ಬೆರಗಾಗಿದ್ದರು. ಮಗುವಿಗೆ ಅನರ್ಥವೇನಾದರೂ ಆಗಿರುವುದೋ ಎಂಬ ಭಯದಿಂದಲೂ, ದುಃಖದಿಂದಲೂ,ನಿಜಸ್ಥಿತಿಯನ್ನು ತಿಳಿಯದೆ,ಅವರು ಕಳವಳಿಸುತ್ತಿದ್ದಾಗ,ಸಮೀಪದಲ್ಲಿದ್ದ ಕೆಲವು ಬಾಲಕರು“ಅಮ್ಮಾ! ಈ ಕೃಷ್ಣನು ಅಳುತ್ತ ಕೈಕಾಲುಗಳನ್ನೊದರುತಿದ್ದನು. ಅವನ ಕಾಲಿಗೆ ತಗುಲಿ ಈ ಬಂಡಿಯು ಮುರಿದಿರಬೇಕು. ಇದರಲ್ಲಿ ಸಂದೇಹವಿಲ್ಲ” ಎಂದರು. ಬಾಲರೂಪಿಯಾದ ಭಗವಂತನ ಅಪ್ರಮೇಯಪರಾಕ್ರಮವನ್ನು ತಿಳಿಯದ, ಆ ಗೋಪಸ್ತ್ರೀಯರಿಗೆ ಅವರ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ! ಆ ಬಾಲಕರು ಹೇಳಿದುದು ಕೇವಲಹುಡುಗುತನದ ಮಾತೆಂದು ತಿಳಿದು ಲಕ್ಷ್ಯಮಾಡದಿದ್ದರು. ಕೊನೆಗೆ ಯಶೋದೆಯು, ಹಸಿವಿನಿಂದ ಬಿಕ್ಕಿಬಿಕ್ಕಿ ಅಳುತಿದ್ದ ಆ ಶಿಶುವನ್ನು ಕೈಗೆತ್ತಿಕೊಂಡು, ಯಾವುದೋ

ಬಾಲಗ್ರಹದ ಚೇಷ್ಟೆಯಿಂದ ಹೀಗಾಗಿರಬಹುದೆಂದೆಣಿಸಿ, ಬ್ರಾಹ್ಮಣರನ್ನು ಕರೆಸಿ, ಸ್ವಸ್ತಿವಾಚನವನ್ನು ಮಾಡಿಸಿ, ಆಮೇಲೆ ಮಗುವಿಗೆ ಮೊಲೆಯೂಡಿಸಿದಳು. ಇಷ್ಟರಲ್ಲಿ ನಂದಾದಿಗೋಪಾಲಕರೂ ಬಂದು ನೋಡಿ, ತಮ್ಮ ಮನೆಯಲ್ಲಿ ಯಾವುದೋ ದುಷ್ಟಗ್ರಹವು ಸೇರಿ ಆಗಾಗ ಈ ಚೇಷ್ಟೆಯನ್ನು ಮಾಡುತ್ತಿರಬಹುದೆಂದು ಭ್ರಮಿಸಿ, ಅನೇಕಬ್ರಾಹ್ಮಣರನ್ನು ಕರೆದು ಹೋಮಪುರಸ್ಸರವಾಗಿ, ಅಷ್ಟದಿಗ್ಬಲಿಗಳೊಡನೆ ಗೃಹಶಾಂತಿಯನ್ನು ಮಾಡಿಸಿದರು. ಮೊಸರು, ಅಕ್ಷತೆ, ದರ್ಭೆ, ತೀರ್ಥ, ಮುಂತಾದ ಪೂಜಾದ್ರವ್ಯಗಳಿಂದ ಗೃಹದೇವತೆಗಳನ್ನು ಪೂಜಿಸಿದರು. ಅಸೂಯೆ, ಅನೃತ, ದಂಭ, ಈರ್ಷ್ಯೆ, ಹಿಂಸೆ, ಅಹಂಕಾರ, ಮೊದಲಾದ ದುರ್ಗುಣಗಳಿಲ್ಲದ ಸತ್ಯಶೀಲರಾದ ಬ್ರಾಹ್ಮಣರ ಆಶೀರ್ವಚನಗಳು, ಎಂದಿಗೂ ವಿಫಲವಾಗಲಾರವೆಂಬ ದೃಢವಿಶ್ವಾಸದಿಂದ, ನಂದನು, ಕೃಷ್ಣನನ್ನು ಕರೆತಂದು, ಬ್ರಾಹ್ಮಣರ ಮೂಲಕವಾಗಿ ಋಗ್ಯಜುಸ್ಸಾಮಮಂತ್ರಗಳೊಡನೆ, ಓಷಧಿಗಳಿಂದಲೂ ಪವಿತ್ರತೀರ್ಥದಿಂದಲೂ ಪ್ರೋಕ್ಷಣಮಾಡಿಸಿದನು. ಸ್ವಸ್ತಿವಾಚನಪೂರ್ವಕವಾಗಿ ಶಾಂತಿಹೋಮವನ್ನೂ ಮಾಡಿಸಿದನು. ಬ್ರಾಹ್ಮಣರಿಗೆ ಮೃಷ್ಟಾನ್ನಸಂತರ್ಪಣೆಯನ್ನು ಮಾಡಿಸಿದನು. ಕೆಲವರಿಗೆ ವಸ್ತ್ರಪುಷ್ಪಾಭರಣಗಳಿಂದಲಂಕೃತವಾದ ಉತ್ತಮಜಾತಿಯ ಗೋವುಗಳನ್ನು ದಾನಮಾಡಿದನು. ತನ್ನ ಪುತ್ರನ ಶ್ರೇಯಸ್ಸಿಗಾಗಿ ನಡೆಸಬೇಕಾದ ದಾನಗಳೆಲ್ಲವನ್ನೂ ನಡೆಸಿದನು. ಆ ಬ್ರಾಹ್ಮಣರೂಕೂಡ, ಅವನ ಶ್ರದ್ಧಾಭಕ್ತಿಗಳಿಗೆ ಸಂತೋಷಿಸಿ ಆಶೀರ್ವದಿಸಿ ಹೋದರು. ಓ ಪರೀಕ್ಷಿದ್ರಾಜಾ! ಮಂತ್ರಜ್ಞರಾಗಿಯೂ, ಯೋಗ್ಯರಾಗಿಯೂ ಇರುವ ಇಂತಹ ಬ್ರಾಹ್ಮಣರ ಆಶೀರ್ವಾದಗಳು ಎಂದಿಗೂ ವಿಫಲವಾಗಲಾರವೆಂದು ತಿಳಿ!

### ತೃಣಾವರ್ತನಿರಾಕರಣವು

ಓ ರಾಜೇಂದ್ರಾ! ಒಮ್ಮೆ ಯಶೋದೆಯು ಕೃಷ್ಣನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಲಾಲಿಸಿ ಮುದ್ದಾಡುತ್ತಿರುವಾಗ, ಆ ಮಗುವು

*ಅವಳ ತೊಡೆಗೆ ಬಹಳಭಾರವಾಗಿ ತೋರಿತು. ಆದರಿಂದ ಅವಳು ಮನಸ್ಸಿನಲ್ಲಿ ಆಶ್ಚರ್ಯಗೊಂಡು, ಭಗವಂತನನ್ನು ಧ್ಯಾನಿಸುತ್ತ, ಆ ಶಿಶುವನ್ನು ಕೆಳಗೆ ಮಲಗಿಸಿ, ತಾನು ಬೇರೆ ಕಾರ್ಯಗಳನ್ನು ನೋಡುತಿದ್ದಳು ಇದೇ ಸಮಯದಲ್ಲಿ ಕಂಸನಿಂದ ಪ್ರೇರಿತನಾದ ತೃಣಾವರ್ತನೆಂಬ ರಾಕ್ಷಸನೊಬ್ಬನು, ಸುಳಿಗಾಳಿಯ ರೂಪದಿಂದ ಬಂದು, ಈ ಮಗುವನ್ನು ತನ್ನ ವೇಗದಿಂದ ತರಗೆಲೆಯಂತೆ ಆಕಾಶಕ್ಕೆ ಹಾರಿಸಿಕೊಂಡುಹೋದನು ರಾಜಾ! ಆ ಸುಳಿಗಾಳಿಯ ಆರ್ಭಟವನ್ನು ಕೇಳಬೇಕೆ? ಭಯಂಕರವಾದ ಆ ಗಾಳಿಯು, ಗೋಕುಲದ ಎಲ್ಲಾ ಭಾಗವನ್ನೂ ವ್ಯಾಪಿಸಿತು! ಒಂದುಮುಹೂರ್ತಕಾಲದವರೆಗೆ ಎಲ್ಲೆಲ್ಲಿಯೂ ಧೂಳಿನಿಂದ ಕತ್ತಲೆಕವಿದು, ಯಾವ ಪ್ರಾಣಿಗೂ ಕಣ್ಣು ಕಾಣದಂತಾಯಿತು ಯಶೋದೆಯು ಈ ಆರ್ಭಟಕ್ಕೆ ಭಯಪಟ್ಟು, ಮಗುವನ್ನೆತ್ತಿಕೊಳ್ಳುವುದಕ್ಕಾಗಿ ಬಂದು ನೋಡುವಾಗ, ಅಲ್ಲಿ ಮಗುವನ್ನು ಕಾಣಲಿಲ್ಲ! ಆಗಿನ ಗಾಢಾಂಧಕಾರದಲ್ಲಿ ಚೆನ್ನಾಗಿ ಹುಡುಕಿನೋಡುವುದಕ್ಕೂ ಅವಕಾಶವಾಗಲಿಲ್ಲ! ಆ ಸುಳಿಗಾಳಿಯಿಂದ ಮೇಲೆದ್ದ ಮಣ್ಣು, ಆಕಾಶದಲ್ಲಿಯೂ, ಬಕ್ಕಪಕ್ಕಗಳಲ್ಲಿಯೂ ದಟ್ಟವಾಗಿ ಕವಿದಿದ್ದುದರಿಂದ, ಒಬ್ಬರ ಮುಖವು ಮತ್ತೊಬ್ಬರಿಗೆ ಕಾಣುತ್ತಿರಲಿಲ್ಲ ಇನ್ನೇಕೆ? ತಮ್ಮ ಸ್ಥಿತಿಯನ್ನು ತಾವು ತಿಳಿಯುವುದೇ ಕಷ್ಟವಾಯಿತು ಆಗ ಯಶೋದೆಯ ಮನಸ್ಸಿನ ಭಯವನ್ನೂ, ಕಳಕಳವನ್ನೂ ಕೇಳಬೇಕೆ? ದೈನ್ಯದಿಂದ ಗಟ್ಟಿಯಾಗಿ ರೋದಿಸತೊಡಗಿದಳು! ದುಃಖದಿಂದ ಮೈಮರೆತು ಅಲ್ಲಿಯೇ ಪ್ರಜ್ಞೆತಪ್ಪಿ ಬಿದ್ದಳು! ಕರುವನ್ನು ಕಾಣದ ಹಸುವಿನಂತೆ ತತ್ತಳಿಸಿ ಕೊರಗುತಿದ್ದಳು. ಇವಳ ರೋದನಧ್ವನಿಯನ್ನು ಕೇಳಿ, ಅಲ್ಲಲ್ಲಿದ್ದ ಇತರಗೋಪಸ್ತ್ರೀಯರೂ ಬೆಚ್ಚರಬಿದ್ದು ಓಡಿಬಂದರು. ಎಲ್ಲರೂ ದುಃಖದಿಂದ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತ, "ಹಾ ವತ್ಸಾ! ಎಲ್ಲಿ ಹೋದೆ" ಎಂದು ಒಂದೇ ಕೂಗಾಗಿ ಅಳತೊಡಗಿದ

* ತೃಣಾವರ್ತನೆಂಬ ರಾಕ್ಷಸನು ಬರುವನೆಂಬುದನ್ನು ತಿಳಿದೇ, ಕೃಷ್ಣನು, ಅವನನ್ನು ಕೊಲ್ಲುವುದಕ್ಕಾಗಿಯೂ, ಅವನಿಂದ ತನ್ನ ತಾಯಿಗೆ ಅಪಾಯವಿಲ್ಲದಂತೆ ತಪ್ಪಿಸುವುದಕ್ಕಾಗಿಯೂ, ತನ್ನ ದೇಹಭಾರವನ್ನು ಹೆಚ್ಚಿಸಿಕೊಂಡು, ತನ್ನನ್ನು ತಾಯಿಯು ಕೆಳಗೆ ಬಿಟ್ಟುಬಿಡುವಂತೆ ಮಾಡಿದನು.

ರು ಆ ಧೂಳಿಯು ತಗ್ಗುವಷ್ಟರೊಳಗಾಗಿ, ತೃಣಾವರ್ತನು, ಶ್ರೀ ಕೃಷ್ಣ
ನನ್ನು ಮಹಾಪ್ರಯತ್ನದಿಂದ ಅಂತರಿಕ್ಷದಲ್ಲಿ ಬಹಳದೂರಕ್ಕೆ ಎತ್ತಿಕೊಂ
ಡು ಹೋಗಿದ್ದನು. ಕೊನೆಕೊನೆಗೆ ಅವನಿಗೆ ಆ ಕೃಷ್ಣನ ಭಾರವನ್ನು ತಡೆ
ಯಲು ಸಾಧ್ಯವಿಲ್ಲದೆ, ಅವನ ವೇಗವು ತಗ್ಗಿತು, ಮುಂದೆ ಹೋಗುವುದ
ಕ್ಕೆ ಶಕ್ತಿಯಿಲ್ಲದೆ, ಅಲ್ಲಿಯೇ ತೂಗಾಡುತಿದ್ದನು. ತನಗಿಂತಲೂ ಆ ಶಿಶುವು
ಭಾರವಾಗಿದ್ದುದನ್ನು ನೋಡಿ ಆಶ್ಚರ್ಯದಿಂದ ತನ್ನಲ್ಲಿ ತಾನು. "ಅಹಾ! ಇ
ದು ಸಾಮಾನ್ಯಶಿಶುವಲ್ಲ! ಇದೊಂದು ದೊಡ್ಡ ಕಲ್ಲುಗುಂಡಾಗಿರಬೇಕು"
ಎಂದು ತಿಳಿದು,ಕೆಳಗೆ ಬಿಡುವುದಕ್ಕೆ ಯತ್ನಿಸಿದನು. ಇಷ್ಟರಲ್ಲಿ ಕೃಷ್ಣನು
ಆ ರಾಕ್ಷಸನ ಕಂಠಸ್ಥಾನವನ್ನು ದೃಢವಾಗಿ ಹಿಡಿದುಬಿಟ್ಟುದರಿಂದ, ಆ ರಾಕ್ಷ
ಸನಿಗೆ ತಾನು ಶಿಶುವಿನ ಕೈಯಿಂದ ಬಿಡಿಸಿಕೊಳ್ಳುವುದೇ ಅಸಾಧ್ಯವಾಯಿತು.
ಕೊನೆಗೆ ಆ ರಾಕ್ಷಸನಿಗೆ ಉಸಿರಾಡುವುದಕ್ಕೂ ಅವಕಾಶವಿಲ್ಲದಂತಾಗಿ, ಅವನ
ಅಂಗ ವ್ಯಾಪಾರವೆಲ್ಲವೂ ಅಡಗಿಹೋಯಿತು ಕಣ್ಣಾಲಿಗಳು ಹೊರಕ್ಕೆ ಕಿತ್ತು
ಬಂದುವು. ಕೂಗಿಕೊಳ್ಳುವುದಕ್ಕೂ ಅವಕಾಶವಿಲ್ಲದೆ, ಕಂಠಧ್ವನಿಯು
ಅಡಗಿಹೋಯಿತು. ಗತಪ್ರಾಣನಾಗಿ ಆ ಶಿಶುವಿನೊಡನೆ ಕೆಳಗೆಬಿದ್ದನು. ಅವ
ನು ಅಂತರಿಕ್ಷದಿಂದ ಗೋಕುಲದಲ್ಲಿ ಬೀಳುವಾಗ,ಒಂದಾನೊಂದು ಕಲ್ಲುಬಂಡೆಗೆ
ತಗಲಿ, ಅವನ ಅವಯವಗಳೆಲ್ಲವೂ ಛಿನ್ನಭಿನ್ನವಾದುವು. ರುದ್ರನಿಂದ
ಹತನಾದ ತ್ರಿಪುರನಂತೆ, ಭಯಂಕರಸ್ವರೂಪದಿಂದ ಕೆಳಗೆ ಬಿದ್ದನು. ಆ ರಾ
ಕ್ಷಸಾಕೃತಿಯನ್ನು ನೋಡಿದಾಗ,ಅಲ್ಲಿ ಕೃಷ್ಣನನ್ನು ಕಾಣದೆ ಅಳುತಿದ್ದ ಗೋ
ಪಸ್ತ್ರೀಯರೆಲ್ಲರಿಗೂ ಅತ್ಯಾಶ್ಚರ್ಯವೂ, ಭಯವೂ ಉಂಟಾಯಿತು. ಒಡನೆ
ಯೇ ಕೆಲವು ಸ್ತ್ರೀಯರು, ಧೈರ್ಯದಿಂದ ಮುಂದೆ ಹೋಗಿ,ಆ ರಾಕ್ಷಸನ ಎದೆಯ
ಮೇಲೆ ನಲಿದಾಡುತಿದ್ದ ಕೃಷ್ಣನನ್ನು ಎತ್ತಿಕೊಂಡು ಬಂದು, ತಾಯಿ
ಯ ವಶಕ್ಕೆ ಒಪ್ಪಿಸಿದರು.ಮೃತ್ಯುವಿನ ಬಾಯಿಂದ ತಪ್ಪಿಬಂದಂತೆ, ರಾಕ್ಷಸನ
ಕೈಯಿಂದ ಬದುಕಿಬಂದ ಆ ಶಿಶುವನ್ನು ಕಂಡು, ನಂದಾದಿಗೋ
ಪಾಲಕರೆಲ್ಲರೂ ಪರಮಾನಂದಭರಿತರಾಗಿ ತಮ್ಮೊಳಗೆ ತಾವು ಹೀಗೆಂದು
ಹೇಳುವರು "ಅಹಾ! ಈ ಘೋರರಾಕ್ಷಸನ ಕೈಗೆ ಸಿಕ್ಕಿಯೂ, ಈ ಶಿಶುವು
ಬದುಕಿ ಬಂದುದು ಪರಮಾಶ್ಚರ್ಯವು! ಅಥವಾ ಲೋಕದಲ್ಲಿ ಘಾತುಕರು

ತಮ್ಮ ಪಾಪದಿಂದಲೇ ತಾವು ಕೊಲ್ಲಲ್ಪಡುವರು. ಸಾಧುಗಳನ್ನಾದರೋ ಅವರ ಸುಸ್ವಭಾವವೇ ಅವರನ್ನು ಮಹಾಭಯದಿಂದ ತಪ್ಪಿಸುವುದು. ಮುಖ್ಯವಾಗಿ ನಾವು ಪೂರ್ವಜನ್ಮದಲ್ಲಿ ಯಾವುದೋ ದೊಡ್ಡ ತಪಸ್ಸನ್ನೋ, ಭಗವದುಪಾಸನವನ್ನೋ, ದಾನಧರ್ಮಗಳನ್ನೋ ನಡೆಸಿರಬೇಕು ! ಅದರ ಫಲದಿಂದಲೇ ನಮಗೆ ಈ ಬಾಲಕನನ್ನು ತಿರುಗಿ ನೋಡುವಂತಾಯಿತು ಹಾಗಿಲ್ಲದಿದ್ದರೆ ಮಾರಿಯ ಬಾಯಿಗೆ ಸಿಕ್ಕಿಬಿದ್ದಿದ್ದ ಈ ಮುದ್ದುಮಗುವು, ತಿರುಗಿ ಬದುಕಿಬರುವುದೆಂದರೇನು ?" ಎಂದು ನಾನಾವಿಧವಾಗಿ ಮಾತಾಡಿಕೊಳ್ಳುತಿದ್ದರು ಇದರಂತೆಯೇ ಆ ಕೃಷ್ಣನಿಗೆ ಆಗಾಗ ಸಂಭವಿಸುತಿದ್ದ ಇನ್ನೂ ಅನೇಕವಿಧವಾದ ಅನರ್ಥಗಳನ್ನೂ, ಕೃಷ್ಣನ ಆಶ್ಚರ್ಯವ್ಯಾಪಾರಗಳನ್ನೂ ನೋಡಿ, ನಂದಗೋಪನು, ವಸುದೇವನು ಮೊದಲೇ ಈ ವಿಚಾರವನ್ನು ತನಗೆ ಸೂಚಿಸಿದ್ದುದಕ್ಕಾಗಿ ಅವನ ಮಹಿಮೆಯನ್ನು ಮನಸ್ಸಿನಲ್ಲಿ ಕೊಂಡಾಡುತ್ತ ಆಶ್ಚರ್ಯಮಗ್ನನಾಗಿದ್ದನು.

{ ಶ್ರೀ ಕೃಷ್ಣನು ಸ್ತನ್ಯಪಾನಮಾಡುತ್ತಿರುವಾಗ, ಆಕಳಿಸುವನೆವದಿಂದ ಯಶೋದೆಗೆ ವಿಶ್ವರೂಪವನ್ನು ತೋರಿಸಿದುದು. }

ಓ ಪರೀಕ್ಷಿದ್ರಾಜಾ ! ಒಮ್ಮೆ ಯಶೋದೆಯು ಕೃಷ್ಣನನ್ನು ತೊಡೆಯಮೇಲೆ ಮಲಗಿಸಿಕೊಂಡು, ಪುತ್ರಪ್ರೇಮದಿಂದ ಸಮೃದ್ಧವಾಗಿ ತೊರೆಯಿಕ್ಕುತಿದ್ದ ತನ್ನ ಮೊಲೆಯನ್ನು ಆ ಶಿಶುವಿನ ಬಾಯಲ್ಲಿಟ್ಟು ಹಾಲುಕುಡಿಸುತಿದ್ದಳು. ತೃಪ್ತಿಯಾಗಿ ಹಾಲನ್ನು ಕುಡಿಸಿದಮೇಲೆ, ಮಂದಹಾಸದಿಂದ ಮನೋಹರವಾದ ಆ ಶಿಶುವಿನ ಮುಖವನ್ನು ನೋಡಿ ಸಂತೋಷದಿಂದ ಮುತ್ತಿಕ್ಕಿ ಮುದ್ದಾಡುತಿದ್ದಳು ಇಷ್ಟರಲ್ಲಿ ಕೃಷ್ಣನು ನಿದ್ರಾಸೂಚಕವಾದ ಆಕಳಿಕೆಯ ನೆವದಿಂದ ತನ್ನ ಬಾಯನ್ನು ತೆರೆದನು. ಆಗ ಯಶೋದೆಗೆ ಅವನ ಬಾಯಲ್ಲಿಯೇ ಸಮಸ್ತಜಗತ್ತುಗಳೂ ಏಕಕಾಲದಲ್ಲಿ ಗೋಚರಿಸಿದುವು. ರಾಜಾ ! ಆ ಆಶ್ಚರ್ಯವನ್ನು ಕೇಳಬೇಕೆ ! ಭೂಮ್ಯಾಕಾಶಗಳು ! ಗ್ರಹನಕ್ಷತ್ರಸಮೂಹಗಳು ! ದಶದಿಕ್ಕುಗಳು ! ಸೂರ್ಯಚಂದ್ರರು ! ಸಪ್ತಮಾರುತಗಳು! ಸಪ್ತಸಮುದ್ರಗಳು! ಸಪ್ತದ್ವೀಪಗಳು! ಸಪ್ತಕುಲ

ಪರ್ವತಗಳು! ಆ ಪರ್ವತದಿಂದ ಹುಟ್ಟಿದ ಮಹಾನದಿಗಳು! ಸಮಸ್ತಚರಾಚರಗಳು! ಇವೆಲ್ಲವೂ ಏಕಕಾಲದಲ್ಲಿ ಅವಳ ಕಣ್ಣಿಗೆ ಗೋಚರಿಸಿದುವು. ಹೀಗೆ ಯಶೋದೆಯು, ಆ ಸಣ್ಣಮಗುವಿನ ಬಾಯಲ್ಲಿ ಭೂಮ್ಯಾಕಾಶಗಳೊಡಗೂಡಿದ ಸಮಸ್ತಪ್ರಪಂಚವನ್ನೂ ಕಂಡೊಡನೆ, ಅವಳ ಮೈಯೆಲ್ಲವೂ ನಡುಗಲಾರಂಭಿಸಿದುವು! ಅವಳ ಕಣ್ಣುಗಳು ಮುಚ್ಚಿಹೋದುವು! ಆಶ್ಚರ್ಯದಿಂದಲೂ, ಭಯದಿಂದಲೂ ಕ್ಷಣಕಾಲದವರೆಗೆ ಸ್ತಬ್ಧಳಾಗಿದ್ದಳು. ಇದು ಏಳನೆಯ ಅಧ್ಯಾಯವು.

---

{ಯಾದವಪುರೋಹಿತನಾದ ಗರ್ಗನು, ರಹಸ್ಯವಾಗಿ ರಾಮಕೃಷ್ಣರಿಗೆ ನಾಮಕರಣಮಾಡಿದುದು.}

ಓ ಪರೀಕ್ಷಿದ್ರಾಜಾ! ಹೀಗೆ ಕೃಷ್ಣನು ತನ್ನ ಶೈಶವದಲ್ಲಿಯೇ ಅದ್ಭುತಮಹಿಮೆಗಳನ್ನು ತೋರಿಸುತ್ತಿದ್ದನು, ಕೆಲವು ದಿನಗಳಮೇಲೆ ವಸುದೇವನು, ತನ್ನ ಮಕ್ಕಳಿಗೆ ತನ್ನ ವರ್ಣಾಶ್ರಮೋಚಿತವಾಗಿಯೇ ನಾಮಕರಣಾದಿಗಳನ್ನು ನಡೆಸಬೇಕೆಂಬ ಉದ್ದೇಶದಿಂದ, ತಮ್ಮ ಕುಲಪುರೋಹಿತನಾದ ಗರ್ಗನೆಂಬ ಬ್ರಾಹ್ಮಣನನ್ನು ರಹಸ್ಯವಾಗಿ ನಂದಗೋಕುಲಕ್ಕೆ ಕಳುಹಿಸಿಕೊಟ್ಟನು. ಮಹಾತಪಸ್ವಿಯಾದ ಈ ಗರ್ಗನನ್ನು ಕಂಡೊಡನೆ, ನಂದನು ಪರಮಸಂತೋಷದಿಂದ ಪ್ರತ್ಯುತ್ಥಾನಮಾಡಿ, ಸಾಕ್ಷಾದ್ವಿಷ್ಣುವೆಂಬ ಭಾವದಿಂದ ಅವನಿಗೆ ಕೈಮುಗಿದು, ಸಾಷ್ಟಾಂಗಪ್ರಣಾಮಮಾಡಿ, ಉಚಿತಾಸನವನ್ನು ಕೊಟ್ಟುಕುಳ್ಳಿರಿಸಿ ಸುಖಾಸೀನನಾದ ಆ ಬ್ರಾಹ್ಮಣನನ್ನು ಪ್ರಿಯವಾಕ್ಯದಿಂದ ಮನ್ನಿಸುತ್ತ "ಓ ಬ್ರಾಹ್ಮಣೋತ್ತಮಾ! ಬ್ರಹ್ಮಾನುಭವವೆಂಬ ಆನಂದದಿಂದ ಪೂರ್ಣನಾದ ನಿನ್ನನ್ನು, ಇಲ್ಲಿ ನಾವು ಯಾವವಿಧದಿಂದ ಸಂತೋಷಪಡಿಸಬಲ್ಲೆವು? ನಮ್ಮಿಂದ ನಿನಗೆ ಯಾವಪ್ರಯೋಜನವೂ ಇಲ್ಲದಿದ್ದರೂ, ನಿಮ್ಮಂತಹ ಮಹಾತ್ಮರು, ನಿಮ್ಮ ಆಶ್ರಮಗಳನ್ನು ಬಿಟ್ಟು ಹೀಗೆ ಬೇರೆಬೇರೆ ಕಡೆಗೆ ಸಂಚರಿಸುವುದು, ವಿಷಯಾಸಕ್ತಿಯಿಂದ ಕಲಕಿದ ಮನಸ್ಸುಳ್ಳ ನಮ್ಮಂತವರ ಅನುಗ್ರಹಕ್ಕಾಗಿಯೇಹೊರತು ಬೇರೆಯಲ್ಲ. ಓ ಮಹಾತ್ಮಾ! ಇಂದ್ರಿಯಗಳಿಗೆ ಗೋಚರವಲ್ಲದ ವಿಷಯವನ್ನೂ ತಿಳಿಯುವುದಕ್ಕೆ ಸಾಧನವಾದ

ಜ್ಯೋತಿಶ್ಶಾಸ್ತ್ರವು ನಿನ್ನಿಂದಲೇ ಪ್ರಚಾರಗೊಳಿಸಲ್ಪಟ್ಟಿರುವುದು? ಇದರಿಂದ ಇತರಸಾಮಾನ್ಯಮನುಷ್ಯರೂ ಕೂಡ, ಭೂತಭವಿಷ್ಯದ್ವರ್ತಮಾನಗಳನ್ನು ಸುಲಭವಾಗಿ ತಿಳಿದುಕೊಳ್ಳಬಹುದಾಯಿತು. ಇದಲ್ಲದೆ ನೀನು ಮಂತ್ರಜ್ಞರಲ್ಲಿ ಮೇಲೆನಿಸಿಕೊಂಡವನು! ಆದುದರಿಂದ ನೀನಾಗಿ ಇಲ್ಲಿಗೆ ಬಂದುದು ಅನುಕೂಲವಾಯಿತು. ನನ್ನ ಮಕ್ಕಳಿಬ್ಬರಿಗೂ, ನಿನ್ನ ಕೈಯಿಂದಲೇ ಜಾತಕರ್ಮಾದಿಸಂಸ್ಕಾರಗಳನ್ನು ನಡೆಸಬೇಕು "ನಮ್ಮ ಕುಲಗುರುಗಳಿಂದಲೇ ನಡೆಸಬಾರದೆ?" ಎಂದರೆ ಮನುಷ್ಯಸಾಮಾನ್ಯಕ್ಕೆ ಬ್ರಾಹ್ಮಣನೇ ಉತ್ತಮ ಗುರುವೆನಿಸುವನು" ಎಂದನು. ಅದಕ್ಕಾ ಗರ್ಗನು, ತಾನೂ ಆ ಉದ್ದೇಶದಿಂದಲೇ ಬಂದವನಾದರೂ, ಅದನ್ನು ಹೊರಕ್ಕೆ ಕಾಣಿಸದೆ "ಓ ನಂದಾ! ನಿನ್ನ ಕೋರಿಕೆಯಂತೆ ನಾನು ನಿನ್ನ ಮಕ್ಕಳಿಗೆ ಸಂಸ್ಕಾರಗಳನ್ನು ನಡೆಸುವುದರಲ್ಲಿ ಅಭ್ಯಂತರವಿಲ್ಲ. ಆದರೆ ಈ ವಿಚಾರದಲ್ಲಿ ನಾವು ಮುಂದಾಲೋಚನೆಯನ್ನು ಮಾಡಿ ಕಾರ್ಯವನ್ನು ನಡೆಸಬೇಕು ಏನೆಂದರೆ:— ನಾನು ಯಾದವರಿಗೆ ಕುಲಪುರೋಹಿತನೆಂಬುದನ್ನು ಲೋಕವೆಲ್ಲವೂ ಬಲ್ಲುದು. ಹೀಗಿರುವಾಗ ನಾನೇ ಬಂದು ನಿನ್ನ ಮಕ್ಕಳಿಗೆ ಜನನಾದಿಸಂಸ್ಕಾರಗಳನ್ನು ನಡೆಸಿದಪಕ್ಷದಲ್ಲಿ, ಪಾಪಬುದ್ಧಿಯುಳ್ಳ ಕಂಸನು, ಆ ಮಕ್ಕಳನ್ನು ದೇವಕಿಯ ಗರ್ಭದಲ್ಲಿ ಹುಟ್ಟಿದ ಮಕ್ಕಳೆಂದು ಅನುಮಾನಿಸುವುದಕ್ಕೆ ಅವಕಾಶವಾಗುವುದು. ನಿನಗೂ, ವಸುದೇವನಿಗೂ ಇರುವ ಆ ಬಾಲ್ಯಸ್ನೇಹವು ಲೋಕವಿದಿತವಾಗಿರುವುದು. ಆಕಾಶವಾಣಿಯೂ ದೇವಕಿಯ ಎಂಟನೆಯ ಗರ್ಭದಲ್ಲಿ ಪುರುಷಶಿಶುವೇ ಜನಿಸುವುದಾಗಿ ಸೂಚಿಸಿರುವುದು. ಕೊನೆಯಲ್ಲಿ ಜನಿಸಿದ ದೇವಕಿಯ ಹೆಣ್ಣುಮಗುವೂ ಕೂಡ, ದುರ್ಗಾರೂಪದಿಂದ ಆಕಾಶದಲ್ಲಿ ಕಾಣಿಸಿಕೊಂಡು, ಆಕೆಯ ಎಂಟನೆಯಗರ್ಭವು ಬೇರೆ ಕಡೆಯಲ್ಲಿ ಬೆಳೆಯುತ್ತಿರುವುದಾಗಿ ಕಂಸನಮುಂದೆ ಸ್ಪಷ್ಟವಾಗಿ ಹೇಳಿ ಕಣ್ಮರೆಯಾಯಿತು. ಈ ಪೂರ್ವೋತ್ತರಗಳೆಲ್ಲವನ್ನೂ ಯೋಚಿಸಿ ನೋಡುವಾಗ, ಕಂಸನಿಗೆ ನಿನ್ನ ಮಗನಲ್ಲಿ ಸಂದೇಹವು ಹುಟ್ಟಬಹುದು! ವಸುದೇವನು, ತನಗೆ ಎಂಟನೆಯ ಗರ್ಭದಲ್ಲಿ ಜನಿಸಿದ ಶಿಶುವನ್ನು ತನ್ನ ಭಯಕ್ಕಾಗಿ ಮಿತ್ರನಾದ ನಿನ್ನ ಮನೆಯಲ್ಲಿ ರಹಸ್ಯವಾಗಿರಿಸಿರಬಹುದೆಂದೆಣಿಸಿ, ನಿನ್ನ

ಮಕ್ಕಳನ್ನು ಕೊಲ್ಲುವುದಕ್ಕೆ ಯತ್ನಿಸುವನು. ಆಗ ನಾವಾಗಿಯೇ ಈ ಅನರ್ಥಕ್ಕೆ ಅವಕಾಶಕೊಟ್ಟಂತಾಗುವುದಲ್ಲವೆ?" ಎಂದನು, ಅದಕ್ಕಾನಂದನು. "ಓ ಬ್ರಾಹ್ಮಣೋತ್ತಮಾ! ನೀನು ಹೇಳಿದುದೇನೋ ಯುಕ್ತವೇ! ಹಾಗಿದ್ದ ಪಕ್ಷದಲ್ಲಿ ಇಲ್ಲಿನ ಗೋಪಾಲಕರಿಗೂ ತಿಳಿಯದಂತೆ ನೀನು ಅತಿರಹಸ್ಯವಾಗಿ, ಈ ಮಕ್ಕಳಿಗೆ ಕೇವಲಮಂತ್ರಪೂರ್ವಕವಾಗಿಯಾದರೂ ನಿನ್ನ ಕೈಯಿಂದ ಜಾತಕರ್ಮಾದಿಸಂಸ್ಕಾರಗಳನ್ನು ಮಾಡಬೇಕು. ಗೀತವಾದ್ಯಗಳೇ ಮೊದಲಾದ ಆಡಂಬರಗಳೊಂದೂ ಇಲ್ಲದಂತೆಯೇ ಕಾರ್ಯಗಳನ್ನು ನಡೆಸಿಬಿಡುವೆವು ಹೇಗಾದರೂ ನೀನು ನಿನ್ನ ಕೈಯಿಂದ ಈ ಮಕ್ಕಳಿಗೆ ಸ್ವಸ್ತಿವಾಚನಪೂರ್ವಕವಾಗಿ, ದ್ವಿಜಾತಿಯೋಗ್ಯವಾದ ಸಂಸ್ಕಾರಗಳನ್ನು ನಡೆಸಿಯೇ ತೀರಬೇಕು" ಎಂದು ಬಹಳವಾಗಿ ನಿರ್ಬಂಧಿಸಿ ಪ್ರಾರ್ಥಿಸಿದನು ಆಗ ಗರ್ಗನು ತಾನು ಉದ್ದೇಶಿಸಿದ ಕಾರ್ಯಕ್ಕಾಗಿಯೇ ನಂದನೂ ಉತ್ಸಾಹದಿಂದ ಪ್ರಾರ್ಥಿಸುವುದನ್ನು ನೋಡಿ ಹರ್ಷಿತನಾಗಿ,! ಆ ಬಾಲಕರಿಗೆ ರಹಸ್ಯವಾಗಿ ನಾಮಕರಣಾದಿಸಂಸ್ಕಾರಗಳನ್ನು ನಡೆಸಿದನು. ಆ ಇಬ್ಬರುಮಕ್ಕಳಲ್ಲಿ, ಮೊದಲು ರೋಹಿಣಿಯ ಕುಮಾರನನ್ನು ಕರೆಸಿ ನಂದನನ್ನು ಕುರಿತು. *

* ಇಲ್ಲಿ ಗರ್ಗನು ಗೊಲ್ಲರ ಮನೆಯಲ್ಲಿ ಬೆಳೆಯುತಿದ್ದ ರಾಮಕೃಷ್ಣರಿಗೆ ವಸುದೇವನ ಮಾತಿನಿಂದ ಕ್ಷತ್ರಿಯಕುಲಕ್ಕೆ ಯೋಗ್ಯವಾದ ನಾಮಕರಣಾದಿಗಳನ್ನು ನಡೆಸುವುದಕ್ಕಾಗಿಯೇ ಬಂದವನಾದರೂ, ಆ ರಾಮಕೃಷ್ಣರ ಪರತ್ವವನ್ನು ನಂದನಿಗೆ ತಿಳಿಸಬಾರದೆಂಬುದಕ್ಕಾಗಿಯೇ ಸಂಕರ್ಷಣಕೃಷ್ಣಾದಿ ನಾಮಗಳಿಗೆ ಅರ್ಥಾಂತರವನ್ನು ಕಲ್ಪಿಸಿ, ಅವರನ್ನು ಸಾಮಾನ್ಯಜೀವರಂತೆ ನಿರೂಪಿಸುವನು. ಆದರೆ ಭಗವಂತನು, ಯುಗಬೇದದಿಂದ ವರ್ಣಭೇದಗಳನ್ನು ತೋರ್ಪಡಿಸುವುದೂ,ಕೃಷ್ಣನು ವಸುದೇವನ ಹಿಂದಿನ ಎರಡು ಜನ್ಮಗಳಲ್ಲಿಯೂ ಅವನಿಗೆ ಪುತ್ರನಾಗಿ ಹುಟ್ಟಿದ್ದುದೂ ನಿಜವಾದುದರಿಂದ, ಗರ್ಗನ ಮಾತು ಸುಳ್ಳಲ್ಲವೆಂದೇ ಗ್ರಾಹ್ಯವು. ನಿಜವಾದ ಅರ್ಥದಲ್ಲಿ ಸಂಕರ್ಷಣನೆಂಬುದಕ್ಕೆ ಶೇಷಾಂಶದಿಂದವತರಿಸಿದವನೆಂದೂ, ದೇವಕಿಯಗರ್ಭದಿಂದ ರೋಹಿಣಿಯಗರ್ಭಕ್ಕೆ ಸೆಳೆಯಲ್ಪಟ್ಟವನೆಂದೂ ಗ್ರಾಹ್ಯವು ಹಾಗೆಯೇ ಕೃಷ್ಣಶಬ್ದಕ್ಕೆ "ಕೃಷಿರ್ಭೂವಾಚಕಶ್ಶಬ್ದೋ ಣಶ್ಚ ನಿರ್ವೃತಿವಾಚಕಃ ತಯೋರೈಕ್ಯಂ ಪರಂಬ್ರಹ್ಮ ಕೃಷ್ಣ ಇತ್ಯಭಿಧೀಯತೇ" ಎಂಬುವ್ಯುತ್ಪತ್ತಿಯಿಂದ ಲೀಲಾವಿಭೂತಿ ನಿತ್ಯವಿಭೂತಿಗಳೆರಡನ್ನೂ ಒಳಕೊಂಡ ಪರಮಪುರುಷನೇ ಕೃಷ್ಣನೆಂದೂ ಗ್ರಾಹ್ಯವು.

"ಓ ನಂದಾ! ಈ ಕುಮಾರನು ತನ್ನ ಸುಗುಣಗಳಿಂದ ಲೋಕವೆಲ್ಲವನ್ನೂ ರಂಜಿಸತಕ್ಕವನು. ಆದುದರಿಂದ ಇವನಿಗೆ ರಾಮನೆಂಬ ಹೆಸರನ್ನಿಡುವೆನು. ಮತ್ತು ಇವನು ಬಹಳಬಲಾಢ್ಯನಾದುದರಿಂದ ಬಲನೆಂದೂ, ಯದುಕುಲದವರಲ್ಲಿ ಪರಸ್ಪರಭೇದಬುದ್ಧಿಗೆ ಅವಕಾಶಕೊಡದೆ ಐಕಮತ್ಯವನ್ನು ಹುಟ್ಟಿಸತಕ್ಕವನಾದುದರಿಂದ, ಸಂಕರ್ಷಣನೆಂದೂ ಲೋಕದಲ್ಲಿ ಪ್ರಸಿದ್ಧನಾಗುವನು. ನಿನ್ನ ಎರಡನೆಯ ಕುಮಾರನು, ಇದರ ಹಿಂದಿನ ಮೂರುಜನ್ಮಗಳಲ್ಲಿ ಕ್ರಮವಾಗಿ ಬಿಳುಪು, ಕೆಂಪು, ಹಳದಿ. ಈ ಮೂರುಬಣ್ಣಗಳುಳ್ಳವನಾಗಿದ್ದು, ಈಗ ಕೃಷ್ಣವರ್ಣದಿಂದ ಹುಟ್ಟಿರುವನು. ಮತ್ತು ಈ ಕುಮಾರನು ಈಗ ನಿನ್ನ ಮಗನಾಗಿ ಬೆಳೆಯುತಿದ್ದರೂ, ಇವನು ಹಿಂದೊಮ್ಮೆ ವಸುದೇವಪುತ್ರನಾಗಿದ್ದವನು. ಆದುದರಿಂದ ಇವನಿಗೆ ಕೃಷ್ಣನೆಂದೂ, ವಾಸುದೇವನೆಂದೂ ಹೆಸರಿಡುವೆವು. ಮತ್ತು ಓ ನಂದಾ! ಈ ನಿನ್ನ ಮಗನಿಗೆ ಆಯಾಗುಣಗಳಿಗೂ ಕಾರ್ಯಗಳಿಗೂ ತಕ್ಕಂತೆ. ಬೇರೆಬೇರೆ ಹಲವು ನಾಮರೂಪಗಳುಂಟು ಅವೆಲ್ಲವೂ ನಮಗೆ ತಿಳಿಯುವುದೇಹೊರತು ನಿಮ್ಮಂತವರಿಗೆ ತಿಳಿಯಲಾರದು. ಒಂದೊಂದು ಸಮಯದಲ್ಲಿ ನಾವೂ ಅದನ್ನು ತಿಳಿಯಲಾರೆವು ನಂದಾ! ಈ ಕಿರಿಯ ಮಗನಿಂದ ನಿನಗೆ ಎಣೆಯಿಲ್ಲದ ಶ್ರೇಯಸ್ಸು ಕೈಗೂಡುವುದು. ಈತನು ಗೋಕುಲಕ್ಕೂ, ಗೋಪಕುಲಕ್ಕೂ ಆನಂದಕರನಾಗುವನು. ಇವನಿಂದ ನಿಮ್ಮ ಸಮಸ್ತದುಃಖಗಳೂ ನೀಗುವುವು. ಹಿಂದೊಮ್ಮೆ ದೇಶವು ಅರಾಜಕವಾಗಿದ್ದಾಗ, ಚೋರರು ತಲೆಯೆತ್ತಿ ಸಾಧುಗಳನ್ನು ಹಿಂಸಿಸುತ್ತಿರಲು, ಈ ನಿನ್ನ ಕುಮಾರನೇ ಇದರ ಹಿಂದಿನ ಜನ್ಮದಲ್ಲಿ ಅವರಿಗೆ ಸಹಾಯಕನಾಗಿ ಆ ದುಷ್ಟರನ್ನಡಗಿಸಿದನು. ಇವನು ಈಗ ಹುಟ್ಟಿರುವುದೂ ದುಷ್ಟನಿಗ್ರಹಶಿಷ್ಟಪರಿಪಾಲನಗಳಿಗಾಗಿಯೇ ಎಂದು ತಿಳಿ! ಓ ಮಹಾಭಾಗಾ! ಯಾರು ಇವನಲ್ಲಿ ಪ್ರೀತಿಯನ್ನುಮಾಡುವರೋ ಅಂತವರನ್ನು ಯಾವ ಶತ್ರುಗಳೂ ನಿಗ್ರಹಿಸಲಾರರು! ವಿಷ್ಣುಪಕ್ಷದವರಿಗೆ ಅಸುರಭಯವಿಲ್ಲದಂತೆ ಅವರು ನಿರ್ಭಯರಾಗಿರುವರು. ಆದುದರಿಂದ ಲಕ್ಷ್ಮಿ, ಕೀರ್ತಿ, ಪ್ರಭಾವ, ಮೊದಲಾದುವುಗಳಲ್ಲಿಯೂ, ಇತರಗುಣಗಳಲ್ಲಿಯೂ ಈ ಕುಮಾರನು ಸಾಕ್ಷಾದ್ವಿಷ್ಣುದೇವನಿಗೆ ಸಮಾನನೆಂದು ತಿಳಿ!"

ಎಂದನು. ಗರ್ಗನು ಹೀಗೆಂದು ಕೃಷ್ಣನ ಪ್ರಭಾವವನ್ನು ಸೂಕ್ಷ್ಮವಾಗಿ ತಿಳಿಸಿ, ಮಥುರೆಗೆ ಹಿಂತಿರುಗಿದಕೂಡಲೆ, ಇತ್ತಲಾಗಿ ನಂದನು, ಅಂತಹ ಪುತ್ರರತ್ನವನ್ನು ಪಡೆದುದರಿಂದ ಲೋಕದಲ್ಲಿ ತಾನೇ ಪರಮಧನ್ಯನೆಂದು ಆತ್ಮಾನಂದಭರಿತನಾಗಿದ್ದನು.

## ಕೃಷ್ಣನ ಬಾಲಕ್ರೀಡೆಗಳು.

ಓ ಪರೀಕ್ಷಿದ್ರಾಜಾ! ಹೀಗೆಯೇ ಕೆಲವು ದಿನಗಳು ಕಳೆದುವು. ರಾಮಕೃಷ್ಣರ ಬಾಲಕ್ರೀಡೆಗಳು ಗೋಕುಲದಲ್ಲಿದ್ದವರೆಲ್ಲರ ಮನಸ್ಸನ್ನೂ ಆಕರ್ಷಿಸುತಿದ್ದುವು. ಲೋಕಮೋಹಕಗಳಾದ ಆ ಮುದ್ದುಮಕ್ಕಳ ಆಟಪಾಟಗಳನ್ನು ಕೇಳಬೇಕೆ? ರಾಮಕೃಷ್ಣರಿಬ್ಬರೂ ಯಾವಾಗಲೂ ಜತೆಯಾಗಿ, ಅಂಬೆಗಾಲಿನಿಂದ ಮನೆಯ ಅಂಗಳವೆಲ್ಲವನ್ನೂ ಸುತ್ತುತ್ತಿರುವರು. ಸಂಚಾರದ ವೇಗದಿಂದ ಕಾಲನ್ನೆಳೆದೆಳೆದಿಡುವಾಗ, ತಮ್ಮ ಕಾಲಿಗೆ ಕಟ್ಟಿದ ಕಿರುಗೆಜ್ಜೆಗಳ ಘಲ್ಘಲಧ್ವನಿಯನ್ನು ಕೇಳಿ, ಆಗಾಗ ತಿರುಗಿ ನೋಡುತ್ತ ಸಂತೋಷದಿಂದ ನಗುವರು. ಅಲ್ಲಲ್ಲಿ ಕಂಡ ಜನರನ್ನು ಹಿಂಬಾಲಿಸಿ ನಡೆಯುವರು. ಅವರು ತಮ್ಮನ್ನು ನೋಡಿದಾಗ, ಭಯಪಟ್ಟವರಂತೆ ತಟ್ಟನೆ ಹಿಂತಿರುಗಿ ಮಾತೆಯರ ಸಮೀಪಕ್ಕೆ ಸರಿಯುವರು! ಆಗ ರೋಹಿಣೀಯಶೋದೆಯರಿಬ್ಬರೂ ನೆಲದ ಧೂಳಿಯಿಂದ ತುಂಬಿದ ಮೆಯ್ಯುಳ್ಳ ಆ ಮಕ್ಕಳನ್ನು ಪ್ರೀತಿಯಿಂದಾಲಿಂಗಿಸಿ, ಕೈಗೆತ್ತಿಕೊಳ್ಳುವರು! ಪುತ್ರಪ್ರೇಮದಿಂದ ತೊರೆಯಿಕ್ಕುವ ಸ್ತನಗಳುಳ್ಳವರಾಗಿ, ಆ ಮಕ್ಕಳಿಗೆ ಸ್ತನ್ಯಪಾನಮಾಡಿಸುವರು! ಮೊಳೆಹಲ್ಲುಗಳಿಂದ ಮನೋಹರವಾಗಿ, ಮುಗುಳ್ನಗೆಯನ್ನು ಬೀರುತ್ತಿರುವ, ಆ ಮಕ್ಕಳ ಮುದ್ದುಮುಖವನ್ನು ನೋಡಿ ಸಂತೋಷದಿಂದ ಪರವಶರಾಗುತ್ತಿರುವರು. ಒಮ್ಮೊಮ್ಮೆ ರಾಮಕೃಷ್ಣರಿಬ್ಬರೂ ಅಲ್ಲಲ್ಲಿ ಓಡಾಡುತ್ತಿರುವ ಸಣ್ಣಕರುಗಳ ಬಾಲವನ್ನು ಹಿಡಿದು ಅವು ಎಳೆದಕಡೆಗೆ ತಾವೂ ಹೋಗುವರು. ಈ ವಿನೋದವನ್ನು ನೋಡುತ್ತ ಗೋಪಸ್ತ್ರೀಯರು! ಮನೆಯ ಕೆಲಸಗಳನ್ನೂ ಮರೆತು ನಗುತ್ತ ನಿಲ್ಲುವರು ಆಗಾಗ ಈ ರಾಮಕೃಷ್ಣರು, ಜಿಂಕೆ ಮೊದಲಾದ ಕೊಂಬುಳ್ಳ ಮೃಗಗಳನ್ನಾಗಲಿ, ನಾಯಿ ಮೊದಲಾದ ಕೋರೆಹಲ್ಲುಳ್ಳ ಪ್ರಾಣಿಗಳನ್ನಾಗಲಿ, ಹಾವುಗಳನ್ನಾಗಲಿ, ನವಿಲು ಮೊ

ದಲಾದ ಪಕ್ಷಿಗಳನ್ನಾಗಲಿ, ಬೆಂಕಿ, ನೀರು, ಮುಳ್ಳು, ಮೊದಲಾದ ಅಪಾಯಕರಗಳಾದ ಇತರವಸ್ತುಗಳನ್ನಾಗಲಿ ಕಂಡಾಗ, ನಿರ್ಭಯವಾಗಿ ಅವುಗಳನ್ನು ಹಿಡಿಯುವುದಕ್ಕೆ ಹೋಗುವರು. ಇದರಿಂದ ಗೋಪಸ್ತ್ರೀಯರು ಇತ್ತಲಾಗಿ ತಮ್ಮ ಮಕ್ಕಳನ್ನು ಅಪಾಯಕಾರ್ಯಗಳಿಗೆ ಹೋಗದಂತೆ ತಡೆಯುವುದೊಂದು! ಅತ್ತಲಾಗಿ ಗೃಹಕಾರ್ಯಗಳನ್ನು ನೋಡುವುದೊಂದು! ಇವೆರಡಕ್ಕೂ ಅವಕಾಶವಿಲ್ಲದೆ ಕಳವಳಿಸುವರು. ಓ ಪರೀಕ್ಷಿದ್ರಾಜಾ! ಈ ವಿಧವಾದ ಬಾಲಕ್ರೀಡೆಗಳಿಂದ ಕೆಲವುದಿನಗಳು ಕಳೆದಮೇಲೆ, ರಾಮಕೃಷ್ಣರಿಬ್ಬರಿಗೂ ಕ್ರಮಕ್ರಮವಾಗಿ, ಮೆಲ್ಲಮೆಲ್ಲಗೆ ತಳರದಿಯಿಟ್ಟು ನಡೆಯುವ ಶಕ್ತಿಯುಂಟಾಯಿತು ಅವರು ಒಮ್ಮೊಮ್ಮೆ ತಾವೇ ಪ್ರಯತ್ನಪೂರ್ವಕವಾಗಿ ಹಜ್ಜೆಯಿಡುವುದರಿಂದಲೂ, ಮತ್ತೊಮ್ಮೆ ಅಂಬೆಗಾಲಿಂದಲೂ, ದೂರದೂರಕ್ಕೆ ಸಂಚರಿಸತೊಡಗಿದರು. ಭಗವಂತನಾದ ಕೃಷ್ಣನು ತನಗೆ ಸಮಾನಸ್ಕಂಧರಾದ ಗೋಪಾಲಬಾಲಕರೊಡನೆ ಕಲೆತು, ಆಗಾಗ ನಡೆಸುತ್ತಿದ್ದ ಬಾಲಕ್ರೀಡೆಗಳೆಲ್ಲವೂ ಗೋಕುಲವಾಸಿಗಳಾದ ಜನರೆಲ್ಲರಿಗೂ ಅತ್ಯಂತಹರ್ಷಜನಕಗಳಾದುವು. ಕೊನೆಕೊನೆಗೆ ಗೋಕುಲದಲ್ಲಿ ಬಲರಾಮಕೃಷ್ಣರ ಬಾಲಚೇಷ್ಟೆಗಳು ಹೆಚ್ಚುತ್ತ ಬಂದುವು ಈ ತೊಂದರೆಯನ್ನು ತಡೆಯಲಾರದೆ ಕೆಲವುಗೋಪಿಯರು, ಯಶೋದೆಯಬಳಿಗೆ ಬಂದು ‘‘ಅಮ್ಮಾ! ಯಶೋದೆ! ನಿನ್ನ ಮಗನ ಚೇಷ್ಟೆಯನ್ನು ತಡೆಯಲಾರೆವು. ನಿನ್ನ ಮಗನು ವೇಳೆಯಲ್ಲದ ವೇಳೆಯಲ್ಲಿ ಬಂದು, ಕೊಟ್ಟಿಗೆಯಲ್ಲಿ ಕಟ್ಟಿದ್ದ ಕರುಗಳನ್ನು ಕಳಚಿ ಬಿಟ್ಟುಬಿಡುವನು ಯಾರಾದರೂ ಕೋಪಿಸಿದರೆ ಅವರ ಮುಂದೆ ನಗುತ್ತ ನಿಲ್ಲುವನು (ಏನೇನೋ!ಉಪಾಯದಿಂದ ಅಲ್ಲಲ್ಲಿ ಮನೆಮನೆಗಳಿಗೆ ಹೊಕ್ಕು, ಹಾಲು, ಮೊಸರು, ಬೆಣ್ಣೆ, ತುಪ್ಪ, ಮುಂತಾದುವುಗಳನ್ನು ಕದ್ದು ತಿಂದುಬಿಡುವನು. ತಾನು ತಿಂದು ಮಿಕ್ಕುದನ್ನಾದರೂ ಉಳಿಸಿ ಹೋಗುವನೆ! ಅದೂ ಇಲ್ಲ! ತನ್ನ ಸ್ನೇಹಿತರೆಲ್ಲರಿಗೂ ಹಂಚಿಕೊಟ್ಟು, ಇನ್ನೂ ಮಿಕ್ಕಿದ್ದರೆ ಕಪಿಗಳಿಗೆ ತಿನ್ನಿಸಿಬಿಡುವನು. ಅದರಲ್ಲಿಯೂ ಮಿಕ್ಕರೆ ಆ ಪಾತ್ರೆಯನ್ನೇ ಒಡೆದು ಚೂರುಮಾಡಿ ಹೊರಟುಹೋಗುವನು. ಯಾವ ಮನೆಯಲ್ಲಿಯಾದರೂ ಅವನಿಗೆ ಯಾವ ಪದಾರ್ಥವೂ ಸಿಕ್ಕುವಹಾಗಿಲ್ಲದಿದ್ದ

ಪಕ್ಷದಲ್ಲಿ, ಆ ಮನೆಯವರ ಮೇಲಿನ ಕೋಪದಿಂದ, ತೊಟ್ಟಿಲಲ್ಲಿ ಮಲಗಿ ನಿದ್ರೆಮಾಡುತ್ತಿರುವ ಮಕ್ಕಳನ್ನು ಚಿಗುಟಿ, ಅವುಗಳನ್ನು ಬಲವಾಗಿ ಅಳಿಸಿ ಹೊರಟುಹೋಗುವನು. ಮತ್ತು ತನ್ನ ಕೈಗೆ ಎಟುಕದ ಹಾಗೆ ಎತ್ತರದಲ್ಲಿರುವ ಪದಾರ್ಥಗಳನ್ನೂ ಕೂಡ, ಅಲ್ಲಲ್ಲಿರುವ ಒರಲುಮಣೆ ಮುಂತಾದ ಪೀಠಗಳನ್ನು ಒಂದರ ಮೇಲೊಂದರಂತೆ ಜೋಡಿಸಿಟ್ಟುಕೊಂಡೋ, ಇಲ್ಲವೇ, ಒರಳುಗಳನ್ನು ಮಗುಚಿಟ್ಟುಕೊಂಡೋ, ಅಥವಾ ಬೇರೆ ಯಾವ ಉಪಾಯದಿಂದಲೋ ಅದನ್ನು ಕೈಗೆ ಸಿಕ್ಕುವ ಹಾಗೆ ಮಾಡಿಕೊಳ್ಳುವನು. ಉರಿಯಲ್ಲಿ ತೂಗುಹಾಕಿರುವ ಹಾಲುಮೊಸರಿನ ಮಡಕೆಗಳನ್ನು ಕೈಗೆತ್ತಿ ಕುಡಿಯುವುದಕ್ಕೆ ಸಾಧ್ಯವಿಲ್ಲದಿದ್ದಾಗ, ಪಾತ್ರೆಯ ಕೆಳಗೆ ರಂಧ್ರವನ್ನು ಮಾಡಿ, ಅದಕ್ಕೆ ಬಾಯೊಡ್ಡಿ ಕುಡಿದುಬಿಡುವನು.) ಹೆಂಗಸರು ತಮ್ಮ ತಮ್ಮ ಮನೆಗೆಲಸಗಳಲ್ಲಿ ಮೈಮರೆತಿರುವ ವೇಳೆಯನ್ನು ನೋಡಿ, ಕತ್ತಲೆಮನೆಗಳಿಗೆ ಪ್ರವೇಶಿಸಿ, ತನ್ನ ಆಭರಣಕಾಂತಿಗಳಿಂದುಂಟಾದ ಬೆಳಕಿನಿಂದಲೇ ಅಲ್ಲಲ್ಲಿ ಬಚ್ಚಿಟ್ಟಿರುವ ವಸ್ತುಗಳನ್ನು ಹುಡುಕಿ ತೆಗೆಯುವನು. ಇದನ್ನು ಕಂಡುಹಿಡಿದು ಯಾರಾದರೂ ಗದರಿಸಿದರೆ, ಅವರ ಮುಂದೆ ಬಾಯಿಬಡಿದು, ತಿರುಗಿ ಅವರು ಮಾತೆತ್ತುವುದಕ್ಕೇ ಅವಕಾಶವಿಲ್ಲದಂತೆ ಮಾಡುವನು. ಸಾರಿಸಿ, ಗುಡಿಸಿ, ಶುದ್ಧಮಾಡಿದ ಮನೆಗಳಲ್ಲಿ ಯಾರೂ ಇಲ್ಲದ ಸಮಯವನ್ನು ನೋಡಿ, ಎಂಜಲುಗಿದು, ಮೂತ್ರವಿಸರ್ಜನಾದಿಗಳನ್ನು ಮಾಡಿ ಬರುವನು. ಅಮ್ಮ ಯಶೋದೆ! ಹೀಗೆ ನಿನ್ನ ಮಗನು ಕಂಡವರ ಮನೆಗಳಲ್ಲಿ ಈ ಚೌರ್ಯತಂತ್ರಗಳನ್ನು ನಡೆಸಿ, ನಿನ್ನ ಮುಂದೆ ಬಹಳ ಸಾಧುವಿನಂತೆ ನಟಿಸುತ್ತಿರುವನು.” ಎಂದು ಗೋಪಸ್ತ್ರೀಯರೆಲ್ಲರೂ ಯಶೋದೆಯ ಬಳಿಗೆಬಂದು, ಅಲ್ಲಿ ತಮ್ಮನ್ನು ಕಂಡು ಬಹಳ ಭಯಪಟ್ಟಂತೆ ಕಣ್ಣುಕಣ್ಣುಬಿಡುತ್ತ ನಿಂತಿರುವ ಕೃನನ್ನು ತೋರಿಸಿ, ಅನೇಕವಿಧವಾಗಿ ದೂರುಹೇಳುತ್ತಿದ್ದರು. ಹೀಗೆ ಒಬ್ಬೊಬ್ಬರು ಒಂದೊಂದು ವಿಧವಾದ ದೋಷಗಳನ್ನು ಹೇಳುತಿದ್ದರೂ, ಆ ಕೃಷ್ಣಷ್ಣನ ಮುದ್ದುಮುಖವನ್ನು ನೋಡಿದೊಡನೆ, ಯಶೋದೆಗೆ, ಅವನನ್ನು ದಂಡಿಸಬೇಕೆಂಬ ಕೋಪವೆಲ್ಲವೂ ಅಡಗಿಹೋಗುವುದು. ಆ ಮುದ್ದುಬಾಲನ

ಮುಖವನ್ನು ನೋಡಿ ನಗುತ್ತ ಸುಮ್ಮನೆ ನಿಂತುಬಿಡುವಳು.(ಮತ್ತು ಓ ಪರೀಕ್ಷಿದ್ರಾಜಾ! ಮತ್ತೊಮ್ಮೆ ನಂದಗೋಕುಲದಲ್ಲಿದ್ದ ಕೆಲವುಗೋಪಿಯರು, ಈ ಕೃಷ್ಣನ ಹಾವಳಿಯನ್ನು ತಡೆಯಲಾರದೆ, ಆ ಕಳ್ಳಕೃಷ್ಣನನ್ನು ಕೈಹಿಡಿಯಾಗಿ ಹಿಡಿದು ತಂದು ಯಶೋದೆಗೆ ತೋರಿಸಬೇಕೆಂದು ನಿಶ್ಚಯಿಸಿ, ತಮ್ಮತಮ್ಮ ಮನೆಗಳಲ್ಲಿ ಆ ಕೃಷ್ಣನು ಬರುವ ಹೊತ್ತನ್ನೇ ನಿರೀಕ್ಷಿಸುತ್ತ, ಹಗಲುರಾತ್ರಿಯೂ ಎಚ್ಚರದಿಂದ ಕಾದಿದ್ದರು. ಸರ್ವಸಾಕ್ಷಿಯಾದ ಕೃಷ್ಣನು ಇದನ್ನು ತಿಳಿದುಕೊಂಡು, ಬೇರೆಬೇರೆ ಅನೇಕಕೃಷ್ಣನಾಗಿ, ಎಲ್ಲರ ಮನೆಗೂ ಏಕಕಾಲದಲ್ಲಿ ಪ್ರವೇಶಿಸಿಬಿಟ್ಟನು. ಆ ಗೋಪಿಯರೆಲ್ಲರೂ ಕಳ್ಳನು ಕೈಗೆ ಸಿಕ್ಕಿದನೆಂಬ ಸಂತೋಷದಿಂದ, ಒಬ್ಬೊಬ್ಬರೂ, ಅವರವರ ಕೈಗೆ ಸಿಕ್ಕಿದ ಕೃಷ್ಣನನ್ನು ಬಲಾತ್ಕಾರದಿಂದ ಎತ್ತಿಕೊಂಡು ಯಶೋದೆಗೆ ತೋರಿಸಬೇಕೆಂದು ಕರೆತಂದರು. ಅವರು ಯಶೋದೆಯ ಮುಂದೆ ಬಂದುನಿಂತು, ಆ ಕೃಷ್ಣನಮೇಲೆ ದೂರುಹೇಳುವುದಕ್ಕೆ ಬಾಯೆತ್ತುವಷ್ಟರೊಳಗಾಗಿ, ತಮ್ಮ ಕಕ್ಷದಲ್ಲಿದ್ದ ಕೃಷ್ಣನನ್ನು ಕಾಣದೆ, ನಿಜವಾದ ಕೃಷ್ಣನೊಬ್ಬನುಮಾತ್ರ ತಾಯಿಯ ಬಳಿಯಲ್ಲಿ ನಿಂತಿರುವುದನ್ನು ಕಂಡು, ಮುಂದೆ ಬಾಯೆತ್ತುವುದಕ್ಕೇ ಅವಕಾಶವಿಲ್ಲದೆ, ಎಲ್ಲರೂ ಲಜ್ಜಿತರಾಗಿ ತಾವು ಬಂದ ದಾರಿಯನ್ನು ಹಿಡಿದು ಸುಮ್ಮನೆ ಹಿಂತಿರುಗಿದರು.) ಓ ಪರೀಕ್ಷಿದ್ರಾಜಾ! ಹೀಗೆ ಕೃಷ್ಣನು ನಂದ ಗೋಕುಲದಲ್ಲಿ. ತನ್ನ ವಿಚಿತ್ರ ಲೀಲೆಗಳಿಂದ ಎಲ್ಲರನ್ನೂ ಮೋಹಗೊಳಿಸುತಿದ್ದನು.

### ವಿಶ್ವರೂಪ ಪ್ರದರ್ಶನವು

ಮತ್ತೊಮ್ಮೆ ಕೃಷ್ಣಬಲರಾಮರಿಬ್ಬರೂ ಇತರಗೋಪಾಲಬಾಲಕರೊಡನೆ ವಿನೋದದಿಂದ ಆಟವಾಡುತ್ತಿರುವಾಗ, ಕೃಷ್ಣನು ಮಣ್ಣುತಿಂದುದನ್ನು ನೋಡಿ, ಬಲರಾಮನೂ, ಇತರ ಗೋಪಬಾಲಕರೂ ಯಶೋದೆಯ ಬಳಿಗೆ ಬಂದು “ಅಮ್ಮ ಯಶೋದೆ! ನಿನ್ನ ಮಗನು ಮಣ್ಣನ್ನು ತಿಂದಿರುವನು” ಎಂದು ದೂರುಹೇಳಿದರು. ಇದನ್ನು ಕೇಳಿದೊಡನೆ, ಯಶೋದೆಯು ತಟ್ಟನೆ ಬಂದು, ಭಯಚಂಚಲವಾದ ದೃಷ್ಟಿಯಿಂದ ತನ್ನನ್ನೇ ಇದಿರುನೋಡುತ್ತ ನಿಂತಿದ್ದ ಆ ಕೃಷ್ಣನ ಕೈಯನ್ನು ಹಿಡಿದು “ಎ

ಲತುಂಟ ಕೃಷ್ಣಾ? ಮಣ್ಣನ್ನೇಕೆ ತಿಂದೆ! ನಿನ್ನ ಸ್ನೇಹಿತರೆಲ್ಲರೂ ಹೇಳುವರು ನೋಡು! ನಿನ್ನಣ್ಣನಾದ ಬಲರಾಮನೂ ಇದಕ್ಕೆ ಸಾಕ್ಷಿ."ಎಂದು ಗದರಿಸಿದಳು. ಅದಕ್ಕಾ ಕೃಷ್ಣನು ‘‘ಅಮ್ಮಾ! ಇವರೊಬ್ಬರ ಮಾತನ್ನೂ ನೀನು ನಂಬಬೇಡ! ಇವರೆಲ್ಲರೂ ನನ್ನಮೇಲೆ ಹೊಟ್ಟೇಕಿಚ್ಚಿನಿಂದ ಇಲ್ಲದ ದೂರನ್ನು ಹೇಳುವರು ! ಹಾಗೆ ನಿನಗೆ ನನ್ನಮಾತಿನಲ್ಲಿ ನಂಬಿಕೆಯಿಲ್ಲದಿದ್ದರೆ, ಬಾಯನ್ನು ತೆರೆಯುವೆನು. ನನ್ನ ಮುಖದ ವಾಸನೆಯನ್ನು ನೋಡಿ ನೀನೇ ತಿಳಿಯಬಹುದು" ಎಂದನು. ಅದಕ್ಕಾ ಯಶೋದೆಯು ‘‘ಎಲ್ಲಿ! ಬಾಯಿಬಿಡು! ನೋಡುವೆನು"ಎಂದು ಹೇಳಲು,ವಿಶ್ವಾತ್ಮಕನಾದ ಆ ಕೃಷ್ಣನು ತನ್ನ ಪುಟ್ಟಬಾಯನ್ನು ತೆರೆದು ತೋರಿಸಿದನು. ಆಗಿನ ಆಶ್ಚರ್ಯವನ್ನು ಕೇಳಬೇಕೆ? ಆಗ ಯಶೋದೆಗೆ ಆ ಮುದ್ದುಬಾಲಕನ ಪುಟ್ಟಬಾಯಿಯಲ್ಲಿಯೇ ಸ್ಥಾವರಜಂಗಮಾತ್ಮಕವಾದ ಸಮಸ್ತಬ್ರಹ್ಮಾಂಡವೂ ಏಕಕಾಲದಲ್ಲಿ ಗೋಚರಿಸಿತು. ಆಕಾಶ, ದಿಕ್ಕುಗಳು, ಸಮುದ್ರ,ದ್ವೀಪ ನದೀನದ ಪರ್ವತಗಳೊಡಗೂಡಿದ ಭೂಮಂಡಲ, ವಾಯುಮಂಡಲ, ಸೂರ್ಯಚಂದ್ರಾಗ್ನಿ ನಕ್ಷತ್ರಗಳಿಂದ ತುಂಬಿದ ಜ್ಯೋತಿರ್ಮಂಡಲ, ಲವಣಜಲ, ಸ್ವರ್ಗಾದ್ಯೂರ್ಧ್ವಲೋಕಗಳು, ಅತಲಾದ್ಯಧೋಲೋಕಗಳು, ಸಾತ್ವಿಕಾಹಂಕಾರಕಾರ್ಯಗಳಾದ ದಶೇಂದ್ರಿಯಗಳು, ಮನಸ್ಸು, ತಾಮಸಾಹಂಕಾರಜನ್ಯಗಳಾದ ಶಬ್ದಾದಿತನ್ಮಾತ್ರಗಳು, ಸತ್ವರಜಸ್ತಮೋಗುಣಗಳು, ಇವೆಲ್ಲವೂ ಆ ಕೃಷ್ಣನ ಬಾಯಲ್ಲಿ ಕಾಣಿಸಿದುವು. ಸಮಸ್ತಜೀವರಾಶಿಗಳೊಡನೆ, ಕಾಲ, ಗುಣ,ಕರ್ಮವಾಸನೆಗಳಿಂದ ನಾನಾರೂಪಭೇದವನ್ನು ಹೊಂದಿ ವಿಚಿತ್ರವಾಗಿರುವ ಜಗತ್ತೆಲ್ಲವೂ ಆ ಕೃಷ್ಣನ ಬಾಯಲ್ಲಿ ಕಾಣಿಸುತಿದ್ದುವು. ಹೆಚ್ಚೇಕೆ? ಆಗ ಯಶೋದೆಯು ತನ್ನ ಮಗನ ಆ ಪುಟ್ಟಬಾಯಲ್ಲಿಯೇ, ತನಗೆ ನಿವಾಸಸ್ಥಾನವಾದ ಗೋಕುಲವನ್ನೂ, ಅದರಲ್ಲಿ ತನ್ನನ್ನೂ, ತನ್ನ ಸಮೀಪದಲ್ಲಿ ಬಾಯನ್ನು ತೆರೆದು ನಿಂತಿರುವ ತನ್ನ ಮುದ್ದುಮಗನನ್ನೂ ಕಂಡಳು. ಆಗ ಅವಳ ಮನಸ್ಸಿನ ಆಶ್ಚರ್ಯವನ್ನು ಕೇಳಬೇಕೆ ? ಅವಳಿಗೆ ದಿಗ್ಭ್ರಮೆಹಿಡಿದಂತಾಯಿತು. ಏನೊಂದೂ ತೋರದೆ ಸ್ತಬ್ಧಳಾಗಿ ನಿಂತು ಯೋಚಿಸುವಳು. ‘‘ಆಹಾ! ಏನಿದು! ಈ ಸಣ್ಣಬಾಲಕನ ಬಾಯಲ್ಲಿ ಸಮಸ್ತಪ್ರಪಂಚವೂ ಕಾಣುತ್ತಿರುವು

ದಲ್ಲಾ! ಇದೇನು! ಕನಸೋ! ಮಾಯೆಯೋ!ಅಥವಾ ಇದು ನನ್ನ ಬುದ್ಧಿಭ್ರಮವೋ! ಎಷ್ಟಾವರ್ತಿ ನೋಡಿದರೂ ಒಂದೇವಿಧವಾಗಿ ಕಾಣುತ್ತಿರುವುದರಿಂದ, ಇದನ್ನು ಸ್ವಪ್ನಾದಿಗಳೆಂದು ಹೇಳುವುದಕ್ಕಿಲ್ಲ ಅಥವಾ ಹೀಗೆ ಕಾಣಿಸುವುದಕ್ಕೆ ಈ ಬಾಲನಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನ ಸಹಜಶಕ್ತಿಯೇ ಕಾರಣವಾಗಿರಬಹುದೆ? ಆಹಾ! ಯಾವವಿಧದಲ್ಲಿ ಯೋಚಿಸಿದರೂ ನಿಜಸ್ಥಿತಿಯು ತಿಳಿಯಲಿಲ್ಲವಲ್ಲಾ! ಬುದ್ಧಿಯಿಂದಾಗಲಿ, ಮನೋವ್ಯಾಪಾರದಿಂದಾಗಲಿ, ವಾಕ್ಯನಿಂದಾಗಲಿ ನಿಜಸ್ಥಿತಿಯನ್ನು ತಿಳಿಯುವುದಕ್ಕಾಗದ ಈ ಸಕಲಪ್ರಪಂಚದ ಸೃಷ್ಟಿ, ಸ್ಥಿತಿ ಲಯಗಳಿಗೆ ಯಾವನು ಆಧಾರವಾಗಿರುವನೋ, ಅಪ್ರಮೇಯ ಪ್ರಭಾವನಾದ ಆ ಭಗವಂತನ ಪಾದಗಳನ್ನು ವಂದಿಸುವೆನು. ಇದು ಈಶ್ವರಶಕ್ತಿಯಲ್ಲದೆ ಬೇರೆಯಲ್ಲ. ಈ ನನ್ನ ಸಂದೇಹವನ್ನು ಆ ಪರಮಾತ್ಮನೇ ಬಿಡಿಸಬೇಕಲ್ಲದೆ ಬೇರೆಗತಿಯಿಲ್ಲ! ಈ ನಂದನೇ ನನಗೆ ಪತಿ! ಈ ಕೃಷ್ಣನೇ ನನ್ನ ಮಗನು! ಈ ಸಮಸ್ತಗೋಧನಗಳೊಡಗೂಡಿದ ಗೋಪಾಲಕರೆಲ್ಲರೂ ನನ್ನ ಬಂಧುಗಳು! ಈ ನಂದನ ಮನೆಗೂ,ಇವನ ಐಶ್ವರ್ಯಗಳಿಗೂ ನಾನೇ ಯಜಮಾನಿ" ಎಂಬವೇ ಮೊದಲಾದ ಅಹಂಕಾರಮಮಕಾರಗಳೆಲ್ಲವೂ ನನಗೆ ಯಾವನ ಮಾಯೆಯಿಂದಲೇ ಉಂಟಾದುವೋ, ಆ ಭಗವಂತನೇ ಈಗ ನನಗೆ ದಿಕ್ಕಾಗಿ, ನನ್ನ ಈ ಕುಬುದ್ಧಿಯನ್ನು ನೀಗಿಸುವುದಕ್ಕೆ ಉಪಾಯಭೂತನಾಗಲಿ! ಎಂದು ಧ್ಯಾನಿಸುತ್ತಾ ಹಾಗೆಯೇ ಸ್ವಲ್ಪಹೊತ್ತಿನವರೆಗೆ ಸ್ತಬ್ಧಳಾಗಿದ್ದಳು. ಆಗ ಕೃಷ್ಣನೇ ಸಾಕ್ಷಾತ್ಪರಮಪುರುಷನೆಂಬ ಬುದ್ಧಿಯು ಅವಳಿಗೆ ಹುಟ್ಟುತ್ತಬಂದಿತು. ಹೀಗೆ ಯಶೋದೆಯು ತನ್ನ ಯಥಾರ್ಥಸ್ವರೂಪವನ್ನು ತಿಳಿದುಕೊಂಡಕೂಡಲೆ ತಿರುಗಿ ಶ್ರೀಕೃಷ್ಣನು ಪ್ರಾಣಿಗಳಿಗೆ "ತಾನು, ತನ್ನದು" ಎಂಬ ಮೋಹವನ್ನು ಹುಟ್ಟಿಸತಕ್ಕ ತನ್ನ ಮಾಯೆಯನ್ನು ವಿಸ್ತರಿಸಿದನು. ಹೀಗೆಯೇ ಯಶೋದೆಗೆ ಸ್ವಲ್ಪಹೊತ್ತಿನವರೆಗೆ ಪ್ರಜ್ಞೆತಪ್ಪಿದಂತಾಯಿತು. ತಿರುಗಿ ಅವಳಿಗೆ ಪ್ರಜ್ಞೆಬರುವುದರೊಳಗಾಗಿ, ಹಿಂದೆ ಅವಳ ಮನಸ್ಸಿಗೆ ತೋರಿದ್ದ ಪರಸ್ವರೂಪಜ್ಞಾನವು ಮರೆತು ಆಕೃಷ್ಣನಲ್ಲಿ ತನ್ನ ಮಗನೆಂಬ ಮೋಹವೇ ಉಂಟಾಯಿತು. "ಮಗೂ ಕೃಷ್ಣಾ! ಬಾ"

ಎಂದು ಪ್ರೇಮಪುರಸ್ಸರವಾಗಿ ಆ ಬಾಲನನ್ನ ಕರದು ತೊಡೆಯಮೇಲೆ ಕು ಳ್ಳಿರಿಸಿಕೊಂಡು ಮೊದಲಿನಂತೆ ಆ ಕೃಷ್ಣನನ್ನು ತನ್ನ ಮುದ್ದುಮಗನೆಂಬ ಮೋಹದಿಂದ ಆಗಾಗ ಮುತ್ತಿಕ್ಕಿ ಲಾಲಿಸುತ್ತಿದ್ದಳು. ಓ ಪರೀಕ್ಷಿದ್ರಾಜಾ! ಆ ಯಶೋದೆಯ ಭಾಗ್ಯಕ್ಕಿಂತಲೂ ಭಾಗ್ಯವುಂಟೆ? ಮೂರು ವೇದಗಳಿಂದಲೂ, ಉಪನಿಷತ್ತುಗಳಿಂದಲೂ, ಜ್ಞಾನಯೋಗಕರ್ಮಯೋಗಗಳಿಂದ ಸಹಕರಿಸ ಲ್ಪಟ್ಟ ಭಕ್ತಿಯೋಗದಿಂದಲೂ, ಪಾಂಚರಾತ್ರಸಂಹಿತೆಗಳಿಂದಲೂ ಯಾ ವನ ಮಾಹಾತ್ಮ್ಯವು ಅನವರತವೂ ಕೊಂಡಾಡಲ್ಪಡುವುದೋ, ಅಂತಹ ಪರಮಪುರುಷನನ್ನೇ ತನ್ನ ಮುದ್ದುಮಗನನ್ನಾಗಿ ಲಾಲಿಸುತ್ತಿದ್ದ ಆಕೆ ಯಲ್ಲವೇ ಪರಮಧನ್ಯಳು." ಎಂದನು!

ಆಗ ಪರೀಕ್ಷಿದ್ರಾಜನು! "ಓ ಮಹರ್ಷೀ? ನಂದನಿಗೆ ಈ ವಿಧ ವಾದ 'ಭಾಗ್ಯವುಂಟಾಗುವುದಕ್ಕೆ ಕಾರಣವೇನು? ಸಾಕ್ಷಾದ್ಭಗವಂ ತನಿಗೆ ಸ್ತನ್ಯಪಾನವನ್ನು ಮಾಡಿಸತಕ್ಕ ಮಹಾಭಾಗ್ಯವು ಆ ಯಶೋದೆಗೆ ಲಭಿಸಬೇಕಾದರೆ, ಆಕೆಯು ಪೂರ್ವಜನ್ಮದಲ್ಲಿ ಎಷ್ಟು ಪುಣ್ಯವನ್ನು ಮಾಡಿರ ಬೇಕು? ಆ ಪರಮಾತ್ಮನ ಬಾಲಕ್ರೀಡೆಗಳನ್ನು ಕಿವಿಯಿಂದ ಕೇಳಿದರೂ, ಬಾಯಿಂದ ಹೇಳಿದರೂ, ಜನರಿಗೆ ಜನ್ಮಾಂತರಪಾಪಗಳೆಲ್ಲವೂ ನೀಗುವುವು. ನಾರದನೇ ಮೊದಲಾದ ಮಹಾಜ್ಞಾನಿಗಳೂಕೂಡ ಯಾವನ ಗುಣಗಳ ನ್ನು ಸರ್ವದಾ ಕೀರ್ತಿಸುತ್ತಿರುವರೋ, ಅಂತಹ ಪರಮಪುರುಷನನ್ನೇ ದೇ ವಕೀವಸುದೇವರು ತಮ್ಮ ಗರ್ಭದಲ್ಲಿ ಪಡೆದಿದ್ದರೂ, ಆ ಕೃಷ್ಣನನ್ನು ಕೈಯಿಂದೆತ್ತಿ ಲಾಲಿಸತಕ್ಕ ಭಾಗ್ಯವೂ, ಅವನ ಬಾಲಕ್ರೀಡೆಗಳನ್ನು ಕಣ್ಣಾ ರೆ ನೋಡಿ ಆನಂದಿಸತಕ್ಕ ಪುಣ್ಯವೂ ಅವರಿಗೆಮಾತ್ರ ಇಲ್ಲದಿದ್ದುದಕ್ಕೆ ಕಾರ ಣವೇನು." ಎಂದನು. ಅದಕ್ಕಾ ಶುಕನು. ರಾಜೇಂದ್ರಾ ಕೇಳು "ಪೂರ್ವದಲ್ಲಿ ಅಷ್ಟವಸುಗಳಲ್ಲಿ ಪ್ರಧಾನನಾದ ದ್ರೋಣನೆಂಬವನಿಗೆ ಧರೆಯೆಂಬ ಪತ್ನಿ ಯಿದ್ದಳು. ಬ್ರಹ್ಮದೇವನು ಅವರಿಬ್ಬರನ್ನೂ ಭೂಮಿಯಲ್ಲಿ ಹುಟ್ಟುವಂತೆ ಆಜ್ಞೆಮಾಡಿದನು. ಆಗ ಅವರಿಬ್ಬರೂ, ತಾವು ಭೂಮಿಯಲ್ಲಿ ಹುಟ್ಟಿದಾಗ ಸರ್ವೇಶ್ವರನಾದ ಶ್ರೀಹರಿಯಲ್ಲಿ ತಮಗೆ ದೃಢವಾದ ಭಕ್ತಿಯುಂಟಾಗುವಂ ತೆ ಅನುಗ್ರಹಿಸಬೇಕೆಂದು ಕೇಳಿಕೊಂಡರು, ಬ್ರಹ್ಮನು ಹಾಗೆಯೇ ಆಗ

ಲೆಂದು ಅನುಗ್ರಹಿಸಿದನು. ಅವರಿಬ್ಬರೇ ಈಗ ನಂದಯಶೋದೆಯರಾಗಿ ಜನಿಸಿದರು. ಭಗವಂತನು ಬ್ರಹ್ಮಾನುಗ್ರಹವನ್ನು ಸತ್ಯವಾಗಿ ಮಾಡುವುದಕ್ಕಾಗಿಯೇ, ತನ್ನ ಅಣ್ಣನಾದ ಬಲರಾಮನೊಡನೆ ಗೋಕುಲದಲ್ಲಿ ಬೆಳೆಯುತ್ತಾ, ಆಗಾಗ ತನ್ನ ಅದ್ಭುತಲೀಲೆಗಳನ್ನು ತೋರಿಸಿ, ಅವರಿಗೆ ತನ್ನಲ್ಲಿ ಭಕ್ತಿಯನ್ನು ಹೆಚ್ಚಿಸುತ್ತಿರುವನು. ಇದು ಎಂಟನೆಯ ಅಧ್ಯಾಯವು.

---

## ಯಮಳಾರ್ಜುನ ಭಂಜನ ವೃತ್ತಾಂತವು

ಒಮ್ಮೆ ಯಶೋದೆಯು, ತನ್ನ ಮನೆಯ ಕೆಲಸಗಾತಿಯರೆಲ್ಲರನ್ನೂ, ಬೇರೆಬೇರೆ ಕೆಲಸಗಳಮೇಲೆ ಕಳುಹಿಸಿದ್ದುದರಿಂದ, ಆದಿನದಲ್ಲಿ ತಾನೇ ಮೊಸರನ್ನು ಕಡೆಯಬೇಕಾಯಿತು.! ಇದಕ್ಕಾಗಿ ಆಕೆಯು ಸೀರೆಯ ಸೆರಗನ್ನು ಪಾಬಿನಲ್ಲಿ ಸಿಕ್ಕಿಸಿಕೊಂಡು, ತನ್ನ ಮುದ್ದುಮಗನಾದ ಕೃಷ್ಣನ ಬಾಲಕ್ರೀಡೆಗಳನ್ನು ಕುರಿತು ಕವಿಗಳು ರಚಿಸಿರುವ ಹಾಡುಗಳನ್ನು ಹಾಡುತ್ತ, ಮೊಸರನ್ನು ಕಡೆಯುತಿದ್ದಳು ಆಗ ಅವಳಿಗೆ ಕುಲುಕಾಡುವ ಸ್ತನಗಳು! ಕೈಬಳೆಯ ಗಲ್ಗಲಧ್ವನಿ! ಮುಖದಲ್ಲಿ ಬೆವರು! ತೂಗಾಡುತ್ತಿರುವ ಕಿವಿಯೋಲೆಗಳು! ತಲೆಯಿಂದುದುರುತ್ತಿರುವ ಬಿಡುಹೂಗಳು! ಈ ಸ್ಥಿತಿಯಿಂದ ಅವಳು ಹಾಲನ್ನು ಕಡೆಯುತ್ತಿರುವಾಗ, ಕೃಷ್ಣನು ಸ್ತನ್ಯಪಾನಕ್ಕಾಗಿ ಆಸೆಯಿಂದ ಬಂದು, ಅವಳನ್ನು ನಿರ್ಬಂಧಿಸುತ್ತ, ಕೊನೆಗೆ, ಅವಳು ಮುಂದೆ ಕಡೆಯುವುದಕ್ಕೇ ಅವಕಾಶಕೊಡದಂತೆ, ಅವಳ ಕೈಯಲ್ಲಿದ್ದ ಕಡೆಗೋಲನ್ನು ಹಿಡಿದುಬಿಟ್ಟನು. ಈ ನಿರ್ಬಂಧದಿಂದ ಯಶೋದೆಯು, ಅವನನ್ನೆತ್ತಿಕೊಂಡು ಮೊಲೆಯೂಡಿಸುತ್ತ, ಮಂದಹಾಸಸುಂದರವಾದ ಅವನ ಮುಖವನ್ನು ನೋಡಿ ಆನಂದಿಸುತಿದ್ದಳು ಹೀಗೆ ಸ್ತನ್ಯಪಾನಮಾಡಿಸುತ್ತಿರುವಾಗ, ಆಕೆಯು ಒಲೆಯಮೇಲೆ ಇಟ್ಟುಬಂದಿದ್ದ ಹಾಲು ಉಕ್ಕಿಬರುವಂತಾಯಿತು. ಕೃಷ್ಣನು ಇನ್ನೂ ಸ್ತನ್ಯಪಾನದಿಂದ ತೃಪ್ತನಾಗುವುದಕ್ಕೆಮೊದಲೇ, ಬಲಾತ್ಕಾರದಿಂದ ಅವನನ್ನು ಕೆಳಕ್ಕಿಳಿಸಿ, ಆ ಹಾಲನ್ನೆತ್ತಿಡುವುದಕ್ಕಾಗಿ ಹೊರಟುಹೋದಳು. ಆಗ ಕೃಷ್ಣನಿಗೆ ಬಹಳ ಕೋಪವುಂಟಾಯಿತು. ಈ ಕೋಪದಿಂದ ತುಟಿಯನ್ನು ಕಚ್ಚಿಕೊಳ್ಳು

ತ್ತ, ಬಹಳ ದುಃಖಿತನಾದಂತೆ ಸುಳ್ಳುಸುಳ್ಳಾಗಿ ಕಣ್ಣೀರನ್ನು ಸುರಿಸುತ್ತ ಬಂದು, ಒಂದು ಕಲ್ಲನ್ನೆತ್ತಿ, ಯಶೋದೆಯು ಕಡೆಯುತ್ತಿದ್ದ ಮೊಸರಿನ ಮಡಕೆಯನ್ನು ರಂಧ್ರಮಾಡಿ, ಅದರಲ್ಲಿ ಹೆಪ್ಪುಗಟ್ಟಿದ್ದ ಹೊಸಬೆಣ್ಣೆಯೆಲ್ಲವನ್ನೂ ಯಾರಿಗೂ ತಿಳಿಯದಂತೆ ತಿಂದುಬಿಟ್ಟನು. ಇಷ್ಟರಲ್ಲಿ ಯಶೋದೆಯು ಹಾಲಿನ ಪಾತ್ರವನ್ನು ಒಲೆಯಮೇಲಿಂದ ತೆಗೆದಿಟ್ಟು, ತಿರುಗಿ ಮೊಸರನ್ನು ಕಡೆಯುವುದಕ್ಕಾಗಿ ಹಿಂತಿರುಗಿ ಬಂದಳು. ಇತ್ತಲಾಗಿ ಮೊಸರಿನ ಪಾತ್ರೆಯು ಒಡೆದುಹೋಗಿರುವುದನ್ನು ನೋಡಿದಾಗ, ಅವಳ ಮನಸ್ಸಿಗೆ ಬಹಳ ಕೋಪವುಂಟಾದರೂ, ಅದು ಕೃಷ್ಣನ ಚೇಷ್ಟೆಯೆಂಬುದನ್ನು ತಿಳಿದು, ತನ್ನೊಳಗೆ ತಾನೇ ನಗುತ್ತ ಸುಮ್ಮನಾದಳು. ಸುತ್ತಲೂ ತಿರುಗಿ ನೋಡಿ, ಅಲ್ಲಿ ಕೃಷ್ಣನನ್ನು ಕಾಣದೆ, ಮಗುವೆಲ್ಲಿ ಹೋಯಿತೆಂಬುದನ್ನು ತಿಳಿಯಬೇಕೆಂಬ ಆತುರದಿಂದ, ಮೂಲೆಮೂಲೆಗಳಲ್ಲಿ ಹುಡುಕುತ್ತ ಬಂದಳು. ಒಳಮನೆಗೆ ಬಂದು ನೋಡುವಾಗ, ಕೃಷ್ಣನು ಅಲ್ಲಿ ಒಂದಾನೊಂದು ಮೂಲೆಯಲ್ಲಿದ್ದ ಒರಳುಕಲ್ಲಿನಮೇಲೆ ಕುಳಿತು, ತಾನು ತಿಂದು ಮಿಕ್ಕಬೆಣ್ಣೆಯನ್ನು ಒಂದು ಕೋತಿಗೆ ತಿನ್ನಿಸುತಿದ್ದನು. ಆಗ ಯಶೋದೆಯು ಸಮೀಪದಲ್ಲಿದ್ದ ಒಂದು ಕಡೆಗೋಲನ್ನು ಕೈಗೆತ್ತಿಕೊಂಡು, ಸದ್ದಿಲ್ಲದಹಾಗೆ ಮೆಲ್ಲಮೆಲ್ಲನೆ ಹಿಂದಿನಿಂದ ಬಂದು, ಆ ಕೃಷ್ಣನನ್ನು ಹಿಡಿಯುವುದಕ್ಕೆ ಯತ್ನಿಸಿದಳು. ಇಷ್ಟರಲ್ಲಿ ಕೃಷ್ಣನು, ಹೇಗೋ ಆ ಸಂಚನ್ನು ತಿಳಿದು, ಕೈಯಲ್ಲಿ ಕೋಲನ್ನು ಹಿಡಿದು ಬರುತ್ತಿರುವ ಆ ಯಶೋದೆಯನ್ನು ಕಂಡು ಬೆದರಿದಂತೆ ನಟಿಸುತ್ತ, ತಾನು ಕುಳಿತಿದ್ದ ಒರಳುಕಲ್ಲಿನಿಂದ ತಟ್ಟನೆ ಕೆಳಕ್ಕೆ ಹಾರಿ, ಅವಳ ಕೈಗೆ ಸಿಕ್ಕದೆ ಓಡಲಾರಂಭಿಸಿದನು. ಮಹಾಯೋಗಿಗಳೂಕೂಡ, ತಪಃಪ್ರವಣವಾದ ತಮ್ಮ ಮನಸ್ಸಿನಿಂದ ಯಾವನನ್ನು ಹಿಡಿಯಲಾರದೆ ಹಿಂತಿರುಗುವರೋ, ಅಂತಹ ಪರಮಪುರುಷನನ್ನು ತನ್ನ ಕೈಯಿಂದ ಹಿಡಿಯಬೇಕೆಂದು, ಆ ಗೊಲ್ಲಿತಿಯು ಅವನ ಹಿಂದೆ ತಾನೂ ಓಡಲಾರಂಭಿಸಿದಳು. ಆ ಕೃಷ್ಣನನ್ನು ಹಿಡಿಯುವುದಕ್ಕಾಗಿ ವೇಗದಿಂದೋಡುವಾಗ, ಜಘನಭಾರದಿಂದ ಆಗಾಗ ಅವಳ ನಡೆಯು ತೊಡರುತ್ತಿರುವುದು! ಸುಕುಮಾರವಾದ ಸಣ್ಣನಡುವು ಬಳುಕುತ್ತಿರುವುದು! ತಲೆಯಲ್ಲಿ ಮುಡಿದ ಹೂವಿನ ದಂಡೆಯಿಂ

ದ ದಾರಿಯುದ್ದಕ್ಕೂ ಹೂಗಳು ಉದಿರಿಬೀಳುತ್ತಿರುವುವು! ಇಷ್ಟಾದರೂ ಬಿಡದೆ ಪ್ರಯತ್ನಪಟ್ಟು ಓಡಿಬಂದು, ಆ ಕೃಷ್ಣನನ್ನು ಹಿಡಿದಳು. ಇವಳ ಕೈಗೆ ಸಿಕ್ಕಿದೊಡನೆ ಕೃಷ್ಣನು. ಅವಳ ಕೋಪವನ್ನೂ, ಅವಳು ಕೈಯಲ್ಲಿ ಹಿಡಿದಿದ್ದ ದಂಡವನ್ನೂ ನೋಡಿ, ಅಪರಾಧಿಯಾದ ತನ್ನನ್ನು ಶಿಕ್ಷಿಸುವಳೆಂಬ ಭಯದಿಂದ, ಅವಳನ್ನೇ ನೋಡುತ್ತ ಸುಮ್ಮಸುಮ್ಮನೆ ಅಳುವಂತೆ ನಟಿಸುತಿದ್ದನು. ಕಣ್ಣಿಗೆ ಹಚ್ಚಿದ್ದ ಕಾಡಿಗೆಯು ಮುಖಕ್ಕೆಲ್ಲವೂ ಹರಡಿಕೊಳ್ಳುವಂತೆ ಎರಡು ಕೈಗಳಿಂದಲೂ ಕಣ್ಣುಗಳನ್ನು ತಿಕ್ಕುತಿದ್ದನು. ಈ ಸ್ಥಿತಿಯನ್ನು ನೋಡಿದೊಡನೆ ಪುತ್ರಮೋಹಪರವಶೆಯಾದ ಯಶೋದೆಗೆ, ಮೊದಲಿದ್ದ ಕೋಪವೆಲ್ಲವೂ ಅಡಗಿಹೋಯಿತು, ಇಷ್ಟುಮಾತ್ರಕ್ಕೇ ತನ್ನ ಮಗನು ಬಹಳ ಭಯಪಟ್ಟಿರುವನೆಂದು ತಿಳಿದು, ಅವನನ್ನು ಬೇರೆವಿಧವಾಗಿ ದಂಡಿಸಲಾರದೆ, ತಾನು ಕೈಯಲ್ಲಿ ಹಿಡಿದಿದ್ದ ಕೋಲನ್ನು, ಕೆಳಗೆ ಬಿಸುಟು, ಆ ಕೃಷ್ಣನ ಕೈಯನ್ನು ಹಿಡಿದು ನಿಲ್ಲಿಸಿಕೊಂಡು “ತುಂಟ ಕೃಷ್ಣಾ! ನಿನ್ನನ್ನು ಇದೇ ಒರಳಿಗೆ ಕಟ್ಟಿಹಾಕುವೆನು ಬಾ!” ಎಂದು ಹೇಳಿ, ಒರಳಿನ ಸಮೀಪಕ್ಕೆ ಕರೆತಂದು ನಿಲ್ಲಿಸಿ, ಸಮೀಪದಲ್ಲಿದ್ದ ಒಂದು ಮಾರುದ್ದದ ಹಗ್ಗವನ್ನು ತೆಗೆದು, ಅವನ ನಡುವಿಗೆ ಸುತ್ತಿ ಕಟ್ಟಲಾರಂಭಿಸಿದಳು ಓ ಪರೀಕ್ಷಿದ್ರಾಜ! ಆ ಗೋಪಾಂಗನೆಯು ಆತನ ಪ್ರಭಾವವನ್ನು ಹೇಗೆತಾನೇ ತಿಳಿಯಬಲ್ಲಳು? ಯಾವನು ಹೊರಗೆಂದೂ, ಒಳಗೆಂದೂ ಸ್ಥಳನಿಯಮವಾಗಲಿ, ಕೊನೆಮೊದಲೆಂಬ ಪರಿಮಾಣವಾಗಲಿ ಇಲ್ಲದೆ, ಜಗತ್ತಿನ ಹೊರಗೂ, ಒಳಗೂ, ಅದರ ಆದ್ಯಂತಗಳಲ್ಲಿಯೂ ವ್ಯಾಪಿಸಿ, ತಾನೇ ಜಗತ್ತಾಗಿರುವನೋ, ಮತ್ತು ಯಾವನು ಅವ್ಯಕ್ತನೆನಿರುವನೋ, ಅಂತಹ ಪರಮಪುರುಷನನ್ನೇ ತನ್ನ ಮಗನೆಂದು ತಿಳಿದು, ಹಗ್ಗದಿಂದ ಬಿಗಿಯುವುದಕ್ಕೆ ಯತ್ನಿಸಿದಳು. ಕೃಷ್ಣನ ನಡುವಿಗೆ ಸುತ್ತಿ ನೋಡುವಾಗ, ಆ ಹಗ್ಗವು ಎರಡಂಗುಲದಷ್ಟು ಸಾಲದೆಹೋಯಿತು. ಅದನ್ನು ಪರಿಮಾಡುವುದಕ್ಕಾಗಿ ಮತ್ತೊಂದು ಹಗ್ಗದ ತುಂಡನ್ನು ತಂದು ಅದಕ್ಕೆ ಸೇರಿಸಿ ಗಂಟುಹಾಕಿದಳು. ಆಗಲೂ ಎರಡಂಗುಲವು ಸಾಲದಂತಾಯಿತು. ಹಾಗೆಯೇ ಎಷ್ಟೆಷ್ಟು ಹಗ್ಗವನ್ನು ಸೇರಿಸಿ ಗಂಟುಹಾಕಿ ನೋಡಿದರೂ, ಎರಡಂಗುಲಗಳು ಸಾಲದೆ ಹೋಗುತಿದ್ದುವು. ಮನೆಯಲ್ಲಿದ್ದ ಹಗ್ಗವೆಲ್ಲವೂ ತೀರಿಹೋದರೂ, ಆ

ಮುದ್ದು ಕೃಷ್ಣನ ಸಣ್ಣ ನಡುವಿಗೆ ಸಾಲದಂತಾಯಿತು. ಆಗ ಯಶೋದೆಗೆ ಅತ್ಯಾಶ್ಚರ್ಯವುಂಟಾಯಿತು! ಗೋಪಸ್ತ್ರೀಯರೆಲ್ಲರೂ ಆಶ್ಚರ್ಯದಿಂದ ಬೆರಗಾಗಿ ನೋಡುತಿದ್ದರು. ಹೇಗಾದರೂ ಆ ಕೃಷ್ಣನನ್ನು ಕಟ್ಟಿಹಾಕಬೇಕೆಂಬ ಉದ್ದೇಶದಿಂದ ಯಶೋದೆಯು, ಹಗ್ಗವನ್ನು ಹುಡುಕುವುದಕ್ಕಾಗಿ ತಿರುಗಿತಿರುಗಿ ಸಾಕಾಯಿತು. ಈ ಸಂಚಾರಶ್ರಮದಿಂದ ಅವಳ ಮೈಯೆಲ್ಲವೂ ಬೆವರಿತು ತಾಯಿಯು ಹೀಗೆ ಶ್ರಮಪಡುತ್ತಿರುವುದನ್ನು ನೋಡಿದ ಮೇಲೆ, ಕೃಷ್ಣನಿಗೆ ಅವಳಲ್ಲಿ ಕರುಣೆಹುಟ್ಟಿ, ಕೊನೆಗೆ ಅವಳ ಕೈಯಿಂದ ಕಟ್ಟಿಸಿಕೊಂಡನು. ಓ ಪರೀಕ್ಷಿದ್ರಾಜಾ! ಬ್ರಹ್ಮರುದ್ರಾದಿದೇವಗಣಗಳನ್ನೂ ಅವರು ಪಾಲಿಸತಕ್ಕ ಸಮಸ್ತಪ್ರಪಂಚವನ್ನೂ ತನಗೆ ಅಧೀನವಾಗಿಟ್ಟುಕೊಂಡಿರುವ ಅಂತಹ ಸರ್ವಸ್ವತಂತ್ರನಾದ ಪರಮಪುರುಷನು, ತನ್ನ ಭಕ್ತರಿಗೆಮಾತ್ರ ತಾನು ಅಧೀನನೆಂಬುದನ್ನು ಈ ವಿಧವಾದ ನಿದರ್ಶನಗಳಿಂದ ತೋರಿಸುತ್ತಿರುವನು. ಓ ರಾಜೇಂದ್ರಾ! ಯಶೋದೆಯ ಭಾಗ್ಯಕ್ಕಿಂತಲೂ ಭಾಗ್ಯವುಂಟೆ? ಮೋಕ್ಷಪ್ರದನಾದ ಭಗವಂತನು ಯಶೋದೆಯಲ್ಲಿ ತೋರಿಸುತಿದ್ದ ಈ ವಿಧವಾದ ಅನುಗ್ರಹಕ್ಕೆ, ಸೃಷ್ಟಿಕರ್ತನಾದ ಬ್ರಹ್ಮನಾಗಲಿ, ಲಯಕರ್ತನಾದ ರುದ್ರನಾಗಲಿ, ಆ ಭಗವಂತನ ವಕ್ಷಸ್ಥಲದಲ್ಲಿಯೇ ನಿತ್ಯವಾಸವನ್ನು ಮಾಡುವ ಲಕ್ಷ್ಮಿಯಾಗಲಿ ಪಾತ್ರರಾಗಲಿಲ್ಲ! ಭಕ್ತರಿಗೊಲಿಯುವಂತೆ ಆ ಭಗವಂತನು ಜ್ಞಾನಿಗಳಿಗೂ ಒಲಿಯತಕ್ಕವನಲ್ಲವೆಂದು ತಿಳಿ!

ಯಶೋದೆಯು ಕೃಷ್ಣನನ್ನು ಆ ಒರಳಿಗೆ ಕಟ್ಟಿಹಾಕಿದಮೇಲೆ, ಗೃಹಕೃತ್ಯವನ್ನು ನೋಡುವುದಕ್ಕಾಗಿ ಹೊರಟುಹೋದಳು. ಇವಳು ಇತ್ತಲಾಗಿ ಗೃಹಕಾರ್ಯಗಳನ್ನು ಗಮನಿಸುತಿದ್ದಾಗ, ಅತ್ತಲಾಗಿ ಕೃಷ್ಣನು ಆ ಒರಳುಕಲ್ಲನ್ನೂ ತನ್ನ ಹಿಂದೆ ಎಳೆದಾಡುತ್ತ, ಅಲ್ಲಲ್ಲಿ ಸುತ್ತುತಿದ್ದು, ಮುಂದೆ ಎರಡು ಮತ್ತಿಯ ಮರಗಳನ್ನು ಕಂಡನು. ಓ ರಾಜೇಂದ್ರಾ! ಪೂರ್ವದಲ್ಲಿ ಕುಬೇರನ ಮಕ್ಕಳಾದ ನಳಕೂಬರಮಣಿಗ್ರೀವರೆಂಬ ಯಕ್ಷರಿಬ್ಬರು, ಐಶ್ವರ್ಯಮದಾಂಧರಾಗಿ, ನಾರದನ ಶಾಪದಿಂದ ಹೀಗೆ ವೃಕ್ಷರೂಪವನ್ನು ಹೊಂದಿದ್ದರು. ಸರ್ವಜ್ಞನಾದ ಕೃಷ್ಣನು ಅದನ್ನು ತಿಳಿದು, ಅವರ ಶಾಪವಿಮೋಚನಕ್ಕಾಗಿ ಸಂಕಲ್ಪಿಸಿಮುಂದೆ ಬಂದನು. ಇದು ಒಂಬತ್ತನೆಯ ಅಧ್ಯಾಯವು.

## ನಳಕೂಬರಮಣಿಗ್ರೀವರ ಶಾಪವಿಮೋಚನವು.

ಆಗ ಪರೀಕ್ಷಿದ್ರಾಜನು “ ಓ ಮಹರ್ಷೀ! ಆ ಯಕ್ಷರಿಬ್ಬರೂ ನಾರದನಲ್ಲಿ ಯಾವ ಅಪರಾಧವನ್ನು ಮಾಡಿದರು? ಅವರ ಶಾಪಕಾರಣವೇನು? ಅದನ್ನು ವಿವರವಾಗಿ ತಿಳಿಸಬೇಕು” ಎಂದನು ಆದಕ್ಕಾಶುಕಮುನಿಯು “ರಾಜೇಂದ್ರಾ! ಅವರಿಬ್ಬರೂ ಕುಬೇರನ ಮಕ್ಕಳು. ಅವರಿಬ್ಬರಿಗೂ ನಳಕೂಬರ ಮಣಿಗ್ರೀವರೆಂದು ಹೆಸರು. ಅವರಿಬ್ಬರೂ ರುದ್ರನಿಗೆ ಅನುಚರರಾಗಿ ಅವನ ಸೇವೆಯನ್ನು ಮಾಡಿ, ಅದರಿಂದ ರುದ್ರಾನುಗ್ರಹಕ್ಕೆ ಪಾತ್ರರಾಗಿದ್ದರು, ಈ ಹೆಮ್ಮೆಯಿಂದ ಅವರು ಬಹಳ ಮದಾಂಧರಾಗಿದ್ದರು. ಒಮ್ಮೆ ಅವರಿಬ್ಬರೂ ಕೈಲಾಸಪರ್ವತದಲ್ಲಿರುವ ಮಂದಾಕಿನೀನದಿಯ ತೀರಕ್ಕೆ ಬಂದು, ಅಲ್ಲಿ ಪುಷ್ಪಸಮೃದ್ಧವಾದ ಒಂದಾನೊಂದು ಉಪವನವನ್ನು ಪ್ರವೇಶಿಸಿ, ಅಲ್ಲಿ ಸಂತೋಷದಿಂದ ಮದ್ಯಪಾನವನ್ನು ಮಾಡಿ, ಮದದಿಂದ ಮೈಮರೆತು ತಿರುಗುತಿದ್ದರು. ಸ್ತ್ರೀಯರೊಡನೆ ಸೇರಿ ಅವರ ಗಾನನರ್ತನಗಳನ್ನು ಕೇಳಿ ಆನಂದಿಸುತ್ತಿದ್ದರು. ಹಾಗೆಯೇ ತಮ್ಮ ತಮ್ಮ ಯುವತಿಯರೊಡನೆ ತಾವರೆಹೂಗಳಿಂದ ತುಂಬಿದ ಮಡುವಿನಲ್ಲಿಳಿದು, ಹೆಣ್ಣಾನೆಗಳೊಡಗೂಡಿ ವಿಹರಿಸುವ ಮದದಾನೆಗಳಂತೆ ಯಥೇಚ್ಛವಾಗಿ ಜಲಕ್ರೀಡೆಯನ್ನಾಡುತಿದ್ದರು. ಈ ಸಮಯಕ್ಕೆ ಸರಿಯಾಗಿ, ದೇವಋಷಿಯಾದ ನಾರದನು, ಮಾರ್ಗವಶದಿಂದ, ಆ ನದೀತೀರಕ್ಕೆ ಬಂದು, ಆ ಯಕ್ಷರಿಬ್ಬರೂ ಮದದಿಂದ ಮೈಮರೆತಿರುವುದನ್ನು ಕಂಡನು. ಆಗ ಆ ಯಕ್ಷಸ್ತ್ರೀಯರೆಲ್ಲರೂ ಮೈಮೇಲೆ ಬಟ್ಟೆಯಿಲ್ಲದೆ ದಿಗಂಬರರಾಗಿದ್ದುದರಿಂದ, ಈ ಋಷಿಯನ್ನು ಕಂಡೊಡನೆ ನಾಚಿಕೆಯಿಂದ ಥಟ್ಟನೆ ಮೇಲೆಬಂದು, ತಮ್ಮ ತಮ್ಮ ವಸ್ತ್ರಗಳನ್ನು ಸುತ್ತಿಕೊಂಡರು. ಆ ಯಕ್ಷರಿಬ್ಬರುಮಾತ್ರ ಮದಾಂಧರಾಗಿ ನಾರದನನ್ನು ಕಂಡಾಗಲೂ, ಲಕ್ಷ್ಯವಿಲ್ಲದೆ, ದಿಗಂಬರರಾಗಿಯೇ ಇದ್ದುಬಿಟ್ಟರು. ಹೀಗೆ ಆ ನಳಕೂಬರಮಣಿಗ್ರೀವರಿಬ್ಬರೂ. ಐಶ್ವರ್ಯಮದದಿಂದಲೂ, ಮದ್ಯಮದದಿಂದಲೂ ಮೈತಿಳಿಯದೆ, ತನ್ನನ್ನು ಲಕ್ಷ್ಯಮಾಡದಿರುವುದನ್ನು ನೋಡಿ ನಾರದನಿಗೆ ಕೋಪವುಂಟಾಯಿತು. ಆಗ ನಾರದನಿಗೆ ಇನ್ನು ಮೇಲಾದರೂ ಅವರಿಗೆ ಒಳ್ಳೆಯ ನಡತೆಯನ್ನು ಕಲಿಸಬೇ

ಕೆಂಬ ಅನುಗ್ರಹಬುದ್ಧಿಯು ಹುಟ್ಟಿತು. ಆಗ ನಾರದನು ತನ್ನಲ್ಲಿ ತಾನು. "ಆಹಾ ! ಲೋಕದಲ್ಲಿ ಮನುಷ್ಯನಿಗೆ ಇಷ್ಟವಸ್ತುಗಳು ಲಭಿಸಿದಾಗ, ಮನಸ್ಸಿನಲ್ಲಿ ಹೆಮ್ಮೆಯುಂಟಾಗುವುದು ಸಹಜವು. ಆದರೆ ಕುಲ, ರೂಪ, ವಯಸ್ಸು, ವಿದ್ಯೆ ಇವುಗಳಿಂದುಂಟಾಗತಕ್ಕ ಮದವು ಐಶ್ವರ್ಯ ಮದದಂತೆ ಬುದ್ಧಿಯನ್ನು ಕೆಡಿಸಲಾರದು. ಐಶ್ವರ್ಯಮದವು ರಜೋಗುಣ ವನ್ನು ಹೆಚ್ಚಿಸಿ, ಅದರಿಂದ ಕಾಮಕ್ರೋಧಾದಿಗಳನ್ನುಂಟುಮಾಡುವುದು! ಈ ಐಶ್ವರ್ಯಮದವು, ಜೂಜು, ಮದ್ಯಪಾನ, ಸ್ತ್ರೀಸಂಗಮ, ಮುಂತಾದ ವ್ಯಸ ನಗಳೆಲ್ಲವನ್ನೂ ಹೆಚ್ಚಿಸುವುದು. ಐಶ್ವರ್ಯಮದವಿದ್ದವರಿಗೆ ತಮ್ಮ ದೇಹ ಕ್ಕೆ ಜರಾಮರಣಗಳೇ ಇಲ್ಲವೆಂಬ ಬುದ್ಧಿಯೂ ಹುಟ್ಟುವುದು. ಆ ಐಶ್ವರ್ಯಮ ದವಿದ್ದವರು, ಇಂದ್ರಿಯಗಳನ್ನು ಜಯಿಸಲಾರದೆ ಇತರಭೂತಗಳನ್ನು ಹಿಂ ಸಿಸುವರು. ಶರೀರವೆಂಬುದು ಒಳಗಿನ ಪ್ರಾಣವಿರುವವರೆಗೆ ದೇವಮ ನುಷ್ಯಾದಿ ಭೇದಗಳಿಂದ ಕರೆಯಲ್ಪಡುತ್ತಿದ್ದರೂ, ಆ ಜೀವಿತಕಾಲವು ಕಳೆದ ಮೇಲೆ ಕ್ರಿಮಿಯೆನಿಸಿಕೊಳ್ಳುವುದು. ದಹಿಸಿದಾಗ ಬೂದಿಯೆನಿಸಿಕೊಳ್ಳು ವುದು. ನಾಯಿನರಿಗಳಿಗೆ ಆಹಾರವಾಗಿ ಮಲರೂಪವಾಗುವುದು. ಇಂತ ಹ ತುಚ್ಛದೇಹವನ್ನು ಪೋಷಿಸುವುದಕ್ಕಾಗಿ, ಇತರಭೂತಗಳಿಗೆ ದ್ರೋಹ ವನ್ನು ಮಾಡುವುದರಿಂದ ನರಕವಲ್ಲದೆ ಬೇರೆಯಿಲ್ಲ. ಹೀಗೆ ನರಕಕಾರಣವಾದ ಪ್ರಾಣಿಹಿಂಸೆಯನ್ನು ಮಾಡತಕ್ಕವರಿಗೆ ಯಾವವಿಧದಲ್ಲಿಯೂ ಶ್ರೇಯ ಸ್ಸಿಲ್ಲ. ದೇಹಾಭಿಮಾನವುಳ್ಳವರು ತಮ್ಮ ದೇಹಪೋಷಣೆಗಾಗಿ ಮಾಡ ತಕ್ಕ ಕಾರ್ಯಗಳೆಲ್ಲವೂ ಅವರಿಗೆ ಕೇಡನ್ನೇ ತಂದಿಡುವುವು. "ಕೊನೆಗೆ ಈ ದೇಹವು ಹೇಗಾದರೂ ಹೋಗಲಿ ! ಜೀವದಶೆಯಲ್ಲಿ ಅದು ನಮ್ಮ ಸ್ವಾಧೀನ ವಾಗಿರುವಾಗಲಾದರೂ ಅದನ್ನು ಸುಖವಾಗಿ ಪೋಷಿಸಬೇಡವೇ?" ಎಂದರೆ ಈ ದೇಹವೆಂಬುದು ಜೀವಿಸಿದ್ದಾಗಲೂ ನಮ್ಮದಲ್ಲ! ಸತ್ತಮೇಲೆಯೂ ನಮ್ಮದಲ್ಲ! ಸತ್ತವನ ದೇಹವು ಬೆಂಕಿಯಲ್ಲಿಯೋ, ನಾಯಿನರಿಗಳ ಬಾ ಯಲ್ಲಿಯೋ ಬೀಳುವಂತೆ, ಬದುಕಿರುವಾಗಲೂ ದೇಹವು ತನಗಧೀನ ವುದಲ್ಲ. ಅದನ್ನು ಇಂತವರ ಸ್ವತ್ತೆಂದು ಹೇಳುವುದಕ್ಕೇ ಸಾಧ್ಯವಿಲ್ಲ ! ಅನ್ನವನ್ನು ಕೊಟ್ಟು ಪೋಷಿಸತಕ್ಕವನು! ಗರ್ಭಾಧಾನಮಾಡಿದ ತಂದೆ !

ತನ್ನನ್ನು ಪಡೆದ ತಾಯಿ! ತಾಯಿಯನ್ನು ಪಡೆದ ತಂದೆ! ಜೀತಕ್ಕಾಗಿಕೊಂಡುಕೊಳ್ಳುವವನು! ಬಲಾತ್ಕಾರದಿಂದ ಹಿಡಿದು ತನ್ನ ವಶದಲ್ಲಿರಿಸಿಕೊಳ್ಳುವವನು! ಇಷ್ಟುಮಂದಿಯಲ್ಲಿಯಾರನ್ನು ಆ ದೇಹಕ್ಕೆ ಬಾಧ್ಯರೆಂದು ಹೇಳಬಹುದು? ಸತ್ತಮೇಲೆ ಹೇಗೋ ಹಾಗೆಯೇ ಬದುಕಿದ್ದಾಗಲೂ ಒಬ್ಬರ ಸ್ವತ್ತೆಂಬ ನಿಯಮವಿಲ್ಲದೆ, ಪ್ರಕೃತಿಯಿಂದ ಹುಟ್ಟಿ,ಪ್ರಕೃತಿಯಲ್ಲಿಯೇ ಲಯಹೊಂದತಕ್ಕ ಈ ದೇಹವನ್ನು ತನ್ನದೆಂದು ಭಾವಿಸುವುದು ಕೇವಲಮೌಢ್ಯವಲ್ಲವೆ? ದೇಹಾತ್ಮತತ್ವವನ್ನು ತಿಳಿದವರು, ಆ ದೇಹವನ್ನು ಪೋಷಿಸುವುದಕ್ಕಾಗಿ ಎಂದಿಗೂ ಇತರ ಪ್ರಾಣಿಗಳನ್ನು ಕೊಲ್ಲಲಾರರು ಮುಖ್ಯವಾಗಿ ಐಶ್ವರ್ಯಮದದಿಂದುಂಟಾದ ಅಂಧತ್ವವನ್ನು ನೀಗಿಸುವುದಕ್ಕೆ ದಾರಿದ್ರ್ಯವೆಂಬುದೇ ಉತ್ತಮಾಂಜನವು. ಏಕೆಂದರೆ, ದಾರಿದ್ರ್ಯ ದಶೆಯಲ್ಲಿರುವವನುಮಾತ್ರವೇ ಇತರ ಭೂತಗಳನ್ನು ತನ್ನಂತೆ ನೋಡುವನು. ಕಾಲಿಗೆ ಮುಳ್ಳುಚುಚ್ಚಿಕೊಂಡಾಗಲೇ, ಮನುಷ್ಯನಿಗೆ ಅದರ ನೋವು ಚೆನ್ನಾಗಿತಿಳಿದು,ಇತರರಿಗೂ ಈ ಸ್ಥಿತಿಯಲ್ಲಿ ತನ್ನಂತೆಯೇ ನೋವಾಗಬಹುದೆಂಬಬುದ್ಧಿಯು ಹುಟ್ಟುವುದು. ಮತ್ತೊಬ್ಬರಿಗೆ ಈ ವಿಧವಾದ ನೋವುಂಟಾಗಬಾರದೆಂಬ ಕನಿಕರವೂ ಅವನ ಮನಸ್ಸಿನಲ್ಲಿ ಜನಿಸುವುದು. ಇಂತಹ ಅಪಾಯಗಳಿಗೆ ಗುರಿಯಾಗದೆ ಸುಖವಾಗಿರತಕ್ಕವನು,ಇತರರ ಕಷ್ಟಸುಖಗಳನ್ನೂ ಯೋಚಿಸಲಾರನು. ಇದರಂತೆಯೇ ದಾರಿದ್ರ್ಯದಿಂದ ಕಷ್ಟಪಡತಕ್ಕವನು ಕುಲಮದಾದಿಗಳಿಲ್ಲದೆ, ಮೈಬಗ್ಗಿ ಕಷ್ಟಪಡುವನು. ಇತರರ ಸುಖದುಃಖಗಳನ್ನೂ ಯೋಚಿಸುವನು, ಇತರ ಪ್ರಾಣಿಗಳನ್ನು ನೋಯಿಸಲಾರನು. ದರಿದ್ರರಿಗೆ ಅವರು ಅನುಭವಿಸತಕ್ಕ ಕಷ್ಟವೇ ಉತ್ಕೃಷ್ಟವಾದ ತಪಸ್ಸೆಂದು ಹೇಳಬಹುದು. ಕ್ರಮವಾಗಿ ಮುಕ್ತಿಗೂ ಅದೇ ಸಾಧನವಾಗಬಹುದು. ಏಕೆಂದರೆ ದರಿದ್ರನು ಅನ್ನಾರ್ಜನೆಗಾಗಿ ದುಡಿದೂ, ಆಗಾಗ ತಕ್ಕಷ್ಟು ಅನ್ನಾಹಾರಗಳಿಲ್ಲದೆ ಕೊರಗುವುದರಿಂದ, ಅವನ ದೇಹದ ಕೊಬ್ಬೂ, ಇಂದ್ರಿಯಗಳಕೊಬ್ಬೂ, ತಾನಾಗಿಯೇ ಮುರಿಯುತ್ತ ಬರುವುದು. ಆಗ ಅವನಿಗೆ ಇತರರ ಹಿಂಸೆಯಲ್ಲಿ ಬುದ್ಧಿಯು ಪ್ರವರ್ತಿಸಲಾರದು. ಇಂತಹ ದರಿದ್ರರಲ್ಲಿ, ಸಮದರ್ಶಿಗಳಾದ ಸಾಧುಗಳಿಗೆ ಕನಿಕರವು ಹುಟ್ಟಿ, ಅವರು ಇವರೊಡನೆ ಸಹವಾಸಮಾಡು

ವರು. ಈ ಸಹವಾಸಬಲದಿಂದ ಆ ದರಿದ್ರರಿಗೆ ಮೊದಲಿದ್ದ ವಿಷಯತೃಷ್ಣಾ ಮೂದವಾದ ದುರ್ಗುಣಗಳೆಲ್ಲವೂ ತಗ್ಗುವುವು. ಈ ಮೂಲಕವಾಗಿ ಅವನಿಗೆ ಕ್ರಮಕ್ರಮವಾಗಿ ಪ್ರಕೃತಿಸಂಬಂಧರೂಪವಾದ ಕಶ್ಮಲವೂ ಬಿಟ್ಟು ಹೋಗುವುದು. ಆದರೆ “ಲೋಕದ ಜನರೆಲ್ಲರೂ ಧನವನ್ನೇ ಆದರಿಸುವಾಗ, ದಾರಿದ್ರ್ಯವನ್ನು ಕೋರಬಹುದೆ” ಎಂದರೆ, ಈ ಧನದಲ್ಲಿರುವ ದೋಷವನ್ನು ತಿಳಿದ ವಿವೇಕಿಗಳು ಅದಕ್ಕೆ ಆಸೆಪಡಲಾರರು. ಅಂತವರು ಭಗವಂತನ ಚರಣಾರವಿಂದಗಳನ್ನೇ ಪರಮಪುರುಷಾರ್ಥವೆಂದು ನಂಬಿ, ಎಲ್ಲರಲ್ಲಿಯೂ ಸಮದೃಷ್ಟಿಯುಳ್ಳವರಾಗಿರುವರು. ಮದದಿಂದ ಮೈಮರೆಸತಕ್ಕುದಾಗಿಯೂ ಅನರ್ಥಹೇತುವಾಗಿಯೂ, ಅಲ್ಪಬುದ್ಧಿಯುಳ್ಳವರಿಗೆ ಆಸೆಹುಟ್ಟಿಸತಕ್ಕುದಾಗಿಯೂ ಇರುವ ಆ ಧನವನ್ನು, ಅವರು ತೃಣಪ್ರಾಯವಾಗಿ ಎಣಿಸುವರು. ಈ ಐಶ್ವರ್ಯಮದವನ್ನು ನೀಗಿಸುವುದೇ ಉತ್ತಮಪುರುಷಾರ್ಥಕ್ಕೆ ಸಾಧಕವಾದುದರಿಂದ, ಐಶ್ವರ್ಯಮದದಿಂದಲೂ, ಮದ್ಯಮದದಿಂದಲೂ ಕಣ್ಗಾಣದೆ, ಇಂದ್ರಿಯ ಚಾಪಲ್ಯವನ್ನಡಗಿಸಲಾರದೆ, ಸ್ತ್ರೀಲೋಲರಾಗಿರುವ ಈ ಯಕ್ಷರಿಬ್ಬರಿಗೂ ಮೊದಲು ಆ ಹೆಮ್ಮೆಯನ್ನು ಮುರಿಯಬೇಕು. ಇವರಿಬ್ಬರೂ ಲೋಕಪಾಲಕನಾದ ಕುಬೇರನ ಮಕ್ಕಳಾಗಿದ್ದರೂ ಧನಮದಾಂಧರಾಗಿ, ತಮ್ಮ ಮೈಮೇಲೆ ಬಟ್ಟೆಯಿಲ್ಲದುದನ್ನೂ ತಿಳಿಯದಿರುವುದರಿಂದ, ಇವರಿಗೆ ನಿರಾವರಣವಾಗಿ ಕಾಡಿನಲ್ಲಿ ಬೆಳೆದಿರುವವ ವೃಕ್ಷಗಳಂತೆ ಸ್ಥಾವರಜನ್ಮವೇ ಉಚಿತವಾದುದು. ಕೆಲವು ಕಾಲದವರೆಗೆ ಆ ಸ್ಥಿತಿಯಲ್ಲಿದ್ದರೆ, ಈಗಿನಂತೆ ಮದಾಂಧರಾಗಿರಲಾರರು. “ಎಂದು ತನ್ನಲ್ಲಿ ತಾನು ನಿಶ್ಚಯಿಸಿ, ಅವರನ್ನು ಕುರಿತು. “ ಎಲೈ ಮದಾಂಧರೆ ! ನೀವು ವೃಕ್ಷರೂಪದಿಂದ ಸ್ಥಾವರಜನ್ಮವನ್ನು ಹೊಂದಿರಿ ! ಆಗಲೂ ನಿಮಗೆ ಭಗವದನುಗ್ರಹದಿಂದ ನಿಮ್ಮ ಪೂರ್ವಜನ್ಮಸ್ಮರಣವುಂಟಾಗುವಂತೆಯೂ, ಆಜನ್ಮದಲ್ಲಿ ನೂರುದಿವ್ಯವರ್ಷಗಳನ್ನು ಕಳೆದಮೇಲೆ, ನಿಮಗೆ ವಸುದೇವಪುತ್ರನಾದ ಭಗವಂತನ ಪಾದಸಂಬಂಧದಿಂದ, ಈ ಶಾಪವು ಬಿಟ್ಟುಹೋಗಿ, ಮೊದಲಿನಂತೆ ದೇವತ್ವವುಂಟಾಗುವಂತೆಯೂ ಅನುಗ್ರಹಿಸುವೆನು.” ಎಂದು ಹೇಳಿ ನಾರದನು ನಾರಾಯಣಾಶ್ರಮವನ್ನು ಕುರಿತು ಹೊರಟು

ಹೋದನು. ಆ ನಳಕೂಬರಮಣಿಗ್ರೀವರಿಬ್ಬರೂ ನಾರದಾಜ್ಞೆಯಂತೆ ವೃಕ್ಷಜನ್ಮವನ್ನು ಹೊಂದಿ, ನಂದಗೋಕುಲದಲ್ಲಿ ಎರಡು ಅರ್ಜುನವೃಕ್ಷಗಳಾಗಿ ಬೆಳೆದಿದ್ದರು. ಭಕ್ತವತ್ಸಲನಾದ ಭಗವಂತನು, ತನ್ನ ಭಕ್ತೋತ್ತಮನಾದ ನಾರದನ ಮಾತನ್ನು ಸತ್ಯಮಾಡಬೇಕೆಂದುದ್ದೇಶಿಸಿ, ಯಶೋದೆಯು ತನ್ನನ್ನು ಬಿಗಿದುಕಟ್ಟಿದ್ದ ಒರಳುಕಲ್ಲನ್ನೂ ತನ್ನೊಡನೆ ಎಳೆದುಕೊಂಡು, ಮೆಲ್ಲಮೆಲ್ಲಗೆ ಆ ವೃಕ್ಷಗಳು ಬೆಳೆದಿದ್ದಸ್ಥಳಕ್ಕೆ ಬಂದುನಿಂತು, "ನಾರದನು ನನಗೆ ಪರಮಪ್ರಿಯನಾದುದರಿಂದ, ಅವನ್ನು ಹೇಳಿದ್ದಂತೆ ಈ ಕುಬೇರಪುತ್ರರಿಗೆ ಈಗ ಶಾಪವಿಮೋಚನೆ ಮಾಡುವೆನು" ಎಂದು ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡು,ಅವಳಿಮರಗಳಂತೆ ಜತೆಯಾಗಿ ಬೆಳೆದಿದ್ದ ಆಮತ್ತಿಯಮರಗಳ ನಡುವೆ, ತನ್ನ ಸಣ್ಣ ದೇಹವುಮಾತ್ರ ಹಿಡಿಸುವಹಾಗಿದ್ದ ರಂಧ್ರಮಾರ್ಗದಿಂದ ನುಸಿದು ಮುಂದೆ ಹೋದನು. ಇವನ ನಡುವಿಗೆ ಬಿಗಿಯಲ್ಪಟ್ಟಿದ್ದ ಒರಳುಕಲ್ಲಾದರೋ ಆ ಎರಡುಮರಗಳನಡುವೆ ಹೋಗುವುದಕ್ಕೆ ಅವಕಾಶವಿಲ್ಲದೆ ಅಡ್ಡಲಾಗಿ ತಡೆದುಕೊಂಡಿತು. ಆಗ ಕೃಷ್ಣನು ತನ್ನ ನಡುವಿಗೆ ಕಟ್ಟಿದ್ದ ಹಗ್ಗವನ್ನು ಬಲವಾಗಿ ಎಳೆದೊಡನೆ,ಆ ಮರಗಳೆರಡೂ ಮೂಲಸಹಿತವಾಗಿ ಕದಲಿ, ಮಹಾಧ್ವನಿಯೊಡನೆ ಮುರಿದು ಕೆಳಗೆಬಿದ್ದುವು. ಆ ಮರಗಳ ಎಲೆ, ಚಿಗುರು,ಕೊಂಬೆ ಮೊದಲಾದ ಅವಯವಗಳೆಲ್ಲವೂ ತುಂಡುತುಂಡಾಗಿ ಛಿದುರಿಬಿದ್ದುವು. ಆ ಮರಗಳೆರಡರಿಂದಲೂ ಇಬ್ಬರು ಸಿದ್ಧಪುರುಷರು,ಅಗ್ನಿಯಂತೆ ತಮ್ಮ ದೇಹಕಾಂತಿಯಿಂದ ಸಮಸ್ತದಿಕ್ಕುಗಳನ್ನೂ ಬೆಳಗುತ್ತ, ನಿಜಸ್ವರೂಪದಿಂದ ಹೊರಟುಬಂದರು. ಶಾಪವಿಮುಕ್ತರಾದ ಅವರಿಬ್ಬರೂ, ಸಕಲಲೋಕನಾಯಕನಾದ ಕೃಷ್ಣನಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ, ಬದ್ಧಾಂಜಲಿಗಳಾಗಿ ನಿಂತು ಹೀಗೆಂದು ಸ್ತುತಿಸುವರು.

"ಓ ಕೃಷ್ಣಾ! ಕೃಷ್ಣಾ! ಅಚಿಂತ್ಯಪ್ರಭಾವನಾದ ಯೋಗೇಶ್ವರನೇ ನೀನಲ್ಲವೆ, ನೀನು ಸಾಮಾನ್ಯಗೋಪಾಲಕನಲ್ಲ! ನೀನೇ ಜಗತ್ಕಾರಣನಾದ ಆದಿಪುರುಷನು! ವ್ಯಕ್ತಾವ್ಯಕ್ತವೆನಿಸಿಕೊಂಡ ಸ್ಥೂಲಸೂಕ್ಷ್ಮಪ್ರಪಂಚವೆಲ್ಲವೂ ಪರಬ್ರಹ್ಮನಾದ ನಿನ್ನ ರೂಪವಲ್ಲದೆ ಬೇರೆಯಲ್ಲವೆಂದು ವೇದಾಂತಿಗಳು ನಿರ್ಣಯಿಸಿರುವರು. ನೀನೊಬ್ಬನೇ ಸಮಸ್ತಭೂತಗಳ ದೇಹ

ಕ್ಕೂ, ಆತ್ಮಕ್ಕೂ, ಇಂದ್ರಿಯಗಳಿಗೂ ನಿಯಾಮಕನು! ನೀನೆ ಕಾಲಸ್ವರೂಪಿಯು! ನೀನೇ ಈ ಜಗತ್ತಿಗೆ ಉಪಾದಾನಕಾರಣನಾಗಿಯೂ, ನಿಮಿತ್ತಕಾರಣನಾಗಿಯೂ ಇರತಕ್ಕವನು. ನೀನು ಷಾಡ್ಗುಣ್ಯಪರಿಪೂರ್ಣನು. ಎಂದೆಂದಿಗೂ ನಾಶವಿಲ್ಲದವನು. ಸರ್ವೇಶ್ವರನು. ಮಹತ್ತೆಂಬ ತತ್ವವೂ ನೀನೇ! ಸತ್ವರಜಸ್ತಮೋಗುಣಮಯವಾದ ಸೂಕ್ಷ್ಮಪ್ರಕೃತಿಯೂ ನೀನೇ! ನೀನೇ ಪುರುಷಶಬ್ದವಾಚ್ಯನಾದ ಜೀವನು! ನೀನು ದೇಹದಿಂದ ಜೀವಪರ್ಯಂತವಾದ ಇಂದ್ರಿಯಗಳೊಡಗೂಡಿದ ಶರೀರದ ವ್ಯಾಪಾರಗಳೆಲ್ಲವನ್ನೂ ಒಮ್ಮೆಯೇ ಸಾಕ್ಷಾತ್ಕರಿಸಬಲ್ಲವನು ಪ್ರಕೃತಿಪರಿಣಾಮರೂಪಗಳಾದ ಶಬ್ದಾದಿಗಳು, ತಮ್ಮನ್ನು ಗ್ರಹಿಸತಕ್ಕ ಇಂದ್ರಿಯಗಳನ್ನು ತಾವು ಹೇಗೆ ಗ್ರಹಿಸಲಾರವೋ, ಹಾಗೆಯೇ ನಿನ್ನಿಂದ ಗ್ರಹಿಸಲ್ಪಡತಕ್ಕ ಇಂದ್ರಿಯಗಳು ನಿನ್ನನ್ನು ಗ್ರಹಿಸಲಾರವು.ಏಕೆಂದರೆ,ಆ ಗುಣಗಳಿಗಿಂತಲೂ ಮೊದಲೇ ಅವುಗಳಿಗೆ ಕಾರಣಭೂತನಾಗಿಯೂ, ಅವುಗಳಿಗೆ ಪ್ರಕಾಶಕನಾಗಿಯೂ ಇರುವ ನಿನ್ನನ್ನು, ಆ ಗುಣಕಾರ್ಯಗಳಾದ ಇಂದ್ರಿಯಗಳಿಂದಾವರಿಸಲ್ಪಟ್ಟ ಯಾವ ಮನುಷ್ಯನು ತಾನೇ ಕಂಡುಕೊಳ್ಳಬಲ್ಲನು? ಯೋಗಶುದ್ಧವಾದ ಮನಸ್ಸಿನಿಂದ ಆ ಇಂದ್ರಿಯಗಳ ಪ್ರಾಬಲ್ಯವನ್ನು ಮುರಿದ ಯೋಗಿಗಳಿಗೆಮಾತ್ರವೇ ನೀನು ಗೋಚರಿಸತಕ್ಕವನು. ಓ ಭಗವಂತಾ! ವಾಸುದೇವಾ! ಸರ್ವಕಾರಣಾ! ಜೀವಾತ್ಮರಿಗೆ ದುರವಗಾಹವಾದ ಮಹಿಮೆಯುಳ್ಳವನಾಗಿಯೂ, ಸ್ವರೂಪದಿಂದಲೂ ಗುಣಗಳಿಂದಲೂ ಬೃಹತ್ತೆನಿಸಿ ಬ್ರಹ್ಮಶಬ್ದವಾಚ್ಯನಾಗಿಯೂ, ಸ್ವಯಂಪ್ರಕಾಶನಾಗಿಯೂ ಇರುವ ನಿನಗೆ ನಮಸ್ಕಾರವು. ಕರ್ಮಮೂಲಕವಾದ ಶರೀರವಿಲ್ಲದ ನೀನು, ಮತ್ಸ್ಯಾದಿಪ್ರಾಕೃತಶರೀರಗಳಲ್ಲಿ ಸೇರಿ ಬೇರೆ ಬೇರೆ ರೂಪದಿಂದ ಅವತರಿಸಿದರೂ, ಇತರಪ್ರಾಕೃತಶರೀರಿಗಳಿಗೆ ಅಸಂಭಾವ್ಯಗಳಾದ ಎಣೆಯಿಲ್ಲದ ಪ್ರಭಾವಗಳಿಂದ ನಿನ್ನ ಪರತ್ವವನ್ನು ಆಗಾಗ ಸ್ಪಷ್ಟಪಡಿಸುವೆ! ಓ ದೇವಾ! ಅಂತಹ ಮಹಾಮಹಿಮನಾದ ನೀನು ಲೋಕದ ಕ್ಷೇಮಕ್ಕೂ, ಅಭ್ಯುದಯಕ್ಕೂ ಈಗ ನಿನ್ನ ಅಂಶಭೂತನಾದ ಬಲರಾಮನೊಡನೆ ಈ ರೂಪದಿಂದ ಅವತರಿಸಿರುವೆ! ಓ ಪರಮಮಂಗಳಮೂರ್ತೀ! ನಿನಗೆ ನಮಸ್ಕಾರವು! ಓ ವಿಶ್ವಮಂಗಳಾ! ನಿನಗೆ ನಮಸ್ಕಾರವು! ವಸುದೇ

ವಪುತ್ರನಾಗಿಯೂ, ಶಾಂತನಾಗಿಯೂ, ಯದುಪತಿಯಾಗಿಯೂ ಅವತರಿಸಿರುವ ನಿನಗೆ ನಮಸ್ಕಾರವು. ಓ ನಿರತಿಶಯಾನಂದಪೂರ್ಣಾ! ನಮಿಬ್ಬರನ್ನೂ ನಿನ್ನ ದಾಸಾನುದಾಸರನ್ನಾಗಿ ಪ್ರತಿಗ್ರಹಿಸಬೇಕು! ನಿನ್ನ ಪಾದಭಕ್ತನಾದ ನಾರದಮಹರ್ಷಿಯ ಅನುಗ್ರಹದಿಂದಲೇ, ಈಗ ನಮಗೆ ನಿನ್ನನ್ನು ನೋಡುವ ಭಾಗ್ಯವು ಲಭಿಸಿತು. ಓ ದೇವಾ! ನಮ್ಮ ವಾಕ್ಕು ನಿನ್ನ ಗುಣಕೀರ್ತನದಲ್ಲಿಯೂ, ನಮ್ಮ ಕಿವಿಗಳು ನಿನ್ನ ಕಥಾಶ್ರವಣದಲ್ಲಿಯೂ, ನಮ್ಮ ಕೈಗಳು ನಿನ್ನ ಪಾದಸೇವೆಯಲ್ಲಿಯೂ, ನಮ್ಮ ಮನಸ್ಸು ನಿನ್ನ ಪಾದಸ್ಮರಣದಲ್ಲಿಯೂ, ನಮ್ಮ ಶಿರಸ್ಸು ನಿನ್ನ ಪಾದಾಭಿವಂದನದಲ್ಲಿಯೂ, ನಮ್ಮ ಕಣ್ಣುಗಳು ನಿನ್ನ ಅಂಶಭೂತರಾದ ಸಜ್ಜನರ ದರ್ಶನದಲ್ಲಿಯೂ, ನಿತ್ಯಾಸಕ್ತವಾಗಿರುವಂತೆ ಅನುಗ್ರಹಿಸಬೇಕು." ಎಂದರು. ಓ ಪರೀಕ್ಷಿದ್ರಾಜಾ! ಹೀಗೆ ಆ ಯಕ್ಷರಿಬ್ಬರೂ ಸ್ತುತಿಸುತ್ತಿರುವುದನ್ನು ಕೇಳಿ ಕೃಷ್ಣನು, ತಾನು ಆ ಒರಳುಕಲ್ಲಿಗೆ ಕಟ್ಟಲ್ಪಟ್ಟಿದ್ದ ಹಾಗೆಯೇ, ಅವರನ್ನು ಕುರಿತು ಮಂದಹಾಸಪೂರ್ವಕವಾಗಿ ಹೀಗೆಂದು ಹೇಳುವನು, "ಓ ಯಕ್ಷರೆ! ಹಿಂದೆ ನೀವು ಐಶ್ವರ್ಯದಿಂದ ಮದಾಂಧರಾಗಿದ್ದಾಗ, ಕರುಣಾಳುವಾದ ನಾರದಮಹರ್ಷಿಯು, ನಿಮ್ಮನ್ನು ಅನುಗ್ರಹಿಸುವುದಕ್ಕಾಗಿಯೇ ಈ ಶಾಪವನ್ನು ಕೊಟ್ಟನು. ಇದನ್ನು ನಾನು ಮೊದಲೇ ಬಲ್ಲೆನು ನನ್ನಲ್ಲಿ ಮನಸ್ಸನ್ನು ನೆಲೆಗೊಳಿಸಿ, ಸಮಸ್ತಭೂತಗಳಲ್ಲಿಯೂ ಸಮಬುದ್ಧಿಯುಳ್ಳ ಸಾಧುಗಳಿಗೆ, ಸೂರ್ಯೋದಯವಾದೊಡನೆ ಅಂಧಕಾರವು ಹೇಗೋಹಾಗೆ, ನನ್ನ ದರ್ಶನವು ಲಭಿಸಿದಕೂಡಲೆ, ಸಂಸಾರಬಂಧವು ಬಿಟ್ಟುಹೋಗುವುದು. ಇನ್ನು ನೀವು ನಿಮ್ಮ ಸ್ಥಾನಕ್ಕೆ ಹೋಗಬಹುದು. ನಿಮಗೆ ಯಾವಾಗಲೂ ನನ್ನ ಸ್ಮರಣೆಯಿರಲಿ! ನಿಮ್ಮಿಬ್ಬರಿಗೂ ಈಗಾಗಲೇ ಸಂಸಾರೋತ್ತಾರಕವಾದ ಭಕ್ತಿಭಾವವು ಹುಟ್ಟಿರುವುದು. ನನ್ನನ್ನು ಮರೆಯದೆ ಮನಸ್ಸಿನಲ್ಲಿಟ್ಟಿರಿ!" ಎಂದನು. ಹೀಗೆ ಕೃಷ್ಣನು ಹೇಳಿದೊಡನೆ, ಅವರಿಬ್ಬರೂ ಅವನಿಗೆ ಬಾರಿಬಾರಿಗೂ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ, ಅವನ ಅನುಮತಿಯನ್ನು ಪಡೆದು, ಉತ್ತರದಿಶಾಭಿಮುಖವಾಗಿ ಹೊರಟರು. ಇದು ಹತ್ತನೆಯ ಅಧ್ಯಾಯವು.

---

## ಶ್ರೀಕೃಷ್ಣನ ಬಾಲಕ್ರೀಡೆಗಳು

ಅತ್ತಲಾಗಿ ಬೇರೆಬೇರೆ ಕಾರ್ಯಾಂತರದಲ್ಲಿದ್ದ ನಂದಾದಿಗೋಪಾಲಕರೆಲ್ಲರೂ, ಇತ್ತಲಾಗಿ ಈ ಮತ್ತಿಯ ಮರಗಳು ಮುರಿದುಬಿದ್ದ ಮಹಾಧ್ವನಿಯನ್ನು ಕೇಳಿ,ಅಕಸ್ಮಾತ್ತಾಗಿಬರಸಿಡಿಲು ಬಡಿದಿರಬಹುದೆಂದು ಭಯಪಟ್ಟು ಕೃಷ್ಣನಿದ್ದ ಕಡೆಗೆ ಬಂದರು. ಅಲ್ಲಿ ಬಹುಕಾಲದಿಂದಿದ್ದ ಮತ್ತಿಯ ಮರಗಳೆರಡೂ ಮುರಿದುಬಿದ್ದುದನ್ನು ಕಂಡು, ಅದರ ಕಾರಣವೇನೆಂದು ತಿಳಿಯದೆ,ಭ್ರಾಂತರಾಗಿ ನೋಡುತಿದ್ದರು. ಮತ್ತು ಅಲ್ಲಿ ಹಗ್ಗದಿಂದ ಬಿಗಿಯಲ್ಪಟ್ಟಿದ್ದ ಕೃಷ್ಣನನ್ನೂ, ಅವನು ಆ ಹಗ್ಗಕ್ಕೆ ಕಟ್ಟಿದ್ದ ಒರಳುಕಲ್ಲನ್ನೂ ತನ್ನೊಡನೆ ಎಳೆದುಕೊಂಡು ಅತ್ತಿತ್ತ ಸುತ್ತಾಡುತ್ತಿರುವುದನ್ನೂ ಕಂಡು “ಆಹಾ! ಇದು ಯಾರ ಕೆಲಸವು! ಇದೇನಾಶ್ಚರ್ಯವು! ಇದೇನೋ ದೊಡ್ಡ ಉತ್ಪಾತದಂತೆ ತೋರುವುದು”ಎಂದು ಭಯಭ್ರಾಂತರಾಗಿದ್ದರು.ಆಗ ಸಮೀಪದಲ್ಲಿದ್ದ ಕೆಲವುಬಾಲಕರು. “ಅಯ್ಯೋ! ಇದೆಲ್ಲವೂ ನಿಮ್ಮ ಕೃಷ್ಣನ ಕಾರ್ಯವೇ! ಇವನು ಈ ಒರಳುಕಲ್ಲನ್ನೆಳೆದಾಡುತ್ತ, ಈ ಅವಳಿಮರಗಳ ನಡುವೆ ನುಸಿದುಹೋದನು. ಆಗ ಮರಗಳ ನಡುವೆ ಅಡ್ಡಲಾಗಿ ಸಿಕ್ಕಿಕೊಂಡ ಒರಳನ್ನು ಈತನು ಬಲಾತ್ಕಾರದಿಂದೆಳೆದಾಗ, ಈ ಮರಗಳೆರಡೂ ಮುರಿದುಬಿದ್ದುವು. ಮತ್ತೊಂದಾಶ್ಚರ್ಯವೇನೆಂದರೆ, ಅವುಗಳಿಂದ ಇಬ್ಬರು ದಿವ್ಯಪುರುಷರು ಬಂದು,ಈತನಿಗೆ ನಮಸ್ಕಾರಮಾಡಿ ಹೊರಟುಹೋದರು. ಇದೆಲ್ಲವನ್ನೂ ನಾವು ಕಣ್ಣಾರೆ ನೋಡಿದೆವು” ಎಂದರು ಅದನ್ನುಕೇಳಿಯೂ ನಂದಾದಿಗಳು, “ಈ ಸಣ್ಣಮಗುವೆಂದರೇನು ? ಇವನ ಎಳೆದಾಟಕ್ಕೆ ಅಷ್ಟು ದೊಡ್ಡಮರಗಳು ಮುರಿಯುವುದೆಂದರೇನು ? ಎಂದಿಗೂ ಹೀಗಿರಲಾರದು” ಎಂದು ಅವರ ಮಾತಿನಲ್ಲಿ ಸ್ವಲ್ಪವೂ ನಂಬಿಕೆಯಿಲ್ಲದೆ ಭ್ರಮಿಸುತಿದ್ದರು. ಮತ್ತೆಕೆಲವರು ಅನುಮಾನಿಸುತಿದ್ದರು. ಇಷ್ಟರಲ್ಲಿ ನಂದನು ಮುಂದೆಬಂದು, ಆ ಕೃಷ್ಣನು ಹಗ್ಗದಿಂದ ಬಿಗಿಯಲ್ಪಟ್ಟಿರುವುದನ್ನೂ, ಬಹಳ ಭಾರವಾದ ಒರಳು ಕಲ್ಲನ್ನು ತನ್ನಹಿಂದೆ ಎಳೆದಾಡುತ್ತ ನಡೆಯಲಾರದೆ ಅಲ್ಲಲ್ಲಿ ಸುತ್ತಾಡುವುದನ್ನೂ ನೋಡಿ,ಕನಿಕರದಿಂದ ಹಸನ್ಮುಖನಾಗಿ ಬಂದು,ಆ ಕಟ್ಟನ್ನು ಬಿಚ್ಚಿಬಿಟ್ಟನು.

### ಕೃಷ್ಣನು ಧಾನ್ಯವನ್ನುಕೊಟ್ಟು ಹಣ್ಣನ್ನು ಕೊಂಡು ಕೊಂಡುದು.

ಇಷ್ಟರಲ್ಲಿ ಹಣ್ಣುಮಾರುವವಳೊಬ್ಬಳು, ಕುಕ್ಕೆಯಲ್ಲಿ ಹಣ್ಣನ್ನಿಟ್ಟುಕೊಂಡು "ಹಣ್ಣುಬೇಕೇ ಹಣ್ಣು?" ಎಂದು ಬೀದಿಯಲ್ಲಿ ಕೂಗುತ್ತಬಂದಳು. ಇದನ್ನುಕೇಳಿ ನಂದನು, "ಕೃಷ್ಣಾ! ಬೀದಿಯಲ್ಲಿ ಹಣ್ಣುಮಾರುತ್ತಿರುವುದು. ತೆಗೆದುಕೊಡುವೆನು ಬಾ"ಎಂದು ಕರೆಯಲು,ಕೃಷ್ಣನು ತಟ್ಟನೆ ತನ್ನ ತಾಯಿಯಬಳಿಗೆ ಬಂದು "ಅಮ್ಮಾ! ಒಂದಿಷ್ಟು ಧಾನ್ಯವನ್ನುಕೊಡು! ಹಣ್ಣನ್ನು ಕೊಂಡುಕೊಳ್ಳುವೆನು" ಎಂದನು. ಹೀಗೆ ಕೃಷ್ಣನು ತಾನೇ ಸರ್ವಫಲಪ್ರದನಾಗಿದ್ದರೂ, ತಾನು ಫಲವನ್ನು ಪಡೆಯಬೇಕೆಂಬ ಆತುರದಿಂದ,ತನ್ನ ಪುಟ್ಟಕೈಗಳಲ್ಲಿ ಒಂದೆರಡುಧಾನ್ಯದ ಕಾಳನ್ನೆತ್ತಿಕೊಂಡು, ಹೊರಕ್ಕೆ ಬಂದುದನ್ನುನೋಡಿ ಹಣ್ಣುಮಾರುವವಳು, ಆ ಮಗುವಿನ ಕೈಯಲ್ಲಿದ್ದ ಕಾಳುಗಳನ್ನು ತನ್ನ ಕುಕ್ಕೆಗೆ ಸುರಿಸಿಕೊಂಡು, ಆ ಮಗುವಿನ ಎರಡು ಕೈಗಳಿಗೂ ಹಣ್ಣುಗಳನ್ನು ತುಂಬಿದಳು. ಅವಳ ಹಣ್ಣಿನ ಕುಕ್ಕೆಗೆ ಕೃಷ್ಣನ ಕೈಯಲ್ಲಿದ್ದ ಧಾನ್ಯವು ಬಿದ್ದೊಡನೆ, ಆ ಕುಕ್ಕೆಯು ರತ್ನಗಳಿಂದ ತುಂಬಿಹೋಯಿತು.

ಓ ಪರೀಕ್ಷಿದ್ರಾಜಾ! ಹೀಗೆ ಕೃಷ್ಣನು ಆಗಾಗ ತನ್ನ ಆಶ್ಚರ್ಯಚರಿತ್ರಗಳನ್ನು ನಂದಾದಿಗಳಿಗೆ ತೋರಿಸುತ್ತಿದ್ದನು ಮತ್ತೊಮ್ಮೆ ಕೆಲವು ಗೋಪಾಂಗನೆಯರು, ಕೃಷ್ಣನನ್ನು ಸಮೀಪಕ್ಕೆ ಕರೆದು. "ಕೃಷ್ಣಾ!ಎಲ್ಲಿ! ಆಟವಾಡು! ನೋಡುವೆವು" ಎಂದು ಪ್ರೋತ್ಸಾಹಿಸಲು, ಅವರಮುಂದೆ ಕೃಷ್ಣನು ತನ್ನ ಬಾಲಕ್ರೀಡೆಗಳನ್ನು ತೋರಿಸತೊಡಗಿದನು. ಆ ಬ್ರಹ್ಮಸ್ತಂಬಪರ್ಯಂತವಾದ ಸಮಸ್ತಪ್ರಪಂಚವನ್ನೂ ತಾನೇ ಆಡಿಸತಕ್ಕವನಾಗಿದ್ದರೂ, ಆ ಗೋಪಸ್ತ್ರೀಯರು ಹಾಡುತ್ತಿರುವಾಗ,ಅವರಮುಂದೆ ಬೊಂಬೆಯಂತೆ ಲಯಕ್ಕೆ ಸರಿಯಾಗಿ ಕುಣಿದಾಡುವನು! ಅವರೊಡನೆ ತಾನೂ ಹಾಡುವನು! ಸೇವಕನಂತೆ ಆಗಾಗ ಅವರವರು ಹೇಳಿದ ಸಣ್ಣಕಾರ್ಯಗಳನ್ನು ಅಕ್ಕರೆಯಿಂದ ನಡೆಸುವನು. ಅಲ್ಲಲ್ಲಿರುವ ಪೀಠಗಳನ್ನಾಗಲಿ, ಪಾತ್ರಗಳನ್ನಾಗಲಿ ತರಬೇಕೆಂದು ಹೇಳಿದಾಗ, ಅವುಗಳನ್ನು ಹೊರಲಾರದವನಂತೆ ಪ್ರಯತ್ನಪೂರ್ವಕವಾಗಿ ತಂದಿಡು

ವನು. ನೋಡುವವರಿಗೆ ಮುದ್ದುಬೀರುವಂತೆ ತೋಳಾಡಿಸುವನು. ಹೀಗೆ ಕೃಷ್ಣನು ಕೆಲವುವ್ಯಾಪಾರಗಳಿಂದ ಆಗಾಗ ತನ್ನ ಸರ್ವೇಶ್ವರತ್ವವನ್ನೂ, ಇತರರು ಹೇಳಿದಂತೆ ನಡೆಯುವುದರಿಂದ ತಾನು ಭಕ್ತಪರಾಧೀನನೆಂಬು ದನ್ನೂ ಪ್ರಕಟಿಸುತ್ತ, ತನ್ನ ಬಾಲಕ್ರೀಡೆಗಳಿಂದ ಎಲ್ಲರಮನಸ್ಸನ್ನೂ ಆಕರ್ಷಿಸಿ, ಉಲ್ಲಾಸಗೊಳಿಸುತಿದ್ದನು.

ಕೃಷ್ಣನು ತನ್ನ ಲೀಲೆಯಿಂದ ಆ ಅರ್ಜುನವೃಕ್ಷಗಳೆರಡನ್ನೂ ಮುರಿ ದಮೇಲೆ, ಕೆಲವು ಗೋಪಬಾಲಕರೊಡನೆ ಯಮುನಾತೀರಕ್ಕೆ ಹೋಗಿ, ಅಲ್ಲಿ ಆಟವಾಡುತ್ತ ಬಹಳಹೊತ್ತು ಅಲ್ಲಿಯೇ ನಿಂತುಬಿಟ್ಟನು. ಆಗ ದಾದಿಯು ಬಂದು ಕೃಷ್ಣನನ್ನು ನೋಡಿ, “ವತ್ಸಾ ! ಹೊತ್ತಾಯಿತು! ಮನೆಗೆ ಬಾ” ಎಂದು ಕರೆದರೂ ಆ ರಾಮಕೃಷ್ಣರಿಬ್ಬರೂ ಆಟದಲ್ಲಿಯೇ ಮಗ್ನರಾಗಿ, ಅ ವಳ ಮಾತನ್ನು ಲಕ್ಷ್ಯಮಾಡದೆ ಸುಮ್ಮನಿದ್ದರು. ಆಗ ರೋಹಿಣಿಯು ಅವ ರನ್ನು ಕೈಹಿಡಿದು ಕರೆತರುವುದಕ್ಕಾಗಿ, ಯಶೋದೆಯನ್ನೇ ಕಳುಹಿಸಿದಳು. ಆಗ ಯಶೋದೆಯು ತಾನೇ ಬಂದು, “ಕೃಷ್ಣಾ ! ಬಾ ! ಹೊತ್ತಾಯಿ ತು ! ಕಮಲದಂತೆ ಕಣ್ಣುಳ್ಳ ಓ ಚಿನ್ನಕೃಷ್ಣಾ ! ಹಾಲುಕೊಡುವೆನು ಬೇಗ ಬಾ ! ಓ ನನ್ನ ಚಿನ್ನಾ ! ಈಗಿನ ಆಟಗಳು ಸಾಕು! ಬಹಳ ಹಸಿದಿರುವೆಯಲ್ಲಾ ! ಮಗೂ! ಬಲರಾಮಾ! ಓ ಕುಲನಂದನಾ! ನಿನ್ನ ತಮ್ಮನನ್ನೂ ಕರೆದುಕೊಂ ಡು ಬೇಗ ಬಾ ! ಕುಮಾರಾ ! ನೀವಿಬ್ಬರೂ ಬೆಳಿಗ್ಗೆ ಎದ್ದಾಗ ಊಟಮಾಡಿ ಬಂದವರಲ್ಲವೆ? ಈ ಆಟದ ಸಂಭ್ರಮದಲ್ಲಿ ನಿಮಗೆ ಹಸಿವೂ ತೋರುವುದಿ ಲ್ಲವೆ? ಶ್ರಮದಿಂದಲೂ ಹಸಿವಿನಿಂದಲೂ ನಿಮ್ಮ ಮುಖವು ಸುಕ್ಕಿಹೋ ಗಿರುವುದಲ್ಲಾ ! ನಿಮ್ಮ ತಂದೆಯು ಊಟಮಾಡುವುದಕ್ಕೆ ಹೋಗದೆ ನಿಮ ಗಾಗಿಯೇ ಕಾದಿರುವನು, ಕೃಷ್ಣಾ ! ಬಲರಾಮಾ?ಬನ್ನಿರಿ! ಹೋಗುವೆವು” ಎಂದು ಬಹಳ ನಯವಾಕ್ಯಗಳಿಂದ ಕರೆದರೂ ಅವರುಬಾರದಿರಲು, ಆಗ ಯಶೋದೆಯು ಅಲ್ಲಿದ್ದ ಇತರಬಾಲಕರನ್ನು ನೋಡಿ “ಬಾಲಕರೆ! ಹೊತ್ತಾ ಯಿತು ನಿಮ್ಮನಿಮ್ಮ ಮನೆಗೆ ಹೋಗಿರಿ! ನಿಮಗೆ ಮನೆಯಲ್ಲಿ ಯಾರೂ ಕೇಳು ವವರಿಲ್ಲವೆ ? ಹೊರಡಿರಿ!” ಎಂದಳು. ಆಗಲೂ ಕೃಷ್ಣಬಲರಾಮರು ಬಾರದಿ ರುವುದನ್ನು ನೋಡಿ, ತಿರುಗಿ ಯಶೋದೆಯು “ಕೃಷ್ಣಾ! ನಿನ್ನ ಮೈಯನ್ನು

ನೋಡು ! ಬೀದಿಯ ಮಣ್ಣೆಲ್ಲವೂ ನಿನ್ನ ಮೈಮೇಲಿರುವುದಲ್ಲಾ ! ಬಾ! ಮೈ ತೊಳೆಯುವೆನು. ಇದು ನಿನಗೆ ಹುಟ್ಟಿದ ದಿನವು. ನೀನು ಸ್ನಾನಮಾಡಿ ಬ್ರಾಹ್ಮಣರಿಗೆ ಗೋದಾನವನ್ನು ಮಾಡಬೇಕು.ಬೇಗ ಬಾ! ಬಾರಪ್ಪ! ಅದೋ! ನಿನ್ನ ಜತೆಗಾರರನ್ನು ನೋಡು ! ಅವರವರ ಮಾತೆಯರು ಅವರಿಗೆ ಸ್ನಾನಮಾಡಿಸಿ, ಹೂಮುಡಿಸಿ, ಎಷ್ಟು ಚೆನ್ನಾಗಿ ಅಲಂಕರಿಸಿ ಕಳುಹಿಸಿರುವರು ನೋಡಿದೆಯಾ ? ನೀನು ಹೀಗಿದ್ದರೆ ನನಗೆ ಅವಮಾನವಲ್ಲವೆ ? ನಿನಗೂ ಸ್ನಾನಮಾಡಿಸಿ, ಅಲಂಕರಿಸಿ, ಹೂಮುಡಿಸುವೆನು ಬಾ ! ಊಟಮಾಡಿ ಬಂದಮೇಲೆ ಬೇಕಾದಹಾಗೆ ಆಟವಾಡುತ್ತಿರು !" ಎಂದಳು. ಹೀಗೆ ಯಶೋದೆಯು ಬ್ರಹ್ಮಾದಿದೇವತೆಗಳಿಗೂ ನಿಯಾಮಕನಾದ ಆ ಕೃಷ್ಣನನ್ನು ತನ್ನ ಮುದ್ದುಮಗುವೆಂದು ತಿಳಿದು, ಪ್ರಿಯವಾಕ್ಯಗಳಿಂದ ಬುದ್ಧಿಕಲಿಸುತ್ತ, ಕೊನೆಗೆ ರಾಮಕೃಷ್ಣರಿಬ್ಬರನ್ನೂ ಕೈಹಿಡಿದು ಮನೆಗೆ ಕರೆತಂದಳು. ಅವರಿಗೆ ಸ್ನಾನ ಮಾಡಿಸಿ ಅವರಿಗಾಗಿ ಮಾಡಬೇಕಾದ ಮಂಗಳಕಾರ್ಯಗಳೆಲ್ಲವನ್ನೂ ಮಾಡಿ, ಭೋಜನಮಾಡಿಸಿ ಕಳುಹಿಸಿದಳು.

ಓ ರಾಜೇಂದ್ರಾ ! ಹೀಗಿರುವಾಗ ಒಮ್ಮೆ ಗೋಪವೃದ್ಧರು, ಆಗಾಗ ಗೋಕುಲದಲ್ಲಿ ನಡೆಯುತಿದ್ದ ಅನರ್ಥಗಳನ್ನು ನೋಡಿ, ಅದನ್ನು ಪರಿಹರಿಸುವುದಕ್ಕೆ ಉಪಾಯವೇನೆಂದು ಆಲೋಚಿಸುವುದಕ್ಕಾಗಿ ಸಭೆಸೇರಿದರು. ಅವರಲ್ಲಿ ಉಪನಂದನೆಂಬವನು, ಜ್ಞಾನಸಮೃದ್ಧನಾಗಿಯೂ, ವಯೋವೃದ್ಧನಾಗಿಯೂ ಇದ್ದುದಲ್ಲದೆ, ಆಯಾದೇಶಕಾಲಗಳನ್ನರಿತು ಕಾರ್ಯಾಕಾರ್ಯಗಳನ್ನು ನಿರ್ಣಯಿಸಬಲ್ಲವನಾಗಿಯೂ, ರಾಮಕೃಷ್ಣರಿಗೆ ಬಹಳ ಹಿತೈಷಿಯಾಗಿಯೂ ಇದ್ದುದರಿಂದ, ನಂದಾದಿಗಳನ್ನು ಕುರಿತು“ ಎಲೈ ಪ್ರಿಯಬಾಂಧವರೆ!ನಾವು ನಮ್ಮ ಗೋಕುಲಕ್ಕೆ ಹಿತವನ್ನು ಕೋರುವವರಾಗಿದ್ದರೆ, ಈಗಲೇ ಈ ಸ್ಥಳವನ್ನು ಬಿಟ್ಟು, ಬೇರೆಕಡೆಗೆ ಒಕ್ಕಲುಹೋಗುವುದು ಮೇಲು! ಇಲ್ಲಿ ಆಗಾಗ ಪ್ರಜಾನಾಶಕ್ಕೆ ಕಾರಣಗಳಾದ ಉತ್ಪಾತಗಳು ನಡೆಯುತ್ತಿರುವುದನ್ನು ನಾವು ನೋಡುತ್ತಲೇ ಇರುವೆವು. ಈ ನಮ್ಮ ಕೃಷ್ಣನು, ಮೊದಲೇ ಬಾಲಘಾತಿನಿಯಾದ ಘೋರರಾಕ್ಷಸಿಯ ಕೈಗೆ ಸಿಕ್ಕಿಬಿದ್ದಿದ್ದು, ಹೇಗೋ ದೈವಾಧೀನದಿಂದ ಬದುಕಿಬಂದನು. ಅದರಿಂದಾಚೆಗೆ ಇವನಮೇಲೆ ಬೀಳುತಿದ್ದ ಬಂಡಿ

ಯು ಭಗವದನುಗ್ರಹದಿಂದ, ತಪ್ಪಿತು. ಆಮೇಲೆ ಸುಳಿಗಾಳಿಯು ತಲೆದೋ
ರಿ,ತರಗೆಲೆಯಂತೆ ಇವನನ್ನು ಆಕಾಶಕ್ಕೆ ಹಾರಿಸಿತು. ಈತನು ಅಂತರಿಕ್ಷದಿಂದ
ಕೆಳಗಿದ್ದ ದೊಡ್ಡಕಲ್ಲುಬಂಡೆಯಮೇಲೆ ಬಿದ್ದಾಗ ಇವನು ಬದುಕುವ
ನೆಂದು ಯಾರುತಾನೇ ನಂಬಿದ್ದರು? ಅದೃಷ್ಟವಶದಿಂದಲೋ, ದೇವತೆಗಳ
ಅನುಗ್ರಹಬಲದಿಂದಲೋ ಆಗಂಡವೂ ಹೇಗೋ ತಪ್ಪಿತು. ಇದಲ್ಲದೆ ಆ ಮ
ತ್ತಿಯ ಮರಗಳುಬಿದ್ದಾಗ ಈ ನಮ್ಮ ಕೃಷ್ಣನೂ, ಇತರಬಾಲಕರೂ ಅವುಗ
ಳನಡುವೆ ಸಿಕ್ಕಿಸಾಯದೆ ಬದುಕಿಬಂದುದೂ,ಆ ಶ್ರೀಹರಿಯ ಕೃಪೆಯಿಂದಲ್ಲವೆ?
ಹೋದುದು ಹೋಗಲಿ ! ಇನ್ನುಮೇಲಾದರೂ ನಾವು ಎಚ್ಚರದಿಂದಿರಬೇಕು.
ಈ ಸ್ಥಳದಲ್ಲಿ ನಮಗೆ ಇನ್ನುಯಾವುದಾದರೂ ಅನರ್ಥಗಳು ಸಂಭವಿಸುವುದ
ಕ್ಕೆ ಮೊದಲೇ, ನಾವು, ನಮ್ಮ ಅನುಚರರನ್ನೂ, ಮಕ್ಕಳನ್ನೂ ಕರೆದುಕೊಂ
ಡು ಸ್ಥಳಾಂತರಕ್ಕೆ ಹೋಗಿ ಸೇರಿಕೊಳ್ಳುವುದುತ್ತಮವು. ಸಮೀಪದಲ್ಲಿ ಬೃಂ
ದಾವನವೆಂಬ ಒಂದು ವನವುಂಟು? ಅಲ್ಲಿ ನಮ್ಮ ಮಂದೆಗೆ ಸಮೃದ್ಧವಾಗಿ ಮೇ
ವು ಸಿಕ್ಕುವುದು. ಅದರಸುತ್ತಿನ ಪ್ರದೇಶಗಳೆಲ್ಲವೂ ಜನಸಮೃದ್ಧವಾಗಿ ಹು
ಲುಸಾಗಿರುವುವು. ನಮ್ಮ ಗೋವುಗಳಿಗೂ, ನಮಗೂ ನಿವಾಸಯೋಗ್ಯವಾ
ಗಿರುವುದು. ಅದರ ಸುತ್ತಿನಲ್ಲಿ ರಮಣೀಯವಾದ ಬೆಟ್ಟಗಳೂ, ಹುಲ್ಲುಮೈದಾ
ನಗಳೂ, ಗಿಡುಬಳ್ಳಿಗಳೂ ಕಾಣವುವು. ಆದುದರಿಂದ ಈಗಲೇ ನಾವೆಲ್ಲರೂ
ಅಲ್ಲಿಗೆ ಪ್ರಯಾಣಮಾಡುವೆವು. ನಿಮಗೆಲ್ಲರಿಗೂ ಇದು ಯುಕ್ತವಾಗಿ ತೋ
ರಿದಪಕ್ಷದಲ್ಲಿ, ಈಗಲೇ-ಬಂಡಿಗಳನ್ನು ಕಟ್ಟಿಸಿದಿರಿ ! ನಮ್ಮ ಮಂದೆಗಳನ್ನು
ಮುಂದಾಗಿಯೇ ಅಲ್ಲಿಗೆ ಕಳುಹಿಸಿರಿ !" ಎಂದನು. ಈ ಉಪನಂದನ ಮಾತು
ಎಲ್ಲರಿಗೂ ಯುಕ್ತವೆಂದು ತೋರಿತು. ಎಲ್ಲರೂ ಏಕಾಭಿಪ್ರಾಯದಿಂದ ಅದಕ್ಕೆ
ಸಮ್ಮತಿಸಿದರು. ಒಡನೆಯೇ ಅವರವರು, ತಮ್ಮ ತಮ್ಮ ಪರಿಕರಗಳನ್ನು ಸಿದ್ಧ
ಪಡಿಸಿಕೊಂಡು, ತಮ್ಮ ಒಡವೆವಸ್ತುಗಳನ್ನು ಬಂಡಿಗಳಲ್ಲಿ ತುಂಬಿದರು. ಮೊ
ದಲು ಹೆಂಗಸರುಮಕ್ಕಳನ್ನೂ, ಮುದುಕರನ್ನೂ ಬಂಡಿಗೆ ಏರಿಸಿದರು. ತಮ್ಮ
ಬಿಲ್ಲುಬಾಣಗಳನ್ನು ಕೈಗೆತ್ತಿಕೊಂಡರು. ಮಂದೆಗಳನ್ನು ಮುಂದೆ ಬಿಟ್ಟು
ಕೊಂಡು,ಕೊಂಬು, ತಮಟೆ,ಮುಂತಾದ ವಾದ್ಯಘೋಷಗಳೊಡನೆ, ಉತ್ಸಾ
ಹದಿಂದ ಪ್ರಯಾಣಮಾಡಿದರು. ಗೊಲ್ಲಿತಿಯರೆಲ್ಲರೂ, ಅರಿಸಿನ ಕುಂಕು

ಮಗಳನ್ನಿಟ್ಟುಕೊಂಡು, ತಮ್ಮತಮ್ಮ ಯೋಗ್ಯತಾನುಸಾರವಾಗಿ ತಮ್ಮಲ್ಲಿದ್ದ ಹಾರ, ಪದಕ.ವೊದಲಾದ ಕಂಠಾಭರಣಗಳನ್ನು ಧರಿಸಿ,ಬಣ್ಣದ ಸೀರೆಗಳನ್ನುಟ್ಟು, ಬಂಡಿಯಲ್ಲಿ ಕುಳಿತು, ಸಂತೋಷದಿಂದ ಕೃಷ್ಣನ ಲೀಲೆಗಳನ್ನು ಕೊಂಡಾಡುತ್ತ ಹೊರಟರು. ರೋಹಿಣೀಯಶೋದೆಯರಿಬ್ಬರೂ ರಾಮಕೃಷ್ಣರೊಡನೆ ಒಂದು ಬಂಡಿಯಲ್ಲಿ ಕುಳಿತು, ಆ ಬಾಲಕರ ಮುದ್ದುಮಾತುಗಳನ್ನು ಕೇಳಿ ಆನಂದಿಸುತ್ತ ಬರುತಿದ್ದರು. ಹೀಗೆ ಅವರೆಲ್ಲರೂ ನಿತ್ಯಸುಖಾಸ್ಪದವಾದ ಬೃಂದಾವನಕ್ಕೆ ಸೇರಿದೊಡನೆ, ಅಲ್ಲಿ ಅರ್ಧಚಂದ್ರವ್ಯೂಹದಂತೆ ತಮ್ಮ ಬಂಡಿಗಳನ್ನು ಸಾಲಾಗಿ ನಿಲ್ಲಿಸಿ, ಅದರ ನಡುವೆ ತಮ್ಮ ಮಂದೆಗೆ ಅನುಕೂಲವಾದ ವಾಸಸ್ಥಾನವನ್ನೂ ಮಾಡಿಟ್ಟರು. ಅಲ್ಲಿನ ಸ್ಥಳಸನ್ನಿವೇಶಗಳನ್ನೂ, ಅದರ ಸಮೀಪದಲ್ಲಿರುವ ಗೋವರ್ಧನವೆಂಬ ಪರ್ವತವನ್ನೂ, ಸಮೀಪದಲ್ಲಿರುವ ಯಮುನಾನದಿಯ ಮಳಲುದಿಣ್ಣೆಗಳನ್ನೂ ನೋಡಿದಾಗಲೇ, ಬಲರಾಮಕೃಷ್ಣರಿಗೆ ಎಷ್ಟೋ ಉಲ್ಲಾಸವುಂಟಾಯಿತು. ಅವರಿಬ್ಬರೂ ಅಲ್ಲಿನ ವನಪ್ರದೇಶಗಳಲ್ಲಿ ಯಥೇಚ್ಛವಾಗಿ ವಿಹರಿಸುತ್ತ, ತಮ್ಮ ಬಾಲಕ್ರೀಡೆಗಳಿಂದಲೂ, ತಮ್ಮ ಮುದ್ದುಮಾತುಗಳಿಂದಲೂ, ಎಲ್ಲರ ಮನಸ್ಸನ್ನೂ ಆಕರ್ಷಿಸುತಿದ್ದರು. ಕ್ರಮಕ್ರಮವಾಗಿ ಅವರಿಗೆ ಬಾಲ್ಯದಶೆಯು ಕಳೆಯುತ್ತ ಕೌಮಾರವಯಸ್ಸು ಬಂದಿತು. ಕರುಗಳನ್ನು ಕಾಯುವುದಕ್ಕೆ ತಕ್ಕಸಾಮರ್ಥ್ಯವುಂಟಾಯಿತು. ಪ್ರತಿದಿನವೂ, ಮಂದೆಯ ಹಸುಗಳನ್ನು ಮೇಯುವುದಕ್ಕಾಗಿ ಕಾಡಿಗೆ ಅಟ್ಟಿಕೊಂಡು ಹೋಗುತಿದ್ದರು. ಆ ಬೃಂದಾವನದ ಸುತ್ತಿನ ಪ್ರದೇಶಗಳಲ್ಲಿ ದನಗಳನ್ನು ಮೇಯಿಸುವಾಗಲೂ, ತಮಗೆ ಬೇಕಾದ ಕ್ರೀಡಾಪರಿಕರಗಳನ್ನು ಸಂಗ್ರಹಿಸಿಕೊಂಡು, ಇತರ ಗೋಪಬಾಲಕರೊಡನೆ ನಾನಾವಿಧವಾದ ಆಟಗಳನ್ನಾಡುತ್ತ ಸಂತೋಷದಿಂದ ಕಾಲವನ್ನು ಕಳೆಯುತಿದ್ದರು. ಒಮ್ಮೆ ಕೊಳಲೂದುವುದು! ಮತ್ತೊಮ್ಮೆ ಕಾಡುಹಣ್ಣುಗಳನ್ನು ಕಿತ್ತು ಒಬ್ಬರಮೇಲೊಬ್ಬರು ಸ್ಪರ್ಧೆಯಿಂದ ಬಿಸುಡುವುದು! ಇನ್ನೊಮ್ಮೆ ಕಾಲುಗೆಜ್ಜೆಗಳ ಘಲ್ಘಲಧ್ವನಿಯೊಡನೆ ಕುಣಿದಾಡುವುದು ! ಮತ್ತೊಮ್ಮೆ ಕರೀಕಂಬಳಿಗಳನ್ನು ಮೈಗೆ ಮುಚ್ಚಿಕೊಂಡು, ಹಸುಗಳಂತೆ ಕೈಕಾಲುಗಳನ್ನೂರಿ ನಡೆಯುತ್ತ

ಒಬ್ಬರನ್ನೊಬ್ಬರು ತಿವಿಯುವುದು! ಎತ್ತುಗಳಂತೆ ಗುಟುರುಹಾಕುವುದು! ಮತ್ತೊಮ್ಮೆ ಕಾಡುಹಕ್ಕಿಗಳಂತೆಯೂ, ಕಾಡುಮೃಗಗಳಂತೆಯೂ ಬೇರೆಬೇರೆ ಧ್ವನಿಯಿಂದ ಕೂಗುವುದು! ಹೀಗೆ ನಾನಾವಿನೋದಗಳಿಂದ ಸಾಮಾನ್ಯಬಾಲಕರಂತೆ ಕ್ರೀಡಿಸುತಿದ್ದರು.

ಓ ರಾಜಾ! ಹೀಗಿರುವಾಗ ಒಮ್ಮೆ, ರಾಮಕೃಷ್ಣರಿಬ್ಬರೂ ತಮ್ಮ ಸಂಗಡಿಗರಾದ ಬೇರೆ ಕೆಲವು ಗೊಲ್ಲಹುಡುಗರೊಡನೆ ಯಮುನಾತೀರದಲ್ಲಿ ದನಗಳನ್ನು ಮೇಯಿಸುತಿದ್ದ ಸಮಯದಲ್ಲಿ ಕಂಸನಿಂದ ಪ್ರೇರಿತನಾದ ಒಬ್ಬಾನೊಬ್ಬ ರಾಕ್ಷಸನು, ಒಂದು ಕರುವಿನ ಆಕಾರದಿಂದ ಮಂದೆಯಲ್ಲಿ ಸೇರಿಕೊಂಡನು. ಸರ್ವಜ್ಞನಾದ ಕೃಷ್ಣನು ಒಡನೆಯೇ ಈ ಸಂಗತಿಯನ್ನು ತಿಳಿದು. ಬಲರಾಮನೊಡನೆ ಆ ಅಸುರನಿದ್ದ ಸ್ಥಳಕ್ಕೆ ಬಂದು. "ಅಣ್ಣಾ! ಈ ಕರುವನ್ನು ನೋಡು!" ಎಂದು ಅದರ ರೂಪವನ್ನು ವರ್ಣಿಸುತ್ತ, ಏನೂ ತಿಳಿಯದವನಂತೆ ಮೆಲ್ಲಗೆ ಬಂದು ಅದರ ಹಿಂದೆ ನಿಂತನು. ಆ ಕರುವು ತನ್ನ ಮೇಲೆ ಹಾರುವುದಕ್ಕೆ ಯತ್ನಿಸುವ ಸಂಚನ್ನು ತಿಳಿದು, ತಟ್ಟನೆ ಅದರ ಬಾಲವನ್ನೂ, ಹಿಂದಿನ ಕಾಲುಗಳೆರಡನ್ನೂ ಒಂದಾಗಿ ಸೇರಿಸಿ ಹಿಡಿದು, ಒಂದೇ ಕೈಯಿಂದ ಮೇಲಕ್ಕೆತ್ತಿ, ಗಿರಗಿರನೆ ತಿರುಗಿಸಿದನು. ಹೀಗೆ ತಿರುಗಿಸುವಾಗಲೇ ಆ ವತ್ಸಾಸುರನಿಗೆ ಉಸಿರಾಟವು ನಿಂತುಹೋಗಿ ಅವನು ಮೃತನಾದನು. ಆಗ ಕೃಷ್ಣನು ತನ್ನ ಕೈಯಲ್ಲಿದ್ದ ಆ ಮೃತಶರೀರವನ್ನು ಸಮೀಪದಲ್ಲಿದ್ದ ಒಂದಾನೊಂದು ಬೇಲದ ಮರದಮೇಲಕ್ಕೆ ಗುರಿಯಿಟ್ಟು ಬೀಸಿದನು. ಆಗ ಆ ಮರದಿಂದ ಬೇಕಾದಷ್ಟು ಹಣ್ಣುಗಳು ಉದಿರಿದುದಲ್ಲದೆ, ಆ ಹಣ್ಣುಗಳೊಡನೆ ಭಯಂಕರವಾದ ಆ ರಾಕ್ಷಸದೇಹವೂ ಕೆಳಗೆ ಬಿದ್ದಿತು. ಇದನ್ನು ನೋಡಿ ಅಲ್ಲಿದ್ದ ಬಾಲಕರೆಲ್ಲರೂ ಆಶ್ಚರ್ಯದಿಂದ ಬೆರಗಾಗಿ "ಭಲೆ! ಭಲೆ" ಎಂದು ಕೃಷ್ಣನನ್ನು ಕೊಂಡಾಡುತಿದ್ದರು. ದೇವತೆಗಳು ಈ ರಾಕ್ಷಸವಧದಿಂದ ತಮಗುಂಟಾದ ಸಂತೋಷಕ್ಕೆ ಸೂಚಕವಾಗಿ ಕೃಷ್ಣನಮೇಲೆ ಪುಷ್ಪವರ್ಷವನ್ನು ಕರೆದರು.

## ಬಕಾಸುರ ವಧವು.

ಓ ಪರೀಕ್ಷಿದ್ರಾಜಾ! ಆ ರಾಮಕೃಷ್ಣರಿಬ್ಬರೂ, ಸಮಸ್ತಲೋಕಗಳಿಗೂ ತಾವೇ ಪಾಲಕರಾಗಿದ್ದರೂ, ಗೊಲ್ಲರೊಡನೆ ತಾವೂ ಗೊಲ್ಲರಾಗಿ, ಬೆ



೧೮೧೧. ಬಕಾಸುರವಧೆ.

ಳಿಗೆ ತಂಗಳೂಟವನ್ನುಂಡು ದನಗಳನ್ನು ಕಾಯುತ್ತ, ಕಾಡುಕಾಡಾಗಿ ತಿರುಗುತಿದ್ದರು. ಹೀಗೆ ಗೋಪಾಲಬಾಲಕರೆಲ್ಲರೂ, ದನಗಳನ್ನು ಮೇಯಿಸುತ್ತ, ಒಮ್ಮೆ ದಾಹದಿಂದ ನೀರುಕುಡಿಯುವುದಕ್ಕಾಗಿ ಯಮುನಾನದಿಯ ಮಡುವಿಗೆ ಬಂದರು. ಅಲ್ಲಿ ತಮ್ಮ ಹಸುಗಳಿಗೆ ನೀರನ್ನು ಕುಡಿಸಿ, ತಾವೂ ದಾಹಶಾಂತಿಯನ್ನು ಮಾಡಿಕೊಂಡು ವಿನೋದದಿಂದಿರುವಾಗ, ಆ ಮಡುವಿನ ದಡದಲ್ಲಿ, ವಜ್ರಾಹತವಾಗಿ ಮುರಿದುಬಿದ್ದ ಪರ್ವತಶಿಖರದಂತೆ ಮಹಾದೇಹವುಳ್ಳ ಒಂದಾನೊಂದು ಬಕಪಕ್ಷಿಯು ಗೋಚರಿಸಿತು. ಓ ರಾಜೇಂದ್ರಾ ! ಇದನ್ನು ಸಾಮಾನ್ಯಪಕ್ಷಿಯೆಂದು ತಿಳಿಯಬೇಡ! ಕೃಷ್ಣನನ್ನು ಕೊಲ್ಲಬೇಕೆಂಬ ಉದ್ದೇಶದಿಂದ ಒಬ್ಬ ರಾಕ್ಷಸನೇ ಈ ಆಕಾರದಿಂದ ಆರ್ಭಟಿಸಿ ಕೂಗುತ್ತ, ನೆಟ್ಟಗೆ ಆ ಕೃಷ್ಣನಿದ್ದ ಕಡೆಗೆ ಬಂದು, ತೀಕ್ಷ್ಣವಾದ ತನ್ನ ಕೊಕ್ಕಿನಿಂದ ಆ ಕೃಷ್ಣನನ್ನು ನುಂಗುವದಕ್ಕೆ ಬಾಯಿಕ್ಕಿದನು. ಇತರಬಾಲಕರೆಲ್ಲರೂ ಕ್ಷಣಮಾತ್ರದವರೆಗೆ ಕೃಷ್ಣನನ್ನು ಕಾಣದೆ ಪ್ರಾಣವಿಲ್ಲದ ಇಂದ್ರಿಯಗಳಂತೆ ಏನೊಂದೂ ತೋರದೆ ಭಯದಿಂದಲೂ, ದುಃಖದಿಂದಲೂ ಬೆರಗಾಗಿದ್ದರು ಸರ್ವಲೋಕಜನಕನಾದ ಬ್ರಹ್ಮನಿಗೂ ತಾನು ಜನಕನೆನಿಸಿಕೊಂಡ ಕೃಷ್ಣನನ್ನು ಕೊಲ್ಲಬೇಕೆಂದರೆ ಆ ಬಕಾಸುರನಿಗೆ ಸಾಧ್ಯವೆ ? ಕೃಷ್ಣನನ್ನು ಕೊಕ್ಕಿನಿಂದ ಹಿಡಿದಾಗಲೇ ಆವನ ತೇಜಸ್ಸು, ಬಕಾಸುರನ ದವಡೆಗಳೆರಡನ್ನೂ, ಬೆಂಕಿಯಂತೆ ದಹಿಸಲಾರಂಭಿಸಿತು ಒಡನೆಯೇ ಆ ಬಕಾಸುರನು ಆ ಕೃಷ್ಣನನ್ನು ನುಂಗಲಾರದೆ ಹೊರಕ್ಕೆ ಕಕ್ಕಿಬಿಟ್ಟನು. ತನ್ನ ಪ್ರಯತ್ನವು ವಿಫಲವಾದುದಕ್ಕಾಗಿ ಬಕನು, ಮಿತಿಮೀರಿದ ಕೋಪದಿಂದ ಆ ಕೃಷ್ಣನನ್ನು ಕುಕ್ಕಿಕೊಲ್ಲಬೇಕೆಂದು ತಿರುಗಿ ಮೇಲೆಬಿದ್ದು ಬರುತಿದ್ದನು ಇದನ್ನು ನೋಡಿ ಕೃಷ್ಣನು, ಕಂಸನಿಗೆ ಸಖನಾದ ಆ ರಾಕ್ಷಸನನ್ನು ಹುಂಕಾರದಿಂದ ಗದರಿಸುತ್ತ, ಮುಂದೆಬಂದು, ತನ್ನ ಸಂಹಡಿಗರಾದ ಬಾಲಕರೆಲ್ಲರೂ ನೋಡುತ್ತಿರುವಹಾಗೆಯೇ, ಅವನ ಕೊಕ್ಕುಗಳನ್ನು ಹಿಡಿದು, ಕಾಲಿಂದ ಮೆಟ್ಟಿಕೊಂಡು ಹಂಚಿಯಕಡ್ಡಿಯನ್ನು ಸೀಳುವಂತೆ ಎರಡುತುಂಡಾಗಿ ಸೀಳಿಬಿಟ್ಟನು. ಈ ರಾಕ್ಷಸವಧವನ್ನು ನೋಡಿ ದೇವತೆಗಳೆಲ್ಲರೂ ಕೃಷ್ಣನಮೇಲೆ, ನಂದವನ

ವಾದ ದುಃಖಗಳೊಂದನ್ನೂ ತಿಳಿಯದೆ,ಮುಕ್ತದಶೆಯಲ್ಲಿರುವಂತೆ ನಿತ್ಯ ಸುಖಿಗಳಾಗಿದ್ದರು. ಓಪರೀಕ್ಷಿದ್ರಾಜಾ! ರಾಮಕೃಷ್ಣರಿಬ್ಬರೂ ಹೀಗೆ ನಾನಾವಿಧವಾಗಿ ತಮ್ಮ ಸಾಮರ್ಥ್ಯವನ್ನು ತೋರಿಸುವುದರಿಂದಲೂ, ಮನೆಕಟ್ಟುವುದು, ಸೇತುವೆಗಳನ್ನು ಕಟ್ಟುವುದು,ಕೋತಿಗಳಂತೆ ಹಾರುವುದು, ಇವೇ ಮೊದಲಾದ ಆಟಪಾಟಗಳಿಂದಲೂ ತಮ್ಮ ಕೌಮಾರಾವಸ್ಥೆಯನ್ನು ಕಳೆದರು. ಇದು ಹನ್ನೊಂದನೆಯ ಅಧ್ಯಾಯವು.

---

## ಅಘಾಸುರಸಂಹಾರವು.

ರಾಜಾ! ಕೇಳು! ಮತ್ತೊಮ್ಮೆ ಕೃಷ್ಣನು, ಬೆಳಿಗ್ಗೆ ಎದ್ದು ತನ್ನ ಸಂಗಡಿಗರಾದ ಗೋಪಬಾಲಕರನ್ನೂ ಎಬ್ಬಿಸಿಕೊಂಡು, ತಾವೆಲ್ಲರೂ ಸೇರಿ ವನಭೋಜನವನ್ನು ಮಾಡಬೇಕೆಂದು ಪ್ರೋತ್ಸಾಹಿಸಿದನು. ಎಲ್ಲರೂ ಆಹಾರ ಸಾಮಗ್ರಿಗಳನ್ನೂ,ಕೊಂಬು,ಕಲ್ಲಿ ದೊಣ್ಣೆ ಮುಂತಾದುವುಗಳನ್ನೂ ಸೇರಿಸಿಕೊಂಡು,ಕರುಗಳನ್ನು ಮುಂದೆ ಬಿಟ್ಟುಕೊಂಡು, ಉತ್ಸಾಹದಿಂದ ಕೊಂಬುಗಳನ್ನೂ ದುತ್ತ ಹೊರಟರು. ಅಲ್ಲಲ್ಲಿ ಸೊಂಪಾಗಿಬೆಳೆದ ಹುಲ್ಲಿನ ಮೈದಾನಗಳಲ್ಲಿಕರುಗಳನ್ನು ಮೇಯುವುದಕ್ಕೆ ಬಿಟ್ಟು,ತಮತಮಗೆ ತೋರಿದ ಆಟಪಾಟಗಳಿಂದ ವಿಹರಿಸುತಿದ್ದರು. ಈ ಬಾಲಕರೆಲ್ಲರೂ ಕೆಂಪು, ವಜ್ರ, ಮೊದಲಾದ ರತ್ನಾಭರಣಗಳಿಂದಲೂ,ಸುವರ್ಣಭೂಷಣಗಳಿಂದಲೂ ಅಲಂಕೃತರಾಗಿ ಬಂದಿದ್ದರೂ,ಕಾಡಿನಲ್ಲಿ ಬೆಳೆದ,ಎಲೆ,ಚಿಗುರು.ಹಣ್ಣು, ಹೂಗೊಂಚಲು, ಕರೀಮಣಿ, ಗುಲಗಂಜಿ ಮೊದಲಾದುವುಗಳಿಂದಲೂ, ಅರಿದಳ ಮೊದಲಾದ ಗೈರಿಕಧಾತುಗಳಿಂದಲೂ, ಚಿತ್ರವಿಚಿತ್ರಗಳಾದ ಭೂಷಣಗಳನ್ನುಮಾಡಿ, ಅವುಗಳಿಂದ ತಮ್ಮ ದೇಹವನ್ನಲಂಕರಿಸಿಕೊಳ್ಳುತಿದ್ದರು. ಆ ಬಾಲಕರ ಆಟಪಾಟಗಳನ್ನು ಕೇಳಬೇಕೆ? ಒಬ್ಬನ ಕಲ್ಲಿ, ಕವಣೆ, ಮುಂತಾದ ವಸ್ತುಗಳನ್ನು ಮತ್ತೊಬ್ಬನು ಬಚ್ಚಿಡುವುದು! ಸ್ವಂತಗಾರನು ಅದನ್ನು ಕಂಡುಹಿಡಿಯಬಹುದಾದ ಸಂದರ್ಭದಲ್ಲಿ, ಮತ್ತೊಬ್ಬನು ಹಿಂದಿನಿಂದ ಅದನ್ನು ಅವನಿಗೆ ತಿಳಿಯದಂತೆ ಅವನಹಿಂದೆ ಬಿಸಾಡುವುದು! ಆ ಸ್ವಂತಗಾರನು ಅದನ್ನು ಕೈಗೆತ್ತಿಕೊಳ್ಳುವಷ್ಟರಲ್ಲಿ,ಸಮೀಪದಲ್ಲಿದ್ದ ಮತ್ತೊಬ್ಬನು, ಅದನ್ನೆತ್ತಿ

ನದ ಮಂದಾರಮಲ್ಲಿಕಾದಿಪುಷ್ಪಗಳನ್ನು ವರ್ಷಿಸಿದರು. ದೇವದುಂದುಭಿ ಮೊದಲಾದ ವಾದ್ಯಗಳನ್ನು ನುಡಿಸುತ್ತ ಕೃಷ್ಣನ ಪರಾಕ್ರಮವನ್ನು ಕೊಂಡಾಡಿದರು. ಈ ವೈಭವವನ್ನು ನೋಡಿ ಇತರ ಗೋಪಾಲಬಾಲಕರೆಲ್ಲರೂ ಆಶ್ಚರ್ಯದಿಂದ ಬೆರಗಾಗಿದ್ದರು. ಓ ಪರೀಕ್ಷಿದ್ರಾಜಾ! ಹೀಗೆ ಬಕನ ಬಾಯಿಂದ ತಪ್ಪಿಸಿಕೊಂಡು ಬಂದ ಕೃಷ್ಣನನ್ನು ನೋಡಿ, ಇತರಬಾಲಕರೆಲ್ಲರೂ, ಪುನರ್ಜೀವವನ್ನು ಪಡೆದ ಇಂದ್ರಿಯಗಳಂತೆ ಉತ್ಸಾಹಯುಕ್ತರಾಗಿ, ಆ ಕೃಷ್ಣನನ್ನು ಬಾರಿಬಾರಿಗೂ ಅಪ್ಪಿಕೊಂಡು ಕುಣಿದಾಡುತ್ತ, ತಮ್ಮ ದನಗಳನ್ನಟ್ಟಿಕೊಂಡು ಹಿಂತಿರುಗಿ ತಮ್ಮತಮ್ಮ ನಿವಾಸಕ್ಕೆ ಬಂದುಸೇರಿದರು. ಬಹಳ ಹೊತ್ತಿನವರೆಗೆ ಒಬ್ಬರಿಗೊಬ್ಬರು ಕೃಷ್ಣನ ಈ ಅದ್ಭುತವ್ಯಾಪಾರವನ್ನೇ ಕೊಂಡಾಡಿ ಕೀರ್ತಿಸುತಿದ್ದರು. ಅಲ್ಲಿದ್ದ ಇತರಗೋಪಾಲಕರೂ, ಗೋಪಸ್ತ್ರೀಯರೂ, ಈ ವೃತ್ತಾಂತವನ್ನು ಕೇಳಿ ವಿಸ್ಮಿತರಾಗಿ, ಸತ್ತುಬದುಕಿಬಂದ ಪ್ರಿಯಬಂಧುಗಳನ್ನು ಹೇಗೋಹಾಗೆ ಆ ಕೃಷ್ಣನನ್ನು ಕಣ್ಣಿಣಿಯದೆ ನೋಡುತ್ತ, ಸಂತೋಷಪರವಶರಾಗಿ ಬಾರಿಬಾರಿಗೂ ಅವನನ್ನು ಎತ್ತಿಕೊಂಡು ಮುತ್ತಿಕ್ಕಿ ಮುದ್ದಾಡುತಿದ್ದರು. ಮತ್ತು ಆ ಕೃಷ್ಣನನ್ನು ನೋಡಿ ಒಬ್ಬರಿಗೊಬ್ಬರು "ಆಹಾ! ಈಗಾಗಲೇ ಈ ಸಣ್ಣಬಾಲಕನಿಗೆ ಇಷ್ಟೊಂದು ಗಂಡಗಳೆ? ಆದರೇನು? ಇವನನ್ನು ಕೊಲ್ಲಬೇಕೆಂದು ಬಂದವರಿಗೆಲ್ಲಾ ಕೇಡಾಯಿತೇಹೊರತು, ಇವನುಮಾತ್ರ ಯಾವುದಕ್ಕೂ ಜಗ್ಗಲಿಲ್ಲ. ಇದು ಯುಕ್ತವೆ? ಜನ್ಮಾಂತರದಲ್ಲಿ ಅವರು ಈ ಬಾಲಕನಿಗೆ ಏನೋ ಕೇಡುಮಾಡಿದ್ದುದರಿಂದಲೇ, ಈಗ ಇವನ ಕೈಯಿಂದತಾವೇಸಾಯಬೇಕಾಯಿತು! ಆ ರಾಕ್ಷಸರೆಲ್ಲರೂ ಅಷ್ಟು ಭಯಂಕರಸ್ವರೂಪವುಳ್ಳವರಾಗಿದ್ದರೂ, ಈ ಸಣ್ಣಮಗುವನ್ನು ಜಯಿಸಲಾರದೆ, ಬೆಂಕಿಯಲ್ಲಿ ಬಿದ್ದ ಮಿಡಿತೆಗಳಂತೆ ಇವನ ಕೈಯಿಂದ ಹತರಾದರಲ್ಲಾ! ಗರ್ಗನು ಈ ಬಾಲನನ್ನು ವಿಷ್ಣುವಿನಂತೆ ಮಹಾಮಹಿಮೆಯುಳ್ಳವನೆಂದು ಹೇಳಿದುದು ನಿಜವೆ? ಬ್ರಹ್ಮವಾದಿಗಳ ಮಾತು ಎಂದಿಗೆ ಸುಳ್ಳಾದೀತು?" ಎಂದು ಆ ಕೃಷ್ಣನ ಮಹಿಮೆಯನ್ನೇ ಕೊಂಡಾಡುತಿದ್ದರು. ಹೀಗೆ ನಂದಾದಿಗೋಪಾಲಕರು, ರಾಮಕೃಷ್ಣರ ಲೀಲೆಗಳನ್ನು ನೋಡುತ್ತ, ಅವರ ಕಥೆಗಳನ್ನು ಕೇಳುತ್ತ, ಸಾಂಸಾರಿಕ

ದೂರಕ್ಕೆಸೆಯುವುದು ! ಕೃಷ್ಣನು ವನವನ್ನು ನೋಡಬರುವುದಕ್ಕಾಗಿ ದೂರಕ್ಕೆ ಹೋಗಿದ್ದಸಂದರ್ಭದಲ್ಲಿ, ಅವನನ್ನು ಮುಟ್ಟುವುದಕ್ಕಾಗಿ “ನಾನು ಮೊದಲು! ತಾನು ಮೊದಲೆಂ”ದು ಹಟದಿಂದ ಓಡುವುದು! ಮೊದಲು ಕೃಷ್ಣನನ್ನು ಮುಟ್ಟಿದವರು ಸಂತೋಷದಿಂದ ಕೇಕೆಹಾಕುವುದು! ಕೆಲವರು ಕೊಳಲೂದುತ್ತಿರುವುದು! ಕೆಲವರು ಕೊಂಬುಗಳನ್ನೂದು ವುದು! ಮತ್ತೆ ಕೆಲವರು ಭ್ರಮರಝುಂಕಾರವನ್ನೇ ಶ್ರುತಿಯಾಗಿಟ್ಟುಕೊಂಡು ಹಾಡುತ್ತಿರುವುದು! ಕೋಗಿಲೆಗಳೊಡನೆ ಕೂಗುವುದು! ಆಕಾಶದಲ್ಲಿ ಹಕ್ಕಿಗಳು ಹಾರಾಡುವಾಗ, ಅವುಗಳ ನೆಳಲನ್ನು ಹಿಡಿದು ಓಡುವುದು! ನಡೆಯುವ ಹಂಸಗಳೊಡನೆ ಮಂದಗಮನದಿಂದ ನಡೆಯುವುದು! ಬಕಪಕ್ಷಿಗಳೊಡನೆ ಅವುಗಳಂತೆಯೇ ನಿಶ್ಚಲವಾಗಿ ಕುಳಿತಿರುವುದು! ಕುಣಿಯುವ ನವಿಲುಗಳೊಡನೆ ಕುಣಿದಾಡುವುದು! ಕಪಿಗಳ ಬಾಲವನ್ನೆಳೆಯುವುದು! ಆ ಬಾಲವನ್ನು ಹಿಡಿದು ಅದರ ಆಧಾರದಿಂದಲೇ ಮರಕ್ಕೇರುವುದು! ಕಪಿಗಳಂತೆ ವಿಕೃತಚೇಷ್ಟೆಗಳನ್ನು ಮಾಡುವುದು! ಮರವನ್ನೇರಿ ಕೊಂಬೆಗಳಿಂದ ಕೊಂಬೆಗಳಿಗೆ ಹಾರುವುದು! ಕಪ್ಪೆಗಳೊಡನೆ ಕುಪ್ಪುವುದು! ನೀರಿನಲ್ಲಿ ಮುಳುಗಾಡುವುದು! ಜಲದಲ್ಲಿ ಒಬ್ಬರ ಪ್ರತಿಬಿಂಬವನ್ನು ನೋಡಿ ಮತ್ತೊಬ್ಬರು ಹಾಸ್ಯಮಾಡುವುದು! ಪ್ರತಿಧ್ವನಿಗಳನ್ನು ಕೇಳಿ ಅವುಗಳೊಡನೆ ಜಗಳವಾಡುವಂತೆ ಬೈಯುವುದು! ಹೀಗೆ ಆ ಗೋಪಬಾಲಕರೆಲ್ಲರೂ ರಾಮಕೃಷ್ಣರೊಡನೆ ಉಲ್ಲಾಸದಿಂದ ವಿಹರಿಸುತಿದ್ದರು! ಓ ಪರೀಕ್ಷಿದ್ರಾಜಾ! ಈ ಗೊಲ್ಲರ ಮಕ್ಕಳ ಭಾಗ್ಯವಲ್ಲವೇ ಭಾಗ್ಯವು! ಬ್ರಹ್ಮಾನಂದಾನುಭವದಿಂದ ಸಂತುಷ್ಟರಾದ ಸಾಧುಗಳಿಗೆ ತಾನೇ ಪರದೈವವೆನಿಸಿಕೊಂಡಿದ್ದರೂ, ಪ್ರಕೃತಿಬದ್ಧರಾದವರಿಗೆ ಸಾಮಾನ್ಯಮನುಷ್ಯಬಾಲಕನಂತೆ ತೋರುತ್ತಿರುವ ಆ ಶ್ರೀಕೃಷ್ಣನೊಡಗೂಡಿ, ಸಂತೋಷದಿಂದ ವಿಹರಿಸುತಿದ್ದ ಆ ಗೋಪಬಾಲಕರ ಪುಣ್ಯವಿಶೇಷವನ್ನು ಎಷ್ಟೆಂದು ಹೇಳಬಹುದು! ಅನೇಕಜನ್ಮಗಳವರೆಗೆ ದೇಹಶೋಷಣಾದಿಗಳಿಂದ ಅತಿಕಷ್ಟವ್ರತಗಳನ್ನು ನಡೆಸಿ, ಅದರಿಂದ ತಮ್ಮ ಮನಃಕಾಲುಷ್ಯವನ್ನು ನೀಗಿದ ಮಹಾಯೋಗಿಗಳಿಗೂಕೂಡ, ಯಾವನ ಪಾದಧೂಳಿಯು ದುರ್ಲಭವೆನಿಸಿರುವುದೋ, ಅಂತಹ ಪರಮ

ಪುರುಷನೊಡನೆ ಆಟವಾಡುತ್ತ, ಅನವರತವೂ ಅವನನ್ನು ತಮ್ಮ ಕಣ್ಣಾರೆ ನೋಡುತ್ತಿರುವ ಆ ಗೋಪಬಾಲಕರ ಭಾಗ್ಯವಿಶೇಷವನ್ನು ಎಷ್ಟೆಂದು ಹೇಳಬಹುದು!

ರಾಜೇಂದ್ರಾ! ಹೀಗೆ ಆ ಗೋಪಬಾಲಕರೆಲ್ಲರೂ ಸಂತೋಷದಿಂದ ಸುತ್ತುತ್ತಿರುವಾಗ, ಮುಂದೆ ಭಯಂಕರವಾದ ಒಂದಾನೊಂದು ಹೆಬ್ಬಾವು ಕಾಣಿಸಿಕೊಂಡಿತು. ರಾಜಾ! ಇದನ್ನು ಸಾಮಾನ್ಯವಾದ ಹಾವೆಂದು ತಿಳಿಯಬೇಡ! ಇವನೊಬ್ಬ ರಾಕ್ಷಸನು! ಇವನಿಗೆ ಅಘಾಸುರನೆಂದು ಹೆಸರು. ದೇವತೆಗಳು ಅಮೃತಪಾನದಿಂದ ಮರಣಭಯವಿಲ್ಲದವರಾಗಿದ್ದರೂ, ಈ ರಾಕ್ಷಸನನ್ನು ಸ್ಮರಿಸಿದಮಾತ್ರಕ್ಕೆ ಮರಣಭಯದಿಂದ ತತ್ತಳಿಸುತ್ತ, ಆ ನೀಚನ ಸಾವನ್ನೇ ಇದಿರುನೋಡುತ್ತಿದ್ದರು. ಆತನು ಹಿಂದೆ ಹೇಳಿದ ಬಕಾಸುರನಿಗೂ, ಅವನ ತಂಗಿಯಾದ ಬಕಿಯೆಂಬ ರಾಕ್ಷಸಿಗೂ ಒಡಹುಟ್ಟಿದ ತಮ್ಮನು. ಲೋಕಭಯಂಕರನಾದ ಈ ರಾಕ್ಷಸನು, ಕಂಸನಿಂದ ಪ್ರೇರಿತನಾಗಿ ಕೃಷ್ಣನನ್ನು ಕೊಲ್ಲುವುದಕ್ಕಾಗಿಯೇ ಬಂದವನು. ಆ ವನದಲ್ಲಿ ಅನೇಕ ಗೋಪಬಾಲಕರೊಡನೆ, ಬಲರಾಮಕೃಷ್ಣರಿಬ್ಬರೂ ಸಂತೋಷದಿಂದ ಆಟವಾಡುತ್ತಿರುವುದನ್ನು ಕಂಡು, ಸಹಿಸಲಾರದ ಕೋಪದಿಂದ ಮುಂದೆಬಂದನು. ಆ ಗೋಪಬಾಲಕರ ನಡುವೆ ದಿವ್ಯತೇಜಸ್ಸಿನಿಂದ ಬೆಳಗುತಿದ್ದ ರಾಮಕೃಷ್ಣರನ್ನು ನೋಡಿ ಆ ರಾಕ್ಷಸನಿಗೆ ಮಿತಿಮೀರಿದ ಕೋಪವುಂಟಾಯಿತು. ಅದರಲ್ಲಿಯೂ ಮುಖ್ಯವಾಗಿ ಕೃಷ್ಣನನ್ನು ಕಂಡಾಗ ಆ ರಾಕ್ಷಸನು "ಆಹಾ! ಈ ಬಾಲಕನಲ್ಲವೇ ನನ್ನ ಸಹೋದರನಾದ ಬಕನನ್ನು ಕೊಂದವನು! ಮೊದಲು ಇವನನ್ನು ತೀರಿಸಿಬಿಡಬೇಕು! ಆಮೇಲೆ ಬಲರಾಮನನ್ನೂ ಇತರಬಾಲಕರನ್ನೂ ಧ್ವಂಸಮಾಡುವೆನು. ಇವರೆಲ್ಲರ ರಕ್ತದಿಂದಲೇ ನಣ್ಣಣ್ಣನಿಗೆ ತಿಲತರ್ಪಣವನ್ನು ಬಿಡುವೆನು! ಮೊದಲು ಈ ಮಕ್ಕಳನ್ನು ಕೊಂದುಬಿಟ್ಟರೆ, ಗೋಕುಲದಲ್ಲಿರುವ ಗೊಲ್ಲರೆಲ್ಲರನ್ನೂ ಕೊಂದಂತೆಯೇ ಆಗುವುದು. ಲೋಕದಲ್ಲಿ ಜನರಿಗೆ ತಮ್ಮ ತಮ್ಮ ಪುತ್ರರೇ ಪ್ರಾಣಸಮಾನರಾಗಿರುವರು. ಪ್ರಾಣವು ಹೋದಮೇಲೆ ಮೃತಶರೀರವು ಯಾವ ಕೆಲಸಕ್ಕೆ ಬರುವುದು? ಆದುದರಿಂದ ಈ ಬಾಲಕರನ್ನು ಕೊಂದಮೇಲೆ, ಗೊಲ್ಲರೆಲ್ಲರೂ

ಮೃತಪುತ್ರಿಯರೇಹೊರತು ಬೇರೆಯಲ್ಲ!! ಆದುದರಿಂದ ಈ ಬಾಲಕರೆಲ್ಲರನ್ನೂ ಒಂದೇ ತುತ್ತಾಗಿ ನುಂಗಿಬಿಡುವೆನು" ಎಂದು ನಿಶ್ಚಯಿಸಿ, ತನ್ನ ದೇಹವನ್ನು ಒಂದು ಯೋಜನದಷ್ಟು ಉದ್ದವಾಗಿಯೂ, ಪರ್ವತದಂತೆ ದೊಡ್ಡದಾಗಿಯೂ ಬೆಳೆಸಿಕೊಂಡನು. ಮತ್ತು ಪರ್ವತಗುಹೆಯಂತೆ ದೊಡ್ಡದಾಗಿ ಬಾಯನ್ನು ತೆರೆದು, ದಾರಿಗಡ್ಡಲಾಗಿ ಮಲಗಿಬಿಟ್ಟನು ಹೀಗೆ ಅಜಗರರೂಪದಿಂದ ಮಲಗಿದ್ದ ಆ ರಾಕ್ಷಸನ ಅದ್ಭುತಾಕಾರವನ್ನು ಕೇಳಬೇಕೆ? ಅವನ ಕೆಳತುಟಿಯು ಭೂಮಿಯಗಲಕ್ಕೂ ಹಾಸಿದಂತಾಯಿತು! ಮೇಲಿನ ತುಟಿಯು ಮೇಘಮಂಡಲಕ್ಕೆ ತೆರೆಹಾಕಿದಂತೆ ಆಕಾಶವೆಲ್ಲವನ್ನೂ ಮುಚ್ಚಿಬಿಟ್ಟಿತು! ಮತ್ತು ಅವನಿಗೆ, ಪರ್ವತಗುಹೆಯಂತಿರುವ ಕಡೆಬಾಯಿಗಳು! ಪರ್ವತಶಿಖರಗಳಂತಿರುವ ಕೋರೆದಾಡೆಗಳು! ಕತ್ತಲೆಮನೆಯಂತಿರುವ ಬಾಯಿ! ದೊಡ್ಡ ರಾಜಮಾರ್ಗದಂತಿರುವ ನೀಡಿದ ನಾಲಗೆ! ಬಿರುಗಾಳಿಯಂತೆ ಹೊರಡುವ ಉಸಿರಿನ ಗಾಳಿ! ಕಾಡುಗಿಚ್ಚಿನಂತೆ ಜ್ವಲಿಸುವ ಕಣ್ಣುಗಳು! ಹೀಗೆ ಭಯಂಕರಸ್ವರೂಪವುಳ್ಳ ಆ ಸರ್ಪವನ್ನು ನೋಡಿದಾಗ, ಗೋಪಾಲಕರೆಲ್ಲರೂ, ಅದನ್ನು ಹೆಬ್ಬಾವೆಂದರಿಯದೆ, ಬೃಂದಾವನದಲ್ಲಿ, ತಮಗೆ ವಿಹಾರಯೋಗ್ಯವಾಗಿ, ಪರ್ವತಾರಣ್ಯಗಳಿಂದ ತುಂಬಿದ ಒಂದು ಸೊಗಸಾದ ಸನ್ನಿವೇಶವೆಂದೇ ತಿಳಿದುಕೊಂಡರು. ಕೆಲವರು ಅದನ್ನು ಬಾಯಿತೆರೆದು ಮಲಗಿರುವ ಒಂದು ಬೆಟ್ಟದ ಹಾವಿಗೆ ಸರಿಹೋಲಿಸಿ, ಉತ್ಪ್ರೇಕ್ಷಿಸುತ್ತ ಆಶ್ಚರ್ಯದಿಂದ ಒಬ್ಬರಿಗೊಬ್ಬರು "ಅಬ್ಬಾ! ಈವನದ ವಿಚಿತ್ರಸನ್ನಿವೇಶವನ್ನು ನೋಡಿದಿರಾ! ಯಾವುದೋ ಒಂದು ದೊಡ್ಡ ಹೆಬ್ಬಾವು ಬಾಯಿತೆರೆದು ಮಲಗಿರುವಂತೆಯೇ ಕಾಣುತ್ತಿರುವುದು ನೋಡಿರಿ! ನಿಜವಾಗಿ ಇದನ್ನು ಒಂದು ಹಾವಿನಬಾಯಿಗೆ ಹೋಲಿಸಬಹುದಲ್ಲವೆ! ಆಕಾಶದಲ್ಲಿ ಸೂರ್ಯಕಿರಣಸಂಬಂಧದಿಂದ ಕೆಂಪಾದ ಈಮೇಘಪರಂಪರೆಯು, ಆ ಜಂತುವಿನ ಮೇಲುತುಟಿಗೂ, ಆ ಮೇಘದ ಪ್ರತಿಬಿಂಬದಿಂದ ಕೆಂಪಾಗಿ ಕಾಣುವ ಈ ನದೀತೀರವು, ಅದರ ಕೆಳದವಡೆಗೂ ಸಾಟಿಯಾಗಿರುವುದು ನೋಡಿರಿ! ಈ ಉಭಯಪಾರ್ಶ್ವಗಳಲ್ಲಿ ಕಾಣುವ ಈ ಎರಡು ಪರ್ವತಗುಹೆಗಳು, ಆ ಜಂತುವಿನ ಕಡೆಬಾಯಿಗಳನ್ನು ಹೋಲುತ್ತಿರುವುವು. ಆ ಗುಹೆ

ಗಳಿಗೆ ಪಕ್ಕದಲ್ಲಿರುವ ಈ ಪರ್ವತಶಿಖರಗಳೆರಡೂ, ಅದರ ಕೋರೆ ಹಲ್ಲುಗಳಂತಿರುವುವು. ಮುಂದೆ ಕಾಣುವ ವಿಶಾಲವಾದ ಈ ರಾಜಮಾರ್ಗವು ಅದರ ನಾಲಗೆಯಂತೆ ಕಾಣುವುದಲ್ಲವೆ? ಈ ಪರ್ವತಶಿಖರಗಳ ನಡುವೆ ಕಾಣುವ ಕತ್ತಲೆಯು, ಅದರ ಬಾಯಿಯ ಒಳಭಾಗದಂತೆ ತೋರುವುದು. ಕಾಡುಗಿಚ್ಚಿನ ಸಂಬಂಧದಿಂದ ಉಗ್ರವಾಗಿಬೀಸುವ ಈ ಬಿರುಗಾಳಿಯನ್ನು ಅದರ ಉಸಿರಾಟಕ್ಕೆ ಹೋಲಿಸಬಹುದು! ಅತ್ತಲಾಗಿ ಕಾಡುಗಿಚ್ಚಿನಲ್ಲಿ ಸಿಕ್ಕಿ ಬೆಂದ ಪ್ರಾಣಿಗಳ ದುರ್ಗಂಧವು, ಆ ಜಂತುವಿನ ಬಾಯಿಂದ ಹೊರಟುಬರುವ ದುರ್ಗಂಧವೋ ಎಂಬಂತಿರುವುದು. ಸರ್ವವಿಧದಲ್ಲಿಯೂ ಈ ವನಸನ್ನಿವೇಶವು ನಮ್ಮನ್ನು ನುಂಗುವುದಕ್ಕೆ ಬಾಯಿತೆರೆದಿರುವ ಒಂದು ದೊಡ್ಡ ಜಂತುವನ್ನೇ ಹೋಲುತ್ತಿರುವುದಲ್ಲಾ! ಅಥವಾ ಒಂದುವೇಳೆ ಇದು ನಿಜವಾದ ಜಂತುವೇ ಆಗಿದ್ದು, ನಮ್ಮನ್ನು ನುಂಗಿಬಿಟ್ಟರೆ ಗತಿಯೇನು? ಅಥವಾ ಇದಕ್ಕಾಗಿ ನಾವು ಚಿಂತಿಸಬಾರದು ಹಾಗೆ ನುಂಗಿದರೂ ನುಂಗಲಿ' ಹಿಂದೆ ಕೃಷ್ಣನನ್ನು ನುಂಗಿದ ಬಕದ ಗತಿಯೇ ಇದಕ್ಕೂ ಆಗುವುದರಲ್ಲಿ ಸಂದೇಹವಿಲ್ಲ! ಹೊರಡಿರಿ!" ಎಂದು ಒಬ್ಬರಿಗೊಬ್ಬರು ಕೃಷ್ಣನ ಮುಖವನ್ನು ನೋಡಿನೋಡಿ ನಗುತ್ತ, ಕೈಚಪ್ಪಾಳೆಗಳನ್ನು ಹಾಕಿ ಕುಣಿಯುತ್ತ ಮುಂದೆ ಹೊರಟರು. ಸರ್ವಜ್ಞನಾದ ಕೃಷ್ಣನು, ನಿಜಸ್ಥಿತಿಯನ್ನು ತಿಳಿಯದೆ ಹೀಗೆ ಜಂಭವನ್ನು ಹೇಳಿಕೊಳ್ಳುತ್ತಿರುವ ಆ ಗೋಪಬಾಲಕರನ್ನು ನೋಡಿ ನಗುತ್ತ, ಮುಂದಿರುವವನು ರಾಕ್ಷಸನೆಂಬುದನ್ನು ಅವರಿಗೆ ತಿಳಿಸಿ ನಿವಾರಿಸುವಷ್ಟರಲ್ಲಿ, ಆ ಅಜಗರವು ತನ್ನ ಉಸಿರನ್ನೆಳೆದುಕೊಂಡು, ಬಹಳಮಂದಿ ಗೋಪಾಲಕರನ್ನೂ, ಗೋವುಗಳನ್ನೂ ನುಂಗಿಬಿಟ್ಟಿತು. ಅವರೆಲ್ಲರೂ ತನ್ನ ಉದರಮಧ್ಯಕ್ಕೆ ಸೇರಿದ್ದಾಗಲೂ, ಆ ಅಘಾಸುರನು, ತನ್ನ ಸಹೋದರನನ್ನು ಕೊಂದ ಕೃಷ್ಣನೂ ತನ್ನ ಬಾಯಿಗೆ ಪ್ರವೇಶಿಸಿದಮೇಲೆ ಬಾಯನ್ನು ಮುಚ್ಚಿಕೊಂಡು, ತನ್ನಲ್ಲಿ ಹೊಕ್ಕವರೆಲ್ಲರನ್ನೂ ಒಂದಾಗಿ ಜೀರ್ಣಿಸಿಕೊಳ್ಳಬೇಕೆಂಬ ಆಶೆಯಿಂದ ಕಾದಿದ್ದನು " ಇಷ್ಟರಲ್ಲಿ ಸಮಸ್ತಲೋಕಾಭಯಪ್ರದನಾದ ಕೃಷ್ಣನು, ಕನಿಕರದಿಂದ ತನ್ನಲ್ಲಿ ತಾನು "ಆಹಾ! ಈ ಬಾಲಕರೆಲ್ಲರೂ ನನ್ನನ್ನೇ ನಂಬಿ ಬಂದವರು ಈಗ ಇವರಿಗೆ ಬೇರೆ ದಿಕ್ಕಿಲ್ಲ. ಇವರು ಪ್ರಾರಬ್ಧಕರ್ಮವಶದಿಂದ, ಈ ಮೃತ್ಯುವಿನ ಜಾತ

ಠಾಗ್ನಿಯಲ್ಲಿ ಜೀರ್ಣವಾಗುತ್ತಿರುವರು ! ಹೀಗೆ ದೀನರಾಗಿ ಪ್ರಾಣಾಪಾಯಕ್ಕೆ ಸಿಕ್ಕಿಬಿದ್ದಿರುವ ಈ ಬಾಲಕರನ್ನು ಹೇಗಾದರೂ ರಕ್ಷಿಸದೆ ತೀರದು! ಇದೇ ಸಮಯದಿಂದ ಈ ದುರಾತ್ಮನನ್ನೂ ತೀರಿಸಬಿಡಬೇಕು ! ದುಷ್ಟನಿಗ್ರಹಶಿಷ್ಟಸಂರಕ್ಷಣಗಳೆರಡೂ ಏಕಕಾಲದಲ್ಲಿ ನಡೆಯುವುದಕ್ಕೆ ಈಗ ನಾನು ಮಾಡಬೇಕಾದ ಉಪಾಯವೇನು ?" ಎಂದು ಸ್ವಲ್ಪಹೊತ್ತಿನವರೆಗೆ ಆಲೋಚಿಸಿ, ಕೊನೆಗೆ ಆ ಪಾಪರಾಕ್ಷಸನ ಬಾಯಲ್ಲಿ ತಾನೂ ಪ್ರವೇಶಿಸಿಬಿಟ್ಟನು. ಆಗ ಮೇಘದ ಮರೆಯಲ್ಲಿ ನಿಂತು ಇದನ್ನು ನೋಡುತಿದ್ದ ದೇವತೆಗಳೆಲ್ಲರೂ ಭಯದಿಂದ, "ಅಯ್ಯೋ ! ಇನ್ನೇನು ಗತಿ! " ಎಂದು ಹಾಹಾಕಾರವನ್ನು ಮಾಡುತಿದ್ದರು. ಅಘಾಸುರನಿಗೆ ಇಷ್ಟಬಂಧುಗಳಾದ ಕಂಸಾದಿರಾಕ್ಷಸರೆಲ್ಲರೂ ಸಂತೋಷದಿಂದ ಸಿಂಹನಾದವನ್ನು ಮಾಡುತಿದ್ದರು. ಹೀಗೆ ದೇವತೆಗಳೆಲ್ಲರೂ ಭಯದಿಂದ ಹಾಹಾಕಾರವನ್ನು ಮಾಡುತ್ತಿರುವಾಗಲೇ, ಕೃಷ್ಣನು, ಸಮಸ್ತಗೋಪಾಲಬಾಲಕರೊಡನೆ ತನ್ನನ್ನು ನುಂಗಬೇಕೆಂದು ಆತುರದಿಂದ ಕಾದಿದ್ದ ಆ ರಾಕ್ಷಸನ ಕಂಠನಾಳದವರೆಗೆ ನಿರ್ಭಯವಾಗಿ ಪ್ರವೇಶಿಸಿ, ಅಲ್ಲಿ ತನ್ನ ದೇಹವನ್ನು ದೊಡ್ಡದಾಗಿ ಬೆಳೆಸಲಾರಂಭಿಸಿದನು. ಕ್ರಮಕ್ರಮವಾಗಿ ಬೆಳೆಯುತ್ತ ಬಂದ ಕೃಷ್ಣನ ದೇಹವು, ಆ ರಾಕ್ಷಸ ಕಂಠನಾಳವನ್ನು ಚೆನ್ನಾಗಿ ತಡೆದುಬಿಟ್ಟಿತು. ಆ ರಾಕ್ಷಸನಿಗೆ ಉಸಿರಾಡುವುದಕ್ಕೂ ಅವಕಾಶವಿಲ್ಲದಂತಾಯಿತು. ಅವನ ಕಣ್ಣುಗುಡ್ಡೆಗಳು ಮೇಲೆ ನಾಟಿಕೊಂಡುವು. ಉಸಿರುಕಟ್ಟಿದುದರಿಂದ ಆ ರಾಕ್ಷಸನು ವಿಲಿವಿಲಿಯಾಡಿ ಹೊರಳುತಿದ್ದನು ಕೊನೆಗೆ ಅವನ ದೇಹದಲ್ಲಿ ತುಂಬಿಕೊಂಡ ವಾಯುವು, ಹೊರಗೆ ಬರುವುದಕ್ಕೆ ಅವಕಾಶವಿಲ್ಲದೆ, ದೇಹವನ್ನು ಸೀಳಿಕೊಂಡು ಹೊರಕ್ಕೆ ಬಂದಿತು. ಅದರೊಡನೆ ರಾಕ್ಷಸನ ಪ್ರಾಣಗಳೂ ದೇಹವನ್ನು ಬಿಟ್ಟುಹೋದುವು. ಆಗ ಕೃಷ್ಣನು ಸರ್ಪದೇಹದಲ್ಲಿ ಸಿಕ್ಕಿ ಮೃತಪ್ರಾಯರಾಗಿದ್ದ ಬಾಲಕರನ್ನೂ, ದನಕರುಗಳನ್ನೂ, ಅಮೃತಮಯವಾದ ತನ್ನ ಪ್ರಸನ್ನದೃಷ್ಟಿಯಿಂದ ಬದುಕಿಸಿ, ಅವರೆಲ್ಲರೊಡನೆ ಹೊರಕ್ಕೆ ಬಂದನು ಓ ರಾಜೇಂದ್ರಾ!ಆಗ ನಡೆದ ಮತ್ತೊಂದಾಶ್ಚರ್ಯವೇನೆಂದರೆ, ಆರಾಕ್ಷಸನ ದೇಹವು ಸೀಳಿದೊಡನೆ, ಅದರೊಳಗಿಂದ ಅದ್ಭುತವಾದ ಜ್ಯೋ

ತಿಯೊಂದು ಹೊರಟು, ತನ್ನ ಕಾಂತಿಯಿಂದ ದಿಕ್ಕುಗಳೆಲ್ಲವನ್ನೂ ಬೆಳಗು ತ್ತ ಅಂತರಿಕ್ಷಕ್ಕೆ ಹಾರಿತು. ಸರ್ಪದೇಹದಿಂದ ಕೃಷ್ಣನು ಹೊರಕ್ಕೆ ಬ ರುವವರೆಗೆ ಅದು ಅಂತರಿಕ್ಷದಲ್ಲಿಯೇ ನಿರೀಕ್ಷಿಸುತಿದ್ದು,ಅವನು ಹೊರಕ್ಕೆ ಬಂ ದೊಡನೆ, ದೇವತೆಗಳೆಲ್ಲರೂ ನೋಡುತಿದ್ದಹಾಗೆಯೇ ಆ ಕೃಷ್ಣನ ಶರೀರ ದಲ್ಲಿ ಪ್ರವೇಶಿಸಿಬಿಟ್ಟಿತು. ಇದನ್ನು ನೋಡಿದವರೆಲ್ಲರೂ ಆಶ್ಚರ್ಯದಿಂದ ಬೆರಗಾದರು. ಇಷ್ಟರಲ್ಲಿ ದೇವತೆಗಳು, ರಾಕ್ಷಸವಧರೂಪವಾದ ತಮ್ಮ ಉದ್ದೇಶವು ಕೈಗೂಡಿತೆಂಬ ಸಂತೋಷದಿಂದ ಕೃಷ್ಣನಮೇಲೆ ಪುಷ್ಪವರ್ಷ ವನ್ನು ಕರೆದರು! ಅಪ್ಸರಸ್ಸುಗಳು ನರ್ತಿಸಿದರು ! ಗಂಧರ್ವರು ಗೀತ ವಾದ್ಯಗಳಿಂದಲೂ, ಬ್ರಾಹ್ಮಣರು ಸ್ವಸ್ತಿವಾಚನಗಳಿಂದಲೂ, ಭೃತ್ಯಗಣ ಗಳು ಜಯಜಯಧ್ವನಿಯಿಂದಲೂ ಕೃಷ್ಣನ ವೈಭವವನ್ನು ಕೊಂಡಾಡು ತಿದ್ದರು. ಗೀತವಾದ್ಯಧ್ವನಿಗಳಿಂದಲೂ, ಜಯಜಯಶಬ್ದಗಳಿಂದಲೂ ಕೂ ಡಿದ ಈ ದೇವತೆಗಳ ಕೋಲಾಹಲವು, ಬ್ರಹ್ಮಲೋಕದವರೆಗೂ ಮುಟ್ಟಿ ತು. ಇದನ್ನು ಕೇಳಿದೊಡನೆ ಚತುರ್ಮುಖನು, ಅತಿಸಂಭ್ರಮದಿಂದ ಹಂಸಾ ರೂಢನಾಗಿ ಬಂದು,ಸರ್ವೇಶ್ವರನಾದ ಶ್ರೀಕೃಷ್ಣನ ಪ್ರಭಾವಕ್ಕೆ ವಿಸ್ಮಿತನಾ ಗಿ,ಆ ಕೃಷ್ಣನ ಮಹಿಮೆಯನ್ನು ಬಹಳವಾಗಿ ಕೊಂಡಾಡಿ, ಹಿಂತಿರುಗಿ ಹೋ ದನು. ಓ ಪರೀಕ್ಷಿದ್ರಾಜಾ! ಕೃಷ್ಣನಿಂದ ಸಂಹರಿಸಲ್ಪಟ್ಟ ಆ ಅಜಗರಚ ರ್ಮವು, ಬೃಂದಾವನಸಮೀಪದಲ್ಲಿ ಬಹುಕಾಲದವರೆಗೆ ಅಲ್ಲಿನ ಗೋಪಬಾಲ ಕರ ಕ್ರೀಡಾಬಿಲವಾಗಿದ್ದಿತು. ಆಹಾ!ಇದಲ್ಲವೇ ಆಶ್ಚರ್ಯವು! ತಾನು ಬ್ರಹ್ಮಾ ದಿಗಳಿಗೂ ಪ್ರಭುವಾಗಿ, ಸರ್ವಜಗತ್ಕಾರಣನಾಗಿದ್ದರೂ, ತನ್ನ ಲೀಲೆಯಿಂದ ಮಾಯಾಶಿಶುವಾಗಿದ್ದ ಆ ಕೃಷ್ಣನ ದೇಹಸ್ಪರ್ಶಮಾತ್ರದಿಂದಲೇ, ಪರಮ ಪಾಪಿಯಾದ ಆ ಅಘಾಸುರನಿಗೂ ಭಗವತ್ಸಾಯುಜ್ಯವುಂಟಾಯಿತಲ್ಲವೆ ? ಆ ಭಗವಂತನ ಅಪಾರಕರುಣೆಯನ್ನು ಎಷ್ಟೆಂದು ಹೇಳಬಹುದು! ಆದರೇ ನು? ಆ ಭಗವಂತನ ಕರುಣೆಗೆ ಇದೊಂದು ಹೆಚ್ಚಲ್ಲ! ಯಾವನ ಪ್ರತಿಬಿಂಬ ರೂಪವಾದ ಅರ್ಚಾವಿಗ್ರಹವನ್ನು ಧ್ಯಾನದಿಂದ ಹೃದಯದಲ್ಲಿರಿಸಿಕೊಂಡ ಮಾತ್ರಕ್ಕೆ, ನಿರಾಯಾಸವಾಗಿ ಮುಕ್ತಿಯನ್ನು ಪಡೆಯಬಹುದೋ, ನಿರತಿಶ ಯಾನಂದರೂಪನಾಗಿಯೂ, ಪ್ರಾಕೃತಗುಣರಹಿತನಾಗಿಯೂ, ನಿಸ್ಸಮಾ

ಭ್ಯಥಿಕನಾಗಿಯೂ ಇರುವ ಆ ಭಗವಂತನ ನಿಜವಾದ ಮೂರ್ತಿಯನ್ನೇ ಕ್ಷಣಕಾಲದವರೆಗೆ ತನ್ನ ಶರೀರದೊಳಗೆ ಅಡಗಿಸಿಟ್ಟುಕೊಂಡಿದ್ದ ಆ ಅಘಾ ಸುರನಿಗೆ, ಸದ್ಗತಿಯುಂಟಾದುದೇನಾಶ್ಚರ್ಯವು? ರಾಜಾ! ಮತ್ತೊಂದಾಶ್ಚ ರ್ಯವನ್ನು ಕೇಳು! ಕೃಷ್ಣನು ನಡೆಸಿದ ಈ ಅದ್ಭುತಕಾರ್ಯವು, ಅವನ ಕೌಮಾರದಲ್ಲಿ ಎಂದರೆ ಐದನೆಯ ವರ್ಷದಲ್ಲಿಯೇ ಜರುಗಿತು. ಗೋ ಪಬಾಲಕರೂ ಅದನ್ನು ಆಗಲೇ ನೋಡಿಬಂದವರಾದರೂ, ಆ ಕೃಷ್ಣನಿಗೆ (ಪೌಗಂಡವು) ಆರನೆಯವರ್ಷವು ಬಂದಮೇಲೆ, ಅದನ್ನು ಆಗಲೇ ನಡೆದಂತೆ ಗೋಕುಲದವರಿಗೆ ತಿಳಿಸಿದರು. ಹೀಗೆ ಒಂದುಕಾಲದಲ್ಲಿ ನಡೆದ ಕಾರ್ಯ ವನ್ನು ಮತ್ತೊಂದು ಕಾಲದಲ್ಲಿ ನಡೆದಹಾಗೆ ಭ್ರಮಿಸುವಂತಾದುದ ಕ್ಕೂ, ಆ ಭಗವಂತನ ಮಾಯೆಯೇ ಕಾರಣವೆಂದು ತಿಳಿ! ಹೀಗೆ ಪ್ರತ್ಯಕ್ಷ ವಿಷಯಗಳನ್ನೇ ತನ್ನ ಮಾಯೆಯಿಂದ ಮರೆಸಿ, ಭ್ರಮೆಗೊಳಿಸತಕ್ಕ ಆ ಭಗ ವಂತನ ಮಹಿಮೆಯನ್ನು ಏನೆಂದು ಹೇಳಬಹುದು!?" ಎಂದನು. ಇದು ಹನ್ನೆರಡನೆಯ ಅಧ್ಯಾಯವು.

---

## ವತ್ಸಾಪಹಾರವು

ಶುಕನು ಹೀಗೆ ಹೇಳುತ್ತಿರುವಾಗ, ಪರೀಕ್ಷಿದ್ರಾಜನು "ಓ ಶುಕ ಮಹರ್ಷೀ! ಕೃಷ್ಣನು ಕೌಮಾರಾವಸ್ಥೆಯಲ್ಲಿ ನಡೆಸಿದ ಕಾರ್ಯವನ್ನು, ಗೋ ಪಬಾಲಕರು,ಅವನ ಪೌಗಂಡದಲ್ಲಿ ನಡೆದುದಾಗಿ ತಿಳಿಸಿದರೆಂದು ಹೇಳಿದೆಯಲ್ಲ ವೆ? ತಾವು ಒಂದುಕಾಲದಲ್ಲಿ ನಡೆದುದನ್ನು ಕಣ್ಣಾರೆ ನೋಡಿಯೂ, ಅದ ನ್ನು ಬೇರೆ ಕಾಲದಲ್ಲಿ ನಡೆದಹಾಗೆ ತಿಳಿದು ಹೇಳುವುದು ಅಸಂಭವವಲ್ಲ ವೆ? ಹಾಗೆ ಹೇಳುವುದಕ್ಕೆ ಕಾರಣವೇನು? ಈ ಭ್ರಾಂತಿಯುಂಟಾಗುವುದಕ್ಕೆ ಏನೋ ಪ್ರಬಲಕಾರಣವಿರಬೇಕಲ್ಲವೆ? ಅದನ್ನು ತಿಳಿಯಬೇಕೆಂದು ನನಗೆ ಬ ಹಳ ಕುತೂಹಲವಿರುವುದರಿಂದ, ಕೃಪೆಯಿಟ್ಟು ತಿಳಿಸಬೇಕು. ಇದು ವಿಷ್ಣು ಮಾಯೆಯೆಂಬುದರಲ್ಲಿ ಸಂದೇಹವಿಲ್ಲ!ಓ ಮಹಾತ್ಮಾ!ನಾನು ಪಾಪಿಷ್ಠವಾ ದ ಕ್ಷತ್ರಿಯಕುಲದಲ್ಲಿ ಜನಿಸಿದವನಾದರೂ, ಪುಣ್ಯವಿಶೇಷದಿಂದ ನನಗೆ ನಿ

ನ್ನ ಸಮಾಗಮವು ಲಭಿಸಿತು. ನಿನ್ನಿಂದ ಶ್ರೀಕೃಷ್ಣಕಥಾಮೃತವನ್ನು ಪಾನಮಾಡಿ ನಾನು ಪರಮಧನ್ಯನಾದೆನು." ಎಂದನು.

ಆಗ ಶುಕನು, ಕೃಷ್ಣಚರಿತ್ರವಿಷಯವಾದ ಪರೀಕ್ಷಿತ್ತಿನ ಪ್ರಶ್ನೆಗೆ ಸಂತೋಷಪಟ್ಟು, ಅವನಿಗೆ ಉತ್ತರವನ್ನು ಹೇಳತೊಡಗಿದಾಗ, ಆ ಭಗವಂತನ ಅಪರಿಛಿನ್ನಮಹಿಮೆಯು, ಅವನ ಸ್ಮರಣೆಗೆ ಬಂದು, ಅವನ ಸಕಲೇಂದ್ರಿಯಗಳೂ ಪರಮಾತ್ಮನಲ್ಲಿ ಲಯಿಸಿಹೋದುವು. ಕ್ಷಣಕಾಲದವರೆಗೆ ಬ್ರಹ್ಮಾನಂದಾನುಭವದಿಂದ ಮೈಮರೆತು, ಮಾತಾಡಲಾರದೆ ಸುಮ್ಮನಿದ್ದು, ಆಮೇಲೆ ಚೇತರಿಸಿಕೊಂಡು, ರಾಜನಿಗೆ ಹೀಗೆಂದು ಹೇಳುವನು "ಓ ಭಕ್ತೋತ್ತಮಾ ! ನೀನು ಆ ಕೃಷ್ಣಚರಿತ್ರೆಗಳನ್ನು ಬಾರಿಬಾರಿಗೂ ನನ್ನಿಂದ ಕೇಳುತಿದ್ದರೂ, ತಿರುಗಿತಿರುಗಿ ಅದನ್ನು ಹೊಸದಾಗಿಸುತ್ತಿರುವೆ? ನಿನ್ನ ಪ್ರಶ್ನೆಗಾಗಿ ನಾನು ಸಂತೋಷಪಟ್ಟೆನು! ಕಾಮುಕರು ಸ್ತ್ರೀಯರ ಸಂಬಂಧವಾದ ಮಾತುಗಳನ್ನು ಹೇಗೋಹಾಗೆ, ಸಾರಗ್ರಾಹಿಗಳಾದ ಸಾಧುಗಳು, ಯಾವಾಗಲೂ ಆ ಭಗವಂತನ ಗುಣಗಳನ್ನೇ ಬಾಯಿಂದ ಹೇಳುತ್ತ, ಅದನ್ನೇ ಯಾವಾಗಲೂ ಕಿವಿಯಿಂದ ಕೇಳುತ್ತ, ಅದನ್ನೇ ಮನಸ್ಸಿನಿಂದ ಧ್ಯಾನಿಸುತ್ತ ಸಂತೋಷಪಡುವರು. ಅವರಿಗೆ ಎಷ್ಟಾವರ್ತಿ ಭಗವಚ್ಚರಿತ್ರಗಳನ್ನು ಕೇಳಿದರೂ, ತಿರುಗಿತಿರುಗಿ ಅದು ಹೊಸದಾಗಿಯೇ ತೋರುವುದು ಸಹಜವು. ರಾಜಾ ! ಸಾವಧಾನದಿಂದ ಕೇಳು! ನೀನು ಕೇಳತಕ್ಕ ವಿಷಯವು ಬಹಳ ಗೋಪ್ಯವಾಗಿದ್ದರೂ ನಾನು ನಿನಗೆ ಹೇಳುವೆನು. ಗುರುವು ತನ್ನ ಪ್ರಿಯಶಿಷ್ಯನಿಗೆ ಎಷ್ಟೇ ರಹಸ್ಯವಿಷಯವನ್ನಾದರೂ ತಿಳಿಸದಿರಬಾರದು. ಕೃಷ್ಣನು ತನ್ನ ಗೋವುಗಳನ್ನೂ, ತನ್ನ ಕ್ರೀಡಾಸಖರಾದ ಗೋಪಾಲಕರನ್ನೂ ಮೃತ್ಯುಪ್ರಾಯನಾದ ಆ ಅಘಾಸುರನ ಬಾಯಿಂದ ಬಿಡಿಸಿದಮೇಲೆ, ಅವರೆಲ್ಲರನ್ನೂ ಸಮೀಪದಲ್ಲಿದ್ದ ಒಂದಾನೊಂದು ಸರೋವರತೀರಕ್ಕೆ ಕರೆತಂದನು. ಅವರಿಗೆ ಅದರ ತೀರದಲ್ಲಿದ್ದ ಒಂದುಮಳಲುದಿಣ್ಣೆಯನ್ನು ತೋರಿಸಿ, ಹೀಗೆಂದು ಹೇಳುವನು. "ಮಿತ್ರರೆ! ಆಹಾ! ಈ ಪುಳಿನಪ್ರದೇಶವು ಎಷ್ಟು ಮನೋಹರವಾಗಿರುವುದು ನೋಡಿರಿ! ನಮ್ಮ ಕುಣಿದಾಟಗಳಿಗೆ ಅನುಕೂಲಿಸುವಂತೆ, ಈ ಪ್ರದೇಶವೆಲ್ಲವೂ ಬಹಳ ಮೃದುವಾದ,

ಮತ್ತು ಸ್ವಚ್ಛವಾದ ಮರಳಿನಿಂದ ತುಂಬಿರುವುದು ಇಲ್ಲಿ ತಾವರೆಹೂಗಳ ವಾಸನೆಗಾಗಿ ಬಂದು ಮುತ್ತುವ ಭ್ರಮರಗಳ ಝೇಂಕಾರಗಳಿಂದಲೂ, ಜಲಪಕ್ಷಿಗಳ ಕೂಗುಗಳಿಂದಲೂ, ಪ್ರವಾಹಧ್ವನಿಯಿಂದಲೂ, ಪ್ರತಿಧ್ವನಿಯನ್ನು ಹೊರಡಿಸುತ್ತಿರುವ ಈ ತೀರವೃಕ್ಷಗಳಸಾಲನ್ನು ನೋಡಿರಿ! ಇಲ್ಲಿಯೇ ನಾವು ವನಭೋಜನವನ್ನು ಮಾಡಬೇಕು. ಓಹೋ! ಆಗಲೇ ಊಟದ ಹೊತ್ತು ಮೀರಿಹೋಯಿತು. ಎಲ್ಲರೂ ಬಹಳವಾಗಿ ಹಸಿದಿರಬಹುದು. ನಮ್ಮ ದನಕರುಗಳೂ ಬಹಳವಾಗಿ ಬಳಲಿರುವುವು. ಅವು ಈ ಕೊಳದಲ್ಲಿ ನೀರುಕುಡಿದು, ಈ ಸರೋವರತೀರದಲ್ಲಿಯೇ ಮೇಯುತ್ತಿರಲಿ!" ಎಂದನು. ಬಾಲಕರೆಲ್ಲರೂ ಸಂತೋಷದಿಂದ ಕೃಷ್ಣನ ಮಾತಿಗೆ ಸಂಮತಿಸಿ, ತಮ್ಮತಮ್ಮ ಹಸುಗಳಿಗೆ ಸಮೃದ್ಧಿಯಾಗಿ ನೀರುಕುಡಿಸಿ, ಸಮೀಪದ ಹುಲ್ಲುಮೈದಾನಕ್ಕೆ ತಂದು ಸೇರಿಸಿದರು.ಕೃಷ್ಣನಸುತ್ತಲೂ ಎಲ್ಲರೂ ಗುಂಪಾಗಿ ಕುಳಿತು,ತಮ್ಮತಮ್ಮ ತಂಗಳನ್ನದ ಬುತ್ತಿಗಳನ್ನು ಬಿಚ್ಚಿ, ಸಂತೋಷದಿಂದ ಊಟಮಾಡುತ್ತಿದ್ದರು. ಆ ಬಾಲಕರಲ್ಲಿ ಒಬ್ಬೊಬ್ಬನೂ ಕೃಷ್ಣನಿಗೆದಿರಾಗಿ,ಅವನ ಸಮೀಪದಲ್ಲಿಯೇ ತಾನು ಕುಳ್ಳಿರಬೇಕೆಂಬ ಆತುರದಿಂದ,"ನಾನು ತಾನೆಂ"ದು ಮುಂದೆ ಬಿದ್ದುಬರುತಿದ್ದನು. ಕೊನೆಗೆ ಆ ಬಾಲಕರೆಲ್ಲರೂ ಕಮಲಕರ್ಣಿಕೆಗೆ ಸುತ್ತಲೂ ಇರುವ ದಳಗಳಂತೆ, ಅವನಸುತ್ತಲೂ ಅನೇಕಪಙ್ಕ್ತಿಗಳಾಗಿ ಕುಳಿತು, ಅರಳಿದ ಕಣ್ಣಿನಿಂದ ಆ ಕೃಷ್ಣನನ್ನೇ ನೋಡುತ್ತ ಊಟಮಾಡುತಿದ್ದರು. ಕೆಲವರು ಎಲೆಗಳಿಂದಲೂ, ಕೆಲವರು ಪುಷ್ಪದಳಗಳಿಂದಲೂ, ಕೆಲವರು ಚಿಗುರುಗಳಿಂದಲೂ, ಕೆಲವರು ಎಳೇಚಿಗುರುಗಳಿಂದಲೂ, ಕೆಲವರು ಹಣ್ಣುಗಳ ಜೋಡಣೆಯಿಂದಲೂ, ಕೆಲವರು ನಾರುಗಳಿಂದಲೂ, ಕೆಲವರು ಭುಜಪತ್ರೆ ಮೊದಲಾದಮರದ ತೊಗಟೆಗಳಿಂದಲೂ,ಭೋಜನಪಾತ್ರಗಳನ್ನು ಮಾಡಿಕೊಂಡು,ಊಟಕ್ಕೆ ಕುಳಿತರು.ಕೆಲವರು ಅಲ್ಲಲ್ಲಿದ್ದ ಕಲ್ಲುಗಳಮೇಲೆಯೇ ಅನ್ನವನ್ನು ಹಾಕಿಕೊಂಡು ಭುಜಿಸುತಲಿದ್ದರು. ಒಬ್ಬೊಬ್ಬರೂ ತಾವು ತಾವು ತಂದಿದ್ದ ಬುತ್ತಿಯನ್ನದ ರುಚಿಯನ್ನು ಹೊಗಳಿಕೊಂಡು,ಇತರರನ್ನು ಹಾಸ್ಯಮಾಡಿನಗುವುದು,ಹಾಸ್ಯದಮಾತುಗಳಿಂದ ಇತರರನ್ನು ನಗಿಸುವುದು, ಹೀಗೆ ಲೋಕನಾಯಕನಾದ ಕೃಷ್ಣನೊಡನೆ ಕುಳಿತು.ಎಲ್ಲರೂ ಸಂತೋಷ

ಹಿಂದ ಭುಜಿಸುತ್ತಿದ್ದರು. ಓ ಪರೀಕ್ಷಿದ್ರಾಜಾ! ಆ ಸರ್ವೇಶ್ವರನ ಲೀಲೆಯನ್ನೂ ಸೌಲಭ್ಯಗುಣವನ್ನೂ ನೋಡದೆಯಾ? ತಾನು ಮಹಾಯಾಗಗಳಲ್ಲಿ ಹವಿರ್ಭಾಗಗಳನ್ನು ಭುಜಿಸತಕ್ಕವನಾಗಿದ್ದರೂ, ಆ ಗೊಲ್ಲರ ಮಕ್ಕಳ ಗುಂಪಿನಲ್ಲಿ ತಾನೂ ಒಬ್ಬಗೊಲ್ಲನಾಗಿ ಕಲೆತನು! ಅವನ ವೇಷವನ್ನು ಕೇಳಬೇಕೆ? ಊದುವ ಕೊಳಲನ್ನು ನಡುಪಟ್ಟಿಯಲ್ಲಿಸಿಕ್ಕಿಸಿರುವನು! ಒಂದು ಕಕ್ಷದಲ್ಲಿ ದೊಣ್ಣೆ! ಮತ್ತೊಂದು ಕಕ್ಷದಲ್ಲಿ ಊದುವಕೊಂಬು! ಎಡಗೈಯ್ಯಲ್ಲಿ ಮೊಸರನ್ನದ ಉಂಡೆ! ಬೆರಳುಗಳ ಸಂದಿನಲ್ಲಿ ಅದಕ್ಕೆ ನಂಜಿಕೊಳ್ಳುವುದಕ್ಕಾಗಿ ಬೇಕಾದ ಉಪ್ಪಿನಕಾಯಿ! ಇಂತಹವೇಷದೊಡನೆ ಗೊಲ್ಲರ ಗುಂಪಿನ ನಡುವೆ ಕುಳಿತು, ತನ್ನ ಚಾತುರ್ಯದಮಾತುಗಳಿಂದ ಕ್ಷಣಕ್ಷಣಕ್ಕೂ ಆ ಬಾಲಕರನ್ನು ನಗಿಸುತ್ತ, ಬಾಲಲೀಲೆಯನ್ನು ತೋರಿಸುತ್ತಿದ್ದನು ಈ ವಿಚಿತ್ರಲೀಲೆಯನ್ನು ನೋಡುವುದಕ್ಕಾಗಿ ಸ್ವರ್ಗಲೋಕವೇ ಹೊರಟುಬಂದಂತೆ, ಆಕಾಶದಲ್ಲಿ ಅನೇಕದೇವತೆಗಳು ಗುಂಪುಕೂಡಿದರು. ಓ ಪರೀಕ್ಷದ್ರಾಜಾ! ಹೀಗೆ ಮಂದೆಯನ್ನಟ್ಟಿಕೊಂಡು ಬಂದ ಗೋಪಾಲಬಾಲಕರೆಲ್ಲರೂ ಆ ಕೃಷ್ಣನಲ್ಲಿಯೇ ನಟ್ಟ ಮನಸ್ಸುಳ್ಳವರಾಗಿ ಹೊತ್ತುಹೋದುದನ್ನೇ ತಿಳಿಯದೆ ವಿನೋದದಿಂದ ಭೋಜನಮಾಡುತ್ತ ಮೈಮರತಿದ್ದರು. ಇಷ್ಟರಲ್ಲಿ ಇತ್ತಲಾಗಿ ಮೇಯುವುದಕ್ಕಾಗಿ ಬಿಟ್ಟಿದ್ದ ಕರುಗಳೆಲ್ಲವೂ, ಮುಂದೆಮುಂದೆ ಸೊಂಪಾಗಿ ಬೆಳೆದ ಹುಲ್ಲಿನ ಆಸೆಯಿಂದ ಆ ಕಾಡಿನಲ್ಲಿ ಬಹುದೂರದವರಗೆ ಹೊರಟುಹೋದುವು. ಆಮೇಲೆ ಈ ಬಾಲಕರೆಲ್ಲರಿಗೂ ತಮ್ಮ ಹಸುಗಳ ನೆನಪುಂಟಾಯಿತು! ಆ ಸರೋವರದ ಸುತ್ತಿನ ಮೈದಾನದಲ್ಲಿ, ಬಹುದೂರದವರೆಗೂ ತಮ್ಮ ಹಸುಗಳು ಕಣ್ಣಿಗೆ ಬಿಳದಿರುವುದನ್ನು ನೋಡಿ, ಎಲ್ಲರಿಗೂ ಮನಸ್ಸಿನಲ್ಲಿ ಭಯವು ಹುಟ್ಟಿತು. ಹೀಗೆ ತನ್ನ ಸಂಗಡಿಗರೆಲ್ಲರೂ ಭಯಗ್ರಸ್ತರಾಗಿರುವುದನ್ನು ನೋಡಿ ಕೃಷ್ಣನು. ಅವರ ಭೀತಿಯನ್ನು ನೀಗಿಸುವುದಕ್ಕಾಗಿ ಹೀಗೆಂದು ಹೇಳುವನು. “ಎಲೈಮಿತ್ರರೆ! ಭಯಪಡಬೇಡಿರಿ! ನೀವು ನಿಶ್ಚಿಂತರಾಗಿ ಭೋಜನವನ್ನು ಮಾಡುತ್ತಿರಿ! ಈಗಲೇ ನಾನು ಹೋಗಿ, ಎಲ್ಲಿದ್ದರೂ ಬಿಡದೆ ಮಂದೆಯನ್ನಟ್ಟಿಕೊಂಡು ಬರುವೆನು” ಎಂದು ಹೇಳಿ, ಕೈಯ್ಯಲ್ಲಿ ಅನ್ನದ ಮುದ್ದೆಯನ್ನು ಹಿಡಿದಹಾಗೆಯೇ ಅಲ್ಲಲ್ಲಿನ ಪರ್ವತಗಳಲ್ಲಿಯೂ, ಗುಹೆಗಳಲ್ಲಿಯೂ, ಸಣ್ಣಗವಿಗಳಲ್ಲಿಯೂ, ಕಮ

ರಿಗಳಲ್ಲಿಯೂ, ಗಿಡದ ಪೊದರುಗಳಲ್ಲಿಯೂ ಕರುಗಳನ್ನು ಹುಡುಕುತ್ತಹೋ ದನು! ಓ ಪರೀಕ್ಷಿದ್ರಾಜಾ ! ನಿಜವಾಗಿಯೂ ಆ ಮಂದೆಯ ಕರುಗಳು ಹುಲ್ಲಿ ನಾಸೆಯಿಂದ ತಪ್ಪಿಸಿಕೊಂಡುಹೋದುವೆಂದು ತಿಳಿಯಬೇಡ! ಇದರಕಾರ ಣವೇ ಬೇರೆ ! ಹಿಂದೆ ಕೃಷ್ಣನು, ಅಘಾಸುರನೆಂಬ ಮಹಾಸರ್ಪದಿಂದ ನುಂಗಲ್ಪಟ್ಟಿದ್ದ ತನ್ನ ಕಡೆಯಬಾಲಕರನ್ನೂ, ಹಸುಗಳನ್ನೂ ಆ ಮೃತ್ಯುವಿ ನಿಂದ ತಪ್ಪಿಸಿ, ಆ ರಾಕ್ಷಸನನ್ನು ಕೊಂದಾಗ, ಚತುರ್ಮುಖ ಬ್ರಹ್ಮನು ಬಂದು, ಆಕಾಶದಲ್ಲಿ ಆಶ್ಚರ್ಯಭರಿತನಾಗಿ ನೋಡಿ ಹೊರಟುಹೋದನೆಂದು ಹೇಳಿದೆನಲ್ಲವೆ? ಆ ಚತುರ್ಮುಖಬ್ರಹ್ಮನೇ ಈಗ ಮಾಯಾಶಿಶುವಾಗಿರುವ ಆ ಕೃಷ್ಣಪರಮಾತ್ಮನ ಮಹಿಮೆಯನ್ನು ಮತ್ತೊಮ್ಮೆ ಪರೀಕ್ಷಿಸಬೇಕೆಂಬು ದಕ್ಕಾಗಿ, ಆ ಹಸುಗಳನ್ನು ಬೇರೆಕಡೆಗೆ ಸಾಗಿಸಿ ಮರೆಸಿಟ್ಟನು. ಕೃಷ್ಣನು ಅ ವುಗಳನ್ನು ಹುಡುಕುವುದಕ್ಕಾಗಿ;ಹೊರಟುಬಂದಮೇಲೆ,ಇತ್ತಲಾಗಿ ಭೋಜನ ಮಾಡುತ್ತಿದ್ದ ಬಾಲಕರನ್ನೂ ಬೇರೆಕಡೆಗೆ ಸಾಗಿಸಿಬಿಟ್ಟನು. ಕೃಷ್ಣನು ಅತ್ತ ಲಾಗಿ ಕಾಡುಕಾಡಾಗಿ ಸುತ್ತಿ ಎಲ್ಲಿಯೂ ಒಂದುಹಸುವನ್ನಾದರೂ ಕಾಣದೆ ಮೊದಲು ತಾನಿದ್ದ ಮಳಲಿನ ಮೈದಾನಕ್ಕೆ ಹಿಂತಿರುಗಿಬಂದನು. ಇಲ್ಲಿ ತನ್ನ ಸಂಗಡಿಗರನ್ನು ಕಾಣದೆ ಇವರನ್ನು ಹುಡುಕುವುದಕ್ಕಾಗಿ ತಿರುಗಿ ಹೊರಟನು. ಕಾಡುಕಾಡಾಗಿ ಸುತ್ತಿದನು. ಎಷ್ಟುಸುತ್ತಿದರೇನು? ಎಲ್ಲೆಲ್ಲಿ ಹುಡುಕಿದರೂ ತನ್ನ ಹಸುಗಳನ್ನಾಗಲಿ,ತನ್ನ ಸ್ನೇಹಿತರನ್ನಾಗಲಿ ಯಾರನ್ನೂ ಕಾಣಲಿಲ್ಲ.ಓ ರಾಜೇಂದ್ರಾ! ತಾನಿದ್ದಕಡೆಯಲ್ಲಿಯೇ ಸಮಸ್ತಲೋಕವ್ಯಾಪಾರವನ್ನೂ ಏಕಕಾಲದಲ್ಲಿ ಕಂಡುಕೊಳ್ಳಬಲ್ಲ ಆ ಪರಮಪುರುಷನಿಗೆ,ಈ ಕಳವನ್ನು ಕಂ ಡುಹಿಡಿಯುವುದೊಂದು ಕಷ್ಟವೆ? ಒಡನೆಯೇ ಅವನ ಮನಸ್ಸಿಗೆ ಅದೆಲ್ಲವೂ ಬ್ರಹ್ಮನು ತನ್ನನ್ನು ಪರೀಕ್ಷಿಸುವುದಕ್ಕಾಗಿ ಮಾಡಿದ ಚೇಷ್ಟೆಯೆಂದು ತಿಳಿ ದುಹೋಯಿತು. ಆಗ ಕೃಷ್ಣನು ಅತ್ತಲಾಗಿ ತನ್ನನ್ನು ಪರೀಕ್ಷಿಸುವುಕ್ಕಾಗಿ ಬಂದ ಬ್ರಹ್ಮನಿಗೆ ತನ್ನ ಮಹಿಮೆಯನ್ನು ತಿಳಿಸಿ ಸಂತೋಷಪಡಿಸುವುದಕ್ಕೂ ಇತ್ತಲಾಗಿ ಮಂದೆಯನ್ನೂ,ಮಕ್ಕಳನ್ನೂ ಕಾಣದೆ ಗೋಕುಲದಲ್ಲಿರುವ ತಂದೆ ತಾಯಿಗಳು ದುಃಖಿಸದಿರುವುದಕ್ಕೂ ತಕ್ಕ ಉಪಾಯವೇನೆಂದಾಲೋಚಿಸಿ. ತಾನೇ. ದನಕರುಗಳಂತೆಯೂ, ಗೋಪಬಾಲಕರಂತೆಯೂ ಅನೇಕರೂಪಗ

ಳನ್ನು ತಾಳಿದನು. ಆ ಭಗವಂತನು ಸರ್ವಾತ್ಮಕನಾದುದರಿಂದ, ಆಯಾ ಕರುಗಳಂತೆಯೂ,ಆಯಾ ಗೋಪಾಲಕರಂತೆಯೂ ಅನೇಕರೂಪಗಳನ್ನು ಕೈಕೊಂಡನು.ಅವುಗಳಂತೆಯೇ ಗುಜ್ಜುಮೈ ! ಅವುಗಳ ಕೈಕಾಲಳತೆಗೆ ತಕ್ಕ ಕೈಕಾಲುಗಳು!ಅವರವರಲ್ಲಿ ಮೊದಲಿದ್ದಂತೆಯೇ ಕೊಂಬು.ಕಲ್ಲಿ, ಕೊಳಲು, ಕೈದೊಣ್ಣೆ ಮೊದಲಾದ ಸಾಧನಗಳು ! ಅವರವರು ಧರಿಸಿದ್ದಂತೆಯೇ ವಸ್ತ್ರಾಭರಣಗಳು ! ಅವರವರಿಗಿದ್ದಂತೆಯೇ ಹೆಸರು,ಆಕೃತಿ, ಶೀಲಸ್ವಭಾವ, ಮುಂತಾದ ಗುಣಗಳು ! ಅವರವರ ವಯಸ್ಸಿನಷ್ಟೇ ವಯಸ್ಸು ! ಅವರವರಂತೆಯೇ ಆಟಪಾಟಗಳು ! ಹೀಗೆ ಯಾವಯಾವ ಭಾಗದಲ್ಲಿ ನೋಡಿದರೂ, ಭೇದವೇ ತಿಳಿಯದಂತೆ,ಬೇರೆಬೇರೆ ಆಕಾರಗಳನ್ನು ತಾಳಿ“ಸರ್ವಂ ವಿಷ್ಣುಮಯಂ ಜಗತ್” ಎಂಬ ವಾಕ್ಯಾರ್ಥವೇ ಮೂರ್ತೀಭವಿಸಿ ಪ್ರತ್ಯಕ್ಷವಾದಂತೆ, ಎಲ್ಲವೂ ತಾನಾಗಿಯೇ ತೋರುತಿದ್ದನು. ಹೀಗೆ ಸರ್ವಸ್ವರೂಪಿಯಾದ ಕೃಷ್ಣನು, ತಾನೇ ಕರುಗಳಾಗಿ, ತಾನೇ ಗೊಲ್ಲರ ಮಕ್ಕಳಾಗಿ, ಆ ಮಕ್ಕಳು ನಡೆಸುತಿದ್ದ ವಿಹಾರಕ್ರೀಡೆಗಳೆಲ್ಲವನ್ನೂ ತಾನೇ ನಟಿಸುತ್ತ, ಮೊದಲು ಮಂದೆಯಿಂದ ಹೊರಟ ಕ್ರಮದಲ್ಲಿಯೇ ಹಿಂತಿರುಗಿ ಬಂದು ಅವರವರ ಕರುಗಳಂತೆಯೇ ಅವರವರ ಕೊಟ್ಟಿಗೆಗಳಲ್ಲಿ ಸೇರಿದನು ! ಆಯಾಮಕ್ಕಳಂತೆ ಅವರವರ ತಾಯ್ತಂದೆಗಳ ಬಳಿಗೂ ಆತುರದಿಂದೋಡಿ ಬರುತಿದ್ದನು. ಕೊಳಲಿನ ಧ್ವನಿಯನ್ನುಕೇಳಿದಾಗಲೇ, ತಂದೆತಾಯಿಗಳು, ತಮ್ಮಮಕ್ಕಳು ಕಾಡಿನಲ್ಲಿ ಸುತ್ತಿ ಬಳಲಿಬಂದರೆಂಬ ಕನಿಕರದಿಂದ,ಅವರನ್ನು ಮುದ್ದಾಡಿ ಮುತ್ತಿಕ್ಕಿ ಪ್ರೇಮದಿಂದಾದರಿಸಿದರು. ಓ ರಾಜಾ!ಅವರ ಭಾಗ್ಯವಲ್ಲವೇ ಭಾಗ್ಯವು! ತಮ್ಮ ಮಕ್ಕಳೆಂಬ ಭ್ರಾಂತಿಯಿಂದ ಸಾಕ್ಷಾತ್ಪರಬ್ರಹ್ಮವನ್ನೇ ತಮ್ಮ ಎರಡು ಕೈಗಳಿಂದಲೂ ಆಲಿಂಗಿಸಿ, ಯೋಗಸಿದ್ಧರಿಗೂ ದುರ್ಲಭವಾದ ಬ್ರಹ್ಮಾನಂದವನ್ನನುಭವಿಸುತಿದ್ದರು. ಅವರವರ ಮಾತೆಯರು, ಪುತ್ರಪ್ರೇಮದಿಂದ ತೊರೆಯಿಕ್ಕುವ ಸ್ತನವುಳ್ಳವರಾಗಿ, ತಮ್ಮತಮ್ಮ ಮಕ್ಕಳೆಂಬ ಭಾವದಿಂದ ಪರಬ್ರಹ್ಮವನ್ನೇ ಕೈಗೆತ್ತಿಕೊಂಡು, ಅಮೃತಸಮಾನವಾದ ತಮ್ಮ ಸ್ತನ್ಯವನ್ನು ಕುಡಿಸಿದರು. ಹೀಗೆ ಕೃಷ್ಣನು ತಾನೇ ಮಂದೆಯ ಕರುಗಳಂತೆಯೂ, ಆ ಕರುಗಳನ್ನು ಕಾಯತಕ್ಕ ಗೊಲ್ಲರ ಮಕ್ಕಳಂತೆಯೂ ಅನೇಕರೂಪಗಳನ್ನು

ತಾಳಿ, ಒಂದು ಸಂವತ್ಸರಕಾಲದವರೆಗೆ ದಿನದಿನವೂ ಕಾಲಕ್ರಮವನ್ನನು ಸರಿಸಿ, ಆಯಾಕೃತ್ಯಗಳನ್ನು ನಡೆಸುತ್ತ, ಹಗಲಿನ ನಾಲ್ಕುಜಾವಗಳನ್ನು ಕಾಡಿನಲ್ಲಿ ಕಳೆದು, ಸಾಯಂಕಾಲದಲ್ಲಿ ಮನೆಗೆ ಬರುತಿದ್ದನು. ಅಲ್ಲಿ ಮಕ್ಕಳ ರೂಪದಿಂದ, ತಂದೆತಾಯಿಗಳ ಕೈಯಲ್ಲಿ ಮೈಯೊತ್ತಿಸಿಕೊಳ್ಳು ವುದು, ಮಜ್ಜನಮಾಡಿಸಿಕೊಳ್ಳುವುದು, ಪುಷ್ಪ, ಚಂದನ, ತಿಲಕ, ಅಂಜನ, ಮೊದಲಾದ ಅಲಂಕಾರಗಳನ್ನಿಡಿಸಿಕೊಳ್ಳುವುದು, ತನ್ನ ಆಟಪಾಟಗಳಿಂ ದ ಅವರ ಮನಸ್ಸನ್ನು ಸಂತೋಷಗೊಳಿಸುವುದು, ಇವೇ ಮೊದಲಾದ ಲೀ ಲೆಗಳನ್ನೂ ತೋರಿಸುವನು. ಹಾಗೆಯೇ ಮಂದೆಯ ಕರುಗಳಂತೆ ಸಾಯಂ ಕಾಲದಲ್ಲಿ ಆವರವರ ಮನೆಗೆ ಬಂದಾಗ, ಕೊಟ್ಟಿಗೆಯಲ್ಲಿದ್ದ ಹಸುಗಳು, “ಅಂಬೇ” ಎಂದು ಧ್ವನಿಯನ್ನು ತೋರಿಸುತ್ತ. ಆ ಕರುಗಳನ್ನು ಕಂಡೊ ಡನೆ, ಬಾಲವನ್ನೂ, ಕಿವಿಯನ್ನೂ ನೆಟ್ಟಗೆ ಸಿಗುರಿಸಿ, ಪ್ರೇಮದಿಂದ ನಕ್ಕು ವುವು! ಅವುಗಳಿಗೆ ಮೊಲೆಕುಡಿಸುವುವು. ಹೀಗೆ ಕೃಷ್ಣನು ತಾನೊಬ್ಬನೇ ಅವರವರ ಮಂದೆಯ ಕರುಗಳಂತೆಯೂ, ಗೊಲ್ಲರಂತೆಯೂ ಅನುಕರಿಸು ತಿದ್ದನು.

ಓ ರಾಜಾ! ಆ ಬೃಂದಾವನದಲ್ಲಿದ್ದ ಗೋಗೋಪಾಲಕರಲ್ಲಿಯೂ, ಕೃ ಷ್ಣನು ತೋರಿಸಿದ ಈ ಕಪಟಾಕೃತಿಗಳಲ್ಲಿಯೂ ಅನ್ಯೋನ್ಯವಾಗಿದ್ದ ಪು ತ್ರಪ್ರೇಮವೂ, ಪಿತೃವಾತ್ಸಲ್ಯವೂ ಮೊದಲಿನಂತೆಯೇ ಇದ್ದುವು. ಆದರೆ ಗೋಪಿಯರಿಗೆ ಈ ಕೃಷ್ಣನ ಕಪಟಾಕೃತಿಗಳಲ್ಲಿದ್ದ ಸ್ನೇಹವು, ಸಾಕ್ಷಾತ್ತಾ ಗಿ ಕೃಷ್ಣನನ್ನು ನೋಡಿದಾಗ ಅವರಿಗುಂಟಾಗುತಿದ್ದ ಅಪೂರ್ವವಾದ ಪ್ರೇ ಮಾತಿಶಯದಂತಿರಲಿಲ್ಲ. ಕೃಷ್ಣನು ಈ ಕಪಟಾಕೃತಿಗಳಿಂದ ತೋರಿಸುತಿ ದ್ದ ಮಾತೃಸ್ನೇಹವೂಕೂಡ, ಪ್ರಾಕೃತಶಿಶುಗಳಿಗಿರುವಂತೆ “ಅವರು ತನ್ನ ನ್ನು ಹಡೆದವರು, ತಾನು ಅವರ ಮಗನು” ಎಂಬ ಮಾಯಾಜನ್ಯವಾದ ಮೋಹವಾಗಿರಲಿಲ್ಲ. ಇದುಹೊರತು ಬೇರೆ ಯಾವವಿಧದಲ್ಲಿಯೂ ವ್ಯತ್ಯಾಸ ವಿಲ್ಲ. ಗೋಪಾಲಕರಿಗೆ ಕೃಷ್ಣನಲ್ಲಿ ಮೊದಲೇ ತಮ್ಮ ಮಕ್ಕಳಲ್ಲಿರುವುದ ಕ್ಕಿಂತಲೂ ಹೆಚ್ಚು ಪ್ರೀತಿಯಿದ್ದಿತು. ಈಗ ಆ ಕೃಷ್ಣನೇ ಅವರವರ ಮಕ್ಕ ಳಾಗಿಯೂ ತೋರುತಿದ್ದುದರಿಂದ, ಆ ಪುತ್ರವಾತ್ಸಲ್ಯವೂ ಕಲೆತು, ಆ ಪ್ರೇ

ಮವು ಮಿತಿಮೀರಿತು. ರಾಜೇಂದ್ರಾ! ಕೃಷ್ಣನು ಹೀಗೆ ವತ್ಸರೂಪದಿಂದಲೂ, ಗೋಪಾಲಕರೂಪದಿಂದಲೂ ತನ್ನನ್ನೇ ತಾನು ಪಾಲಿಸುತ್ತ, ಆ ಬೃಂದಾವನದಲ್ಲಿಯೂ, ಮಂದೆಗಳಲ್ಲಿಯೂ ಒಂದು ಸಂವತ್ಸರಕಾಲದವರೆಗೆ ವಿಹರಿಸುತಿದ್ದನು ಆವರ್ಷದ ಪೂರ್ತಿಗೆ ಐದಾರುದಿನಗಳುಮಾತ್ರ ಮಿಕ್ಕಿರುವಾಗ, ಒಂದಾನೊಂದುದಿನದಲ್ಲಿ ಬಲರಾಮಕೃಷ್ಣರಿಬ್ಬರೂ ಕರುಗಳನ್ನಟ್ಟಿಕೊಂಡು ಕಾಡಿಗೆ ಹೋದರು. ಆಗ ಬಹಳಹಸಿವಿನಿಂದ ಗೋವರ್ಧನಪರ್ವತದಲ್ಲಿ ಹಸುರುಮೇಯುತಿದ್ದ ಕೆಲವುಗೋವುಗಳು. ಮಂದೆಯ ಸಮೀಪದಲ್ಲಿದ್ದ ಈ ಕರುಗಳನ್ನು ನೋಡಿ ಪ್ರೀತಿಪರವಶವಾಗಿ, ಬಾಲವನ್ನೂ, ಮುಖವನ್ನೂ ನೆಟ್ಟಗೆ ಮೇಲಕ್ಕೆತ್ತಿಕೊಂಡು, ಹುಂಕಾರವನ್ನು ಮಾಡುತ್ತ, ಆ ಕರುಗಳ ಸಮೀಪಕ್ಕೆ ಓಡಲಾರಂಭಿಸಿದುವು ಆಗ ಅವುಗಳ ಆತುರವನ್ನು ಕೇಳಬೇಕೆ! ಓಡುವ ವೇಗದಲ್ಲಿ ಹಿಂದುಮುಂದಿನ ಕಾಲುಗಳೆರಡೂ ಒಂದಾಗಿ ಸೇರಿ, ಎರಡೇಕಾಲಿನ ಹಸುಗಳಂತೆ ಕಾಣುತಿದ್ದುವು. ಅದನ್ನು ಕಾಯುತಿದ್ದವರು ಎಷ್ಟೆಷ್ಟೋ ಪ್ರಯತ್ನಪಟ್ಟು ತಡೆದರೂ, ಅವರಿಗೂ ದಕ್ಕದೆ ಮೇಲೆಬಿದ್ದು ಬರುತಿದ್ದುವು. ಕರುಗಳಲ್ಲಿದ್ದ ಪ್ರೇಮದಿಂದ ದಾರಿಯುದ್ದಕ್ಕೂ ಹಾಲನ್ನು ತೊರೆಯಿಕ್ಕುತಿದ್ದುವು. ಈ ಗೋವುಗಳು ಈಚೆಗೆ ಬೇರೆ ಹೊಸಕರುಗಳನ್ನು ಈದಿದ್ದರೂ, ಹಿಂದೆಹುಟ್ಟಿದ ಈ ಕರುಗಳಲ್ಲಿ ಅತಿಶಯವಾದ ಪ್ರೀತಿಯಿಂದ, ಒಂದೇ ಓಟದಿಂದ ಬಂದು, ಆ ಕರುಗಳನ್ನು ಕಡಿದು ಬಿಡುವಂತೆ ನಕ್ಕುತ್ತ, ಅವುಗಳಿಗೆ ಸಮೃದ್ಧಿಯಾಗಿ ಹಾಲನ್ನು ಕುಡಿಸಿದುವು. ಇವುಗಳಿಗೆ ಕಾವಲಾಗಿದ್ದ ಗೋಪಾಲಕರು ಅವುಗಳನ್ನು ತಡೆಯುವುದಕ್ಕಾಗಿ ಮಾಡಿದ ಸಾಹಸಗಳೆಲ್ಲವೂ ವ್ಯರ್ಥವಾದುದರಿಂದ, ಅವರಿಗೆ ಮನಸ್ಸಿನಲ್ಲಿ ಸಹಿಸಲಾರದ ನಾಚಿಕೆಯೂ, ಕೋಪವೂ ಹುಟ್ಟಿತು. ಅವರು ಕಲ್ಲುಮುಳ್ಳುಗಳನ್ನೂ, ಹಳ್ಳತಿಟ್ಟುಗಳನ್ನೂ ನೋಡದೆ, ಆ ಹಸುಗಳನ್ನು ಹಿಂಬಾಲಿಸಿ ಓಡಿಬಂದು, ಅವುಗಳನ್ನು ದಂಡಿಸುವುದಕ್ಕಾಗಿ ಕೈಯೆತ್ತುವಷ್ಟರಲ್ಲಿ, ಆ ಕರುಗಳ ಗುಂಪಿನಲ್ಲಿ ತಮ್ಮ ಮಕ್ಕಳನ್ನು ಕಂಡೊಡನೆ ಪುತ್ರಪ್ರೇಮದಿಂದ ಅವರ ಮನಸ್ಸು ಕರಗಿತು. ಅವರ ಕೋಪವೆಲ್ಲವೂ ತಟ್ಟನೆ ಆರಿಹೋಯಿತು. ಹೀಗೆ ಗೋಪಾಲಕರೂ, ಪಶುಗಳೂ, ತಮ್ಮತಮ್ಮ ಮಕ್ಕಳನ್ನು ಆಲಿಂಗಿ

ಸಿಕೊಂಡು, ಸಂತುಷ್ಟಹೃದಯರಾಗಿ, ಅವುಗಳನ್ನಗಲಿ ಹೋಗಲಾರದೆ, ಕಣ್ಣುಗಳಲ್ಲಿ ನೀರನ್ನು ಬಿಡುತ್ತ, ಕೊನೆಗೆ ಎಷ್ಟೋ ಕಷ್ಟದಿಂದ ಅಗಲಿಹೋದರು.

ಆಗ ಬಲರಾಮನು, ತನ್ನ ಮಂದೆಯಲ್ಲಿರುವ ಗೋವುಗಳಿಗೂ, ಗೋಪಿಯರಿಗೂ, ಮೊದಲೇ ಸ್ತನ್ಯಪಾನವನ್ನು ನಿಲ್ಲಿಸಿಬಿಟ್ಟಿದ್ದ ತಮ್ಮ ಹಳೆಯ ಮಕ್ಕಳಲ್ಲಿಯೂ ಕೂಡ, ಅಷ್ಟೊಂದು ಪ್ರೇಮವೂ, ಆಸೆಯೂ ಹೆಚ್ಚಿದುದನ್ನು ನೋಡಿ, ಅದರ ಕಾರಣವೇನೆಂದು ತಿಳಿಯದೆ, ಕ್ಷಣಕ್ಷಣಕ್ಕೂ ಅದೇವಿಚಾರವನ್ನು ಕುರಿತು ಆಶ್ಚರ್ಯಪಡುತ್ತ, ತನ್ನಲ್ಲಿ ತಾನು. “ಅಹಾ! ಇದೇನಾಶ್ಚರ್ಯವು! ಈ ಗೋಕುಲವಾಸಿಗಳಿಗೂ, ನನಗೂ ವಾಸುದೇವನೊಬ್ಬನಲ್ಲಿ ಒಂದುವಿಧವಾದ ಅಪೂರ್ವಪ್ರೇಮವುಂಟು! ಅತನು ಸಕಲಾತ್ಮನಾದುದರಿಂದ ಅವನಲ್ಲಿ ಆ ಬಗೆಯ ಪ್ರೇಮವುಂಟಾಗುವುದೇನೋ ಸಹಜವೇ! ಆದರೆ ಈಗ ನಮಗೆ, ಆ ಕೃಷ್ಣನಲ್ಲಿರುವಂತೆಯೇ ಬೇರೆಗೋಪಬಾಲಕರಲ್ಲಿಯೂ ಅಪೂರ್ವವಾದ ಪ್ರೇಮವು ಹೆಚ್ಚುತ್ತಿರುವುದಲ್ಲಾ! ಇದೇನಾಶ್ಚರ್ಯವು! ಇದಕ್ಕೆ ಕಾರಣವೇನಿರಬಹುದು? ಈ ಮಾಯೆಯೆಲ್ಲಿಯದು? ಇದು ದೇವಮಾಯೆಯೋ! ರಾಕ್ಷಸಮಾಯೆಯೋ! ಅಥವಾ ಮನುಷ್ಯಮಾಯೆಯೋ ತಿಳಿಯಲಿಲ್ಲ! ಇದು ನಮ್ಮ ಪ್ರಭುವಾದ ಕೃಷ್ಣನ ಮಾಯೆಯೇ ಇರಬೇಕು. ಹೀಗೆ ಸಮಸ್ತಜನರನ್ನೂ ಮೋಹಗೊಳಿಸತಕ್ಕ ಆಶ್ಚರ್ಯಶಕ್ತಿಯು ಬೇರೊಬ್ಬರಿಗಿರಲಾರದು!” ಎಂದು ನಾನಾವಿಧವಾಗಿ ಚಿಂತಿಸುತಿದ್ದು, ಕೊನೆಗೆ, ಅಲ್ಲಿನ ಗೋಪಬಾಲಕರನ್ನೂ, ಕರುಗಳನ್ನೂ ತನ್ನ ದಿವ್ಯಜ್ಞಾನದೃಷ್ಟಿಯಿಂದ ನೋಡಿದನು. ಅವೆಲ್ಲವೂ ಸಾಕ್ಷಾತ್ಕೃಷ್ಣರೂಪದಿಂದಲೇ ಅವನ ಕಣ್ಣಿಗೆ ಕಾಣಿಸಿಕೊಂಡುವು! ಇದನ್ನು ಕಂಡೊಡನೆ ರಾಮನು, ಆಶ್ಚರ್ಯಭರಿತನಾಗಿ ಕೃಷ್ಣನನ್ನು ಕುರಿತು “ಓ ಕೃಷ್ಣಾ! ನಾವು ಕಾಯುತಿದ್ದ ಗೋವುಗಳೆಲ್ಲವೂ ಮಹರ್ಷಿಗಳ ಅಂಶವೆಂದೂ, ನಮ್ಮ ಸಂಗಡಿಗರಾದ ಗೋಪಾಲಕರೆಲ್ಲರೂ ದೇವಾಂಶದವರೆಂದೂ ನಾನು ಕೇಳಿದ್ದೆನು. ಈಗಲಾದರೋ ಇವು ಋಷಿಗಳಂತೆಯಾಗಲಿ, ದೇವತೆಗಳಂತೆಯಾಗಲಿ ಕಾಣುವುದಿಲ್ಲ. ಹೊರಕ್ಕೆಮಾತ್ರ ಇವು, ಗೋವುಗಳೆಂದೂ, ಗೋಪಬಾಲಕರೆಂದೂ ಎರಡುವಿಧವಾಗಿ ಕಾಣುತಿದ್ದರೂ, ಜ್ಞಾನದೃಷ್ಟಿಯಿಂದ

ನೋಡುವಾಗ,ನನಗೆ ಅವೆಲ್ಲವೂ ನಿನ್ನೊಬ್ಬನ ಆಕಾರದಿಂದಲೇ ಕಾಣುತ್ತಿರುವುವು. ಹೀಗೆ ನೀನು ಸರ್ವಸ್ವರೂಪನಾಗಿಯೂ, ಬೇರೆಬೇರೆ ಆಕಾರವುಳ್ಳವನಾಗಿಯೂ ತೋರುವ ಕಾರಣವೇನು?"ಎಂದು ಪ್ರಶ್ನೆಮಾಡಿದನು. ಆಗ ಕೃಷ್ಣನು ನಡೆದ ಸಂಗತಿಯೆಲ್ಲವನ್ನೂ ಸಂಕ್ಷೇಪವಾಗಿ ತಿಳಿಸಿದಮೇಲೆ, ಬಲರಾಮನಿಗೆ ನಿಜಸ್ಥಿತಿಯೆಲ್ಲವೂ ಸ್ಪಷ್ಟವಾಗಿ ತಿಳಿಯಿತು. ರಾಜೇಂದ್ರಾ! ಮತ್ತೊಂದಾಶ್ಚರ್ಯವನ್ನು ಹೇಳುವೆನು ಕೇಳು! ಚತುರ್ಮುಖಬ್ರಹ್ಮನು ಇತ್ತಲಾಗಿ ಕೃಷ್ಣನ ಗೋವುಗಳನ್ನು ಮರೆಸಿಟ್ಟು, ತನ್ನ ಲೋಕಕ್ಕೆ ಹಿಂತಿರುಗಿ, ತನ್ನ ಆಲಯಕ್ಕೆ ಪ್ರವೇಶಿಸುವಷ್ಟರಲ್ಲಿ, ಕೃಷ್ಣನು ತಾನೇ ಚತುರ್ಮುಖರೂಪದಿಂದ ಹೋಗಿ ಅವನ ಸಿಂಹಾಸನವನ್ನೇರಿ ಕುಳಿತುಬಿಟ್ಟನು! ದ್ವಾರಪಾಲಕರೇ ಮೊದಲಾದ ಅಲ್ಲಿನ ಅನುಚರರೆಲ್ಲರೂ, ಆತನನ್ನೇ ತಮ್ಮ ಪ್ರಭುವೆಂದು ತಿಳಿದು, ಅವನ ಸೇವೆಯಲ್ಲಿ ನಿರತರಾಗಿದ್ದರು. ಹೊಸದಾಗಿ ಬಂದ ಬ್ರಹ್ಮನನ್ನು ನೋಡಿ ಆ ಅರಮನೆಯ ದ್ವಾರಪಾಲಕರಿಗೆ ಸಂದೇಹವು ಹುಟ್ಟಿತು. ಇದರಿಂದ ಅವರು ತಮ್ಮ ನಿಜವಾದ ಪ್ರಭುವನ್ನು ಬಾಗಿಲಲ್ಲಿಯೇ ತಡೆದು, “ಎಲೈ! ನೀನು ಯಾರು? ನಮ್ಮ ಪ್ರಭುವು ಆಗಲೇ ಸಿಂಹಾಸನವನ್ನೇರಿ ಕುಳಿತಿರುವನು! ವೇಷಧಾರಿಯಾಗಿ ನಮ್ಮನ್ನು ವಂಚಿಸುವುದಕ್ಕೆ ಬಂದೆಯಾ?" ಎಂದು ಒಬ್ಬೊಬ್ಬರೂ ಅವನನ್ನು ತಿರಸ್ಕರಿಸಿ ಹೊರಗೆ ನೂಕುತಿದ್ದರು. ಬ್ರಹ್ಮನು ತನ್ನ ಸೇವಕರಿಂದಲೇ ತಾನು ತಿರಸ್ಕೃತನಾಗಿ ಹಿಂತಿರುಗಬೇಕಾಯಿತು. ರಾಜೇಂದ್ರಾ! ಬ್ರಹ್ಮನು ಕರುಗಳನ್ನು ಬಚ್ಚಿಟ್ಟು ಹಿಂತಿರುಗಿ ತನ್ನ ಲೋಕಕ್ಕೆ ಬರುವಷ್ಟರಲ್ಲಿ, ಭೂಲೋಕದಲ್ಲಿ ಒಂದು ಸಂವತ್ಸರಕಾಲವು ಕಳೆದುಹೋದರೂ, ಆ ಬ್ರಹ್ಮನಿಗೆ ತನ್ನ ಕಾಲಮಾನದಿಂದ ಒಂದು ತ್ರುಟಿಕಾಲದಷ್ಟುಮಾತ್ರವೇ ಆಗಿದ್ದಿತು. ಬ್ರಹ್ಮನು ತನ್ನಲೋಕಕ್ಕೆ ಹೋಗಿ ಅವಮಾನಿತವಾಗಿ ಹಿಂತಿರುಗಿಬಂದು ನೋಡುವಷ್ಟರಲ್ಲಿ, ಇತ್ತಲಾಗಿ ಕೃಷ್ಣಬಲರಾಮರಿಬ್ಬರೂ, ಮೊದಲಿನಂತೆ ತನ್ನ ಸಂಗಡಿಗರೊಡನೆ ತಮ್ಮ ತಮ್ಮ ಮಂದೆಗಳನ್ನು ಮೇಯಿಸುತಿದ್ದರು. ಇದನ್ನು ನೋಡಿ ಬ್ರಹ್ಮನ ಮನಸ್ಸಿಗೆ ಅತ್ಯಾಶ್ಚರ್ಯವುಂಟಾಯಿತು. ಆಗ ಬ್ರಹ್ಮನು ತನ್ನಲ್ಲಿ ತಾನು “ಆಹಾ! ಇದೇನಾಶ್ಚರ್ಯವು! ಹಿಂದೆ ಮಂದೆಯಲ್ಲಿದ್ದ

ಸಮಸ್ತಬಾಲಕರನ್ನೂ, ಎಲ್ಲಾಕರುಗಳನ್ನೂ, ನಾನು ನನ್ನ ಮಾಯೆಯಿಂ ಬಚ್ಚಿಟ್ಟುಬಂದೆನು. ಅವೆಲ್ಲವೂ ನನ್ನ ಮಾಯೆಯಿಂದ ಈಗಲೂ ಮಲಗಿರುವುವೇ ಹೊರತು,ಇನ್ನೂ ಎಚ್ಚರಗೊಳ್ಳುವುದಕ್ಕೇ ಅವಕಾಶವಿಲ್ಲ! ಹೀಗಿರುವಾಗ ಹಿಂದೆ ನಾನು ಬಚ್ಚಿಟ್ಟುಬಂದ ಪ್ರಾಣಿಗಳೆಲ್ಲವೂ ಇಲ್ಲಿ ಕಾಣುತ್ತಿರುವುವಲ್ಲಾ! ಇವು ಎಲ್ಲಿಂದ ಬಂದುವು? ಇವು ಬೇರೆಯಾಗಿರಬಹುದೆ? ಇಲ್ಲ! ನಾನು ಹಿಂದೆ ಮಾಯೆಯಿಂದ ಮರೆಸಿಟ್ಟ ಬಾಲಕರ ಮತ್ತು ಕರುಗಳ ಸಂಖ್ಯೆಯೆಷ್ಟುಂಟೋ ಅಷ್ಟೇ ಇಲ್ಲಿಯೂ ಕಾಣುತ್ತಿರುವುದು! ಆಕೃತಿಯೂ ಒಂದೇ ವಿಧವಾಗಿರುವುದು! ಕಳೆದ ಒಂದುವರ್ಷಕಾಲದಿಂದಲೂ ಇವರು ಇದೇ ವಿಧವಾಗಿ ಆ ಕೃಷ್ಣನೊಡನೆ ವಿಹರಿಸುತ್ತಿರುವಂತೆ ತೋರುವುದು. ಹಾಗಿಲ್ಲದೆ ಇವು ಬೇರೆಯಾಗಿದ್ದಪಕ್ಷದಲ್ಲಿ ಎಲ್ಲಿಂದ ಬಂದುವು?" ಎಂದು ಬಹಳಹೊತ್ತಿನವರೆಗೆ ತನ್ನಲ್ಲಿ ತಾನೇ ಆಲೋಚಿಸುತಿದ್ದನು. ಎಷ್ಟು ಯೋಚಿಸಿದರೇನು?ಪರಬ್ರಹ್ಮಸ್ವರೂಪನಾದ ಆ ಕೃಷ್ಣನೇ ಹೀಗೆ ನಾನಾ ರೂಪದಿಂದ ಕಾಣುವನೆಂಬುದನ್ನು ತಿಳಿಯುವುದಕ್ಕೆ ಆ ಬ್ರಹ್ಮನಿಗೂ ಸಾಧ್ಯವಿಲ್ಲದೆ ಹೋಯಿತು. ತ್ರೈಲೋಕ್ಯವನ್ನೂ ತನ್ನ ಮಾಯೆಯಿಂದ ಮೋಹಗೊಳಿಸತಕ್ಕ ಭಗವಂತನಾದ ಶ್ರೀಕೃಷ್ಣನನ್ನು ಮೋಸಮಾಡಬೇಕೆಂದು ಬಂದ ಬ್ರಹ್ಮನು, ಆ ಕೃಷ್ಣನ ಮಾಯೆಯಿಂದ ತಾನೇ ವಂಚಿತನಾದನು. ಗಾಢಾಂಧಕಾರದಲ್ಲಿ ಮಂಜಿನಿಂದುಂಟಾದ ಕತ್ತಲೆಯನ್ನೂ, ಸೂರ್ಯನ ಬಿಸಿಲಿನಲ್ಲಿ ಮಿಂಚುಹುಳುಗಳ ಕಾಂತಿಯನ್ನೂ ಪ್ರತ್ಯೇಕಿಸಿ ತಿಳಿಯುವುದು ಹೇಗೆ ಸಾಧ್ಯವು? ಹಾಗೆಯೇ ಜಗನ್ಮೋಹಕವಾದ ಆ ಭಗವಂತನ ಮಹಾಮಾಯೆಯಲ್ಲಿ, ಅತ್ಯಲ್ಪವಾದ ಬೇರೆ ಮಾಯೆಯು ಕೆಲಸಕ್ಕೆಬಾರದೆ ಮರೆಸಿಹೋಗುವುದೇನಾಶ್ಚರ್ಯವು? ಹೀಗೆ ಬ್ರಹ್ಮನು ನಿಜಸ್ಥಿತಿಯನ್ನು ತಿಳಿಯಲಾರದೆ ಕಳವಳಿಸುತ್ತ, ದಿಗ್ಭ್ರಾಂತನಾಗಿ ನೋಡುತ್ತಿರುವಾಗಲೇ ಅಲ್ಲಿದ್ದ ಕರುಗಳೂ, ಅವುಗಳನ್ನು ಕಾಯುತಿದ್ದ ಗೋಪಬಾಲಕರೂ, ಸಾಕ್ಷಾದ್ವಿಷ್ಣುಸ್ವರೂಪದಿಂದಲೇ ಬ್ರಹ್ಮನ ಕಣ್ಣಿಗೆ ಗೋಚರಿಸಿದರು. ಒಬ್ಬೊಬ್ಬರಿಗೂ ನೀಲಮೇಘಶ್ಯಾಮಲವಾದ ದೇಹಕಾಂತಿ! ನಡುವಿನಲ್ಲಿ ಪೀತಾಂಬರವೆಂಬ ಪಟ್ಟೆಮಡಿ! ನಾಲ್ಕುಭುಜಗಳು! ಆ ನಾಲ್ಕು ಭುಜಗಳಲ್ಲಿಯೂ, ಶಂ

ಖ ಚಕ್ರ ಗದಾ ಪದ್ಮಗಳೆಂಬ ದಿವ್ಯಾಯುಧಗಳು! ಮೈಮೇಲೆ, ಕಿರೀಟ, ಕುಂಡಲ, ಹಾರ, ಕೇಯೂರ, ವನಮಾಲಿಕೆ ಮುಂತಾದ ಆಭರಣಗಳು! ಒಬ್ಬೊಬ್ಬರ ಎದೆಯಲ್ಲಿಯೂ ಶ್ರೀವತ್ಸವೆಂಬ ಮಚ್ಚೆ! ಕಂಠದಲ್ಲಿ ಕೌಸ್ತುಭಮಣಿ! ಕೈಯಲ್ಲಿ ರತ್ನಖಚಿತವಾದ ಕೈಬಳೆ, ಉಂಗುರ, ಮೊದಲಾದ ದಿವ್ಯಭೂಷಣಗಳು! ಅವರೊಬ್ಬೊಬ್ಬರಿಗೂ ಆಪಾದಚೂಡಪರ್ಯಂತವಾಗಿ ಸರ್ವಾವಯವಯಗಳಲ್ಲಿಯೂ, ಬಹುಜನ್ಮಾರ್ಜಿತವಾದ ಪುಣ್ಯರಾಶಿಯಂತೆ ತೋರುತ್ತಿರುವ ತುಲಸಿಯ ದಂಡೆಗಳು! ಆಶ್ರಿತರ ಕೋರಿಕೆಗಳನ್ನು ಸೃಷ್ಟಿಸುವುದಕ್ಕಾಗಿ ರಜೋಗುಣವನ್ನೂ, ಆ ಇಷ್ಟಾರ್ಥಗಳನ್ನು ಅಪಾಯವಿಲ್ಲದೆ ರಕ್ಷಿಸುವುದಕ್ಕಾಗಿ ಸತ್ವಗುಣವನ್ನೂ ತಮ್ಮಲ್ಲಿ ತೋರಿಸುವಂತೆ, ಅವರೊಬ್ಬೊಬ್ಬರ ಕಡೆಗಣ್ಣುಗಳಲ್ಲಿ ಕೆಂಪಾದ ಕಾಂತಿಯೂ, ಮುಖದಲ್ಲಿ ಚಂದ್ರಿಕೆಯಂತೆ ಬಿಳುಪಾದ ಮಂದಹಾಸವೂ ಶೋಭಿಸುತ್ತಿರುವುವು. ತನ್ನಿಂದ (ಚತುರ್ಮುಖನಿಂದ) ಹಿಡಿದು ಹುಲ್ಲುಕಡ್ಡಿಯವರೆಗಿನ ಚರಾಚರಪ್ರಪಂಚವೆಲ್ಲವೂ, ಆಯಾ ರೂಪಗಳಿಂದ ಬಂದು, ನೃತ್ತವಾದ್ಯಗಳೇ ಮೊದಲಾದ ಪೂಜಾಕ್ರಮಗಳಿಂದ ಅವರನ್ನು ಬೇರೆಬೇರೆಯಾಗಿ ಉಪಾಸಿಸುತಿದ್ದುವು. ಅಣಿಮಾದ್ಯಷ್ಟವಿಭೂತಿಗಳೂ, ಪ್ರಕೃತಿ ಮೊದಲಾದ ಕಾರ್ಯಶಕ್ತಿಗಳೂ, ಮಹತ್ತು ಮೊದಲಾದ ಇಪ್ಪತ್ತುನಾಲ್ಕುತತ್ವಗಳೂ, ಅವರನ್ನು ಸುತ್ತಿಮುತ್ತಿ ಸೇವಿಸುತ್ತಿದ್ದುವು. ಸತ್ವಾದಿಗುಣಗಳನ್ನು ಕದಲಿಸತಕ್ಕ ಕಾಲವೂ, ಆ ಗುಣಗಳ ಪರಿಣಾಮಕ್ಕೆ ಹೇತುವಾದ ಸ್ವಭಾವವೂ, ಅದನ್ನು ಉದ್ಬೋಧಿಸತಕ್ಕ ಸಂಸ್ಕಾರವೂ, ಕರ್ಮಹೇತುವಾದ ಕಾಮವೂ, ಆಯಾ ಶರೀರಪ್ರಾಪ್ತಿಗೆ ಹೇತುವಾದ ಕರ್ಮವೂ, ಜ್ಞಾನ ವಿಕ್ಷೇಪ ಮೋಹಾದಿಗಳಿಗೆ ಕಾರಣಗಳಾದ ಸತ್ವಾದಿಗುಣಗಳೂ, ಇವೇ ಮೊದಲಾದ ಪ್ರಪಂಚಕಾರ್ಯಹೇತುಗಳೆಲ್ಲವೂ, ಆ ಭಗವಂತನ ಮಹತ್ವದಿಂದ, ತಮ್ಮತಮ್ಮ ಸ್ವಾತಂತ್ರ್ಯಗಳನ್ನುಡುಗಿಸಿಕೊಂಡು, ಮೂರ್ತಿವತ್ತಾಗಿ ಬಂದು, ವಿನಯದಿಂದ ಅವರನ್ನು ಸೇವಿಸುತಿದ್ದುವು. ಮತ್ತು ಅವರೊಬ್ಬೊಬ್ಬರೂ ಕೇವಲ ಸತ್ಯಜ್ಞಾನಾನಂದಮಯನಾದ ಪರಬ್ರಹ್ಮನೊಡನೆ ಸಮಾನಮೂರ್ತಿಗಳಾಗಿ, ಆತ್ಮಜ್ಞಾನಿಗಳಿಗೂ ಅಗೋಚರವಾದ ಮಹಿಮೆಯುಳ್ಳವರಾಗಿದ್ದರು. ಹೀಗೆ ಅಲ್ಲಿದ್ದ ಕರುಗಳೂ

ಆ ಕರುಗಳನ್ನು ಕಾಯುತಿದ್ದ ಗೋಪಬಾಲಕರೂ, ತನ್ನ ತೇಜಸ್ಸಿನಿಂದಲೇ ಸಮಸ್ತ ಪ್ರಪಂಚವನ್ನೂ ಬೆಳಗಿಸತಕ್ಕ ಸಾಕ್ಷಾತ್ಪರಬ್ರಹ್ಮಸ್ವರೂಪದಿಂದ ತೋರುತ್ತಿರುವುದನ್ನು ಕಂಡೊಡನೆ, ಬ್ರಹ್ಮನು ಏನೊಂದೂ ತೋರದೆ ಆ ಶ್ಚರ್ಯದಿಂದ ಸ್ತಬ್ಧನಾಗಿ ನಿಂತುಬಿಟ್ಟನು. ಆ ಚತುರ್ಮುಖನ ಏಕಾದಶೇಂದ್ರಿಯ ಗಳೂ ಅವರ ತೇಜಸ್ಸಿನಿಂದ ಶಕ್ತಿಗುಂದಿ ಪರವಶವಾಗಿದ್ದುವು. ಆಗ ಬ್ರ ಹ್ಮನು, ಗೋಕುಲದೇವತೆಯ ಮುಂದೆ, ಕ್ರೀಡಾರ್ಥವಾಗಿ ನಿಲ್ಲಿಸಿದ ಬಂಗಾರದ ಬೊಂಬೆಯಂತೆ ನಿಶ್ಚಲನಾಗಿ ನಿಂತುಬಿಟ್ಟನು. ಹೀಗೆ ಸ್ವಯಂ ಪ್ರಕಾಶವಾಗಿಯೂ, ಅಪರಿಮಿತಸುಖಾತ್ಮಕವಾಗಿಯೂ, ಪ್ರಕೃತಿಗಿಂತ ಲೂ ವಿಲಕ್ಷಣವಾಗಿಯೂ, ಪ್ರತ್ಯಕ್ಷಾನುಮಾನಾದಿಪ್ರಮಾಣಗಳಿಂದ ಹೀ ಗೆಂದೂಹಿಸುವುದಕ್ಕೂ ಅಸಾಧ್ಯವಾದ ಮಹಿಮೆಯುಳ್ಳದಾಗಿಯೂ, ಪ್ರ ಕೃತಿ ಪುರುಷರಿಗಿಂತಲೂ ವಿಲಕ್ಷಣವಾದ ಸ್ವರೂಪಸ್ವಭಾವಗಳುಳ್ಳದಾ ಗಿ, ಕೇವಲ ವೇದಾಂತವಾಕ್ಯಗಳಿಂದಲೇ ತಿಳಿಯಲ್ಪಡತಕ್ಕುದಾಗಿಯೂ ಇರು ವ ಆ ಭಗವತ್ಸ್ವರೂಪವನ್ನು ನೋಡಿ ಬ್ರಹ್ಮನು, ಅದರ ನಿಜಸ್ಥಿತಿಯನ್ನೂ ಮಹಿಮೆಯನ್ನೂ ಹೀಗೆಂದು ತಿಳಿಯಲಾರದೆ ಕಳವಳಿಸುತ್ತಿದ್ದನು. ಬ್ರ ಹ್ಮನು ಹೀಗೆ ಕಳವಳಿಸುತ್ತಿರುವುದನ್ನು ನೋಡಿ, ಸರ್ವೋತ್ತಮನಾಗಿಯೂ, ಕರ್ಮಾಧೀನವಾದ ಜನನಮರಣಗಳಿಲ್ಲದವನಾಗಿಯೂ ಇರುವ ಭಗವಂತನು, ಮೊದಲಿನಂತೆಯೇ ತನ್ನ ರೂಪವನ್ನು ಕರುಗಳನ್ನಾಗಿಯೂ, ಗೋಪಬಾಲ ಕರನ್ನಾಗಿಯೂ ಅವನಿಗೆ ತೋರಿಸುವುದಕ್ಕಾಗಿ, ಆ ಬ್ರಹ್ಮನಮುಂದೆ ತನ್ನ ಪರಸ್ವರೂಪವನ್ನು ಮರೆಸತಕ್ಕ ಮಾಯೆಯೆಂಬ ತೆರೆಯನ್ನು ಬೀಸಿದನು. ಹಿಡನೆಯೇ ಬ್ರಹ್ಮನಿಗೆ ಇಂದ್ರಿಯಗಳಲ್ಲಿ ಪಟುತ್ವವುಂಟಾಯಿತು. ಮೃತ ಶರೀರಕ್ಕೆ ಜೀವವು ಕೂಡಿದಂತೆ ಅವನಿಗೆ ಪ್ರಜ್ಞೆಯುಂಟಾಯಿತು. ಮೆಲ್ಲಗೆ ಕಣ್ಣುಗಳನ್ನು ತೆರೆದು ಮುಂದೆ ನೋಡಿದನು. ಅವನ ಕಣ್ಣಿಗೆ ಜಗತ್ತೆಲ್ಲವೂ ಮೊದಲಿನ ಸ್ಥಿತಿಯಲ್ಲಿಯೇ ಗೋಚರಿಸಿತು. ತಾನೂ ಚತುರ್ಮುಖಬ್ರಹ್ಮನೆಂ ಬ ಭಾವವು ಹುಟ್ಟಿತು. ಅವನಿಗೆ ಕಾಣಿಸಿದ ಭಗವದಾಕೃತಿಗಳೆಲ್ಲವೂ ಅ ಗೋಚರವಾದುವು. ಸುತ್ತಲೂ ತಿರುಗಿ ನೋಡುವಾಗ, ಅನೇಕ ಜನಗ ಳಿಗೆ ಜೀವನಾಶ್ರಯವಾಗಿ, ನಾನಾಬಗೆಯ ವೃಕ್ಷಗಳಿಂದ ನಿಬಿಡವಾದ

ಬೃಂದಾವನಪ್ರದೇಶವೂ, ಅಲ್ಲಿ ಮೊದಲಿದ್ದ ಕರುಗಳೂ, ಅವುಗಳನ್ನು ಕಾಯುತಿದ್ದ ಗೋಪಾಲಬಾಲಕರೂ ಕಾಣಿಸಿಕೊಂಡರು. ಮನಷ್ಯಾದಿಗೂ, ಸಿಂಹಾದಿಕ್ರೂರಜಂತುಗಳಿಗೂ ಸಹಜವೈರವಿದ್ದರೂ, ಅವೆಲ್ಲವೂ ಆ ವೈರಬುದ್ಧಿಯನ್ನು ಮರೆತು, ಮಿತ್ರಭಾವದಿದ ಒಂದಕ್ಕೊಂದು ಸೇರಿ ವಿಹರಿಸುತ್ತಿರುವುದನ್ನೂ ಕಂಡನು. ರಾಜೇಂದ್ರಾ! ಸಾಕ್ಷಾದ್ಭಗವಂತನಿಗೆ ನಿವಾಸಭೂತವಾದ ಸ್ಥಳದಲ್ಲಿ, ಕ್ರೋಧ, ದ್ವೇಷ, ಲೋಭಾದಿದುರ್ಗುಣಗಳು ತಲೆಯೆತ್ತಲಾರವೆಂದು ತಿಳಿ! ಬ್ರಹ್ಮನು ಅಲ್ಲಿ ಸುತ್ತಲೂ ಕಣ್ಣಿಟ್ಟು ನೋಡುತ್ತಿರುವಾಗ, ಮುಂದೆ, ಒಂದಾನೊಂದು ಕಡೆಯಲ್ಲಿ, ಶ್ರೀಕೃಷ್ಣನು ಸಾಮಾನ್ಯಗೋಪಬಾಲಕನಂತೆ ಕೈಯಲ್ಲಿ ತಂಗಳನ್ನದ ಮುದ್ದೆಯನ್ನಿಟ್ಟುಕೊಂಡು,ತನ್ನ ಸ್ನೇಹಿತರನ್ನೂ, ತನ್ನ ಮಂದೆಯ ಕರುಗಳನ್ನೂ ಅಲ್ಲಲ್ಲಿ ಹುಡುಕುತ್ತಿರುವುದನ್ನೂ ಕಂಡನು. ಅಪ್ರಮೇಯಪ್ರಭಾವವುಳ್ಳವನಾಗಿಯೂ, ಅಪರಿಚ್ಛಿನ್ನಜ್ಞಾನಸ್ವರೂಪನಾಗಿಯೂ, ಅನಂತನಾಗಿಯೂ ಇರುವ ಆ ಪರಬ್ರಹ್ಮನೇ ಹೀಗೆ ಗೊಲ್ಲಬಾಲಕನಂತೆ ನಟಿಸುತ್ತ, ಕಾಡಿನಲ್ಲಿ ಸುತ್ತುತ್ತಿರುವುದನ್ನು ಕಂಡೊಡನೆ, ಚತುರ್ಮುಖನು ತಟ್ಟನೆ ತನ್ನ ವಾಹನದಿಂದಿಳಿದು ಮುಂದೆ ಬಂದು, ತನ್ನ ನಾಲ್ಕುಶಿರಸ್ಸುಗಳೂ ಆ ಕೃಷ್ಣನ ಪಾದಗಳಿಗೆ ಸೋಕುವಂತೆ ದಂಡಪ್ರಣಾಮವನ್ನು ಮಾಡಿದನು. ಸುವರ್ಣದಂಡದಂತೆ ಹಾಗೆಯೇ ಸ್ವಲ್ಪಹೊತ್ತಿನವರೆಗೆ ನಿಶ್ಚೇಷ್ಟನಾಗಿ ಬಿದ್ದಿದ್ದನು. ಆ ಕೃಷ್ಣನ ಪಾದಾರವಿಂದಗಳನ್ನು ಅಭಿಷೇಕಿಸುವಂತೆ, ಅವನ ಕಣ್ಣುಗಳಿಂದ ಅವಿಚ್ಛಿನ್ನವಾಗಿ ಆನಂದಬಾಷ್ಪಪ್ರವಾಹವು ಸುರಿಯುತಿತ್ತು. ಆಗ ಬ್ರಹ್ಮನು ಆನಂದಾತಿಶಯದಿಂದ ಮೈಮರೆತು, ಕ್ಷಣಕ್ಷಣಕ್ಕೂ ಮೇಲೇಳುವುದು! ತಿರುಗಿ ಆ ಕೃಷ್ಣನ ಕಾಲಮೇಲೆ ಬಿದ್ದು ಬಹಳಹೊತ್ತಿನವರೆಗೆ ನಮಸ್ಕರಿಸುತ್ತಿರುವುದು! ತಿರುಗಿ ಮೇಲೆದ್ದುನಿಂತು ಕೈಮುಗಿಯುವುದು! ಹೀಗೆ ಬಾರಿಬಾರಿಗೂ ಪ್ರಣಾಮಮಾಡುತ್ತ, ಹಿಂದೆ ತಾನು ಕಂಡ ಆ ಭಗವಂತನ ವಿಶ್ವರೂಪಪ್ರಭಾವವನ್ನು ಮನಸ್ಸಿನಲ್ಲಿ ಭಾವಿಸಿಭಾವಿಸಿ, ಸಂತೋಷದಿಂದುಕ್ಕುತಿದ್ದನು. ಕೊನೆಗೆ ಬ್ರಹ್ಮನು, ಮೆಲ್ಲಗೆ ತನ್ನ ಮನಸ್ಸನ್ನು ಸಮಾಧಾನಸ್ಥಿತಿಗೆ ತಂದುಕೊಂಡು, ಮೇಲೆದ್ದುನಿಂತು, ಕಣ್ಣುಗಳ

ನ್ನೊರೆಸಿಕೊಂಡು, ಆ ಕೃಷ್ಣನ ಮುಖಾರವಿಂದವನ್ನು ನೋಡಿ, ವಿನಯ ದಿಂದ-ತಲೆಯನ್ನು ತಗ್ಗಿಸಿ, ಆ ಕೃಷ್ಣನ ಮುಂದೆ ಬದ್ಧಾಂಜಲಿಯಾಗಿ ನಿಂತು, ಭಯಭಕ್ತಿಗಳಿಂದ ನಡುಗುವ ಗದ್ಗದಸ್ವರದಿಂದ ಹೀಗೆಂದು ಸ್ತುತಿಸುವನು. ಇದು ಹದಿಮೂರನೆಯ ಅಧ್ಯಾಯವು.

ಬ್ರಹ್ಮಕೃತಸ್ತೋತ್ರವು.

“ಲೋಕವಂದಿತನಾದ ಓ ಕೃಷ್ಣಾ ! ನೀನೇ ಸಕಲಜಗತ್ಕಾರಣನಾದ ಪರಮಪುರುಷನಾಗಿದ್ದರೂ, ಸರ್ವಜನಸುಲಭನೆಂಬುದನ್ನು ತೋರಿಸುವುದಕ್ಕಾಗಿ ಈಗ ನೀನು ಈ ರೂಪವನ್ನು ಕೈಕೊಂಡಿರುವೆ ! ಆಹಾ! ಇದನ್ನು ನಾನೇನೆಂದುವರ್ಣಿಸಲಿ! ಕಾಳಮೇಘದಂತೆ ಕಪ್ಪಾದ ಮೈ! ಮಿಂಚಿನಂತೆ ಹೊಳೆಯುವ ಹೊಂಬಣ್ಣದ ಮಡಿ ! ಗುಲಗಂಜಿಯ ಕರ್ಣಾಭರಣದಿಂದಲೂ, ನವಿಲುಗರಿಯ ಶಿಖೆಯಿಂದಲೂ ಅಂದವೇರಿದ ಮುಖದ ಸೊಬಗು ! ಕೊರಲಲ್ಲಿ ಕೊಂಬು ! ಒಂದು ಕಕ್ಷದಲ್ಲಿ ದೊಣ್ಣೆ ! ಮತ್ತೊಂದು ಕಕ್ಷದಲ್ಲಿ ಕೊಳಲು ! ಇಂತಹ ವೇಷದಿಂದ ಗೋಪಾಲಬಾಲನಾಗಿ ನಟಿಸುತ್ತಿರುವ ನಿನಗೆ ನಮಸ್ಕಾರವು.

ಓ ದೇವಾ! ಈಗ ನೀನು ತೋರಿಸುತ್ತಿರುವ ಈ ಗೋಪಾಕೃತಿಯೂ ಕೂಡ, ನಮ್ಮನ್ನು ಅನುಗ್ರಹಿಸುವುದಕ್ಕಾಗಿ,ನೀನು ಸ್ವೇಚ್ಛೆಯಿಂದ ಕೈಕೊಂಡುದೇಹೊರತು, ಇದು ಇತರಪ್ರಾಣಿಗಳ ಶರೀರದಂತೆ ಪಂಚಭೂತಾತ್ಮಕವಾದುದಲ್ಲ!ಮತ್ತು ಇದು ನಿನಗೆ ಕರ್ಮಾಧೀನವಾಗಿ ಬಂದುದೂ ಅಲ್ಲ! ಬ್ರಹ್ಮನಾದ ನಾನೂಕೂಡ, ಈ ನಿನ್ನ ಗೊಲ್ಲವೇಷದ ಮಹಿಮೆಯನ್ನೇ ಹೀಗೆಂದು ಮನಸ್ಸಿನಿಂದಲೂ ತಿಳಿಯಲಾರದೆ ಕಳವಳಿಸುವೆನು. ಹೀಗಿರುವಾಗ ನಿನ್ನ ಪರಸ್ವರೂಪದ ಮಹಿಮೆಯನ್ನು ತಿಳಿಯಬಲ್ಲೆನೆ?

ದೇವಾ ! ಯಾರು ಜ್ಞಾನಯೋಗಕ್ಕಾಗಿ ವಿಶೇಷಶ್ರಮಪಡದೆ, ತಮ್ಮತಮ್ಮ ವರ್ಣಾಶ್ರಮಧರ್ಮಗಳನ್ನುಮಾತ್ರ ನಿನ್ನ ಪಾದಾರ್ಪಣರೂಪವಾಗಿ ತಪ್ಪದೆ ನಡೆಸುತ್ತ, ನಿನಗೆ ಒಂದಾವರ್ತಿ ನಮಸ್ಕರಿಸಿ, ನಿನ್ನಲ್ಲಿ ಶರಣಾಗತರಾಗುವರೋ, ಮತ್ತು ಸತ್ಪುರುಷರು ಮನೋವಾಕ್ಕಾಯಗಳೆಂಬ ತ್ರಿಕರಣಗಳ ಶುದ್ಧಿಯಿಂದ ನಿನ್ನನ್ನು ಕೀರ್ತಿಸತಕ್ಕ ಕಥೆಗಳನ್ನು ಯಾರು ಕಿವಿಯಿಂದ

ಕೇಳುವರೋ, ಅವರಿಗೆ ನೀನು ವಶನಾಗತಕ್ಕವನು ! ಆಹಾ! ನೀನು ಅಜಿತನೆಂಬ ಖ್ಯಾತಿಯನ್ನು ಪಡೆದಿದ್ದರೂ, ವಿಷಯವಿಮುಖರಾದ ಇಂತಹ ಪ್ರಪನ್ನರಿಂದ ಜಯಿಸಲ್ಪಡುವೆ.

ದೇವಾ ! ಮುಕ್ತಿಸಾಧಕವಾದ ಭಕ್ತಿಯೋಗವನ್ನು ಬಿಟ್ಟು, ಆತ್ಮಾನುಭವರೂಪವಾದ ಕೈವಲ್ಯವನ್ನು ಪಡೆಯುವುದಕ್ಕಾಗಿ, ಕೇವಲ ಜ್ಞಾನಯೋಗವನ್ನು ಸಾಧಿಸಬೇಕೆಂದು ಯಾರು ಕಷ್ಟಪಡುವರೋ, ಅವರು, ಕಾಳಿಲ್ಲದ ಬರೀಹೊಟ್ಟನ್ನು ಕುಂದು, ಅದರಲ್ಲಿ ಧಾನ್ಯವನ್ನು ತೆಗೆಯುವುದಕ್ಕಾಗಿ ಶ್ರಮಪಡುವವರಂತೆ ವಿಫಲಪ್ರಯತ್ನರಾಗುವರೇಹೊರತು, ಅವರ ಶ್ರಮಕ್ಕೆ ತಕ್ಕ ಫಲವು ಲಭಿಸಲಾರದು. ಅಂತವರಿಗೆ ಬರೀಕ್ಲೇಶಮಾತ್ರವೇ ಫಲವಲ್ಲದೆ ಬೇರೆಯಲ್ಲ ! ಓ ನಿತ್ಯಾನಂದಮೂರ್ತೀ ! ಈ ಕಾರಣದಿಂದಲೇ ಹಿಂದೆ ಅನೇಕಯೋಗಿಗಳು, ಭಕ್ತಿಯೋಗಕ್ಕೆ ಉಪಕಾರಕವಾಗುವಂತೆಯೇ ಜ್ಞಾನಯೋಗವನ್ನು ಪಡೆದು, ತಮ್ಮ ತಮ್ಮ ವರ್ಣಾಶ್ರಮಧರ್ಮಗಳೆಲ್ಲವನ್ನೂ ನಿನ್ನಲ್ಲಿಯೇ ಅರ್ಪಿಸುತ್ತ; ಆ ಕರ್ಮಬಲದಿಂದ ಲಭಿಸತಕ್ಕುದಾಗಿಯೂ, ಆಗಾಗ ನಿನ್ನ ಕಥೆಯನ್ನು ಕೇಳಿಕೇಳಿ ಪ್ರತ್ಯಕ್ಷೀಕರಿಸಲ್ಪಟ್ಟುದಾಗಿಯೂ ಇರುವ ಆ ಭಕ್ತಿಯಿಂದಲೇ, ನಿನ್ನ ಸ್ವರೂಪಸ್ವಭಾವಗಳನ್ನು ಯಥಾವತ್ತಾಗಿ ಕಂಡುಕೊಂಡು, ಉತ್ತಮಗತಿಯನ್ನು ಹೊಂದಿರುವರು.

ಓ ಮಹಾನುಹಿಮಾ ! ಪ್ರಾಕೃತಗುಣರಹಿತನಾದ ನಿನ್ನ ಮಹಿಮೆಯು, ಶುದ್ಧಾತ್ಮರಾದವರಿಗೂ ತಿಳಿಯಲಾರದೆಂಬುದೇನೋ ನಿಜವು. ಹಾಗಿದ್ದರೂ ಅದನ್ನು ಒಂದೆರಡುಮಾರ್ಗಗಳಿಂದ ಮಾತ್ರ ಸ್ವಲ್ಪವಾಗಿ ತಿಳಿಯಬಹುದು. ಹೇಗೆಂದರೆ, ನಿನಗೆ ಪ್ರಕೃತಿಪುರುಷರಂತೆ ಸ್ವರೂಪಸ್ವಭಾವಗಳಲ್ಲಿ ವಿಕಾರವಿಲ್ಲ ! ಜೀವನಂತೆ ನಿನಗೆ ಕರ್ಮಾಧೀನವಾದ ಶರೀರಸಂಯೋಗವಿಯೋಗಗಳಿಲ್ಲ ! ಜೀವನಿಗೆ ಆತ್ಮಯಾಥಾತ್ಮ್ಯಜ್ಞಾನವಿಲ್ಲದಿರುವುದೇ ರೂಪವತ್ತ್ವಕ್ಕೆ ಕಾರಣವಾಗುವುದು. ನಿನಗೆ ಆತ್ಮಾನುಭವವೆಂಬುದು ನಿಯತವಾಗಿರುವುದರಿಂದ, ಅವನಂತೆ ನೀನು ರೂಪವತ್ತ್ವಕ್ಕೆ ಈಡಾಗುವವನಲ್ಲ ! ಮತ್ತು ನಿನ್ನ ಸ್ವರೂಪವು ನಿನ್ನೊಬ್ಬನಿಗೇ ತಿಳಿಯತಕ್ಕದೇಹೊರತು ಬೇರೊಬ್ಬರಿಗೆ ತಿಳಿಯಲಾರದು! ಈ ವಿಲಕ್ಷಣಗುಣಗಳಿಂದಮಾತ್ರ, ನಿರ್ಮಲಾತ್ಮರಾದ ಯೋಗಿ

ಗಳು ನಿನ್ನನ್ನು ಪ್ರತ್ಯೇಕಿಸಿ ಕಂಡುಕೊಳ್ಳುವರೇಹೊರತು ಅಪರಿಚ್ಛಿನ್ನ ನಾದ ನಿನ್ನ ಸ್ವರೂಪವನ್ನು ಸಂಪೂರ್ಣವಾಗಿ ಯಾರೂ ತಿಳಿಯಲಾರರು.

ದೇವಾ ! ಸಮಸ್ತಕಲ್ಯಾಣಗುಣಾಶ್ರಯವಾದ ನಿನ್ನ ಮಹಿಮೆಯ ನ್ನಾಗಲಿ, ಸ್ವರೂಪವನ್ನಾಗಲಿ ಪೂರ್ಣವಾಗಿ ತಿಳಿಯುವುದಕ್ಕೆ ಯಾರು ತಾನೇ ಶಕ್ತರಾಗುವರು ? ನಿನ್ನ ಪರಸ್ವರೂಪವನ್ನುಮಾತ್ರವೇ ಅಲ್ಲ ! ಲೋಕಕ್ಷೇಮಕ್ಕಾಗಿ ನೀನು ಕೈಕೊಂಡಿರುವ ಈ ವಿಭವಾವತಾರದಲ್ಲಿಯೂ, ನಿನ್ನ ಮಹಿಮೆಯನ್ನು ಇಷ್ಟೆಂದು ಯಾರೂ ನಿರ್ಣಯಿಸಲಾರರು. ಬಹು ಕಾಲದವರೆಗೆ ಪ್ರಯತ್ನಿಸಿ, ಭೂಮಿಯಲ್ಲಿರುವ ರೇಣುಗಳನ್ನಾದರೂ, ಅಂತ ರಿಕ್ಷದಿಂದ ಬೀಳುವ ಹಿಮಕಣಗಳನ್ನಾದರೂ, ಆಕಾಶದಲ್ಲಿ ಬೆಳಗುವ ನಕ್ಷತ್ರ ಗಳನ್ನಾದರೂ ಎಣಿಸಬಲ್ಲ ಮಹಾಬುದ್ಧಿವಂತರೂಕೂಡ, ನಿನ್ನ ಗು ಣಗಳನ್ನು ಲೆಕ್ಕಿಸಲಾರರು. ಹೀಗೆ ನೀನು ಎಣೆಯಿಲ್ಲದ ಮಹಾಮಹಿಮೆ ಯುಳ್ಳವನಾಗಿರುವುದರಿಂದಲೂ, ನಿನ್ನಲ್ಲಿ ಪ್ರಪತ್ತಿಯನ್ನು ಮಾಡಿದವರ ಗಲ್ಲದೆ ನಿನ್ನ ಮಾಯೆಯನ್ನು ದಾಟುವುದು ಅಶಕ್ಯವಾದುದರಿಂದಲೂ, ತ್ರಿಕ ರಣಶುದ್ಧಿಯಿಂದ ನಿನ್ನಲ್ಲಿ ಶರಣಾಗತಿಯನ್ನುಮಾಡಿ, ನಿನ್ನ ಕೃಪೆಯೇ ಸರ್ವವಿಧದಲ್ಲಿಯೂ ಉತ್ತಾರಕವೆಂದು ತಿಳಿದು, ತಮ್ಮ ಪ್ರಾರಬ್ಧಕರ್ಮವ ನ್ನು ಕಳೆಯುವುದಕ್ಕಾಗಿಮಾತ್ರ ಜೀವಿಸತಕ್ಕವರು, ಕೊನೆಗೆ ನಿನ್ನ ಸಾನ್ನಿ ಧ್ಯವನ್ನುಸೇರಿ, ಅಲ್ಲಿ ನಿತ್ಯಮುಕ್ತರೊಡನೆ ಸಮಾನಸುಖವನ್ನನುಭವಿಸುವರು.

ಓ ಸರ್ವೇಶ್ವರಾ ! ನನ್ನ ನೀಚಬುದ್ಧಿಯನ್ನು ನೋಡಿದೆಯಲ್ಲವೆ? ಮಾಯಾವಿಗಳಿಗೂ ಮಾಯಾವಿಯಾಗಿ, ಅನಂತನೆನಿಸಿಕೊಂಡ ಪರಮಾ ತ್ಮನಾದ ನಿನ್ನಲ್ಲಿ ನಾನು ನನ್ನ ಮಾಯೆಯನ್ನು ಹರಡಬೇಕೆಂದು ಯತ್ನಿಸಿದೆ ನು ! ಆಹಾ! ನಿನ್ನಮೇಲೆ ನನ್ನ ಸಾಮರ್ಥ್ಯವನ್ನು ತೋರಿಸಬೇಕೆಂದು ನೋಡಿದೆನಲ್ಲಾ !ಅಗ್ನಿಯಿಂದ ತೂರಿಬರುವ ಸಣ್ಣಕಿಡಿಯಂತೆ, ನಿನ್ನ ಮುಂದೆ ನಾನು ಎಷ್ಟುಮಾತ್ರದವನು ? ಅಚ್ಯುತಾ ! ಕೇವಲರಜೋಗುಣದಿಂದ ಹುಟ್ಟಿದ ನಾನು, ನಿನ್ನ ಮಹಿಮೆಯನ್ನಾದರೂ ತಿಳಿಯಬಲ್ಲೆನೆ ? ನಾನು ಕೇವಲರಾಜಸನಾದುದರಿಂದಲೇ, ನಿನ್ನನ್ನು ಬಿಟ್ಟು ನಾನೇ ಸ್ವತಂ ತ್ರನೆಂಬ ದುರಭಿಪ್ರಾಯವನ್ನಿಟ್ಟುಕೊಂಡು, ಬ್ರಹ್ಮಪದವಿಯಲ್ಲಿರುವೆನೆಂಬ

ಗರ್ವಾಂಧಕಾರದಿಂದ ಕಣ್ಣುಕಾಣದೆ ನಿನ್ನಲ್ಲಿ ಅಪರಾಧಿಯಾದೆನು. ಆದು ದರಿಂದ ದೇವಾ! ಸರ್ವವಿಧದಲ್ಲಿಯೂ ನನಗೆ ನೀನೇ ದಿಕ್ಕೆಂಬುದನ್ನೂ, ನನ್ನ ರಕ್ಷಣಭಾರವು ನಿನ್ನಮೇಲೆಯೇ ಬಿದ್ದಿರುವುದೆಂಬುದನ್ನೂ ನಿನ್ನೊ ಳಗೆ ನೀನೇ ಯೋಚಿಸಿ ನನ್ನ ಅಪರಾಧವನ್ನು ಮನ್ನಿಸಬೇಕು

ದೇವಾ! ನಿನ್ನ ಮುಂದೆ ನಾನೆಷ್ಟುಮಾತ್ರದವನು ? ಪ್ರಕೃತಿ, ಮ ಹತ್ತು, ಅಹಂಕಾರ, ಆಕಾಶ, ವಾಯು, ಅಗ್ನಿ, ಜಲ, ಭೂಮಿ ಎಂಬೀ ಆ ವರಣಗಳೊಡಗೂಡಿದ ಈಬ್ರಹ್ಮಾಂಡವೆಂಬ ಘಟದಲ್ಲಿ ಸೇರಿಕೊಂಡು,ನನ್ನ ಕೈಯಳತೆಯಿಂದ ಏಳುಗೇಣುಗಳ ಉದ್ದವಾದ!ಮೆಯ್ಯುಳ್ಳನಾನೆಲ್ಲಿ?ನೀನೆಲ್ಲಿ? ಇಂತಹ ಅಸಂಖ್ಯಾತಗಳಾದ ಬ್ರಹ್ಮಾಂಡಗಳು,ಗವಾಕ್ಷರಂಧ್ರಗಳಿಂದ ತೂ ರಿಬರುವ ಪರಮಾಣುಕಣಗಳಂತೆ ನಿನ್ನ ರೋಮಕೂಪಗಳಲ್ಲಿ ತೂಗಾಡುತ್ತಿ ರುವುವು. ಈ ನಿನ್ನ ಮಹತ್ವದಮುಂದೆ ನನ್ನ ಸ್ಥಿತಿಯು ಗಣನೆಗೆ ಬರುವುದೆ?

ಓ ಅಧೋಕ್ಷಜಾ ! ಗರ್ಭದಲ್ಲಿರುವ ಶಿಶುವು ಕಾಲಾಡಿಸಿದಮಾತ್ರ ಕ್ಕೆ ಅದು ತಾಯಿಗೆ ಅಪರಾಧಿಯೆನಿಸುವುದೆ ? ಅದರಂತೆಯೇ ನಿನಗೆ ಶಿಶು ಪ್ರಾಯನಾದ ನಾನು, ನಿನ್ನ ವಿಚಾರದಲ್ಲಿ ಮಾಡಿದ ಈ ದೌರ್ಜನ್ಯಕ್ಕಾಗಿ, ನೀನು ನನ್ನನ್ನು ಅಪರಾಧಿಯೆಂದೆಣಿಸಲಾರೆ? "ಒಂದುವೇಳೆ ಗರ್ಭಶಿಶುವಿನಲ್ಲಿ ಅಪರಾಧವು ಎಣಿಸಲ್ಪಡದಿದ್ದರೂ,ಪ್ರವೃದ್ಧನಾದ ಮಗನು ತಾಯಿಯನ್ನೊ ದೆಯುವಂತೆ, ತಿಳುವಳಿಕೆಯುಳ್ಳ ನೀನು ನನ್ನಲ್ಲಿ ಅಪರಾಧಿಯಾಗಬಹುದೆ?" ಎಂದರೆ, ಈಗಲೂ ನಿನಗೆ ನಾನು ಗರ್ಭಶಿಶುವಿನಂತಲ್ಲದೆ ಬೇರೆಯಲ್ಲ. ಏಕೆಂ ದರೆ, ಲೋಕದಲ್ಲಿ ಸದಸತ್ತುಗಳೆಂದು ವ್ಯವಹರಿಸಲ್ಪಡುವ ಚಿದಚಿ ದ್ರೂಪವಾದ ವಸ್ತುಗಳಲ್ಲಿ ಯಾವುದೂ, ಯಾವಾಗಲೂ ನಿನ್ನಗರ್ಭವನ್ನು ಬಿಟ್ಟು ಹೊರಗಿರತಕ್ಕವುಗಳಲ್ಲ ! ಎಲ್ಲವೂ ನಿನ್ನಶರೀರದಲ್ಲಿಯೇ ಐಕ್ಯಹೊಂ ದಿರುವುದರಿಂದ, ಹಿಂದೆಯೂ, ಈಗಲೂ, ಮುಂದೆಯೂ, ನಾನು ನಿನ್ನ ಗರ್ಭಸ್ಥನಲ್ಲದೆ ಬೇರೆಯಲ್ಲ! ಆದುದರಿಂದ ನಿನಗೆ ಗರ್ಭಶಿಶುವಿನಂತಿರುವ ನಾ ನು ಮಾಡಿದ ಅಪರಾಧವನ್ನು ಕ್ಷಮಿಸಬೇಕು.

ಓ ಸರ್ವಲೋಕಜನಕಾ ! ತ್ರೈಲೋಕ್ಯವೂ ಮಹಾಪ್ರಳಯದಲ್ಲಿ ಸಮುದ್ರದಲ್ಲಿ ಮುಳುಗಿ, ಆ ಸಮುದ್ರಗಳೆಲ್ಲವೂ ಏಕಾರ್ಣವವಾಗಿ ಕಲೆತಿ

ದ್ಭಾಗ,ಆ ಪ್ರಳಯಜಲದಲ್ಲಿ ನಾರಾಯಣನ ನಾಭಿಕಮಲದಿಂದಲೇ ನಾನು ಹುಟ್ಟಿದವನೆಂಬುದು ಲೋಕಪ್ರಸಿದ್ಧವಾದ ವಿಚಾರವಲ್ಲವೆ ? ಆದುದರಿಂದ ನಾನು ಸರ್ವೇಶ್ವರನಾದ ನಿನ್ನ ಗರ್ಭದಿಂದ ಬಂದವನೆಂಬುದರಲ್ಲಿ ಸಂದೇಹವೇನಿದೆ ?

"ನೀನು ನಾರಾಯಣನ ಮಗನಾಗಿದ್ದಮಾತ್ರಕ್ಕೆ ನನಗೆ ನಿನಗೆ ಸಂಬಂಧವೇನು?" ಎಂದು ಕೇಳುವೆಯಾ? ಕೃಷ್ಣಾ! ಆ ನಾರಾಯಣನೂ ನೀನಲ್ಲದೆ ಬೇರೆ ಯಾರು ? ನೀನೇ ನನ್ನ ಜನಕನು ನಾರವೆಂದು ಕರೆಯಲ್ಪಡುವ ಸಮಸ್ತದೇಹಿಗಳಿಗೂ ಆಶ್ರಯನಾಗಿ, ನಾರವೆನಿಸುವ ಸಮಸ್ತಲೋಕಕ್ಕೂ ಪ್ರವರ್ತಕನಾಗಿ, ಆ ಸರ್ವಲೋಕಕ್ಕೂ ಸಾಕ್ಷಿಯಾಗಿಯೂ ಇರುವ ನಿನ್ನನ್ನು ನಾರಾಯಣನೆಂದು ಹೇಳುವುದರಲ್ಲಿ ಸಂದೇಹವೇನಿದೆ? ಅಥವಾ (ನಾರವೆಂದು ಕರೆಯಲ್ಪಡುವ)ಪ್ರಳಯಜಲರಾಶಿಯಲ್ಲಿ ಮಲಗಿದ್ದವನೇ ನಾರಾಯಣನೆಂಬ ಲೋಕಪ್ರತೀತಿಯನ್ನೇ ಪ್ರಮಾಣವಾಗಿಟ್ಟುಕೊಂಡು ಯೋಚಿಸಿದರೂ, ಆ ಜಲಶಾಯಿಯಾದ ನಾರಾಯಣನೂ ನಿನ್ನ ಮೂರ್ತಿಯಲ್ಲದೆ ಬೇರೆಯಲ್ಲ !

"ಆದರೆ ಸಮಸ್ತವಿಶ್ವವನ್ನೂ ವ್ಯಾಪಿಸಿರತಕ್ಕವನೇ ನಾರಾಯಣನೆಂದು ವೇದಗಳೆಲ್ಲವೂ ಉದ್ಘೋಷಿಸುವಾಗ, ಆ ವಿಶ್ವದಲ್ಲಿ ಏಕದೇಶವಾದ ಜಲದಲ್ಲಿ ಮಲಗಿದ್ದವನನ್ನು ನಾರಾಯಣವೆಂದು ಹೇಳುವುದು ಹೇಗೆ?" ಎಂದು ಕೇಳುವೆಯಾ? ವಿಭುವಾದ ನಿನ್ನಲ್ಲಿ ಆ ಸರ್ವಲೋಕಾಧಾರತ್ವವೂ, ಆ ಜಲಶಾಯಿತ್ವವೂ ಎರಡೂ ಸತ್ಯವಾಗಿಯೇ ಇರುವುದು. ದೇವಾ ! ಸೃಷ್ಟ್ಯಾರಂಭದಲ್ಲಿ ಸಮಸ್ತಜಗತ್ತಿಗೂ ಆಧಾರವಾದ ನಿನ್ನ ಶರೀರವು, ಆ ಜಗತ್ತಿನಲ್ಲಿ ಏಕದೇಶವಾದ ಜಲದಲ್ಲಿ ನನಗೆ ಕಾಣಿಸಲಿಲ್ಲವೆ? ಆ ಜಲದಲ್ಲಿ ಕಾಣಿಸಿದ ರೂಪವೇ ಕ್ಷಣಕಾಲದಮೇಲೆ ನನ್ನ ಹೃದಯದಲ್ಲಿ ಕಾಣಿಸಲಿಲ್ಲವೆ? ಆ ನನ್ನ ಹೃದಯದಲ್ಲಿ ಗೋಚರಿಸಿದ ರೂಪವೇ ಕ್ಷಣಕಾಲದಮೇಲೆ ಅದೃಶ್ಯವಾಗಲಿಲ್ಲವೆ? ನಿನ್ನಲ್ಲಿ ವಿಭುತ್ವ (ಸರ್ವವ್ಯಾಪಿತ್ವ) ವಿಲ್ಲದಿದ್ದರೆ, ಈ ವಿಚಿತ್ರವ್ಯಾಪಾರಗಳು ಹೇಗೆ ನಡೆಯುತಿದ್ದುವು ? "ಆದರೆ ಪ್ರಳಯಕಾಲದಲ್ಲಿ ನಡೆದ ಈ ವ್ಯಾಪಾರಗಳೆಲ್ಲವೂ ಆಗಿದ್ದ ಅನಿರುದ್ಧಮೂ

ರ್ತಿಯಿಂದಾದುವೇಹೊರತು ನಾನು ಮಾಡಿದುದೇನು?" ಎಂದು ಕೇಳು ವೆಯಾ? ಆ ಅನಿರುದ್ಧಮೂರ್ತಿಯೂ ನೀನಲ್ಲದೆ ಬೇರೆ ಯಾರು ?

ಆಗಿನ ವೃತ್ತಾಂತವೂ ಹೋಗಲಿ! ಈಗ ನೀನು ಈ ಸಾಮಾನ್ಯಮನುಷ್ಯಾ ವತಾರವನ್ನೆತ್ತಿರುವಾಗಲೂಕೂಡ, ಹೊರಗೆ ಕಾಣಿಸುತ್ತಿರುವ ಈ ಪ್ರಪಂ ಚವೆಲ್ಲವನ್ನೂ ನಿನ್ನ ತಾಯಿಯಾದ ಯಶೋದೆಗೆ ನಿನ್ನ ಜಠರದಲ್ಲಿ ಯೇ ತೋರಿಸಿದೆಯಲ್ಲವೆ? ಇದು ನಿನ್ನ ಆಶ್ಚರ್ಯಶಕ್ತಿಯಲ್ಲದೆ ಬೇರೇನು? ಚಿದ ಚಿದಾತ್ಮಕವಾದ ಪ್ರಪಂಚವೆಲ್ಲವೂ ಹೊರಗೆ ನಮ್ಮ ಕಣ್ಣಿಗೆ ಹೇಗೆ ಗೋ ಚರಿಸುತ್ತಿರುವುದೋ, ಅದೇರೀತಿಯಲ್ಲಿ, ಇವೆಲ್ಲವೂ ನಿನ್ನೊಡನೆಯೂ,ನನ್ನೊ ಡನೆಯೂ ನಿನ್ನ ಉದರದಲ್ಲಿ ಕಾಣಿಸಿತಲ್ಲವೆ? ಇದು. ನಿನ್ನಮಾಯೆಯಲ್ಲವೆ ?

"ನಾನು ನನ್ನ ತಾಯಿಗೆ ನನ್ನ ಜಠರದಲ್ಲಿ ಸಮಸ್ತವಿ ಶ್ವವನ್ನೂ ತೋರಿಸಿದೆನೆಂಬುದರಲ್ಲಿ ನಿಶ್ಚಯವೇನು? ಅದನ್ನು ಬೇರೆಯಾ ರೂ ಕಂಡವರಿಲ್ಲವಷ್ಟೆ?" ಎಂದು ಹೇಳುವೆಯಾ ? ಆ ವಿಚಾರವೂ ಹೋ ಗಲಿ! ಈಗಲೇ ನೀನು ನನಗೂ ನಿನ್ನ ವಿಚಿತ್ರಶಕ್ತಿಯನ್ನು ತೋರಿಸಿದೆಯ ಲ್ಲವೆ ? ಮೊದಲು ನಾನು ನಿನ್ನ ಕರುಗಳನ್ನೂ, ನಿನ್ನ ಸ್ನೇಹಿತರಾದ ಗೋ ಪಬಾಲಕರನ್ನೂ ಕದ್ದುಯ್ಯುವಾಗ, ನೀನೊಬ್ಬನೇ ನನ್ನ ಕಣ್ಣಿಗೆ ಕಾಣಿಸು ತಿದ್ದೆ! ನಾನು ಅವುಗಳನ್ನು ಅಪಹರಿಸಿಕೊಂಡು ಹೋದಮೇಲೆ, ನೀನೇ ಆ ಗೋಪಬಾಲಕರಂತೆಯೂ, ಕರುಗಳಂತೆಯೂ ಅನೇಕಾಕಾರಗಳಿಂದ ಕಾಣಿಸಿಕೊಂಡೆ! ನಾನು ನೋಡುತಿದ್ದಹಾಗೆಯೇ ಸ್ವಲ್ಪಹೊತ್ತಿನಮೇ ಲೆ, ಆ ಆಕೃತಿಗಳನ್ನು ಶಂಖಚಕ್ರಾದಿ ಲಾಂಛನಗಳೊಡಗೂಡಿದ ನಾಲ್ಕು ಭುಜಗಳುಳ್ಳ ನಿನ್ನ ಪರಸ್ವರೂಪಕ್ಕೆ ಮಾರ್ಪಡಿಸಿ ಆ ರೂಪಗಳನ್ನು ನನ್ನೊಡನೆ ಸಮಸ್ತಚರಾಚರಗಳೂ ಉಪಾಸನೆಮಾಡುತ್ತಿರುವಂತೆ ಕಾಣಿ ಸಿದೆ! ಒಡನೆಯೇ ಆ ರೂಪಗಳೆಲ್ಲವನ್ನೂ ಸಕಲಜಗದಾತ್ಮಕವಾದ ವಿರಾ ಡ್ರೂಪದಿಂದ ನನ್ನ ಕಣ್ಣಿಗೆ ತೋರಿಸಿದೆ ! ಕೊನೆಗೆ ಅವೆಲ್ಲವನ್ನೂ ಮರೆಸಿ ಕೊಂಡು, ಮೊದಲಿನಂತೆ ಕೈಯಲ್ಲಿ ಅನ್ನದುಂಡೆಯನ್ನು ಹಿಡಿದು, ಕೃಷ್ಣ ನೆಂಬ ಒಂದೇರೂಪದಿಂದ ಕಾಣಿಸಿಕೊಳ್ಳುತ್ತಿರುವೆ ? ಇವೆಲ್ಲವೂ ನಿನ್ನ ಮಾಯಾಶಕ್ತಿಯಲ್ಲವೆ? ನೀನು ವಿಭುವೆಂಬುದರಲ್ಲಿ ಸಂದೇಹವೇನು ?

"ಅದರೆ ಲೋಕದಲ್ಲಿ ಬೇರೆ ಯಾರೂ ಇದನ್ನು ನೋಡಿದವರಿಲ್ಲವಲ್ಲಾ." ಎಂದು ಕೇಳುವೆಯಾ? ದೇಹಾತ್ಮಭ್ರಮದಿಂದ ನಿನ್ನ ತತ್ವವನ್ನು ತಿಳಿಯದವರಿಗೆ ಇವೆಲ್ಲವೂ ಹೇಗೆತಾನೇ ತಿಳಿಯುವುವು? ನಿನ್ನ ಮಾಯೆಯಿಂದಲೇ ಅವರನ್ನು ಮೋಹಗೊಳಿಸಿ, ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕ್ರಮವಾಗಿ ನನ್ನನ್ನೂ, ನಿನ್ನನ್ನೂ, ರುದ್ರನನ್ನೂ ಸ್ವತಂತ್ರನಿರ್ವಾಹಕರೆಂಬ ಭ್ರಾಂತಿಯನ್ನುಂಟುಮಾಡುವೆ. ತತ್ವಜ್ಞರಾದರೋ ನೀನೇ ಈ ಎಲ್ಲಾರೂಪಗಳಿಂದ ಎಲ್ಲಾಕಾರ್ಯಗಳನ್ನೂ ನಡೆಸತಕ್ಕವನೆಂದುಚೆನ್ನಾಗಿತಿಳಿದಿರುವರು.

ದೇವಾ! ನೀನು ಕರ್ಮಾಧೀನವಾದ ಜನನವಿಲ್ಲದವನಾಗಿದ್ದರೂ, ದೇವತಿರ್ಯಙ್ಮನುಷ್ಯಾದಿರೂಪಗಳಿಂದ ಬೇರೆಬೇರೆ ಅವತಾರಗಳನ್ನೆತ್ತುವುದು ದುಷ್ಟನಿಗ್ರಹಶಿಷ್ಟಪರಿಪಾಲನಕ್ಕಲ್ಲದೆ ಬೇರೆಯಲ್ಲ! ಓ ಅದ್ಭುತಮಹಿಮೆಯುಳ್ಳ ಪರಮಾತ್ಮಾ! ಯೋಗೀಶ್ವರಾ! ನೀನು ಹೀಗೆ ಲೋಕರಕ್ಷಣಕ್ಕಾಗಿ ಆಗಾಗ ಅನೇಕಾವತಾರಗಳನ್ನೆತ್ತುತಿದ್ದರೂ, ಎಲ್ಲಿ, ಯಾವಾಗ, ಯಾವರೀತಿಯಲ್ಲಿ, ಯಾವ ಉದ್ದೇಶದಿಂದ, ಎಷ್ಟುವಿಧವಾಗಿ ಅವತಾರವನ್ನೆತ್ತಿರುವೆಯೆಂಬುದನ್ನು ಕಂಡುಕೊಳ್ಳುವುದಕ್ಕೆ ಯಾರೂ ಸಮರ್ಥರಲ್ಲ! ಹೀಗೆ ಐಶ್ವರ್ಯಶಕ್ತಿಯಿಂದ ಆಟವಾಡುತ್ತಿರುವ ನಿನ್ನ ಮಹಿಮೆಯನ್ನುಯಾರುಬಲ್ಲರು!

ದೇವಾ! ಲೋಕದಲ್ಲಿ ನಿನ್ನನ್ನು ಬಿಟ್ಟು ಬೇರೆ ಸ್ವತಂತ್ರವಸ್ತುವೊಂದೂ ಇಲ್ಲ. ಪ್ರಪಂಚವೆಲ್ಲವೂ ಸೃಷ್ಟಿಗೆ ಮೊದಲೂ ನಿನ್ನಲ್ಲಿಯೇ ಐಕ್ಯವಾಗಿರುವುದು. ಆಮೇಲೆ ನಿನ್ನ ಸಂಕಲ್ಪರೂಪಜ್ಞಾನದಿಂದ ಆ ನಿನ್ನ ಶರೀರವೇ ದೃಶ್ಯಪ್ರಪಂಚರೂಪವಾಗಿ ವಿಸ್ತರಿಸುವುದು. ಕೊನೆಗೆ ಪ್ರಳಯಕಾಲದಲ್ಲಿ ನಿನ್ನಲ್ಲಿಯೇ ತಿರುಗಿ ಲಯಿಸುವುದು. ಆದುದರಿಂದ ಚರಾಚರಾತ್ಮಕವಾದ ಈಪ್ರಪಂಚಕ್ಕೆ ನಿನ್ನನ್ನು ಬಿಟ್ಟು ಪ್ರತ್ಯೇಕವಾದ ಸ್ಥಿತಿಯೇ ಇಲ್ಲ. ಮತ್ತು ಈ ಪ್ರಪಂಚವು ಅನೇಕದುಃಖಗಳಿಗೆ ನೆಲೆಯಾಗಿರುವುದು. ಸ್ವಪ್ನಸಮಾನವಾಗಿ ಅಸ್ಥಿರವಾಗಿರುವುದು. ಎಡೆಬಿಡದೆ ವಿಕಾರಹೊಂದುತ್ತಿರುವುದು. ಆದುದರಿಂದ ಇದು ಅಸತ್ತೆನಿಸುವುದು. ಹೀಗೆ ಪ್ರಪಂಚವೆಂಬುದು ಅಸತ್ತೆನಿಸಿಕೊಂಡಿದ್ದರೂ, ನಿನ್ನ 'ಮಾಯೆಯಿಂದ ಮೋಹಿತರಾದವರು ಇದನ್ನು ಸತ್ತೆಂದೇತಿಳಿದು ಭ್ರಮಿಸುವರು.

ಆದರೆ ಹೀಗೆ ಅಸತ್ತಾದ ಈ ಜಗತ್ತೇ,ನಿನಗೆ ಶರೀರವೆನಿಸಿದ್ದರೂ, ನೀನು ಅಸತ್ತೆನಿಸುವುದಿಲ್ಲ. ಏಕೆಂದರೆ ನೀನು ಚೇತನಾಚೇತನಾತ್ಮಕವಾದ ಈ ಜಗತ್ತಿಗಿಂತಲೂ ವಿಲಕ್ಷಣನು. ಪ್ರಕೃತಿಯಂತೆ ನಿನಗೆ ಸ್ವರೂಪವಿಕಾರವಿಲ್ಲ! ಜೀವನಿಗಿರುವಂತೆ ನಿನಗೆ ಜ್ಞಾನಸಂಕೋಚವಿಲ್ಲ'! ಮುಕ್ತಜೀವರೂ ಹಿಂದೊಮ್ಮೆ ಸಂಕುಚಿತಜ್ಞಾನವುಳ್ಳವರಾಗಿಯೇ ಇದ್ದುದರಿಂದ, ಅವರಿಗಿಂತಲೂ ನೀನು ವಿಲಕ್ಷಣನು. ಏಕೆಂದರೆ ನಿನ್ನ ಜ್ಞಾನಕ್ಕೆ ಎಂದಿಗೂ ಸಂಕೋಚವಿದ್ದುದಿಲ್ಲ ನೀನು ಸ್ವಯಂಪ್ರಕಾಶಸ್ವರೂಪನು. ಎಂದಿಗೂ ಜ್ಞಾನಸಂಕೋಚವಿಲ್ಲದ ನಿತ್ಯಸಿದ್ಧರು, ಸ್ವಭಾವದಲ್ಲಿ ಅಪರಿಚ್ಛಿನ್ನರಾಗಿದ್ದರೂ ಸ್ವರೂಪಪರಿಚ್ಛೇದವುಳ್ಳವರಾದುದರಿಂದ, ಸ್ವರೂಪಸ್ವಭಾವಾದಿಪರಿಚ್ಛೇದವಿಲ್ಲದ ನೀನು ಆ ನಿತ್ಯಮುಕ್ತರಿಗಿಂತಲೂ ವಿಲಕ್ಷಣನು. ಮತ್ತು ಜೀವನಂತೆ ನಿನಗೆ ಕರ್ಮಾಧೀನವಾದ ಜನನಮರಣಗಳಿಲ್ಲ ಕರ್ಮಾಯತ್ತವಾದ ದೇಹಸಂಬಂಧವೂ ಇಲ್ಲ ಪ್ರಾಕೃತಜೀವರಿಗಿರುವಂತೆ ನಿನಗೆ ಪುಣ್ಯಪಾಪಸಂಬಂಧವಿಲ್ಲದುದರಿಂದ ನಿರಂಜನನೆನಿಸುವೆ?ಪ್ರಕೃತಿಯಂತೆ ನಿನಗೆ ಕ್ಷರಣಸ್ವಭಾವವಿಲ್ಲದುದರಿಂದ ಅಕ್ಷರನೆನಿಸುವೆ: ಕಾಲಪರಿಚ್ಛೇದವಿಲ್ಲದುದರಿಂದ ನೀನು ನಿತ್ಯನು ! ದೇಶಪರಿಚ್ಛೇದವಿಲ್ಲದುದರಿಂದ ಪೂರ್ಣನು! ವಸ್ತುಪರಿಚ್ಛೇದವಿಲ್ಲದುದರಿಂದ ಅದ್ವಯನು! ಹೀಗೆ ಪ್ರಕೃತಿಪುರುಷವಿಲಕ್ಷಣನಾದುದರಿಂದ ನೀನು ನಿತ್ಯಾನಂದಮಯನಾಗಿ ಬೆಳಗುವೆ.

“ನಿರ್ವ್ಯಾಪಾರನಾದವನಿಗೆ ಜಗತ್ಕಾರಣತ್ವವು ಹೇಗೆ” ಎಂದರೆ, ಸೃಷ್ಟಿಗೆಮೊದಲು ನಾಮರೂಪವಿಭಾಗಗಳಿಲ್ಲದ ಸಮಸ್ತಚಿದಚಿತ್ತುಗಳನ್ನೂ ಶರೀರವಾಗಿ ಹೊಂದಿ,ನೀನೊಬ್ಬನೇ ಒಬ್ಬನಾಗಿದ್ದು,ಆ ನಿನ್ನ ಶರೀರದಿಂದಲೇ ಈ ಪ್ರಪಂಚವನ್ನು ವಿಸ್ತರಿಸಿದವನಾದುದರಿಂದ, ಈ ಪ್ರಪಂಚಕ್ಕೆ ನೀನೇ ಉಪಾದಾನಕಾರಣವೆನಿಸುವೆ ಮತ್ತು ನೀನು, ನಿನಗೆ ಶರೀರಭೂತಗಳಾದ ಆ ಪ್ರಕೃತಿಪುರುಷಕಾಲಾದಿಗಳನ್ನು ಕಂಡುಕೊಳ್ಳತಕ್ಕ ಆತ್ಮನಾಗಿಯೂ ಇರುವುದರಿಂದ, ಈ ಜಗತ್ತಿಗೆ ನಿಮಿತ್ತಕಾರಣವೂ ನೀನೇ ! ಹೀಗಿರುವಾಗ ನಿನ್ನನ್ನುಬಿಟ್ಟು ಈ ಜಗತ್ತಿಗೆ ಬೇರೆ ಯಾರನ್ನು ಕಾರಣವೆಂದು ಹೇಳಬಹುದು?

ದೇವಾ ! ಯಾರು, ಅಜ್ಞಾನಾಂಧಕಾರವನ್ನು ನೀಗಿಸತಕ್ಕ ಗುರುವೆಂಬ ಸೂರ್ಯನಿಂದ ಜ್ಞಾನಪ್ರಕಾಶವನ್ನು ಪಡೆದು, ಹೃದಯಗುಹೆಯಲ್ಲಿರತಕ್ಕ ನಿನ್ನನ್ನು ಕಂಡುಕೊಳ್ಳುವರೋ, ಅವರೇ ಪಾಪಪುಣ್ಯಪ್ರಚುರವಾದ ಸಂಸಾರವೆಂಬ ಮಹಾಸಾಗರವನ್ನು ದಾಟಬಲ್ಲರು.

ದೇವಾ ! ನೀನು ಸರ್ವಜೀವಾಂತರ್ಯಾಮಿಯೆಂಬುದನ್ನು ನಿಜವಾಗಿ ತಿಳಿದು ಉಪಾಸನೆಮಾಡಲಾರದವರಿಗೆ, ಆ ಅಜ್ಞಾನವೇ ಸಂಸಾರವನ್ನು ತಗುಲುಕಟ್ಟುವುದು. ಅಂತರಾತ್ಮನಾದ ನಿನ್ನನ್ನು ತಮ್ಮ ಹೃದಯದಲ್ಲಿಯೇ ಸಾಕ್ಷಾತ್ಕರಿಸಬಲ್ಲವರಿಗೆ, ತಮ್ಮ ದೇಹದಲ್ಲಿ ಆತ್ಮಾಭಿಮಾನವೂ, ಆತ್ಮದಲ್ಲಿ ಸ್ವತಂತ್ರಾಭಿಮಾನವೂ ಬಿಟ್ಟುಹೋಗುವುದರಿಂದ, ಅವರು ಸಂಸಾರವಿಮುಕ್ತರಾಗುವರು. ಹಗ್ಗವನ್ನು ನೋಡಿದಾಗ,ಅದನ್ನು ಹಗ್ಗವೆಂದು ತಿಳಿಯಲಾರದವರಿಗೇ,ಅದರಲ್ಲಿ ಹಾವೆಂಬ ಭ್ರಾಂತಿಯು ಹುಟ್ಟುವುದೇಹೊರತು, ಹಗ್ಗವೆಂದು ತಿಳಿದಮೇಲೆ ಆ ಭ್ರಾಂತಿಯೂ ಬಿಟ್ಟುಹೋಗವುದಲ್ಲವೆ ? ಅದರಂತೆಯೇ ಸಂಸಾರಬಂಧಕ್ಕೂ, ಮೋಕ್ಷಕ್ಕೂ ಪರಮಾತ್ಮೋಪಾಸನಾರೂಪವಾದ ಜ್ಞಾನವಿಲ್ಲದಿರುವಿಕೆಯೂ, ಆ ಜ್ಞಾನೋದಯವೂ ಇವೆರಡೇ ಮೂಲವೆನಿಸುವುವು. ಹೀಗಿರುವುದರಿಂದ, ವೇದಾಂತಪ್ರಮಾಣಗಳಮೂಲಕವಾಗಿ ದೇಹಾತ್ಮ ಭ್ರಮರೂಪವಾದ ಅಜ್ಞಾನವನ್ನು ತೊಲಗಿಸಿ, ಜ್ಞಾನಸ್ವರೂಪವಾದ ಜೀವಾತ್ಮನಿಗೂ ಅಂತರಾತ್ಮನಾದ ನಿನ್ನನ್ನು ತಮ್ಮಲ್ಲಿಯೇ ತಾವು ಸಾಕ್ಷಾತ್ಕರಿಸಬಲ್ಲವರಿಗೆ, ಸೂರ್ಯೋದಯದಲ್ಲಿ ಅಂಧಕಾರವು ಹೇಗೋ ಹಾಗೆ ಆ ಸಂಸಾರವೆಂಬುದು ಬಿಟ್ಟುಹೋಗುವುದು.

ಇದನ್ನು ತಿಳಿಯಲಾರದ ಕೆಲವು ಮೂಢರು, ಪ್ರಕೃತಿ ಪುರುಷರಿಗಿಂತಲೂ ವಿಲಕ್ಷಣನಾಗಿಯೂ, ಅವೆರಡಕ್ಕೂ ಅಂತರ್ಯಾಮಿಯಾಗಿ ಧರಿಸಿರತಕ್ಕವನಾಗಿಯೂ ಇರುವ ನಿನ್ನನ್ನೇ, ತಮ್ಮ ದೇಹದೊಳಗಿನ ಪ್ರತ್ಯಗಾತ್ಮನನ್ನಾಗಿಯೂ, ಆ ಪ್ರತ್ಯಗಾತ್ಮನನ್ನೇ ದೇಹವನ್ನಾಗಿಯೂ ಭಾವಿಸಿ, ಪರಮಾತ್ಮನಾದ ನಿನ್ನನ್ನು ಹೊರಗೆಲ್ಲಾ ಹುಡುಕುತ್ತಿರುವರು. ಕಕ್ಷದಲ್ಲಿ ಎತ್ತಿಕೊಂಡಿರುವ ಮಗುವನ್ನು ಕೇರಿಕೇರಿಗಳಲ್ಲಿ ಹುಡುಕುವಂತೆ, ತಮ್ಮ ಹೃದಯದಲ್ಲಿಯೇ ಕಾಣಬಹುದಾದ ನಿನ್ನನ್ನು ಹೊರಗೆ ಹುಡುಕುವವರ ಅಜ್ಞತೆಯನ್ನೇನೆಂದು ಹೇಳಬಹುದು ?

ಓ ಅನಂತಾ! ತತ್ವಜ್ಞರು, ತಮ್ಮ ಶರೀರದಲ್ಲಿರುವ ಜೀವಾತ್ಮಪರ್ಯಂತವಾದ ಇಪತ್ತೈದುತತ್ವಗಳಿಗಿಂತಲೂ ವಿಲಕ್ಷಣನಾಗಿ, ಅಲ್ಲಿಯೇ· ನೆಲೆಗೊಂಡಿರುವ ನಿನ್ನ ಸ್ವರೂಪವನ್ನು ಬೇರೆಯಾಗಿ ತಿಳಿದು, ಆ ಇತರ ತತ್ವಗಳಲ್ಲಿ ಅಭಿಮಾನವನ್ನು ಬಿಟ್ಟು ನಿನ್ನನ್ನೇ ಉಪಾಸಿಸುವರು. ವಿವೇಕಿಯಾದವನು, ತನ್ನ ಸಮೀಪದಲ್ಲಿ ಬಿದ್ದಿರುವ ಹಗ್ಗವನ್ನು ನೋಡಿ,ಅದರ ನಿಜಸ್ಥಿತಿಯನ್ನು ತಿಳಿದುಕೊಂಡಮೇಲೆ, ಅದನ್ನು ಹಾವೆಂದು ಭ್ರಮಿಸುವನೆ? ಎಂದಿಗೂ ಇಲ್ಲ. ಅದರಂತೆಯೇ ಜೀವಪ್ರಕೃತಿಗಳಿಗಿಂತಲೂ ವಿಲಕ್ಷಣನಾದ ನೀನು ಜೀವಾಂತರ್ಯಾಮಿಯಾಗಿ ತಮ್ಮ ದೇಹದಲ್ಲಿರುವುದನ್ನು ನಿಜಜ್ಞಾನದಿಂದ ತಿಳಿದವರಿಗೆ, ನಿನ್ನಲ್ಲಿ ಜಡಜೀವವೆಂಬ ಬುದ್ಧಿಯು ಹೇಗೆ ತಾನೇ ಹುಟ್ಟುವುದು ?

" ಈ ಪರಮಾತ್ಮಜ್ಞಾನವೆಂಬ ವಿವೇಕವು ಹುಟ್ಟುವುದಕ್ಕೆ ಉಪಾಯವಾವುದು " ಎಂದು ಕೇಳುವೆಯಾ ? ಆ ವಿವೇಕಜ್ಞಾನವು ಹುಟ್ಟುವುದಕ್ಕೂ ನಿನ್ನ ಅನುಗ್ರಹವೇ ಕಾರಣವಲ್ಲದೆ ಬೇರೆಯಲ್ಲ. ನಿನ್ನ ಪಾದಾರವಿಂದಗಳ ಅನುಗ್ರಹಕ್ಕೆ ಪಾತ್ರರಾದವರೇ ನಿನ್ನ ಮಹಿಮೆಯನ್ನು ಯಥಾಸ್ಥಿತವಾಗಿ ಕಂಡುಕೊಳ್ಳುವರು. ಆ ನಿನ್ನ ಅನುಗ್ರಹಕ್ಕೆ ಪಾತ್ರರಾಗದವರು, ಎಷ್ಟೋ ಶಾಸ್ತ್ರಗಳನ್ನೋದಿ, ಏಕಾಂತಸ್ಥಳದಲ್ಲಿ ಕುಳಿತು,ಬಹುಕಾಲದವರೆಗೆ ಚಿಂತಿಸುತಿದ್ದರೂ ನಿಜಸ್ಥಿತಿಯನ್ನು ಕಂಡುಕೊಳ್ಳಲಾರರು. ಆದುದರಿಂದ ಓ ದೇವಾ ! ನಿನ್ನ ಅನುಗ್ರಹವೇ ವಿವೇಕಹೇತುವಾದುದರಿಂದ, ನನಗೆ ಬ್ರಹ್ಮಪದವಿಯಲ್ಲಿರುವ ಈ ಜನ್ಮದಲ್ಲಿಯಾಗಲಿ, ಬೇರೆ ದೇವಮನುಷ್ಯಾದಿಜನ್ಮಗಳಲ್ಲಿಯಾಗಲಿ,ಕೊನೆಗೆ ತಿರ್ಯಗ್ಜನ್ಮಗಳಲ್ಲಿ ಹುಟ್ಟಬೇಕಾದ ಸಂದರ್ಭದಲ್ಲಿಯಾಗಲಿ, ನಿನ್ನ ಭಕ್ತವರ್ಗದಲ್ಲಿ ಒಬ್ಬನಾಗಿದ್ದು, ನಿನ್ನ ಪಾದಸೇವೆಯನ್ನು ಮಾಡುತ್ತಿರುವ ಮಹಾಭಾಗ್ಯವು ಲಭಿಸುವಂತೆ ಅನುಗ್ರಹಿಸಬೇಕು! ಇದೇ ನನ್ನ ಕೋರಿಕೆ !

ನಾಥಾ ! ನಾನೂ, ನನ್ನಂತೆ ಇನ್ನೂ ಅನೇಕರೂ, ಇದುವರೆಗೆ ಎಷ್ಟೋ ಯಾಗಗಳನ್ನು ಮಾಡಿಯೂ, ನಿನ್ನನ್ನು ತೃಪ್ತಿಪಡಿಸಲಾರದಿರುವೆವು. ಅಂತಹ ನೀನು ಈಗ ಗೊಲ್ಲಮಕ್ಕಳಂತೆಯೂ, ಕರುಗಳಂತೆಯೂ ಆಕಾರವನ್ನು ತಾಳಿ, ಅಮೃತಸಮಾನವಾದ ಯಾರ ಮೊಲೆಹಾಲನ್ನು ಪ್ರೀ

ತಿಯಿಂದ ಕುಡಿದೆಯೋ, ಆ ಗೋಪಸ್ತ್ರೀಯರೂ, ಆ ಗೋವುಗಳೂ ಎಂತಹ ಭಾಗ್ಯಶಾಲಿಗಳು ! ಆಹಾ ! ನಂದಗೋಕುಲದವರ ಭಾಗ್ಯವೇ ಭಾಗ್ಯವು ! ಪರಮಾನಂದ ಸ್ವರೂಪನೂ, ಪರಿಪೂರ್ಣನೂ, ಆದ ಪರಬ್ರಹ್ಮನೇ ಯಾರಿಗೆ ಸ್ನೇಹಿತನಾಗಿರುವನೋ, ಆ ಗೋಕುಲವಾಸಿಗಳಲ್ಲವೇ ಪರಮ ಧನ್ಯರು !

ಅಥವಾ ಆ ನಂದಾದಿಗಳ ಮಾತು ಹಾಗಿರಲಿ ! ಅಂತರಂಗಚತುಷ್ಟಯದಲ್ಲಿ ಅಹಂಕಾರಕ್ಕೆ ಅಧಿಷ್ಠಾನದೇವತೆಯಾದ ಶಿವನೂ, ಮನಸ್ಸು, ಬುದ್ಧಿ, ಚಿತ್ತ, ವೆಂಬವುಗಳಿಗೆ ಅಧಿಷ್ಠಾತೃಗಳಾದ ಚಂದ್ರಾದಿದೇವತೆಗಳೂ, ವಾಕ್ಕು ಮೊದಲಾದ ದಶೇಂದ್ರಿಯಗಳಿಗೆ ಅಧಿಷ್ಠಾತೃಗಳೆನಿಸಿಕೊಂಡ ವರುಣನೇ ಮೊದಲಾಗಿ ಹನ್ನೊಂದುಮಂದಿಯೂ ಸೇರಿ, ಈ ನಾವು ಹದಿನಾಲ್ಕುಮಂದಿಯೂ, ಒಂದೊಂದು ಇಂದ್ರಿಯವನ್ನು ಮಾತ್ರ ಪಾತ್ರವಾಗಿಟ್ಟುಕೊಂಡು, ಆಗಾಗ ನಿನ್ನ ಪಾದಾರವಿಂದದ ಮಕರಂದವೆಂಬ ಅಮೃತವನ್ನು ಸೇವಿಸಬಲ್ಲೆವು. ಹೀಗೆ ಒಂದೊಂದು ಇಂದ್ರಿಯಕ್ಕೆ ಅಭಿಮಾನಿಗಳಾದ ನಾವೇ, ನಿನ್ನ ಕೀರ್ತಿಸೌಂದರ್ಯಾದಿಗಳನ್ನು ಅಲ್ಪಸ್ವಲ್ಪವಾಗಿ ಸೇವಿಸಿ ಅದರಿಂದಲೇ ಕೃತಾರ್ಥರಾಗುತ್ತಿರುವಾಗ, ನಿನ್ನೊಡನೆ ಅನವರತವೂ ಕಲೆತಿದ್ದು, ಸರ್ವೇಂದ್ರಿಯಗಳಿಂದಲೂ ನಿನ್ನನ್ನು ಅನುಭವಿಸುತ್ತಿರುವ ಈ ಗೊಲ್ಲರ ಭಾಗ್ಯವನ್ನು ಎಷ್ಟೆಂದು ಹೇಳಬಹುದು. ? ಆದುದರಿಂದ ಓ ಕೃಷ್ಣಾ ! ಈಗ ನಾನು ಕೋರತಕ್ಕ ಭಾಗ್ಯವೆಲ್ಲವೂ ಇದೊಂದೇ ! ನನಗೆ ಈಗಿರುವ ಬ್ರಹ್ಮಪದವಿಗಾಗಿಯೂ ನಾನು ಸಂತೋಷಿಸತಕ್ಕವನಲ್ಲ ! ವೇದಾಂತಗಳು ಇದುವರೆಗೂ ಹುಡುಕುತಿದ್ದರೂ ಯಾವನ ಪಾದರಜಸ್ಸನ್ನೂ ಕೂಡ ಕಾಣಲಾರದಿರುವುವೋ, ಅಂತಹ ಪರಮಪುರುಷನಾದ ನಿನ್ನನ್ನೇ ಸರ್ವವಿಧಜೀವನವನ್ನಾಗಿ ಪಡೆದಿರುವ ಈ ಗೋಕುಲವಾಸಿಗಳಲ್ಲಿ, ಯಾವನಾದರೂ ಒಬ್ಬಗೊಲ್ಲನ ಪಾದರಜಸ್ಸನ್ನು ನಾನು ತಲೆಯಲ್ಲಿ ಧರಿಸುವಂತೆ ನನಗೆ ಈ ಭೂಲೋಕದಲ್ಲಿ, ಈ ವನಮಧ್ಯದಲ್ಲಿ, ಅದರಲ್ಲಿಯೂ ಈ ಮಂದೆಯಲ್ಲಿ, ಮನುಷ್ಯಜನ್ಮವುಂಟಾಗುವಂತೆ ಅನುಗ್ರಹಿಸಿದರೆ, ಅದೇ ನನ್ನ ಪರಮಭಾಗ್ಯವೆಂದೆಣಿಸುವೆನು. ಅಥವಾ ನಿನ್ನ ಸಂಗಡಿಗರಾದ

ಗೋಕುಲದಲ್ಲಿ ಒಬ್ಬನಾಗಿ ಹುಟ್ಟುವಷ್ಟು ಪರಮಭಾಗ್ಯಕ್ಕೆ ನಾನು ಪಾತ್ರನಲ್ಲದಿದ್ದರೂ, ಹೋಗಲಿ! ರಾಗದ್ವೇಷಾದಿಗಳಾದ ಯಾವುದಾದರೂ ಒಂದುವಿಧದಿಂದ ಇಲ್ಲಿ ನಿನ್ನ ಸಂಬಂಧವಿದ್ದರೆ ಸಾಕು! ಅದರಿಂದಲೇ ಉತ್ತಮಪುರುಷಾರ್ಥವನ್ನು ಪಡೆಯಬಹುದು. ಹೇಗೆಂದರೆ ಪೂತನೆಯೆಂಬ ರಾಕ್ಷಸಿಯು, ನಿನ್ನಲ್ಲಿ ಆಜನ್ಮದ್ವೇಷವನ್ನಿಟ್ಟು, ಸಾಧುವೇಷದಿಂದ ಬಂದು, ನಿನ್ನನ್ನು ಕೊಲ್ಲುವುದಕ್ಕೆ ಯತ್ನಿಸಿದ್ದರೂ, ಆ ದ್ವೇಷಬುದ್ಧಿಯಿಂದಲೇ ಆಕೆಯೂ, ಅವಳ ಸಹಚರರಾದ ಬಕಾದಿಗಳೂ ನಿನ್ನ ಅನುಗ್ರಹದಿಂದ ನಿನ್ನಸಾನ್ನಿಧ್ಯವನ್ನೇ ಸೇರಿದರು. ಅಂತಹ ಪಾಪಿರಾಕ್ಷಸಿಗೇ ಆ ಫಲವುಂಟಾಗಿರುವಾಗ, ತಮ್ಮ ಪ್ರಾಣ,ಮಾನ, ಧನ ಗೃಹಾದಿಗಳೆಲ್ಲವನ್ನೂ ನಿನಗಾಗಿಯೇ ಅರ್ಪಿಸುತ್ತ, ನಿನ್ನೊಡನೆಯೇ ಸದಾವಿಹರಿಸುತ್ತಿರುವ ಈ ಗೋಕುಲದವರ ಭಾಗ್ಯವನ್ನು ಎಷ್ಟೆಂದು ಹೇಳಬಹುದು? ಆದುದರಿಂದ ಸ್ನೇಹದಿಂದಿಲ್ಲದಿದ್ದರೂ, ರಾಗದ್ವೇಷಾದಿಗಳಿಂದಾದರೂ ನಿನ ಸಂಬಂಧವು ಲಭಿಸುವಂತೆ ಈ ಗೋಕುಲದಲ್ಲಿ ನನಗೆ ಜನ್ಮವುಂಟಾಗಲಿ! ದೇವಾ! ಎಲ್ಲಕ್ಕೂ ಫಲಭೂತನಾದ ನೀನೇ ಈಗೋಕುಲದಲ್ಲಿ ಪ್ರತ್ಯಕ್ಷವಾಗಿರುವಾಗ ಇದಕ್ಕಿಂತಲೂ ಮೇಲಾದ ಫಲವೇನಿರುವುದು? ಯಾವುದಾದರೂ ವಿಧದಿಂದ ಇಲ್ಲಿ ನಿನ್ನ ಸಂಬಂಧವಿದ್ದರೆ ಅದೇ ಮೋಕ್ಷಕಾರಣವೆನಿಸುವುದು. ಕೃಷ್ಣಾ! ಮನೆಮಂದಿಮಕ್ಕಳೆಂಬ ಮೋಹಪಾಶಗಳೂ, ರಾಗದ್ವೇಷಾದಿಗಳೂ, ನಿನ್ನ ಪ್ರಾಪ್ತಿಗೆ ವಿರೋಧಿಗಳೆಂಬುದೇನೋ ನಿಜವಾಗಿದ್ದರೂ, ಆ ವಿರೋಧಿಸಾಮಗ್ರಿಗಳೇ ನಿನ್ನ ವಿಷಯವಾಗಿ ವಿನಿಯೋಗಿಸಲ್ಪಟ್ಟಾಗ ಮುಕ್ತಿಕಾರಣಗಳಾಗುವುವು. ನಿನ್ನ ಸಂಬಂಧವಿಲ್ಲದಿರುವವರೆಗೆಮಾತ್ರವೇ ಆ ರಾಗದ್ವೇಷಾದಿಗಳು ಶ್ರೇಯಸ್ಸನ್ನು ಕೆಡಿಸತಕ್ಕ ಕಳ್ಳರಂತಿರುವುವು. ನಿನ್ನ ಸಂಬಂಧವುಂಟಾಗುವವರೆಗೆ ಗೃಹವೂ ಕಾರಾಗೃಹವೆನಿಸುವುದು. ಅದುವರೆಗೆಮಾತ್ರವೇ ಮೋಹವೆಂಬುದೂ ಸಂಕೋಲೆಯಾಗಿರುವುದು. ನಿನ್ನ ಸಂಬಂಧವಾಗಿ ಉಪಯೋಗಿಸಲ್ಪಟ್ಟಾಗ ಆ ದುರ್ಗುಣಗಳೇ ಮೋಕ್ಷಹೇತುಗಳಾಗುವುವು.

ದೇವಾ! ನೀನು 'ಈ ಪ್ರಾಪಂಚಿಕವಾದ ಸಂಬಂಧವಿಲ್ಲದವನಾದರೂ, ನಿನ್ನ ಸ್ವೇಚ್ಛೆಯಿಂದ ಹೀಗೆ ಪ್ರಕೃತಿಸಂಬಂಧವುಳ್ಳವನಂತೆ ಅವತಾ

ರಗಳನ್ನೆತ್ತುವುದು, ಆಶ್ರಿತರ ಕಷ್ಟವನ್ನು ನೀಗಿಸಿ ಅವರನ್ನಾನಂದಗೊಳಿಸುವುದಕ್ಕಾಗಿಯೇಹೊರತು ಬೇರೆಯಲ್ಲ! ದೇವಾ! ಲೋಕಾದ್ಭುತವಾದ ನಿನ್ನ ಚರಿತ್ರೆಗಳನ್ನೂ, ಊಹಿಸಲಸಾಧ್ಯವಾದ ನಿನ್ನಸ್ವರೂಪ ಸ್ವಭಾವಾದಿಗಳನ್ನೂ ನಿಜವಾಗಿ ತಿಳಿಯಬಲ್ಲವರು ತಿಳಿಯಲಿ! ಹೆಚ್ಚುಮಾತಿನಿಂದೇನು? ನನ್ನ ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ನಾನು ನಿನ್ನ ವೈಭವವನ್ನು ಕಂಡುಕೊಳ್ಳಲಾರೆನು. ಇಷ್ಟುಮಾತ್ರವೇ ನನಗೆ ತಿಳಿದ ವಿಷಯವು! ಕೃಷ್ಣಾ! ನೀನು ಸರ್ವಸಾಕ್ಷಿಯಾದುದರಿಂದ ನಿನಗೆ ತಿಳಿಯದುದಿಲ್ಲ! ನೀನೇ ಸಕಲಜಗನ್ನಾಯಕನು! ಈ ಜಗತ್ತೆಲ್ಲವೂ ನಿನ್ನಲ್ಲಿಯೇ ಹುಟ್ಟಿ, ನಿನ್ನಲ್ಲಿಯೇ ಲಯಿಸುವುದು. ನಿನ್ನ ಮುಂದೆ ನಾನೆಷ್ಟುಮಾತ್ರದವನು? ನನ್ನ ಅಪರಾಧವನ್ನು ಮನ್ನಿಸಿ, ನನಗೆ ಅನುಜ್ಞೆಯನ್ನು ಕೊಡು! ವೃಷ್ಣಿವಂಶವೆಂಬ ಕಮಲಕ್ಕೆ ಸೂರ್ಯಪ್ರಾಯನಾದ ಓ ಕೃಷ್ಣಾ! ನಿನಗೆ ನಮಸ್ಕಾರವು! ಗೋಬ್ರಾಹ್ಮಣಕುಲವೆಂಬ ಸಮುದ್ರಕ್ಕೆ ಪೂರ್ಣಚಂದ್ರನಂತಿರುವ ಓ ಕೃಷ್ಣಾ! ನಿನಗೆ ನಮಸ್ಕಾರವು! ಅಧರ್ಮವೆಂಬ ಅಂಧಕಾರವನ್ನು ನೀಗಿಸತಕ್ಕ ಓ ಕೃಷ್ಣಾ! ನಿನಗೆ ನಮಸ್ಕಾರವು. ಕಂಸಾದಿರಾಕ್ಷಸರನ್ನು ಕೊಲ್ಲತಕ್ಕ ಓ ಕೃಷ್ಣಾ! ನಿನಗೆ ನಮಸ್ಕಾರವು. ಸೂರ್ಯಚಂದ್ರಾದಿಗಳೆಲ್ಲರಿಗೂ ಪೂಜ್ಯನಾದ ಓ ಭಗವಂತಾ! ನಿನಗೆ ನಮಸ್ಕಾರವು! ಕಲ್ಪಾಂತದವರೆಗೂ ನಿನಗೆ ವಂದನವು!" ಎಂದು ಬ್ರಹ್ಮನು, ಮಹಾಮಹಿಮನಾದ ಆ ಕೃಷ್ಣನನ್ನು ಸ್ತುತಿಸಿ, ಮೂರಾವರ್ತಿ ಪ್ರದಕ್ಷಿಣಮಾಡಿ,ಕೃಷ್ಣನ ಪಾದಗಳಲ್ಲಿ ಬಿದ್ದು ನಮಸ್ಕರಿಸಿ, ಅವನ ಅನುಜ್ಞೆಯನ್ನುಪಡೆದು, ತನ್ನ ಲೋಕಕ್ಕೆ ಹಿಂತಿರುಗಿದನು. ಆಮೇಲೆ ಇತ್ತಲಾಗಿ ಕೃಷ್ಣನು, ತನ್ನ ಕಣ್ಣಿಗೆ ಬೆಳದಂತೆ ಬ್ರಹ್ಮನು ಮರೆಸಿಟ್ಟಿದ್ದ ಕರುಗಳೆಲ್ಲವೂ ಅಲ್ಲಿಯೇ ಇರುವುದನ್ನುಕಂಡು, ಅವೆಲ್ಲವನ್ನೂ ತನ್ನೊಡನೆ ಕರೆದುಕೊಂಡು, ಮೊದಲು ತನ್ನ ಸ್ನೇಹಿತರೊಡನೆ ಕುಳಿತು ಊಟಮಾಡುತಿದ್ದ ಮಳಲುದಿಣ್ಣೆಯ ಬಳಿಗೆ ಬಂದನು. ಅಲ್ಲಿ ತನ್ನ ಸಂಗಡಿಗರಾದ ಗೋಪಬಾಲಕರೆಲ್ಲರೂ ತನ್ನನ್ನೇ ನಿರೀಕ್ಷಿಸುತ್ತ ಮೊದಲಿನಂತೆ ಕುಳಿತಿದ್ದುದನ್ನು ಕಂಡನು. ಆ ಬಾಲಕರು, ತಮಗೆ ಪ್ರಾಣೇಶ್ವರನಾದ ಕೃಷ್ಣನು ತಮ್ಮನ್ನಗಲಿಹೋಗಿ ಇದುವರೆಗೆ ಒಂದುವರ್ಷಕಾಲವು ಗತಿಸಿ

ಹೋಗಿದ್ದರೂ, ಆ ಕೃಷ್ಣನ ಮಾಯೆಯಿಂದ ಮೈಮರೆತಿದ್ದುದರಿಂದ, ಅಷ್ಟು ದೀರ್ಘಕಾಲವೂ ಅವರಿಗೆ ಒಂದು ಕ್ಷಣಮಾತ್ರವಾಗಿ ತೋರಿತು. ರಾಜೇಂದ್ರಾ! ಇದೊಂದಾಶ್ಚರ್ಯವೆಂದು ತಿಳಿಯಬೇಡ! ಚರಾಚರಾತ್ಮಕವಾದ ಸಕಲಜಗತ್ತೂ, ಆ ಭಗವಂತನ ಮಾಯೆಯಿಂದ ಮೋಹಿತವಾಗಿ, ತನ್ನನ್ನೇ ತಾನು ಮರೆತುಹೋಗುತ್ತಿರುವಾಗ, ಈಸಾಮಾನ್ಯಗೋಪಬಾಲಕರು ಮೈಮರೆತು ಮೋಹಿತರಾಗುವುದೊಂದು ದೊಡ್ಡದೆ? ಅವರು ಆ ಕೃಷ್ಣನ ಮಾಯೆಯಿಂದ ಆ ಒಂದುವರ್ಷಕಾಲದವರೆಗೆ ಹಸಿವುಬಾಯಾರಿಕೆಗಳನ್ನೂ ತಿಳಿಯದೆ ಕ್ಷಣಮಾತ್ರವಾಗಿ ಕಳೆದರು, ಆ ಕೃಷ್ಣನುಕರುಗಳೊಡನೆ ತಮ್ಮ ಬಳಿಗೆ ಬಂದೊಡನೆ ಆಶ್ಚರ್ಯದಿಂದ "ಕೃಷ್ಣಾ! ಇದೇ ನಾಶ್ಚರ್ಯವು! ಇಷ್ಟು ಬೇಗನೆ ಬಂದು ಬಿಟ್ಟೆಯಲ್ಲಾ! ನಮ್ಮ ಮಂದೆಯ ಕರುಗಳೆಲ್ಲಿ ಹೋಗಿದ್ದುವು? ನಿನಗೆ ಸುಖಾಗಮನವೆ?ಕೃಷ್ಣಾ! ನಿನ್ನನ್ನು ಬಿಟ್ಟು ಒಂದು ತುತ್ತಾದರೂ ನಮ್ಮ ಗಂಟಲಲ್ಲಿ ಇಳಿಯಲಿಲ್ಲ! ಇದೋ! ನಮ್ಮ ಕೈಯಲ್ಲಿದ್ದ ಕಬಳವನ್ನು ಹಾಗೆಯೇ ಇಟ್ಟುಕೊಂಡಿರುವೆವು ನೋಡು! ನೀನೂ ಬಂದು ಕುಳಿತು ಭೋಜನಮಾಡು!" ಎಂದು ಒಬ್ಬೊಬ್ಬರೂ ಆದರಿಸಿ ಕರೆಯುತಿದ್ದರು. ಕಪಟನಾಟಕಸೂತ್ರಧಾರಿಯಾದ ಕೃಷ್ಣನು, ಏನೂ ತಿಳಿಯದವನಂತೆ ಅವರ ಮಾತನ್ನು ಕೇಳಿ ನಗುತ್ತ, ಅವರಸಂಗಡಲೇ ತಾನೂ ಸಂತೋಷದಿಂದ ಕಲೆತು ಊಟಮಾಡಿ, ಅವರೆಲ್ಲರನ್ನೂ ತನ್ನೊಡನೆ ಕರೆದುಕೊಂಡು ಬಂದು, ಹಿಂದೆ ತಾನು ಸಂಹರಿಸಿದ ಆ ಹೆಬ್ಬಾವಿನ ಚರ್ಮವನ್ನು ಅವರಿಗೆ ತೋರಿಸಿದನು. ಅದನ್ನು ನೋಡಿಕೊಂಡು ಎಲ್ಲರೂ ತಮ್ಮ ಮಂದೆಗೆ ಹಿಂತಿರುಗಿದರು. ಕೃಷ್ಣನು ಹಿಂತಿರುಗಿ ಗೋಕುಲಕ್ಕೆ ಬರುವಾಗ, ಅವನ ವೈಭವವನ್ನೂ ಅವನ ಸುಂದರಾಕಾರವನ್ನೂ ಕೇಳಬೇಕೆ? ತಲೆಯಲ್ಲಿ ಕಾಡುಹೂವಿನ ದಂಡೆ! ಅದರಮೇಲೆ ನವಿಲುಗರಿಯದೊಂದೆ! ಅರಿದಳ ಮುಂತಾದ ಗೈರಿಕಧಾತುಗಳ ವಿಚಿತ್ರವರ್ಣದಿಂದ ಲೇಪಿತವಾದ ಮೈ! ಸಂಗಡಿಗರಾದ ಗೊಲ್ಲರ ಮಕ್ಕಳಲ್ಲಿ ಮುಂದೆ ಕೊಳಲನ್ನು ಬಾರಿಸುವರು ಕೆಲವರು! ಕೊಂಬನ್ನೂದುವವರು ಕೆಲವರು! ತೆಂಗಿನ ಗರಿ, ಬಸರಿಯೆಲೆ, ಮುಂತಾದ ಹಸುರೆಲೆಗಳನ್ನು ಸುರುಳಿ ಸುತ್ತಿ, ಅದನ್ನೇ ವಾದ್ಯದಂತೆ ಊದುತ್ತ ಬರು

ವವರು ಕೆಲವರು! ಕೆಲವರು ಕೃಷ್ಣನಸುತ್ತಲೂ ನಿಂತು ತಾಳಹಾಕುತ್ತ "ಕೃಷ್ಣಾ! ಕೃಷ್ಣ! ಝೀ! ಝೀ! ಅಜಗರಮರ್ದನ ಝೀ! ಝೀ! ಅ ಸಾಧ್ಯವಿಕ್ರಮ ಝೀ! ಝೀ" ಎಂದು, ಆ ಕೃಷ್ಣನು ಕಾಡಿನಲ್ಲಿ ಹೆಬ್ಬಾ ವನ್ನು ಕೊಂದ ಪರಾಕ್ರಮವನ್ನು ಕೊಂಡಾಡಿ ಕಣಿಯುತ್ತಿರುವರು. ಇಂತಹ ಮಹಾವೈಭವದೊಡನೆ ಕೃಷ್ಣನು "ಲೊಚಲೊಚ" ಧ್ವನಿಯಿಂದ ಕರುಗಳ ನ್ನು ಮುಂದಟ್ಟಿಕೊಂಡು,ಅಲ್ಲಿನ ಗೋಪಸ್ತ್ರೀಯರ ನೇತ್ರಗಳಿಗೆ ಮಹೋತ್ಸ ವವನ್ನು ಬೀರುವಂತೆ ಗೋಕುಲವನ್ನು ಪ್ರವೇಶಿಸಿದನು. ಈ ಕೃಷ್ಣನೊಡನೆ ಬರುತಿದ್ದ ಗೋಪಬಾಲಕರೊಬ್ಬೊಬ್ಬರೂ, ಗ್ರಾಮಕ್ಕೆ ಪ್ರವೇಶಿಸಿದೊ ಡನೆ, ತಮ್ಮತಮ್ಮ ತಂದೆ, ತಾಯಿ, ಸಹೋದರರು ಮುಂತಾದ ಬಂ ಧುವರ್ಗವನ್ನು ನೋಡಿದಾಗಲೆಲ್ಲಾ, ನಮ್ಮ ಕೃಷ್ಣನು ಈಗಲೇ ಕಾಡಿ ನಲ್ಲಿ ಒಂದಾನೊಂದು ಮಹಾಸರ್ಪವನ್ನು ಕೊಂಡು, ನಮ್ಮೆಲ್ಲರನ್ನೂ ಮರ ಣದಿಂದ ತಪ್ಪಿಸಿ ಕಾಪಾಡಿದನು" ಎಂದು ಹೇಳಿ, ಅವನ ಪರಾಕ್ರಮವನ್ನು ಕೊಂಡಾಡುತಿದ್ದರು. ಓ ಪರೀಕ್ಷಿದ್ರಾಜಾ! ಕೃಷ್ಣನು ಈ ಕಾರ್ಯವನ್ನು ನಡೆಸಿದಮೇಲೆ, ವತ್ಸಾಪಹಾರವು ನಡೆಯುವಷ್ಟರಲ್ಲಿ, ಒಂದುವರ್ಷಕಾಲ ವು ಕಳೆದುಹೋಗಿದ್ದರೂ, ಗೋಪಬಾಲಕರು ಆ ಸರ್ಪವಧವನ್ನು ಆಗ ಲೇ ನೋಡಿ ಬಂದಂತೆ ವರ್ಣಿಸಬೇಕಾದರೆ, ಆ ಶ್ರೀಕೃಷ್ಣನ ಮಾಯಾ ಮಹಿಮೆಯು ಎಂತದೆಂಬುದನ್ನು ನೀನೇ ಯೋಚಿಸಿ ನೋಡು!" ಎಂದನು.

ಆಗ ಪರೀಕ್ಷಿದ್ರಾಜನು ತಿರುಗಿ ಶುಕಮುನಿಯನ್ನು ಕುರಿತು ಪ್ರಶ್ನೆ ಮಾಡುವನು. "ಓ ಮುನೀಂದ್ರಾ! ಈ ಸಂಗತಿಯು ಹಾಗಿರಲಿ! ಆ ಗೋ ಕುಲದಲ್ಲಿದ್ದ ಗೋಪಾಲಕರಿಗೆ ತಮ್ಮತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮ ಕ್ಕಳಿಗಿಂತಲೂ ಈ ಕೃಷ್ಣನೇ ವಿಶೇಷಪ್ರೇಮಕ್ಕೆ ಪಾತ್ರನಾಗಿದ್ದನೆಂದು ಹೇಳಿದೆಯಲ್ಲವೆ? ಅದು ಹೇಗೆ? ಲೋಕದಲ್ಲಿ ಯಾರಿಗಾದರೂ ತಮ್ಮ ಮಕ್ಕ ಳಲ್ಲಿರುವುದಕ್ಕಿಂತಲೂ ಕಂಡವರ ಮಕ್ಕಳಲ್ಲಿ ಹೆಚ್ಚು ಪ್ರೇಮವು ಹುಟ್ಟುವು ದೇ ಅಸಂಭವವಲ್ಲವೆ? ಹೀಗಿರುವಾಗ ಕೃಷ್ಣನಲ್ಲಿಮಾತ್ರ ಅಷ್ಟು ಪ್ರೇಮವುಂ ಟಾಗಲು ಕಾರಣವೇನು?" ಎಂದನು. ಅದಕ್ಕಾ ಶುಕಮುನಿಯು. "ಓ ರಾ ಜೇಂದ್ರಾ! ಕೇಳು! ಕೃಷ್ಣನಲ್ಲಿ ಆ ವಿಧವಾದ ಪ್ರೇಮವುಂಟಾಗುವು

ದೇನೂ ಆಶ್ಚರ್ಯವಲ್ಲ! ಏಕೆಂದು ಕೇಳುವೆಯಾ ಲೋಕದಲ್ಲಿ ಸಮಸ್ತ ಪ್ರಾಣಿಗಳಿಗೂ ತಮ್ಮತಮ್ಮ ಆತ್ಮವೇ ಹೆಚ್ಚುಪ್ರಿಯವಾದುದು! ಆ ಆತ್ಮಕ್ಕೆ ಆಶ್ರಯವಾದುದರಿಂದಲೇ ದೇಹದಲ್ಲಿಯೂ, ಆ ದೇಹಸಂಬಂಧದಿಂದ ದೇಹಾನುಬಂಧಿಗಳಾದ ಹೆಂಡಿರುಮಕ್ಕಳು ಮುಂತಾದ ನಂಟರಲ್ಲಿಯೂ ಮೋಹವು ಹುಟ್ಟುವುದು. ಒಂದೊಂದುಪ್ರಾಣಿಗೂ, ತನ್ನ ಜೀವನಲ್ಲಿ ತನಗಿರುವಷ್ಟು ಮಮತೆಯು, ಹೆಂಡಿರು, ಮಕ್ಕಳು, ಮನೆ, ಮಠ, ಮುಂತಾದುವುಗಳಲ್ಲಿ ಹುಟ್ಟಲಾರದು ಆದುದರಿಂದ ಮೊದಲು ತಮ್ಮತಮ್ಮ ಆತ್ಮವೇ ಎಲ್ಲರಿಗೂ ಅತಿಪ್ರಿಯವಾದ ವಸ್ತುವು. ಆ ಆತ್ಮಸಂಬಂಧದಿಂದ ದೇಹದಲ್ಲಿ ಪ್ರೀತಿಯು ಹುಟ್ಟಿದರೂ, ಆ ಆತ್ಮದಲ್ಲಿರುವಷ್ಟು ಪ್ರೀತಿಯು ದೇಹದಲ್ಲಿರದು! ಆ ದೇಹದಲ್ಲಿರುವಷ್ಟು ಮಮತೆಯು, ದೇಹಾನುಬಂಧಿಗಳಾದ ಹೆಂಡಿರು ಮಕ್ಕಳಲ್ಲಿರದು! ಸಾಕ್ಷಾತ್ತಾಗಿ ಆ ದೇಹಾನುಬಂಧಿಗಳಲ್ಲಿರುವಷ್ಟು ಮಮತೆಯು ಮನೆಮಠಗಳಲ್ಲಿಯೂ, ಆಸ್ತಿಪಾಸ್ತಿಗಳಲ್ಲಿಯೂ ಹುಟ್ಟಲಾರದಲ್ಲವೆ? ದೇಹವನ್ನೇ ಆತ್ಮವೆಂದು ಭ್ರಮಿಸತಕ್ಕ ದೇಹಾತ್ಮವಾದಿಗಳಿಗೂ, ತಮ್ಮತಮ್ಮ ದೇಹವೇ ಎಲ್ಲಕ್ಕಿಂತಲೂ ಅತಿಪ್ರಿಯವೆನಿಸುವುದು. ದೇಹಕ್ಕಿಂತಲೂ ಆತ್ಮವು ಬೇರೆಯಾದುದೆಂಬ ವಿವೇಕಬುದ್ಧಿಯುಳ್ಳವರಿಗೂ ಕೂಡ, ತಮ್ಮದೇಹವು ಜೀರ್ಣವಾಗುತ್ತ ಬಂದರೂ, ಜೀವದಾಸೆಯು ತಪ್ಪದೆ ಪ್ರಬಲವಾಗಿಯೇ ಇರುವುದಲ್ಲವೆ? ಲೋಕಸ್ವಭಾವವೇ ಹೀಗಿರುವುದರಿಂದ, ನೀನು ಸೂಕ್ಷ್ಮದೃಷ್ಟಿಯಿಂದ ಪರ್ಯಾಲೋಚಿಸುವಪಕ್ಷದಲ್ಲಿ, ನೋಡುವರೆಲ್ಲರಿಗೂ ಕೃಷ್ಣನಲ್ಲಿ ಆಷ್ಟೊಂದು ಪ್ರೇಮವು ಹುಟ್ಟುವುದಕ್ಕೆ ಕಾರಣವನ್ನು ಸ್ಪಷ್ಟವಾಗಿ ತಿಳಿಯಬಹುದು. ಹೇಗೆಂದು ಕೇಳುವೆಯಾ? ಪ್ರಾಣಿಗಳಿಗೆ ದೇಹಾನುಬಂಧಿಗಳಿಗಿಂತಲೂ, ತಮ್ಮತಮ್ಮ ದೇಹವೂ,ಆ ದೇಹಕ್ಕಿಂತಲೂ, ಆದಕ್ಕೆ ಧಾರಕನಾದ ಜೀವನೂ, ಹೆಚ್ಚುಪ್ರಿಯವಾಗಿರುವಂತೆಯೇ, ಆ ಜೀವನಿಗೂ ಅಂತರ್ಯಾಮಿಯಾಗಿ, ಅದನ್ನು ಧರಿಸಿರತಕ್ಕ ಅಂತರಾತ್ಮನಲ್ಲಿ ಇವೆಲ್ಲಕ್ಕಿಂತಲೂ ಹೆಚ್ಚುಪ್ರೇಮವುಂಟಾಗಬೇಕಾದುದೇ ಸಹಜವಲ್ಲವೆ? ಈ ಕೃಷ್ಣನೇ ಸಕಲಜೀವಗಳಿಗೂ ಅಂತರಾತ್ಮನಾದ ಪರಮಪುರುಷನಾಗಿರುವಾಗ, ಅವನಲ್ಲಿ ಎಲ್ಲರಿಗೂ ಅಸಾಧಾರಣಪ್ರೇಮವು ಹು

ಟ್ಟುವುದರಲ್ಲಿ ಸಂದೇಹವೇನಿದೆ? ಆತ್ಮಪ್ರೀತಿಗಾಗಿಯೇ ಬೇರೆ ಎಲ್ಲಾ ವಸ್ತುಗಳೂ ಪ್ರಿಯವಾಗುವುದರಿಂದ, ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ಸರ್ವಾಂತರಾತ್ಮನಾದ ಆತನ ಪ್ರೀತಿಗಾಗಿಯೇ ಪ್ರಿಯವಸ್ತುವೆನಿಸುವುದೇಹೊರತು, ಅವನನ್ನು ಬಿಟ್ಟು, ಇತರವಸ್ತುಗಳಲ್ಲಿ ಪ್ರೀತಿ ಹುಟ್ಟುವುದಕ್ಕೇ ಕಾರಣವಿಲ್ಲ. "ಹಾಗೆ ಕೃಷ್ಣನು ಸರ್ವಾಂತರಾತ್ಮನಾಗಿದ್ದಪಕ್ಷದಲ್ಲಿ ಹೀಗೆ ಗೊಲ್ಲನಂತೆ ಕಾಣುವುದೇಕೆ?" ಎಂದು ಕೇಳುವೆಯೇನು? ಲೋಕಕ್ಷೇಮಕ್ಕಾಗಿಯೇ ಅವನು ತನ್ನ ಸಂಕಲ್ಪದಿಂದ ಹೀಗೆ ಸಾಮಾನ್ಯಮನುಷ್ಯನಂತೆ ರೂಪವನ್ನೆತ್ತಿರುವನು. ರಾಜಾ! ಸ್ಥಾವರಜಂಗಮಾತ್ಮಕವಾದ ಜಗತ್ತೆಲ್ಲವೂ ಆ ಭಗವಂತನಿಗೆ ಶರೀರವಾಗಿರುವುದರಿಂದ, ಅವನನ್ನು ಬಿಟ್ಟು ಪ್ರತ್ಯೇಕವಾದ ವಸ್ತುವೊಂದೂ ಇರುವುದಿಲ್ಲ. ಈ ನಿಜಸ್ಥಿತಿಯನ್ನು ತಿಳಿಯದವರುಮಾತ್ರವೇ, ಅವನನ್ನು ಸಾಮಾನ್ಯಮನುಷ್ಯನೆಂದು ಭ್ರಮಿಸುವರೇಹೊರತು, ವಿವೇಕಿಗಳು ಅವನನ್ನೇ ಸರ್ವಶರೀಕನೆಂದು ಭಾವಿಸುವರು. ಹೆಚ್ಚು ಮಾತಿನಿಂದೇನು! ಲೋಕದಲ್ಲಿ ಸಮಸ್ತಶಬ್ದಗಳಿಗೂ, ಅವುಗಳ ಮೇಲಿನ ಪ್ರತ್ಯಯಗಳಿಗೂ, ಅವೆರಡರಿಂದ ತೋರುವ ಅರ್ಥಗಳಿಗೂ ಭಾವವನ್ನು (ಸತ್ತೆಯನ್ನು) ನಿರೂಪಿಸತಕ್ಕುದು ಭೂಧಾತುವಲ್ಲವೆ? ಇಂತಹ ಭೂಧಾತುವಿಗೂ, ಅದರ ಅರ್ಥಕ್ಕೂ, ಅದರೊಡನೆ ಸೇರಿದ ಪ್ರತ್ಯಯಕ್ಕೂ, ಆ ಪ್ರತ್ಯಯಾರ್ಥಕ್ಕೂ, ಸತ್ತೆಯನ್ನು (ಭಾವವನ್ನು) ನಿರ್ವಹಿಸತಕ್ಕವನೂ ಆ ಪರಮಪುರುಷನಲ್ಲದೆ ಬೇರೆಯಲ್ಲ! ಹೀಗಿರುವಾಗ ಆ ಕೃಷ್ಣನನ್ನು ಬಿಟ್ಟು ಬೇರೆ ಯಾವ ವಸ್ತುವುಂಟೆಂಬುದನ್ನು ನೀನೇ ಯೋಚಿಸಿನೋಡು! ಲೋಕದಲ್ಲಿ ಸತ್ತೆನಿಸಿಕೊಳ್ಳುವ ಪದಾರ್ಥವೆಲ್ಲವೂ ಅವನಲ್ಲದೆ ಬೇರೆಯಲ್ಲ. ಓ ರಾಜೇಂದ್ರಾ! ಪುಣ್ಯಶ್ಲೋಕನಾದ ಆ ಶ್ರೀಹರಿಯ ಪಾದಾರವಿಂದಗಳೆಂಬ ತೆಪ್ಪವನ್ನಾಶ್ರಯಿಸಿದವರು, ಸಂಸಾರಸಮುದ್ರವನ್ನು ಗೋಷ್ಪದದಂತೆ ನಿರಾಯಾಸವಾಗಿ ದಾಟಬಲ್ಲರು. ಪರಮಪದವೇ ಅವರ ವಿಹಾರಸ್ಥಾನವು. ವಿಪತ್ತೆಂಬುದು ಕನಸಿನಲ್ಲಿಯೂ ಅವರಿಗೆ ಕಾಣಿಸದು. ರಾಜಾ! ಕೃಷ್ಣನ ಕೌಮಾರಾವಸ್ಥೆಯಲ್ಲಿ ನಡೆದ ಅಘಾಸುರವಧವನ್ನು, ಅವನ ಪೌಗಂಡಾವಸ್ಥೆಯಲ್ಲಿ ನಡೆದಂತೆ ಗೋಪಾಲಬಾಲಕರು ಹೇಳಿಕೊಳ್ಳುತ್ತಿ

ದ್ಧುದಕ್ಕೆ ಕಾರಣವು ಈಗ ನಿನಗೆ ವ್ಯಕ್ತವಾಯಿತಷ್ಟೆ? ಹಾಗೆಯೇ ಕೃಷ್ಣನು ತನ್ನ ಮಿತ್ರರೊಡನೆ ಕಾಡಿನಲ್ಲಿ ಸಂಚರಿಸುತ್ತಿರುವಾಗ, ಅವನು ನಡೆಸಿದ ಅಘಾಸುರವಧೆ, ವನಭೋಜನ, ಬ್ರಹ್ಮನಿಗೆ ತಾನು ಮಂದೆಯ ಕರುಗಳಂತೆಯೂ, ಗೊಲ್ಲರ ಮಕ್ಕಳಂತೆಯೂ, ಶುದ್ಧಸತ್ವಮಯವಾದ ನಿಜಾಕೃತಿಗಳಿಂದಲೂ ಕಾಣಿಸಿಕೊಂಡುದು, ಬ್ರಹ್ಮನು ಸ್ತುತಿಸಿದುದು, ಈ ಚರಿತ್ರಗಳೆಲ್ಲವನ್ನೂ ನೀನು ಇದರಿಂದ ತಿಳಿದಂತಾಯಿತು. ಈ ಕಥೆಯನ್ನು ಯಾರು ಕಿವಿಯಿಂದ ಕೇಳುವರೋ, ಯಾರು ಇದನ್ನು ಕೀರ್ತಿಸುವರೋ, ಅವರೆಲ್ಲರೂ ಸರ್ವಾಭೀಷ್ಟಗಳನ್ನೂ ಪಡೆಯುವರು. ಇದು ಹದಿನಾಲ್ಕನೆಯ ಅಧ್ಯಾಯವು.

---

## ಧೇನುಕಾಸುರಭಂಜನವು.

ರಾಜೇಂದ್ರಾ! ಹಿಂದೆ ಹೇಳಿದ ವತ್ಸಾಪಹರಣವೃತ್ತಾಂತವೆಲ್ಲವೂ ಮುಗಿಯುವಷ್ಟರಲ್ಲಿ, ಬಲರಾಮಕೃಷ್ಣರಿಗೆ ಕೌಮಾರಾವಸ್ಥೆಯು ಕಳೆದು, ಪೌಗಂಡವಯಸ್ಸು ಬಂದಿತೆಂದು ಮೊದಲೇ ಹೇಳಿದೆನಷ್ಟೆ? ಹೀಗೆ ಪ್ರವರ್ಧಮಾನರಾಗುತ್ತ ಬರುವಾಗ, ಒಮ್ಮೆ ರಾಮಕೃಷ್ಣರಿಬ್ಬರೂ ಪಶುಗಳನ್ನು ಮೇಯಿಸುವುದಕ್ಕಾಗಿ ತಮಗೆ ಸಮಾನವಯಸ್ಕರಾದ ಬಾಲಕರೊಡನೆ ಬೃಂದಾವನದ ಸುತ್ತಲೂ ಸಂಚರಿಸುತ್ತ, ತಮ್ಮ ಪಾದಸ್ಪರ್ಶದಿಂದ ಆ ನೆಲವೆಲ್ಲವನ್ನೂ ಪವಿತ್ರವಾಗಿ ಮಾಡುತಿದ್ದರು. ಕೃಷ್ಣನು ಕೊಳಲನ್ನು ನುಡಿಸುತ್ತ ಗೋವುಗಳನ್ನು ನಡೆಸಿಕೊಂಡು ಹೋದನು. ಅವನ ಸಂಗಡಿಗರೆಲ್ಲರೂ ಆ ಕೃಷ್ಣನ ಕೀರ್ತಿಯನ್ನು ಕೊಂಡಾಡುತ್ತ, ಅವನನ್ನು ಹಿಂಬಾಲಿಸಿ ಬರುತಿದ್ದರು. ಇವರೆಲ್ಲರೂ ತಮ್ಮತಮ್ಮ ದನಗಳನ್ನಟ್ಟಿಕೊಂಡು, ಪುಷ್ಪಫಲಸಮೃದ್ಧವಾಗಿಯೂ, ಪಶುಗಳಿಗೆ ತೃಪ್ತಿಕರವಾಗುವಂತೆ ತೃಣಸಮೃದ್ಧವಾಗಿಯೂ ಇದ್ದ ಒಂದಾನೊಂದು ವನವನ್ನು ಪ್ರವೇಶಿಸಿದರು. ಆ ವನದ ಯಾವ ಕಡೆಯನ್ನು ನೋಡಿದರೂ, ಭ್ರಮರಗಳೂ, ಮೃಗಗಳೂ, ಪಕ್ಷಿಗಳೂ ಉಲ್ಲಾಸದಿಂದ ಕಿವಿಗಿಂಪಾಗಿ ಕೂಗುತ್ತಿರುವುವು. ಯೋಗಿಗಳ ಮನಸ್ಸಿನಂತೆ ಸ್ವಚ್ಛವಾದ ಜಲವುಳ್ಳ ಸರೋವರಗಳು ಅಲ್ಲಲ್ಲಿ ಕಂಗೊಳಿಸು

ತ್ತಿರುವುವು. ನಾನಾಕಡೆಗಳಿಂದಲೂ ಕಮಲಗಂಧವುಳ್ಳ ಮಂದಮಾರುತವು ಸುಖಸ್ಪರ್ಶವಾಗಿ ಬೀಸುತ್ತಿರುವುದು. ಹೀಗೆ ಅತಿರಮ್ಯವಾದ ಆ ವನದ ಸನ್ನಿವೇಶವನ್ನು ನೋಡಿದೊಡನೆ, ಕೃಷ್ಣನಿಗೆ, ಅಲ್ಲಿ ಕೆಲವು ಹೊತ್ತಿನವರೆಗೆ ಸಂತೋಷದಿಂದ ಆಟವಾಡುತಿದ್ದು ಹೋಗಬೇಕೆಂದು ತೋರಿತು. ಕೆಂಪಾದ ಎಳಚಿಗುರುಗಳ ಕಾಂತಿಯಿಂದ ಅತಿರಮ್ಯವಾಗಿಯೂ, ಪುಷ್ಪಫಲಗಳ ಭಾರದಿಂದ ನೆಲಕ್ಕೆ ಸೋಕುವಂತೆ ಬಗ್ಗಿದ ಕೊಂಬೆಗಳುಳ್ಳುದಾಗಿಯೂ ಇರುವ ಅಲ್ಲಿನ ವೃಕ್ಷಗಳ ಸೊಗಸನ್ನು ನೋಡಿ ಕೃಷ್ಣನು, ಸಂತೋಷದಿಂದ ಅರಳಿದ ಮುಖವುಳ್ಳವನಾಗಿ ತನ್ನಣ್ಣನಾದ ಬಲರಾಮನೊಡನೆ ಹೀಗೆಂದು ಹೇಳುವನು. ಆ ಕೃಷ್ಣನು ತಾನೇ ಸರ್ವಲೋಕಪ್ರಭುವಾದ ಆದಿಪುರುಷನಾಗಿದ್ದು. ಬಲರಾಮನು ತನಗೆ ಶೇಷಭೂತನಾದ ಆದಿಶೇಷನ ಅಂಶಭೂತನಾಗಿದ್ದರೂ, ಲೋಕಮರ್ಯಾದೆಯನ್ನನುಸರಿಸಿ, ತನಗೆ ಜ್ಯೇಷ್ಠನಾಗಿ ಹುಟ್ಟಿದ ಬಲರಾಮನೇ ತನಗಿಂತಲೂ ಮೇಲೆಂಬ ಗೌರವವನ್ನು ತೋರಿಸುತ್ತ ಹೀಗೆಂದು ಹೇಳುವನು. "ಅಣ್ಣಾ ! ನಿನ್ನ ಮಹಾಮಹಿಮೆಯನ್ನು ನಾನೇನೆಂದು ಹೇಳಲಿ ! ದೇವಶ್ರೇಷ್ಠರಿಂದಲೂ ನಮಸ್ಕರಿಸಲ್ಪಡತಕ್ಕ ಪಾದಾರವಿಂದಗಳುಳ್ಳ ನಿನ್ನನ್ನು ನೋಡಿ, ಇಲ್ಲಿನ ವೃಕ್ಷಗಳೆಲ್ಲವೂ, ತಮಗೆ, ಸ್ಥಾವರಜನ್ಮಕಾರಣವಾದ ತಮೋಗುಣವು ನೀಗುವಂತೆ, ನಿನ್ನ ಅನುಗ್ರಹವನ್ನು ಬಯಸಿ, ಫಲಪುಷ್ಪಗಳನ್ನು ಕೈಕಾಣಿಕೆಯಾಗಿ ತಂದೊಪ್ಪಿಸಿ, ನಿನ್ನ ಪಾದಗಳಿಗೆ ನಮಸ್ಕರಿಸುವಂತೆ, ಬಗ್ಗಿದ ಕೊನೆಗಳಿಂದ ಎಷ್ಟು ರಮ್ಯವಾಗಿರುವು ನೋಡು! ಓ ಆದಿಪುರುಷಾ! ಈ ಭ್ರಮರಗಳೆಲ್ಲವೂ ಲೋಕಪಾವನವಾದ ನಿನ್ನ ಕೀರ್ತಿಯನ್ನು ಕೊಂಡಾಡುವಂತೆ, ಬಾರಿಬಾರಿಗೂ ನಿನ್ನ ಮುಂದೆ ಝುಂಕರಿಸುತ್ತಿರುವುವು ನೋಡು! ನೀನು ಗೋಪಾಲವೇಷದಿಂದ ನಿನ್ನ ಪರಸ್ವರೂಪವನ್ನು ಮರೆಸಿಕೊಂಡಿರುವುದನ್ನು ನೋಡಿ, ಈ ವನದಲ್ಲಿಯೂ ನಿನ್ನನ್ನು ಬಿಟ್ಟಿರಲಾರದೆ, ನಿನ್ನ ಭಕ್ತರಾದ ಮಹರ್ಷಿಗಳೇ ಭ್ರಮರರೂಪದಿಂದ ಇಲ್ಲಿಗೆ ಬಂದಿರಬೇಕಲ್ಲದೆ ಬೇರೆಯಲ್ಲ ! ಓ ಲೋಕವಂದ್ಯಾ ! ಇದೋ ? ಇಲ್ಲಿ ನವಿಲುಗಳು ನಿನ್ನ ಮುಂದೆ ನರ್ತಿಸುವುವು. ಈ ಹೆಣ್ಣುಜಿಂಕೆ ಗಳು ನಿನ್ನ ಮುಂದೆ ನಲಿದಾಡಿ,ಗೋಪಸ್ತ್ರೀಯರಂತೆ ತಮ್ಮ ದೃಷ್ಟಿ ಸೌಂ

ದರ್ಶ್ಯದಿಂದ ನಿನ್ನನ್ನು ಸಂತೋಷಗೊಳಿಸುತ್ತಿರುವುವು. ಈ ಕೋಗಿಲೆಗಳು ತಮ್ಮ ನಿವಾಸಕ್ಕೆ ನೀನು ಬಂದುದನ್ನು ನೋಡಿ, ಪ್ರಿಯವಾಕ್ಯಗಳಿಂದ ನಿನ್ನನ್ನು ಆದರಿಸುವಂತೆ ಮಧುರಸ್ವರದಿಂದ ಕೂಗುವುವು ನೋಡು! ಆಹಾ! ಕಾಡಿನಲ್ಲಿದ್ದರೂ ಇವುಗಳಿಗೆ ನಿನ್ನನ್ನು ಸೇವಿಸುವ ಭಾಗ್ಯವುಂಟಾದುದರಿಂದ, ಇವುಗಳ ಜನ್ಮವೇ ಧನ್ಯವಲ್ಲವೆ? ಮನೆಗೆ ಬಂದವರನ್ನು ಹೀಗೆ ಪ್ರಿಯವಾಕ್ಯಾದಿಗಳಿಂದ ಮನ್ನಿಸುವುದೇ ಸಜ್ಜನಸ್ವಭಾವವು. ಅಣ್ಣಾ! ಈ ವನಪ್ರದೇಶವೂ, ಇಲ್ಲಿನ ತೃಣಗಳೂ, ಇಲ್ಲಿನ ಬಳ್ಳಿಗಳೂ ಈಗ ನಿನ್ನ ಪಾದಸ್ಪರ್ಶದಿಂದ ಧನ್ಯಗಳಾದುವು. ನಿನ್ನ ನಖಸ್ಪರ್ಶದಿಂದ ಇಲ್ಲಿನ ಹೂಗಿಡುಬಳ್ಳಿಗಳೆಲ್ಲವೂ ಪಾವನವಾದುವು. ನಿನ್ನ ಕೃಪಾಕಟಾಕ್ಷಸಂಬಂಧದಿಂದ ಇಲ್ಲಿನ ಬೆಟ್ಟಗಳೂ, ನದಿಗಳೂ, ಮೃಗಪಕ್ಷಿಗಳೂ ಧನ್ಯವಾದುವು. ಸಾಕ್ಷಾಲ್ಲಕ್ಷ್ಮೀದೇವಿಯೂ ಆಸೆಪಡತಕ್ಕ ನಿನ್ನ ವಕ್ಷಸ್ಥಲದ ಸ್ಪರ್ಶದಿಂದ ಗೋಕುಲದಲ್ಲಿರುವ ಗೋಪಾಂಗನೆಯರೆಲ್ಲರೂ ಧನ್ಯರಾದರು. ನಿನ್ನ ಮಹಿಮೆಯಲ್ಲವೇ ಮಹಿಮೆ!" ಎಂದನು. ಹೀಗೆ ಕೃಷ್ಣನು ಕಾಂತಿವಿಶಿಷ್ಟವಾದ ಆ ಬೃಂದಾವನವನ್ನು ಸುತ್ತಿಸುತ್ತಿ, ಅದರ ಅಂದವನ್ನು ನೋಡಿ, ಸಂತೋಷಿಸುತ್ತ, ಅಲ್ಲಲ್ಲಿನ ಬೆಟ್ಟಗಳಲ್ಲಿಯೂ, ನದೀತೀರಗಳಲ್ಲಿಯೂ ಹಸುಗಳನ್ನು ಮೇಯಿಸುತ್ತ, ತನ್ನ ಅನುಚರರಾದ ಬಾಲಕರೊಡನೆ ಸಂಚರಿಸುತಿದ್ದನು. ಆಗ ಕೃಷ್ಣನ ಆಟಪಾಟಗಳನ್ನು ಕೇಳಬೇಕೆ! ಅಲ್ಲಲ್ಲಿ ಮಕರಂದಪಾನದಿಂದ ಮದಿಸಿದ ಭ್ರಮರಗಳು ಝುಂಕರಿಸುವುದನ್ನು ಕೇಳಿ, ಅದರಂತೆ ತಾನೂ ಕೂಗುವನು. ಹಂಸಗಳ ಕೂಗನ್ನು ಕೇಳಿದಾಗ,ಅದರಂತೆ ಕೂಗುವನು.ನವಿಲುಗಳ ಕುಣಿತವನ್ನು ಕಂಡಾಗ ಅದರಂತೆ ಕುಣಿಯುವನು. ಹೀಗೆ ತನ್ನ ಆಟಪಾಟಗಳಿಂದ ತನ್ನ ಸ್ನೇಹಿತರೆಲ್ಲರನ್ನೂ ನಗಿಸುತ್ತ. ಅವರೆಲ್ಲರೂ ತನ್ನ ಕೀರ್ತಿಯನ್ನು ಕೊಂಡಾಡುತ್ತಿರಲು, ಬಲರಾಮನನ್ನು ಮುಂದಿಟ್ಟುಕೊಂಡು ಅಲ್ಲಲ್ಲಿ ವಿನೋದಿಸುತಿದ್ದನು. ಮತ್ತು ಹಸುಗಳು ಹುಲ್ಲಿನ ಆಸೆಯಿಂದ ತಮ್ಮ ಗುಂಪನ್ನು ಬಿಟ್ಟು ದೂರಕ್ಕೆ ಹೋದಾಗ, ಅವುಗಳಿಗೆ ತಕ್ಕಂತೆ ಮುದ್ದುಮುದ್ದಾದ ಹೆಸರನ್ನಿಟ್ಟು, ಮೇಘಧ್ವನಿಯಂತೆ ಗಂಭೀರಸ್ವರದಿಂದ ಸಮೀಪಕ್ಕೆ ಕರೆಯುವನು. ಒಮ್ಮೊಮ್ಮೆ ಆ ವನದಲ್ಲಿ ಚಕೋರಪಕ್ಷಿಗಳೂ,

ಕ್ರೌಂಚಪಕ್ಷಿಗಳೂ, ಚಕ್ರವಾಕಗಳೂ, ಭರದ್ವಾಜಗಳೂ, ನವಿಲುಗಳೂ ಕೂಗುವ ಧ್ವನಿಯನ್ನು ಕೇಳಿ ಅದರಂತೆಯೇ ತಾನೂ ಕೂಗುವನು. ಹುಲಿ, ಸಿಂಹ, ಮೊದಲಾದ ಕ್ರೂರಮೃಗಗಳನ್ನು ಕಂಡು ಭಯಪಟ್ಟು ಓಡುತ್ತಿರುವ ಮೃಗಗಳನಡುವೆ, ತಾನೂ ಭಯಪಟ್ಟಂತೆ ಓಡುವನು. ಬಲರಾಮನು ಈ ಆಟಪಾಟಗಳಿಂದ ಬಹಳವಾಗಿ ಆಯಾಸಪಟ್ಟು, ಶ್ರಮಪರಿಹಾರಾರ್ಥವಾಗಿ ಯಾವನಾದರೂ ಒಬ್ಬ ಸ್ನೇಹಿತನ ತೊಡೆಯಮೇಲೆ ತಲೆಯಿಟ್ಟು ಮಲಗಿದಾಗ, ಕೃಷ್ಣನು ತಾನಾಗಿಯೇ ಬಂದು, ತನ್ನ ಕೈಯಿಂದ ಅವನ ಕಾಲುಗಳನ್ನೊತ್ತಿ ಉಪಚರಿಸುವನು. ಅಲ್ಲಲ್ಲಿ ಗೋಪಬಾಲಕರು ವಿನೋದದಿಂದ ಕುಣಿದಾಡುತ್ತಿರುವಾಗಲೂ, ಹಾಡುತ್ತಿರುವಾಗಲೂ, ಓಡುತ್ತಿರುವಾಗಲೂ, ಒಬ್ಬರಿಗೊಬ್ಬರು ಕೈಕಲೆತು ವಿನೋದದಿಂದ ಜಗಳ (ಕುಸ್ತಿ) ವಾಡುತ್ತಿರುವಾಗಲೂ, ರಾಮಕೃಷ್ಣರಿಬ್ಬರೂ ಒಬ್ಬೊಬ್ಬನ ಪಕ್ಷವನ್ನು ಹಿಡಿದು “ಭಲೆ! ಶಹಬಾಸು” ಎಂದು ಬೆನ್ನುತಟ್ಟಿ ಪ್ರೋತ್ಸಾಹಿಸುತ್ತ, ನೋಡಿ ನಗುತ್ತಿರುವರು. ಮತ್ತೊಮ್ಮೆ ಕೃಷ್ಣನು ತನಗೆ ಸಮಾನನಾದ ಗೋಪಬಾಲಕನೊಡನೆ ಬಾಹುಯುದ್ಧವನ್ನು ಮಾಡಿ, ಆಯಾಸಪರಿಹಾರಾರ್ಥವಾಗಿ ಮರದಕೆಳಗೆ ಪಲ್ಲವಗಳನ್ನು ಹಾಸಿಕೊಂಡು, ತನ್ನ ಸ್ನೇಹಿತನೊಬ್ಬನ ತೊಡೆಯಮೇಲೆ ತಲೆಯಿಟ್ಟು ಮಲಗುವನು. ಆಗ ಕೃಷ್ಣನಿಗೆ ಕೆಲವರು ಕಾಲೊತ್ತುವರು! ಕೆಲವರು ಬೀಸುವರು! ಕೆಲವರು ಅವನ ಸುತ್ತಲೂ ಕುಳಿತು ಮಧುರಧ್ವನಿಯಿಂದ ಹಾಡುತ್ತಿರುವರು. ಹೀಗೆ ಕೃಷ್ಣನು ತನ್ನ ಸ್ವರೂಪವನ್ನೂ ಮಹಿಮೆಯನ್ನೂ ಬೇರೊಬ್ಬರಿಗೆ ತಿಳಿಸದಂತೆ, ತನ್ನಮಾಯೆಯಿಂದ ಗೊಲ್ಲರೊಡನೆ ಗೊಲ್ಲನಾಗಿ ನಟನಗಳನ್ನು ಮಾಡುತ್ತಿದ್ದನು. ತಾನು ಸಾಕ್ಷಾಲ್ಲಕ್ಷ್ಮೀದೇವಿಯ ಕರಕಮಲದಿಂದ ಒತ್ತಲ್ಪಟ್ಟ ಪಾದಾರವಿಂದವುಳ್ಳವನಾಗಿದ್ದರೂ, ಪ್ರಾಕೃತರಾದ ಗೊಲ್ಲಮಕ್ಕಳೊಡನೆ ತಾನೂ ಪ್ರಾಕೃತನಂತೆ ಕಾಣುತ್ತ, ನಡುನಡುವೆ ತನ್ನ ಅದ್ಭುತಕಾರ್ಯಗಳಿಂದ ತನ್ನ ಸರ್ವೇಶ್ವರತ್ವವನ್ನು ಹೊರಪಡಿಸುತಿದ್ದನು. ಹೀಗಿರುವಾಗ ಒಮ್ಮೆ ಬಲರಾಮಕೃಷ್ಣರಿಗೆ ಪರಮಮಿತ್ರನಾಹು ಶ್ರೀದಾಮನೆಂಬ ಗೋಪಾಲನೊಬ್ಬನು, ಸುಬಲ, ಸ್ತೋಕ, ಕೃಷ್ಣ, ಮೊದಲಾದ ಇತರ

ಬಾಲಕರೊಡನೆ ಕಲೆತು, ರಾಮಕೃಷ್ಣರು ನಿಂತಿದ್ದ ಸ್ಥಳಕ್ಕೆ ಬಂದು ಸಂತೋಷೋತ್ಸಾಹಗಳಿಂದ ಹೀಗೆಂದು ಹೇಳುವನು. "ಓ ರಾಮಾ! ರಾಮಾ! ನೀನು ಮಹಾಬಲಾಢ್ಯನಲ್ಲವೆ ? ಕೃಷ್ಣಾ! ನೀನು ದುಷ್ಟರನ್ನಡಗಿಸತಕ್ಕವನಲ್ಲವೆ? ಅದೋ ನೋಡಿರಿ! ಇಲ್ಲಿಗೆ ಸ್ವಲ್ಪದೂರದಲ್ಲಿ ಒಂದು ದೊಡ್ಡ ತಾಳೆಯ ತೋಪು ಕಾಣುವುದು!ಅಲ್ಲಿನ ಮರದಲ್ಲಿ ಬೇಕಾದಷ್ಟು ಹಣ್ಣುಗಳು ಬಿಟ್ಟಿರುವುವು. ಎಷ್ಟೋ ಹಣ್ಣುಗಳು ಚೆನ್ನಾಗಿ ಮಾಗಿ ಮರದಿಂದ ಉದಿರಿ ಬಿದ್ದಿರುವುವು. ಈಗಲೂ ಹಣ್ಣುಗಳು ಉದಿರುತ್ತಿರುವುವು. ಆದರೇನು ? ಆಮರದ ಕೆಳಗೆ ಧೇನುಕನೆಂಬ ದುರಾತ್ಮನಾದ ರಾಕ್ಷಸನೊಬ್ಬನು, ಬೇರೆ ಪ್ರಾಣಿಗಳನ್ನೇ ಅಲ್ಲಿಗೆ ಬರಗೊಡದೆ, ತಾನೇ ತಾನಾಗಿ ಆ ಸ್ಥಳವನ್ನಾಕ್ರಮಿಸಿ, ಅವುಗಳನ್ನು ಯಥೇಚ್ಛವಾಗಿ ಭಕ್ಷಿಸುತ್ತಿರುವನು.ರಾಮಾ!ಕೃಷ್ಣಾ! ಆ ರಾಕ್ಷಸನು ಬಹಳ ವೀರ್ಯವಂತನು! ಅವನು ಆ ತೋಪಿನಲ್ಲಿ, ತನ್ನಂತೆಯೇ ಮಹಾಬಲವುಳ್ಳ ಅನೇಕಮಂದಿ ಅನುಚರರೊಡಗೂಡಿ, ಕತ್ತೆಯ ಆಕಾರದಿಂದ ಸಂಚರಿಸುತ್ತಿರುವನು. ಕೃಷ್ಣಾ! ಅವನು ನರಭಕ್ಷಕನಾದ ರಾಕ್ಷಸನಾದುದರಿಂದ, ಮನುಷ್ಯರೊಬ್ಬರೂ ಆಕಡೆಗೆ ತಲೆಯಿಕ್ಕುವುದಿಲ್ಲ ಅವನ ಭಯದಿಂದ ಬೇರೆ ಯಾವ ಪ್ರಾಣಿಗಳೂ ಅಲ್ಲಿಗೆ ಕಾಲಿಕ್ಕಲಾರವು. ಇದುವರೆಗೆ ಆ ಹಣ್ಣನ್ನು ರುಚಿನೋಡಿದವರೇ ಇಲ್ಲ. ಆಹಾ! ಆ ಹಣ್ಣುಗಳ ಸುವಾಸನೆಯು ಇಲ್ಲಿಗೇ ತಿಳಿಯುತ್ತಿರುವುದು ನೋಡಿರಿ ! ಆ ವಾಸನೆಯು ಮೂಗಿಗೆ ಬಂದಾಗಿನಿಂದ ನಮ್ಮ ಬಾಯಲ್ಲಿ ನೀರೊಡೆಯುತ್ತಿರುವುದು. ಆ ಹಣ್ಣುಗಳನ್ನು ಹೇಗಾದರೂ ಸಂಪಾದಿಸಿ ತಿನ್ನಬೇಕೆಂದು ನಮ್ಮೆಲ್ಲರಿಗೂ ಬಹಳ ಆಸೆಯಾಗಿರುವುದು. ರಾಮಾ ! ಅದನ್ನು ನಮಗೆ ಸಂಪಾದಿಸಿಕೊಡಲು ನಿನಗೆ ಸಾಧ್ಯವೆ? ಧೈರ್ಯವಿದ್ದರೆ ಹೊರಡು" ಎಂದರು. ಈ ಮಾತನ್ನು ಕೇಳಿದೊಡನೆ, ರಾಮಕೃಷ್ಣರಿಬ್ಬರೂ ತಮ್ಮ ಮಿತ್ರರಿಗೆ ಪ್ರಿಯವನ್ನುಂಟುಮಾಡಬೇಕೆಂಬ ಉತ್ಸಾಹದಿಂದ ನಗುತ್ತ, ಮುಂದೆ ಹೊರಟರು. ಕೆಲವು ಗೋಪಬಾಲಕರೂ ಅವರನ್ನು ಹಿಂಬಾಲಿಸಿದರು. ಎಲ್ಲರೂ ಆ ತಾಳೆಯ ತೋಪಿಗೆ ಬಂದು ಸೇರಿದರು. ಅಲ್ಲಿ ಬಲರಾಮನು ಧೈರ್ಯದಿಂದ ಮುಂದೆಹೋಗಿ, ಮದದಾನೆಯಂತೆ ನಾಲ್ಕಾರು ತಾಳೆಯ ಮರಗಳನ್ನು ತನ್ನ

ಕೈಗಳಿಂದ ಬಲವಾಗಿ ಅಡಿಸುತ್ತ,ಮರದಿಂದ ಬಹಳವಾಗಿ ಹಣ್ಣುಗಳನ್ನು ದಿರಿ ಸಿದನು ಹಣ್ಣುಗಳು ಬಿದ್ದ ಶಬ್ದವನ್ನು ಕೇಳಿದೊಡನೆ, ಅಲ್ಲಿ ಖರರೂಪದಿಂ ದಿದ್ದ ಧೇನುಕಾಸುರನು, ಪರ್ವತಸಹಿತವಾಗಿ ಅಲ್ಲಿನ ನೆಲವನ್ನು ನಡುಗಿಸು ವಂತೆ ಅತಿವೇಗದಿಂದೋಡಿ ಬಂದನು. ಮಹಾಬಲಾಢ್ಯನಾದ ಆ ರಾಕ್ಷಸನು, ತನ್ನ ಆಕಾರಕ್ಕೆ ತಕ್ಕ ಪರುಷಸ್ವರದಿಂದ ಕೂಗುತ್ತ, ನೆಟ್ಟಗೆ ಬಲರಾಮನ ಬಳಿಗೆಬಂದು, ತನ್ನ ಹಿಂದಿನ ಕಾಲುಗಳಿಂದ ಆತನ ಎದೆಯಮೇಲೆ ಅಪ್ಪಳಿಸಿ ಹಿಂದಕ್ಕೋಡಿದನು! ತಿರುಗಿ ಆ ಬಲರಾಮನನ್ನು ಸುತ್ತಿಬಂದು, ಮತ್ತೊ ಮ್ಮೆ ಇನ್ನೂ ವೇಗದಿಂದ ಅವನನ್ನೊದೆದನು. ಧೀರನಾದ ಬಲರಾಮ ನು ಆ ಪ್ರಹಾರವೊಂದನ್ನೂ ಲಕ್ಷ್ಯಮಾಡದೆ, ಆ ಕತ್ತೆಯ ಹಿಂದಿನ ಕಾ ಲುಗಳೆರಡನ್ನೂ ಸೇರಿಸಿ ಹಿಡಿದು, ಒಂದೇ ಕೈಯಿಂದ ಮೇಲಕ್ಕೆತ್ತಿ, ಗಿರಗಿರ ನೆ ತಿರುಗಿಸಿದನು. ಹೀಗೆ ತಿರುಗಿಸುತ್ತಿರುವಾಗ, ಅದರ ವೇಗದಿಂದಲೇ ಆ ಕ ತ್ತೆಗೆ ಉಸಿರುಕಟ್ಟಿ, ಪ್ರಾಣವಿಯೋಗವಾಯಿತು. ಆ ಮೃತಶರೀರವನ್ನೇ ಬಲರಾಮನು ಮತ್ತಷ್ಟು ವೇಗದಿಂದ ತಿರುಗಿಸಿ. ಆತಾಳೆಯ ಮರದಮೇಲಕ್ಕೆ ಬೀಸಿಬಡಿದನು. ಈಪ್ರಹಾರವೇಗದಿಂದ, ಬಹಳದೃಢವಾಗಿಯೂ,ವಿಸ್ತಾರವಾ ಗಿಯೂ ಬೆಳೆದಿದ್ದ ಆ ತಾಳೆಯ ಮರವು ಎರಡುತುಂಡಾಗಿ ಮುರಿದು ಬಿದ್ದಿ ತು. ಈ ಮರವು ಮುರಿದು ಬೀಳುವಾಗ,ಸಮೀಪದಲ್ಲಿದ್ದ ಮತ್ತೊಂದು ಮರ ಕ್ಕೆ ತಗುಲಿ, ಆಮರವೂ ಮುರಿದುಬಿದ್ದಿತು. ಆ ಮರವು ಇನ್ನೊಂದು ಮ ರಕ್ಕೆ ತಗುಲಿ, ಅದೂ ಮುರಿದು ಬಿದ್ದಿತು. ಹೀಗೆಯೇ ಆ ಬಲರಾಮನು ಲೀ ಲಾಮಾತ್ರದಿಂದ ಒಂದುಮರಕ್ಕೆ ಬೀಸಿಬಿಡಿದ ಆ ಮೃತದೇಹದಿಂದ, ಆ ತೋಪಿನಲ್ಲಿ ಅನೇಕತಾಳವೃಕ್ಷಗಳು ಮುರಿದುಬಿದ್ದುದಲ್ಲದೆ, ಬಿರುಗಾಳಿ ಯ ಬಡಿತದಿಂದ ಹೇಗೋ ಹಾಗೆ, ಆ ತೋಪಿನ ಎಲ್ಲಾಮರಗಳೂ ಕದ ಲಿಬಿದ್ದುವು. ನೆಲವೆಲ್ಲವೂ ನಡುಗಿತು. ಓ ಪರೀಕ್ಷಿದ್ರಾಜಾ! ಆ ಬಲರಾ ಮನ ಭುಜಬಲಕ್ಕೆ ಇದೊಂದಾಶ್ಚರ್ಯವಲ್ಲ ವಸ್ತ್ರದಲ್ಲಿ ನೂಲೆ ಳೆಗಳು ಹೇಗೋ ಹಾಗೆ, ಯಾವನಲ್ಲಿ ಈ ಚರಾಚರಾತ್ಮಕವಾದ ಈ ಸ ಮಸ್ತಜಗತ್ತೂ ಹಾಸುಹೊಕ್ಕಾಗಿ ಸೇರಿರುವುದೋ, ಅಂತಹ ಜಗದೀಶ್ವರ ನಾದ, ಅನಂತನಾದ, ಭಗವಂತನಲ್ಲಿ, ಈ ಶಕ್ತಿಯಿರುವುದೇನೂ ಒಂದು

ದೊಡ್ಡದಲ್ಲ. ಹೀಗೆ ಧೇನುಕನು ಮೃತನಾಗಿ ಬಿದ್ದುದನ್ನು ಕಂಡೊಡನೆ, ಅವನಿಗೆ ಅನುಜೀವಿಗಳಾಗಿ ಅಲ್ಲಿ ಸೇರಿಕೊಂಡಿದ್ದ ಬೇರೆ ಗರ್ದಭಗಳೆಲ್ಲವೂ, ಬಂಧುಮರಣದಿಂದುಂಟಾದ ದುಃಖದಿಂದಲೂ, ಕೋಪದಿಂದಲೂ ಮುಂದುಬಿದ್ದು, ರಾಮಲಕ್ಷ್ಮಣರಿಬ್ಬರನ್ನೂ ಸುತ್ತಿಮುತ್ತಿ ಕಾಲಿಂದೊದೆಯುವುದಕ್ಕೆ ಯತ್ನಿಸಿದುವು. ಇದನ್ನು ನೋಡಿ ರಾಮಕೃಷ್ಣರಿಬ್ಬರೂ, ತಮ್ಮತಮ್ಮ ಕೈಗೆ ಸಿಕ್ಕಿದ ಕತ್ತೆಗಳನ್ನು ಹಿಂಗಾಲುಗಳಲ್ಲಿ ಹಿಡಿದು, ಗಿರಗಿರನೆ ತಿರುಗಿಸಿ, ಲೀಲಾಮಾತ್ರದಿಂದ ಅಲ್ಲಲ್ಲಿದ್ದ ಮರಗಳಮೇಲೆ ಬೀಸಿಬಿಡಿದು, ಕ್ಷಣಮಾತ್ರದಲ್ಲಿ ಅವೆಲ್ಲವನ್ನೂ ಧ್ವಂಸಮಾಡಿದರು. ಆಗ ಆ ವನಪ್ರದೇಶವೆಲ್ಲಲ್ಲವೂ, ಅಲ್ಲಲ್ಲಿ ಉದುರಿಬಿದ್ದ ತಾಳೆಯ ಹಣ್ಣುಗಳಿಂದಲೂ, ಸತ್ತುಬಿದ್ದ ಕತ್ತೆಯ ಶರೀರಗಳಿಂದಲೂ, ತುಂಡುಬಿದ್ದ ಮರದ ಕೊನೆಗಳಿಂದಲೂ ಕಿಕ್ಕಿರಿದು ತುಂಬಿ, ಕೆಂಪು, ಬಿಳುಪು, ಕಪ್ಪುಬಣ್ಣದ ಮೇಘಗಳಿಂದ ವ್ಯಾಪ್ತವಾದ ಗಗನಪ್ರದೇಶದಂತೆ ತೋರುತಿತ್ತು, ರಾಮಕೃಷ್ಣರ ಈ ಅದ್ಭುತಕಾರ್ಯವನ್ನುನೋಡಿ ದೇವತೆಗಳು ಆಕಾಶದಿಂದ ಪುಷ್ಪವರ್ಷವನ್ನು ಕರೆದರು. ದೇವದುಂದುಭಿಗಳು ಮೊಳಗಿದುವು. ದೇವರ್ಷಿಗಳೆಲ್ಲರೂ ಜಯಘೋಷದಿಂದ ಸ್ತೋತ್ರಮಾಡುತಿದ್ದರು. ಧೇನುಕಾಸುರನು ಹತನಾದಮೇಲೆ, ಮನುಷ್ಯರೆಲ್ಲರೂ ನಿರ್ಭಯವಾಗಿ ಆ ವನಕ್ಕೆ ಪ್ರವೇಶಿಸಿ, ಅಲ್ಲಿನ ತಾಳೆಯ ಹಣ್ಣುಗಳನ್ನು ಯಥೇಚ್ಛವಾಗಿ ಭಕ್ಷಿಸಬಹುದಾಯಿತು. ಪಶುಗಳೆಲ್ಲವೂ ಅಲ್ಲಿಗೆ ಬಂದು ಸಂತೋಷದಿಂದ ಹುಲ್ಲನ್ನು ಮೇಯತೊಡಗಿದುವು. ರಾಜಾ! ಯಾವನ ಹೆಸರನ್ನು ಕಿವಿಯಿಂದ ಕೇಳಿದರೂ, ಬಾಯಿಂದ ಹೇಳಿದರೂ ಸಮಸ್ತಪಾಪಗಳೂ ನೀಗುವುವೋ, ಅಂತಹ ಪುಂಡರೀಕಾಕ್ಷನಾದ ಶ್ರೀಕೃಷ್ಣನು, ತನ್ನ ಅನುಚರರಾದ ಗೋಪಬಾಲಕರೊಡಗೂಡಿ, ಬಲರಾಮಸಹಿತನಾಗಿ ಹಿಂತಿರುಗಿ ಮಂದೆಗೆ ಬರುವಾಗ,ಅವನವೇಷವನ್ನು ಕೇಳಬೇಕೆ?ಹಸುಗಳ ಪಾದಧೂಳಿಯಿಂದ ಕೊಳೆಗಟ್ಟಿದ ಮುಂಗುರುಳು! ಅದರ ಮೇಲೆ ನವಿಲುಗರಿಯ ಕಣ್ಣು!ತಲೆಯಲ್ಲಿ ಮುಡಿದ ಕಾಡುಹೂವಿನದಂಡೆ!ಅಂದವಾದ ದೃಷ್ಟಿ! ಮುಖದಲ್ಲಿ ಮುಗುಳ್ನಗೆ! ಇಂತಹ ದಿವ್ಯಸೌಂದರ್ಯದೊಡನೆ,ಕೊಳಲನ್ನುಬಾರಿಸುತ್ತ ಬರುವಾಗ, ಅವನ ಸಹಚರರೆಲ್ಲರೂ ಅವನ

ಅದ್ಭುತಕೀರ್ತಿಯನ್ನು ಕೊಂಡಾಡುತ್ತಿದ್ದರು. ಮುದ್ದುಕೃಷ್ಣನು ಬರುವ ಸೂಚನೆಯನ್ನು ತಿಳಿದು, ಅಲ್ಲಲ್ಲಿದ್ದ ಗೋಪಸ್ತ್ರೀಯರು, ಅವನನ್ನು ನೋಡುವ ಆತುರದಿಂದ ಗುಂಪುಗುಂಪಾಗಿ ಇದಿರುಗೊಂಡು ಬಂದರು. ಕಮಲದಲ್ಲಿ ಮಕರಂದಪಾನಕ್ಕಾಗಿ ಆತುರದಿಂದ ಬಂದು ಬೀಳುವ ಭ್ರಮರಗಳಂತೆ, ಆ ಗೋಪಾಂಗನೆಯರ ದೃಷ್ಟಿಗಳೆಲ್ಲವೂ ಶ್ರೀಕೃಷ್ಣನ ಮುಖಾರವಿಂದದಲ್ಲಿ ಮಗ್ನವಾಗಿದ್ದುವು. ಆ ಗೋಪಸ್ತ್ರೀಯರು, ಹಗಲೆಲ್ಲಾ ಆ ಕೃಷ್ಣನನ್ನು ಕಾಣದುದರಿಂದುಂಟಾದ ತಮ್ಮ ವಿರಹತಾಪವೆಲ್ಲವೂ ನೀಗುವಂತೆ, ಆ ಕೃಷ್ಣನ ಸೌಂದರ್ಯಾಮೃತವನ್ನು ಪಾನಮಾಡುತ್ತ, ಅವನಿಗೆ ನಾನಾವಿಧವಾದ ಉಪಚಾರಗಳನ್ನು ಮಾಡಿ ಊರಿಗೆ ಕರೆತಂದರು ಹೀಗೆ ಆಗೋಪಸ್ತ್ರೀಯರು ಲಜ್ಜೆಯಿಂದಲೂ, ವಿನಯದಿಂದಲೂ, ಮಂದಹಾಸದಿಂದಲೂ ತನ್ನನ್ನು ನೋಡುತ್ತ, ತನಗೆ ಮಾಡಿದ ಸತ್ಕಾರಗಳೆಲ್ಲವನ್ನೂ ಕೃಷ್ಣನು ಪ್ರೀತಿಯಿಂದ ಕೈಕೊಂಡು, ಗೋಕುಲವನ್ನು ಪ್ರವೇಶಿಸಿದನು. ಇಷ್ಟರಲ್ಲಿಯೇ ಪುತ್ರವತ್ಸಲೆಯರಾದ ರೋಹಿಣೀಯಶೋದೆಯರಿಬ್ಬರೂ, ಕೃಷ್ಣನು ಬರುವುದನ್ನು ಕೇಳಿ, ಆತುರದಿಂದ ಬಂದು, ಕಾಲೋಚಿತವಾಗಿ ಅವನಿಗೆ ಬೇಕಾದ ಇಷ್ಟವಸ್ತುಗಳನ್ನು ಕೊಟ್ಟು ಉಪಚರಿಸಿ ಕರೆದುಕೊಂಡು ಹೋದರು. ಒಡನೆಯೇ ಕೆಲವು ಗೋಪಸ್ತ್ರೀಯರು ಆ ರಾಮಕೃಷ್ಣರಿಬ್ಬರಿಗೂ ಶ್ರಮಪರಿಹಾರಾರ್ಥವಾಗಿ ಮೈಯನೊತ್ತಿ ಅಭ್ಯಂಗನಗಳನ್ನು ಮಾಡಿಸಿದರು. ಕೆಲವರು ಗಂಧಪುಷ್ಪಾದಿಗಳನ್ನು ತಂದೊಪ್ಪಿಸಿದರು. ಕೆಲವರು ಪಟ್ಟೆಮಡಿಯನ್ನು ತಂದಿಟ್ಟರು. ರಾಮಕೃಷ್ಣರಿಬ್ಬರೂ, ಈ ವಿಧವಾದ ನಾನಾಬಗೆಯ ಉಪಚಾರಗಳಿಂದ ಶ್ರಮಪರಿಹಾರವನ್ನು ಮಾಡಿಕೊಂಡು, ಗಂಧಪುಷ್ಪಗಳಿಂದಲೂ, ವಸ್ತ್ರಾಭರಣಗಳಿಂದಲೂ ಅಲಂಕೃತರಾದಮೇಲೆ, ಅವರ ಮಾತೆಯರು, ಉತ್ತಮವಾದ ಭೋಜನಪದಾರ್ಥಗಳೊಡನೆ ಅನ್ನವನ್ನು ತಂದಿಕ್ಕಿದರು ಅಣ್ಣತಮ್ಮಂದಿರಿಬ್ಬರೂ ಅದನ್ನು ಭೋಜನಮಾಡಿ ಹಾಸಿಗೆಯಲ್ಲಿ ಸುಖವಾಗಿ ಮಲಗಿದರು.

ಓ ಪರೀಕ್ಷಿದ್ರಾಜಾ ! ಹೀಗೆ ಕೃಷ್ಣನು ಬೃಂದಾವನದಲ್ಲಿ ಸುಖವಾಗಿರುತ್ತ, ಒಮ್ಮೆ ಬಲರಾಮನೊಬ್ಬನನ್ನು ಬಿಟ್ಟು, ಉಳಿದ ಗೋಪಾ

ಲಬಾಲಕರೊಡನೆ ಯಮುನಾನದಿಯ ತೀರಕ್ಕೆ ಹೋದನು ಅಲ್ಲಿ ಹಸುಗಳನ್ನು ಮೇಯಿಸುತ್ತಿರುವಾಗ, ಬಿಸಿಲು ಬಹಳವಾದುದರಿಂದ, ಅಲ್ಲಿದ್ದ ಗೋವುಗಳಿಗೂ, ಗೋಪಾಲಕರಿಗೂ ಬಹಳ ದಾಹವುಂಟಾಯಿತು. ದಾಹಶಾಂತಿಗಾಗಿ ನೀರನ್ನು ಕುಡಿಯಬೇಕೆಂದು, ಎಲ್ಲರೂ ನದಿಯ ಒಂದಾನೊಂದು 'ಮಡುವಿನಲ್ಲಿದರು. ಆ ಮಡುವಿನಲ್ಲಿ ಕಾಳಿಯನೆಂಬ ಒಂದಾನೊಂದು ಕ್ರೂರಸರ್ಪವು ಬಹುಕಾಲದಿಂದ ಸೇರಿಕೊಂಡಿದ್ದಿತು. ಅದರ ವಿಷದಿಂದ ಆ ಮಡುವಿನ ನೀರೆಲ್ಲವೂ ಕೇವಲವಿಷಪ್ರಾಯವಾಗಿದ್ದಿತು. ಇದನ್ನು ತಿಳಿಯದೆ ಗೋಪಾಲಕರೂ, ಗೋವುಗಳೂ ಅಲ್ಲಿ ನೀರನ್ನು ಕುಡಿದುಬಿಟ್ಟುದರಿಂದ, ಅದನ್ನು ಕುಡಿದವರೆಲ್ಲರೂ ಆ ಕ್ಷಣವೇ ಮೂರ್ಛಿತರಾಗಿ ಕೆಳಗೆ ಬಿದ್ದರು. ಇದನ್ನು ಕಂಡೊಡನೆ ಮೃತಸಂಜೀವನಾದಿಸಕಲಯೋಗಗಳಿಗೂ ಈಶ್ವರನಾದ ಶ್ರೀಕೃಷ್ಣನು, ಅಮೃತಧಾರೆಯನ್ನು ವರ್ಷಿಸತಕ್ಕ ತನ್ನ ದೃಷ್ಟಿಯಿಂದ, ಕೂಡಲೇ ಅವರೆಲ್ಲರನ್ನೂ ಬದುಕಿಸಿದನು. ಎಲ್ಲರೂ ನಿದ್ರೆಯಿಂದೇಳುವಂತೆ ಪುನರ್ಜೀವಿತರಾಗಿ ಮೇಲೆದ್ದುಬಂದು, ಹಾಗಾಗುವುದಕ್ಕೆ ಕಾರಣವೇನೆಂದು ಆಶ್ಚರ್ಯದಿಂದ ಒಬ್ಬರ ಮುಖವನ್ನೊಬ್ಬರು ನೋಡುತ್ತ ಸ್ತಬ್ಧರಾಗಿ ನಿಂತರು. ಕೊನೆಗೆ ವಿಷಸಂಬಂಧದಿಂದ ತಮಗೆ ಈ ಮೂರ್ಛೆಯುಂಟಾಗಿರಬೇಕೆಂದೂ, ಭಗವಂತನಾದ ಶ್ರೀಕೃಷ್ಣನ ಕೃಪಾಕಟಾಕ್ಷದಿಂದಲೇ ತಮಗೆ ಪುನರ್ಜೀವವುಂಟಾಗಿರಬೇಕೆಂದೂ ಅವರ ಮನಸ್ಸಿಗೆ ನಿರ್ಧಾರವುಂಟಾಯಿತು. ಇದು ಹದಿನೈದನೆಯ ಅಧ್ಯಾಯವು.

---

## ಕಾಳಿಯಮರ್ದನವು

ಓ ರಾಜೇಂದ್ರಾ! ಆಮೇಲೆ ಸರ್ವಸಾಕ್ಷಿಯಾದ ಕೃಷ್ಣನು, ಆ ಮಡುವಿನಲ್ಲಿ ಕಾಳಸರ್ಪವೊಂದು ಸೇರಿಕೊಂಡಿರುವುದರಿಂದ, ಆ ಜಲವು ವಿಷಮಯವಾಗಿರುವುದನ್ನು ತಿಳಿದು, ಆ ತೀರ್ಥವನ್ನು ವಿಷಸಂಬಂಧವಿಲ್ಲದ ಹಾಗೆ ಮಾಡಬೇಕೆಂದೆಣಿಸಿ, ಅಲ್ಲಿದ್ದ ಕಾಳಿಯನನ್ನು ಅಲ್ಲಿಂದ ಹೊರಡಿಸಿ

ಬಿಟ್ಟನು." ಎಂದು ಹೇಳಿದ ಶುಕಮಹರ್ಷಿಯ ವಾಕ್ಯವನ್ನು ಕೇಳಿ ತಿರುಗಿ ಪರೀಕ್ಷಿದ್ರಾಜನು ಪ್ರಶ್ನೆಮಾಡುವನು.

ಓ ಮುನೀಂದ್ರಾ! ಸಣ್ಣಬಾಲಕನಾದ ಆ ಕೃಷ್ಣನು. ಅಗಾಧವಾದ ಮಡುವಿನಲ್ಲಿ ಸೇರಿಕೊಂಡಿದ್ದ ಆ ಮಹಾಸರ್ಪವನ್ನು ನಿಗ್ರಹಿಸಿದುದು ಹೇಗೆ? ಆ ಸರ್ಪವು ಬಹುಕಾಲದಿಂದ ಅಲ್ಲಿ ಸೇರಿಕೊಂಡಿತ್ತೆಂದು ಹೇಳಿದೆಯಲ್ಲವೆ? ಆ ಸರ್ಪವು ಅಲ್ಲಿ ಬಂದು ಸೇರುವುದಕ್ಕೆ ಕಾರಣವೇನು? ಓ ಮಹರ್ಷೀ! ಮಹಾಮಹಿಮೆಯುಳ್ಳವನಾಗಿಯೂ, ಸರ್ವಸ್ವತಂತ್ರನಾಗಿಯೂ ಇರುವ ಭಗವಂತನು, ಕೃಷ್ಣರೂಪದಿಂದ ಗೋಪಕುಲದಲ್ಲಿ ಜನಿಸಿ ನಡೆಸಿದ ಕಾರ್ಯವೊಂದೊಂದೂ ಅತ್ಯದ್ಭುತವಾಗಿರುವುದು. ಆತನ ಚರಿತ್ರವೊಂದೊಂದೂ ಅಮೃತಪ್ರಾಯವಾಗಿರುವುದು. ಆ ಶ್ರೀಕೃಷ್ಣನ ಚರಿತ್ರಾಮೃತವನ್ನು ಪಾನಮಾಡುವುದರಲ್ಲಿ ಯಾವನಿಗೆ ತಾನೇ ತೃಪ್ತಿಯುಂಟಾಗುವುದು! ಆದುದರಿಂದ ನೀನು ಆ ವೃತ್ತಾಂತವನ್ನು ಸವಿಸ್ತರವಾಗಿ ನನಗೆ ತಿಳಿಸಬೇಕು" ಎಂದನು. ಅದಕ್ಕಾ ಶುಕಮಹರ್ಷಿಯು "ಓ ರಾಜೇಂದ್ರಾ! ಕೇಳು! ಆ ಯಮುನಾನದಿಯ ಮಡುವಿನಲ್ಲಿ ಕಾಳಿಯನೆಂಬ ಮಹಾಸರ್ಪವು ಸೇರಿಕೊಂಡುದುಮೊದಲು, ಅದರ ವಿಷಾಗ್ನಿಯ ಬೇಗೆಯಿಂದ, ಆ ಮಡುವಿನ ನೀರೆಲ್ಲವೂ ಕುದಿಯುತಿದ್ದಿತು. ಆ ಮಡುವಿನಮೇಲೆ ಬೀಸಿ ಬರುವಗಾಳಿಯು ತಗುಲಿದಮಾತ್ರಕ್ಕೆ, ಆಕಾಶದಲ್ಲಿ ಹಾರುತ್ತಿರುವ ಪಕ್ಷಿಗಳೆಲ್ಲವೂ ಬೆಂದುಬಿಳುತಿದ್ದುವು! ಅದರ ತೀರಕ್ಕೆಬಂದು ಸಂಚರಿಸತಕ್ಕ ಮೃಗಾದಿಗಳೂ, ಅಲ್ಲಿ ಬೆಳೆದ ವೃಕ್ಷಗಳೂ, ಆ ವಿಷದ ಗಾಳಿಯವೇಗದಿಂದ ದಗ್ಧವಾಗುತಿದ್ದುವು. ಇದರಿಂದ ಆ ಮಡುವಿನ ಸುತ್ತಲೂ, ಮೇಲೆಯೂ, ಬಹುದೂರದವರೆಗೆ ಯಾವ ಪ್ರಾಣಿಗಳಾಗಲಿ, ಯಾವಗಿಡಗಳಾಗಲಿ ಬದುಕುವುದಕ್ಕೇ ಅವಕಾಶವಿಲ್ಲದಂತಿದ್ದಿತು. ಹೀಗೆ ಅತಿಕ್ರೂರವೀರ್ಯವುಳ್ಳ ಆ ವಿಷದ ವೇಗದಿಂದ, ಆಮಡುವಿನ ನೀರೆಲ್ಲವೂ ಸ್ನಾನಪಾನಗಳಿಗೆ ಯೋಗ್ಯವಲ್ಲದೆ ಕೆಟ್ಟುಹೋಗಿರುವುದನ್ನು ನೋಡಿ, ದುಷ್ಟನಿಗ್ರಹಾರ್ಥವಾಗಿಯೇ ಲೋಕದಲ್ಲಿ ಅವತಾರವನ್ನೆತ್ತಿರುವ ಶ್ರೀಕೃಷ್ಣನು, ಆಸರ್ಪವನ್ನು ನಿಗ್ರಹಿಸಬೇಕೆಂದು ಮನಸ್ಸಿನಲ್ಲಿ ಸಂಕಲ್ಪಿಸಿಬಿಟ್ಟನು. ಒಡನೆಯೇ ಕೃಷ್ಣನು

ತನ್ನ ನಡುದಟ್ಟಿಯನ್ನು ದೃಢವಾಗಿ ಎಳೆದು ಕಟ್ಟಿ, ಆ ಮಡುವಿಗೆ ಸಮೀಪ ದಲ್ಲಿ ಬೆಳೆದಿದ್ದ ಒಂದೇಒಂದು ಕದಂಬವೃಕ್ಷವನ್ನು ಕಂಡು, ಅದನ್ನೇರಿ ನಿಂ ತು, ಅಲ್ಲಿ ಒಂದಾವರ್ತಿ ತನ್ನಭುಜವನ್ನು ತಟ್ಟಿ, ಮಹೋನ್ನತವಾದ ಆ ವೃ ಕ್ಷಾಗ್ರದಿಂದ ಆವಿಷದ ಮಡುವಿನಲ್ಲಿ ದುಮುಕಿದನು. ರಾಜೇಂದ್ರಾ! ವಿಷ ವೇಗದಿಂದ ಆಮಡುವಿನತೀರದಲ್ಲಿ ಯಾವಗಿಡಗಳೂ ಬೆಳೆಯದಿದ್ದಾಗ,ಆ ವೃ ಕ್ಷವೊಂದುಮಾತ್ರ ಬದುಕಿರುವುದಕ್ಕೆ ಕಾರಣವೇನೆಂದು ನೀನು ಶಂಕಿಸಬ ಹುದು. ಹಿಂದೆ ಗರುಡನು ಸ್ವರ್ಗಲೋಕದಿಂದ ಅಮೃತವನ್ನು ತರುತಿದ್ದಾ ಗ,ಒಂದಾನೊಂದು ಅಮೃತಬಿಂದುವು, ಅದರ ತೀರದಲ್ಲಿ ಬಿದ್ದಿತೆಂದೂ, ಆಸ್ಥಳದಲ್ಲಿ ಬೆಳೆದಿದ್ದ ಈ ಮರವೊಂದುಮಾತ್ರ, ವಿಷವೇಗದಿಂದ ದಗ್ಧವಾಗದೆ ಜೀವಿಸಿರುವುದೆಂದೂ ಕೇಳಬಲ್ಲೆವು. ಕೃಷ್ಣನು ಆ ಜಲದಲ್ಲಿ ಧುಮ್ಮಿಕ್ಕಿದೊಡನೆ ಆ ಮಡುವೆಲ್ಲವೂ ಉಲ್ಲೋಲಕಲ್ಲೋಲವಾಯಿ ತು. ಅದರಲ್ಲಿ ಬಹುಕಾಲದಿಂದ ನಿರ್ಭಯವಾಗಿ ವಾಸಮಾಡುತಿದ್ದ ಸರ್ಪಗಳೆಲ್ಲವೂ ಭಯದಿಂದ ನಡುಗುವಂತಾದುವು! ಒಡನೆಯೇ ಆ ಸರ್ಪಗಳೆಲ್ಲವೂ ಕೋಪಾವೇಶದಿಂದ ಬುಸುಗುಟ್ಟುತ್ತ, ಮೊದಲಿಗಿಂತ ಲೂ ಕ್ರೂರವಾದ ವಿಷವನ್ನು ಕಕ್ಕುತಿದ್ದುವು. ಈ ವಿಷವೇಗದಿಂದ ಆ ಮಡು ವಿನ ನೀರೆಲ್ಲವೂ ಕುದಿದು, ಮೇಲೆಮೇಲೆ ಉಕ್ಕಿಬರುತಿದ್ದುವು. ಭಯಂಕರ ವಾದ ಅಲೆಗಳೊಡನೆ ಅದರ ಪ್ರವಾಹವು ನಾನಾಕಡೆಗೂ ಹೊರಟು, ಸು ತ್ತಲೂ ನೂರು ಬಿಲ್ಲಳತೆಯವರೆಗೆ ವ್ಯಾಪಿಸಿತು. ರಾಜೇಂದ್ರಾ! ಅಪ್ರಮೇ ಯಪ್ರಭಾವವುಳ್ಳ ಆ ಶ್ರೀಕೃಷ್ಣನ ಪರಾಕ್ರಮಕ್ಕೆ ಇದೊಂದು ದೊಡ್ಡ ದಲ್ಲ! ಕೃಷ್ಣನು ಆ ಮಡುವಿಗೆ ಹಾರಿದೊಡನೆ, ಮದದಾನೆಯು ನೀರಿಗೆ ಬಿದ್ದಂತೆ, ತನ್ನ ತೋಳಾಟದಿಂದ ಅದನ್ನು ಉಲ್ಲೋಲಕಲ್ಲೋ ಲವಾಗಿ ಕಲಕಿ, ಅದರಲ್ಲಿ ಯಥೇಚ್ಛವಾಗಿ ಈಜಾಡುತಿದ್ದನು. ಆಗ ನೀರಿ ನ ತಳದಲ್ಲಿ ಸುಖವಾಗಿ ಮಲಗಿದ್ದ ಕಾಳಿಯಸರ್ಪನಿಗೂ, ಈಗದ್ದಲವು ಕೇ ಳಿಸಿತು. ತನ್ನ ನಿವಾಸಸ್ಥಾನಕ್ಕೆ ಏನೋ ಅಪಾಯವು ಸಂಭವಿಸಿತೆಂದು ತಿ ಳಿದು, ತಡೆಯಲಾರದ ಕೋಪಾವೇಶದಿಂದ, ತನ್ನ ಸಮಸ್ತಪರಿವಾರಗಳೊ ಡನೆ ಬುಸುಗುಟ್ಟುತ್ತ ಮೇಲೆದ್ದುಬಂದು, ಆಮಡುವಿನಲ್ಲಿ ಬಿದ್ದು ಈಜಾಡು

ತ್ತಿರುವ ಸಣ್ಣ ಬಾಲಕನನ್ನು ಕಂಡನು. ಆಗ ನೀರಿನಲ್ಲಿ ನಲಿದಾಡುತಿದ್ದ ಕೃಷ್ಣನಸೊಬಗನ್ನು ಕೇಳಬೇಕೆ? ಮೇಘದಂತೆ ಕಪ್ಪಾಗಿ ನೋಡುವವರಿಗೆ ಮೇಲೆಮೇಲೆ ಆಸೆಯನ್ನು ಹುಟ್ಟಿಸತಕ್ಕ ಸುಕುಮಾರವಾದ ಮೈ! ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆ! ನಡುವಿಗೆ ಸುತ್ತಿಬಿಗಿದ ಪೀತಾಂಬರವೆಂಬ ಪಟ್ಟೆ ಮಡಿ! ಮುಖದಲ್ಲಿ ಮುಗುಳ್ನಗೆ! ಕಮಲದಳದಂತೆ ಮನೋಹರವಾದ ಅಂಗಾಲುಗಳು! ಇಂತಹ ಸುಂದರಾಕಾರವುಳ್ಳ ಆ ಬಾಲಕನು, ನಿರ್ಭಯವಾಗಿ ನೀರಿನಲ್ಲಿಳಿದು, ಸಂತೋಷದಿಂದ ಈಜಾಡುವುದನ್ನು ಕಂಡು, ಕಾಳಿಯನು, ಕೋಪವನ್ನು ತಡೆಯಲಾರದೆ, ಅವನ ಮೈಗೆ ಬಲವಾಗಿ ಸುತ್ತಿಕೊಂಡು, ಆತನ ಮರ್ಮಸ್ಥಾನಗಳನ್ನು ಹಿಡಿದು ಕಚ್ಚುವುದಕ್ಕಾರಂಭಿಸಿದನು. ಕೃಷ್ಣನು ತನ್ನ ಸಂಕಲ್ಪಮಾತ್ರದಿಂದಲೇ ಸಮಸ್ತಲೋಕವ್ಯಾಪಾರಗಳನ್ನೂ ನಿರ್ವಹಿಸಬಲ್ಲವನಾಗಿದ್ದರೂ, ಆ ಮಹಾಸರ್ಪವು ಮೈಗೆ ಸುತ್ತಿಕೊಂಡಾಗ, ಕೈಕಾಲುಗಳನ್ನೊದರುವುದಕ್ಕೂ ಅವಕಾಶವಿಲ್ಲದವನಂತೆ, ಸ್ವಲ್ಪಹೊತ್ತಿನವರೆಗೆ ನಿಶ್ಚೇಷ್ಟನಾಗಿದ್ದನು. ಅದನ್ನು ಕಂಡು,ಅಲ್ಲಿ ತಮ್ಮ ದೇಹ, ತಮ್ಮ ಮನಸ್ಸು, ತಮ್ಮ ಇಷ್ಟಮಿತ್ರರು, ಮೊದಲಾಗಿ ತಮ್ಮ ಸರ್ವಸ್ವವೂ ಆ ಕೃಷ್ಣನೇ ಎಂದು ತಿಳಿದಿದ್ದ ಇತರಗೋಪಾಲಕರೆಲ್ಲರೂ, ತಮ್ಮ ಪ್ರಿಯಸಖನು ಬದುಕಿರುವನೋ, ಇಲ್ಲವೋ ಎಂಬ ಸಂದೇಹದಿಂದ ಅಳುವುದಕ್ಕೆ ತೊಡಗಿದರು. ಕೊನೆಕೊನೆಗೆ ದುಃಖದಿಂದ ಮೈಮರೆತು ಮೂರ್ಛೆಬಿದ್ದರು. ಆ ನದೀತೀರದಲ್ಲಿ; ಅಲ್ಲಲ್ಲಿ ಮೇಯುತಿದ್ದ ಗೋವುಗಳು, ಎತ್ತುಗಳು, ಕಡಸುಗಳು, ಕರುಗಳು, ಇವೆಲ್ಲವೂ ಅಕಡೆಗೇ ಕಣ್ಣಿಟ್ಟು ನೋಡುತ್ತ, ಧಾರೆಧಾರೆಯಾಗಿ ಕಣ್ಣೀರನ್ನು ಸುರಿಸಿ, ದೀನಧ್ವನಿಯಿಂದ ಅರಚುತ್ತಿದ್ದುವು. ಇಷ್ಟರಲ್ಲಿಯೇ ಅತ್ತಲಾಗಿ ಗೋಕುಲದಲ್ಲಿದ್ದ ಗೋಪಾಲಕರಿಗೆ, ಅಂತರಿಕ್ಷದಲ್ಲಿಯೂ, ನೆಲದಲ್ಲಿಯೂ, ಅವರವರ ಶರೀರಗಳಲ್ಲಿಯೂ ನಾನಾಬಗೆಯ ಉತ್ಪಾತಸೂಚನೆಗಳು ತೋರಿಬಂದುವು ಮೃತ್ಯುಸೂಚಕವಾಗಿ ಮಹಾಭಯಂಕರವಾದ ಈ ಮೂರುಬಗೆಯ ಉತ್ಪಾತಗಳನ್ನು ಕಂಡೊಡನೆ, ನಂದಾದಿಗೋಪಾಲಕರಿಗೆ ಮನಸ್ಸಿನಲ್ಲಿ ಮಹಾಭಯವು ಹುಟ್ಟಿತು. ಬಲರಾಮನನ್ನೂ ಬಿಟ್ಟು.ಕೃಷ್ಣನೊಬ್ಬನೇ ಮಂದೆ

ಯನ್ನಟ್ಟಿಕೊಂಡುಹೋಗಿರುವಾಗ, ಈ ದುರ್ನಿಮಿತ್ತಗಳು ತೋರಿಬಂದಿರುವುದನ್ನು ನೋಡಿ, ಕೃಷ್ಣನಿಗೆ ಏನೋ ಅಪಾಯವುಂಟಾಗಿರಬೇಕೆಂದೇ ನಿಶ್ಚಯಿಸಿಬಿಟ್ಟರು. ಆ ಗೋಪಾಲಕರು ಕೃಷ್ಣನ ಮಹಾಮಹಿಮೆಯನ್ನು ಹೇಗೆತಾನೇ ತಿಳಿಯಬಲ್ಲರು? ಆ ಕೃಷ್ಣನನ್ನೇ ತಮಗೆ ಪ್ರಾಣವೆಂದು ತಿಳಿದು, ಯಾವಾಗಲೂ ಆತನ ಕ್ಷೇಮಚಿಂತೆಯಲ್ಲಿಯೇ ಇರುತಿದ್ದ ಗೋಪಾಲಕರೆಲ್ಲರೂ, ದುಃಖದಿಂದಲೂ, ಭಯದಿಂದಲೂ ತತ್ತಳಿಸುತ್ತ, ಅವನ ದಾರಿಯನ್ನು ಹುಡುಕಿಕೊಂಡು ಹೊರಟರು. ಗೋಕುಲದಲ್ಲಿ, ಹೆಂಗಸರು, ಮಕ್ಕಳು, ಮುದುಕರು ಮೊದಲುಗೊಂಡು, ಒಂದು ಪಿಳ್ಳೆಯಾದರೂ ನಿಲ್ಲದಂತೆ "ತಮ್ಮ ಕೃಷ್ಣನನ್ನು ತಾವು ತಿರುಗಿ ಕಣ್ಣಾರೆ ಕಾಣುವೆವೆ"ಎಂಬ ಭಯಾತುರದಿಂದ ಓಡುತಿದ್ದರು ಬಲರಾಮನು ಕೃಷ್ಣನ ಪ್ರಭಾವವನ್ನು ಬಲ್ಲವನಾಗಿದ್ದರೂ, ಭಯಗ್ರಸ್ತರಾಗಿ ಓಡುತ್ತಿರುವ ಆ ಗ್ರಾಮಸ್ಥರನ್ನು ನೋಡಿ, ತನ್ನಲ್ಲಿ ತಾನೇ ನಗುತ್ತ ಸುಮ್ಮನಿದ್ದನು. ಆ ಗೋಪಾಲಕರೆಲ್ಲರೂ, ಧ್ವಜವಜ್ರಪದ್ಮಾದರೇಖೆಗಳಿಂದ ಭಗವಲ್ಲಕ್ಷಣಗಳುಳ್ಳ ಆ ಕೃಷ್ಣನ ಹೆಜ್ಜೆಯ ಗುರುತುಗಳನ್ನು ನೋಡಿಕೊಂಡು, ಅದೇ ದಾರಿಯನ್ನು ಹಿಡಿದು,ಯಮುನಾತೀರಕ್ಕೆ ಬಂದು ಸೇರಿದರು. ಇಲ್ಲಿನ ಅವಸ್ಥೆಯನ್ನು ಕೇಳಬೇಕೆ? ಇವರು ಯಾವನನ್ನು ನೋಡಬೇಕೆಂದು ಆತುರದಿಂದ ಓಡಿಬಂದರೋ,ಆ ಕೃಷ್ಣನು ಅಗಾಧವಾದ ಮಡುವಿನ ಮಧ್ಯದಲ್ಲಿ ತೇಲುತ್ತಿರುವನು! ಆ ಸಣ್ಣಬಾಲನ ಮೈಕೈಗೆಲ್ಲಾ ಭಯಂಕರವಾದ ಸರ್ಪವು ಸುತ್ತಿಕೊಂಡಿರುವುದು. ಆ ಮಡುವಿನ ತೀರದಲ್ಲಿ ಗೋವುಗಳೂ, ಗೋಪಾಲಬಾಲಕರೂ, ಭಯಭ್ರಾಂತರಾಗಿ ಕಣ್ಣೀರುಸುರಿಸುತ್ತ "ಹೋ"ಎಂದು ಅಳುತ್ತಿರುವರು!ಈ ಸ್ಥಿತಿಯನ್ನು ನೋಡಿದೊಡನೆ,ಬಂದವರೆಲ್ಲರೂ ಮೂರ್ಛೆಬಿದ್ದರು. ಆ ಕೃಷ್ಣನಿಗಿಂತಲೂ ತಮಗೆ ಬೇರೆ ಪ್ರಿಯವಸ್ತುವಿಲ್ಲವೆಂದು ತಿಳಿದಿದ್ದ ಗೋಪಸ್ತ್ರೀಯರೆಲ್ಲರೂ, ಆ ಕೃಷ್ಣನು ಸರ್ಪದಿಂದ ಹಿಡಿಯಲ್ಪಟ್ಟಿರುವುದನ್ನು ಕಂಡು,ಪರಮದುಃಖಿತರಾಗಿ, ಅವನು ತಮ್ಮಲ್ಲಿ ತೋರಿಸುತಿದ್ದ ಪ್ರೀತಿಯನ್ನೂ, ಅವನ ಮುಗುಳ್ನಗೆಯನ್ನೂ, ಅವನ ದೃಷ್ಟಿಸೌಂದರ್ಯವನ್ನೂ, ಅವನ ಮುದ್ದುಮಾತುಗಳನ್ನೂ ನೆನೆಸಿಕೊಂಡು, ಸಂಕಟದಿಂದ ಕುದಿಯುತ್ತಿದ್ದರು. ಅವರಿಗೆ ತ್ರೈಲೋಕ್ಯ

ವೂ ಶೂನ್ಯಪ್ರಾಯವಾಗಿ ತೋರಿತು. ಒಬ್ಬೊಬ್ಬರೂ ಪುತ್ರಶೋಕಪೀಡಿತೆ ಯಾದ ಯಶೋದೆಯ ಬಳಿಗೆಬಂದು, ಅವಳೊಡನೆ ತಾವೂ ಕಣ್ಣೀರನ್ನು ಸುರಿಸುತ್ತ, ಹಿಂದೆ ಕೃಷ್ಣನು ಗೋಕುಲದಲ್ಲಿ ನಡೆಸಿದ ಅದ್ಭುತ ಕಾರ್ಯಗಳೆಲ್ಲವನ್ನೂ ಒಬ್ಬರಿಗೊಬ್ಬರು ಹೇಳಿಕೊಳ್ಳುತಿದ್ದರು. ಆ ಮಡುವಿನಲ್ಲಿ ಕೃಷ್ಣನಿದ್ದ ಕಡೆಯನ್ನು ನೋಡಿನೋಡಿ ಅಳುತ್ತ, ಕೊನೆಗೆ ಅವರೆಲ್ಲರೂ ದುಃಖಾತಿರೇಕದಿಂದ ಮೃತಪ್ರಾಯರಾಗಿದ್ದರು. ಆಗ ನಂದಾದಿಗೋಪಾಲ ಕರೆಲ್ಲರೂ, ಕೃಷ್ಣನು ಹೋದಮೇಲೆ ಭೂಮಿಯಲ್ಲಿ ತಾವು ಬದುಕಿರಬಾರ ದೆಂದು ನಿಶ್ಚಯಿಸಿ, ಆ ಮಡುವಿನಲ್ಲಿಯೇ ತಾವೂ ಬಿದ್ದು ಸಾಯುವುದಕ್ಕಾ ಗಿ ಯತ್ನಿಸುವಷ್ಟರಲ್ಲಿ, ಕೃಷ್ಣನ ಪ್ರಭಾವವನ್ನು ಬಲ್ಲವನಾದ ಬಲರಾಮ ನು, ಅವರೆಲ್ಲರಿಗೂ ಸಮಾಧಾನವನ್ನು ಹೇಳಿ ತಡೆದು ನಿಲ್ಲಿಸಿದನು. ತನ್ನೊ ಬ್ಬನಿಗಾಗಿ ಹೀಗೆ ಗೋಕುಲವೆಲ್ಲವೂ ದಿಕ್ಕಿಲ್ಲದಂತೆ ದುಃಖಿಸುವುದನ್ನು ಕಂ ಡು,ಆತ್ತಲಾಗಿ ಕೃಷ್ಣನಿಗೂ ಕನಿಕರವುಂಟಾಯಿತು.ಮನುಷ್ಯಲೀಲೆಯನ್ನು ನಟಿಸುವುದಕ್ಕಾಗಿ ಮುಹೂರ್ತಕಾಲದವರೆಗೆ ಆ ಹಾವಿನಿಂದ ಬಿಡಿಸಿಕೊ ಳ್ಳಲಾರದವನಂತೆ ಸುಮ್ಮನಿದ್ದನು, ಆಮೇಲೆ ಮೆಲ್ಲಗೆ ಅದನ್ನು ಬಿಡಿಸಿ ಕೊಂಡನು. ಈ ಸ್ವಲ್ಪಹೊತ್ತಿನವರೆಗೆ ಕೃಷ್ಣನೊಡನೆ ಹೆಣಗಾ ಡುವುದರಿಂದಲೇ ಆ ಸರ್ಪದ ಅರ್ಧಶಕ್ತಿಯು ಮುರಿದು, ಅದರ ಮೈ ಯೆಲ್ಲವೂ ನಜ್ಜುಗುಜ್ಜಾಯಿತು. ಆಗ ಆ ಕಾಳಿಯಸರ್ಪದ ಕೋಪ ವನ್ನು ಕೇಳಬೇಕೆ? ಕೃಷ್ಣನನ್ನು ಹೆಡೆಗಳಿಂದಪ್ಪಳಿಸುವುದಕ್ಕಾಗಿ ಆಗಾಗ ಮೈಯನ್ನು ನಿಗುರಿಸಿ ನಿಲ್ಲುವುದು! ಉಸಿರಿನ ಗಾಳಿಯೊಡನೆ ವಿಷಬಿಂದುಗ ಳನ್ನೆರಚುತ್ತ ಭಯಂಕರವಾಗಿ ಬುಸುಗುಟ್ಟುವುದು! ಉರಿಯುವ ಮಡಕೆ ಯಂತೆ ಅಗಲವಾದ ನಟ್ಟ ಕಣ್ಣಿಂದ ಆ ಕೃಷ್ಣನನ್ನು ದುರದುರನೆ ನೋಡು ವುದು! ಬಾಯಲ್ಲಿ ಬೆಂಕಿಯನ್ನು ಕಾರುವುದು! ಕೋಪದಿಂದ ಎರಡುನಾ ಲಗೆಗಳನ್ನೂ ಊರ್ಧ್ವಕ್ಕೆ ನೀಡಿ, ಕಡೆಬಾಯಿಗಳನ್ನು ನಕ್ಕುತ್ತಿರುವುದು ! ಕ ಣ್ಣುಗಳಿಂದ ವಿಷಾಗ್ನಿಯನ್ನೆರಚುವುದು! ಇಂತಹ ಭಯಂಕರಚೇಷ್ಟೆಗಳ ನ್ನು ತೋರಿಸುತ್ತ, ಕೃಷ್ಣನಮೇಲೆ ಬೀಳುವುದಕ್ಕೆ ಯತ್ನಿಸುತಿತ್ತು. ಕೃಷ್ಣ ನೂಕೂಡ ಅದನ್ನು ಹಿಡಿಯುವುದಕ್ಕೆ ಸಮಯವನ್ನು ನೋಡಿ, ಅದರೊಡ

ನೆ ತಾನೂ ಚಕ್ರಾಕಾರವಾಗಿ ತಿರುಗುತ್ತ ಆಟವಾಡುತಿದ್ದನು. ಆ ಕೃಷ್ಣನನ್ನು ಹಿಂಬಾಲಿಸಿ ಸುತ್ತುವುದರಿಂದಲೇ ಆ ಸರ್ಪದ ದೇಹಶಕ್ತಿಯೆಲ್ಲವೂ ಅಡಗುತ್ತ ಬಂದಿತು. ಹಾಗಿದ್ದರೂ ಆಸರ್ಪವು, ತನ್ನ ದೇಹವನ್ನು ಪ್ರಯತ್ನದಿಂದ ನಿಗುರಿಸಿ ನಿಂತು, ಹೆಡೆಯಾಡುತ್ತ, ಕೃಷ್ಣನಮೇಲೆ ಬೀಳುವುದಕ್ಕೆ ಯತ್ನಿಸುತ್ತಿರುವಷ್ಟರಲ್ಲಿ, ಕೃಷ್ಣನು, ತಟ್ಟನೆ ಹಾರಿ ಅದರ ಹೆಡೆಯನ್ನು ಮೆಟ್ಟಿನಿಂತನು. ಆ ಕಾಳಿಯನ ಫಣಾರತ್ನಗಳ ಕಾಂತಿಯಿಂದ ಮತ್ತಷ್ಟು ಕೆಂಪೇರಿದ ಚರಣಾರವಿಂದಗಳುಳ್ಳವನಾಗಿ, ಆ ಹೆಡೆಯಮೇಲೆ ನರ್ತಿಸುವುದಕ್ಕೆ ತೊಡಗಿದನು. ಭರತಶಾಸ್ತ್ರಾದಿಸಮಸ್ತಕಲೆಗಳಿಗೂ ಆದಿಗುರುವೆನಿಸಿಕೊಂಡ ಆ ಕೃಷ್ಣನು, ಕಾಳಿಯನ ಹೆಡೆಯಮೇಲೆ ನಿಂತು, ಅವನ ಮೈಯನ್ನು ತಿರುಚಿ, ಬಾಲದ ತುದಿಯನ್ನು ಕೈಯಲ್ಲಿ ಹಿಡಿದುಕೊಂಡು, ವಿಚಿತ್ರಗತಿಯಿಂದ ನರ್ತಿಸುವುದನ್ನು ಕಂಡು, ಗಂಧರ್ವ, ಸಿದ್ಧ, ಚಾರಣಾದಿಗಳೂ, ದೇವಸ್ತ್ರೀಯರೂ ಸಂತೋಷದಿಂದ, ಆ ಕೃಷ್ಣನ ನರ್ತನಕ್ಕೆ ಸರಿಯಾಗಿ, ಮೃದಂಗ, ಪಣವ, ಮುಂತಾದ ವಾದ್ಯಗಳನ್ನು ನುಡಿಸುತಿದ್ದರು. ಕೆಲವರು ಗಾನಮಾಡುತಿದ್ದರು. ಕೆಲವರು ಕೃಷ್ಣನಮೇಲೆ ಪುಷ್ಪಾಂಜಲಿಗಳನ್ನೆರಚಿದರು. ಕೆಲವರು ಸ್ತೋತ್ರಮಾಡುತಿದ್ದರು. ಓ ಪರೀಕ್ಷಿದ್ರಾಜಾ! ಆ ಕಾಳಿಯನನ್ನು ಸಾಧಾರಣಸರ್ಪವೆಂದು ತಿಳಿಯಬೇಡ! ಅವನು ನೂರುತಲೆಗಳುಳ್ಳ ಮಹಾಸರ್ಪವಾದುದರಿಂದ, ಕೃಷ್ಣನು ತನ್ನ ಒಂದು ತಲೆಯನ್ನು ಮೆಟ್ಟಿದಾಗ,ಬೇರೆ ಹೆಡೆಗಳನ್ನೆತ್ತಿ ಆರ್ಭಟಿಸುತಿದ್ದನು. ಹಾಗಿದ್ದರೂ ಬಿಡದೆ ಕೃಷ್ಣನು, ತನ್ನ ಗತಿಚಾತುರ್ಯದಿಂದ, ಆ ಸರ್ಪವು ಮೇಲಕ್ಕೆತ್ತಿದ ಹೆಡೆಯನ್ನು ಆಗಾಗಲೇ ತನ್ನ ಕಾಲಿಂದ ಮೆಟ್ಟಿತುಳಿಯುತ್ತ ಬಂದನು. ಕ್ರಮಕ್ರಮವಾಗಿ ಆ ಕಾಳಿಯನ ಬಲವೆಲ್ಲವೂ ತಗ್ಗಿತು. ಅವನ ಬಾಯಿಂದಲೂ,ಮೂಗಿನಿಂದಲೂ ರಕ್ತವು ಕಿತ್ತುಕೊಂಡಿತು. ಇದರಿಂದ ಅವನು ಮೂರ್ಛಿತನಾದನು. ಆದರೇನು? ತಿರುಗಿತಿರುಗಿ ಮೆಲ್ಲನೆ ಚೇತರಿಸಿಕೊಂಡು,ಕೋಪದಿಂದ ಹೆಡೆಯನ್ನೆತ್ತಿ ಬುಸುಗುಟ್ಟುವನು!ಕಣ್ಣುಗಳಿಂದ ವಿಷವನ್ನು ಕಾರುವನು! ಉಚ್ಚಧ್ವನಿಯಿಂದ ಆರ್ಭಟಿಸುವನು.ಕೃಷ್ಣನೂ ಕೂಡ ಆ ಸರ್ಪವು ಮೇಲಕ್ಕೆತ್ತಿದ ತಲೆಯನ್ನು ಆಗಾಗ ಮೆಟ್ಟುತ್ತ, ಕೊನೆಕೊನೆಗೆ

ಅವನ ಶಕ್ತಿಯೆಲ್ಲವನ್ನೂ ಕುಂದಿಸಿದನು. ಇದನ್ನು ನೋಡಿ ದೇವಗಂಧರ್ವಾದಿಗಳೆಲ್ಲರೂ ಕೃಷ್ಣನಮೇಲೆ ಪುಷ್ಪವರ್ಷವನ್ನು ಕರೆಯುತಿದ್ದರು. ಹೀಗೆ ಸರ್ಪದ ಹೆಡೆಯಮೇಲೆ ತಾಂಡವವಾಡುತಿದ್ದ ಕೃಷ್ಣನು, ಆಗ ತನ್ನ ಸ್ವರೂಪದಿಂದ ಶೇಷಶಾಯಿಯಾದ ಪುರಾಣಪುರುಷನೇ ತಾನೆಂಬುದನ್ನು ತೋರಿಸುವಂತಿದ್ದನು ಕೃಷ್ಣನ ಕಾಲಿನ ತುಳಿತದಿಂದ ಆ ಕಾಳಿಯನ ಸಹಸ್ರ ಫಣೆಗಳೂ ನಜ್ಜುಗುಜ್ಜಾದುವು. ಅವನ ಮೈಮೂಳೆಗಳೆಲ್ಲವೂ ಮುರಿದುವು. ಅವನ ಸಹಸ್ರಮುಖಗಳಿಂದಲೂ ರಕ್ತವು ಕಿತ್ತುಕೊಂಡಿತು ಆಗ ಆ ಕಾಳಿಯನಿಗೆ ಮನಸ್ಸಿನಲ್ಲಿದ್ದ ಹೆಮ್ಮೆಯು ಸಂಪೂರ್ಣವಾಗಿ ಮುರಿಯಿತು. ಹೀಗೆ ಶಕ್ತಿಗುಂದಿದಮೇಲೆ, ಕಾಳಿಯನಿಗೆ. ಆ ಕೃಷ್ಣನೇ ಸಮಸ್ತಚರಾಚರಗಳಿಗೂ ನಿಯಾಮಕನಾದ ಶ್ರೀಮನ್ನಾರಾಯಣನೆಂದು ತೋರಿ, ಅವನೇ ತನಗೆ ಗತಿಯೆಂದು ಮನಸ್ಸಿನಲ್ಲಿ ಶರಣಾಗತಿಯನ್ನು ಮಾಡಿದನು. ಇಷ್ಟರಲ್ಲಿ ಸಮಸ್ತಲೋಕಗಳನ್ನೂ ತನ್ನ ಗರ್ಭದಲ್ಲಿ ಧರಿಸಿರಕಕ್ಕ ಆ ಕೃಷ್ಣನ ಭಾರದಿಂದ ಆಕಾಳಿಯನಿಗೆ,ಮೈಯೆಲ್ಲವೂ ಜರ್ಝರಿತವಾದುದನ್ನೂ, ಆ ಕೃಷ್ಣನಕಾಲಿನ ತುಳಿತದಿಂದ ಅವನ ಹಡೆಗಳೆಲ್ಲವೂ ನಜ್ಜುಗುಜ್ಜಾದುದನ್ನೂ ನೋಡಿ ಸಹಿಸಲಾರದೆ, ಕಾಳಿಯನ ಪತ್ನಿಯರಾದ ನಾಗಸ್ತ್ರೀಯರೆಲ್ಲರೂ, ತಮ್ಮ ಮೈಮೇಲಿನ ವಸ್ತ್ರಾಭರಣಗಳು ಕಡಲಿದುದನ್ನೂ ತಿಳಿಯದೆ, ಆತುರದಿಂದ ಕೃಷ್ಣನಬಳಿಗೆ ಓಡಿಬಂದರು. ಆದರೆ ಆ ನಾಗಕನ್ನಿಕೆಯರು, ಭಯದಿಂದ ಮುಂದೆ ಬರಲಾರದೆ, ತಮ್ಮ ಮಕ್ಕಳನ್ನು ಮುಂದಿಟ್ಟುಕೊಂಡು, ಶ್ರೀಕೃಷ್ಣನ ಕಾಲಮೇಲೆ ಬಿದ್ದು ಸಾಷ್ಟಾಂಗಪ್ರಣಾಮವನ್ನು ಮಾಡಿ, ಕೈಮುಗಿದು ನಿಂತು, ತಮ್ಮ ಪತಿಯನ್ನು ಬಿಡಿಸಿಕೊಳ್ಳುವುದಕ್ಕಾಗಿ, ಭಕ್ತರಕ್ಷಕನಾದ ಆ ಕೃಷ್ಣನನ್ನು ಹೀಗೆಂದು ಸ್ತುತಿಸುವರು. “ ಓ ಕೃಷ್ಣಾ ! ನೀನು ದುಷ್ಟನಿಗ್ರಹಕ್ಕಾಗಿಯೇ ಈ ಲೋಕದಲ್ಲಿ ಅವತರಿಸಿದವನಾದುದರಿಂದ, ಮಹಾಪರಾಧಿಯಾದ ಈಕಾಳಿಯನನ್ನು ದಂಡಿಸಬೇಕಾದುದೇನೋ ನಿನಗೆ ಯುಕ್ತವಾಗಿಯೇ ಇರುವುದು. ಅಪರಾಧಿಗಳನ್ನು ದಂಡಿಸುವ ವಿಷಯದಲ್ಲಿ, ನೀನು ಶತ್ರುಗಳನ್ನೂ, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನೂ ಸಮಾನವಾಗಿ ಭಾವಿಸತಕ್ಕನನೇಹೊ

ರತು ವೈಷಮ್ಯವನ್ನು ತೋರಿಸುವವನಲ್ಲ. ಅಪರಾಧಿಗಳಿಗೆ ನೀನು ಮಾಡ ತಕ್ಕ ಶಿಕ್ಷೆಯೂ ಅವರ ಉತ್ತಮಶ್ರೇಯಸ್ಸಿಗೆ ಕಾರಣವಾಗುವುದಲ್ಲದೆ ಹಾನಿಕರವಲ್ಲ! ಕೃಷ್ಣಾ! ಈಗ ನೀನು ಮಾಡಿದ ದಂಡನವನ್ನು ನಾವು ಅ ನುಗ್ರಹವೆಂದೇ ತಿಳಿಯುವೆವು. ದುಷ್ಟರನ್ನು ಶಿಕ್ಷಿಸುವುದರಿಂದ ಅವ ರ ಕಲ್ಮಷಗಳೆಲ್ಲವೂ ನೀಗಿ ಅವರು ಶುದ್ಧರಾಗುವರು. ಈ ಕಾಳಿಯನು ಕ್ರೂ ರವಾದ ಸರ್ಪಜನ್ಮದಲ್ಲಿ ಹುಟ್ಟಿದುದಕ್ಕೆ ಅವನ ಪಾಪವೇ ಮೂಲವು. ಈಗ ನಿನ್ನ ಶಿಕ್ಷೆಗೆ ಪಾತ್ರನಾದುದರಿಂದ ಆ ಪಾಪವು ನೀಗಿದಂತಾಯಿತು. ಹೀಗೆ ಪಾಪಿಗಳನ್ನೂ ಪಾವನರನ್ನಾಗಿ ಮಾಡತಕ್ಕ ನಿನ್ನ ಕೋಪ ವನ್ನು ಅನುಗ್ರಹವೆಂದು ಹೇಳುವುದರಲ್ಲಿ ಸಂದೇಹವೇನಿದೆ? ನಮ್ಮ ಪತಿಯಾದ ಈ ಕಾಳಿಯನು, ಪೂರ್ವಜನ್ಮದಲ್ಲಿ ಈಗಿನಂತೆ ಅಹಂಕಾರಾದಿ ದುರ್ಗುಣಗಳಿಲ್ಲದವನಾಗಿ, ಮಹಾತ್ಮರನ್ನು ಪೂಜಿಸುತ್ತ, ಯಾವುದೋ ಮ ಹಾತಪಸ್ಸನ್ನು ನಡೆಸಿರಬೇಕು? ಅಥವಾ ಇವನು ಹಿಂದೆ ಸರ್ವಭೂತದಯಾ ಪರನಾಗಿದ್ದು,ಉತ್ತಮಧರ್ಮವನ್ನು ನಡೆಸಿರಬೇಕು. ಹಾಗಿಲ್ಲದಪಕ್ಷದಲ್ಲಿ ಭೋ ಗಮೋಕ್ಷಪ್ರದನಾದ ನಿನ್ನ ಪಾದಸ್ಪರ್ಶಕ್ಕೆ ಇವನು ಪಾತ್ರನಾಗುತಿದ್ದನೆ? ನೀನು, ಇವನಲ್ಲಿ ಪ್ರಸನ್ನನಾದುದರಿಂದಲೇ, ಅವನನ್ನು ಪಾಪದಿಂದುದ್ಧರಿ ಸುವುದಕ್ಕಾಗಿ ನೀನೇ ಸಾಕ್ಷಾತ್ತಾಗಿ ದಂಡಿಸುತ್ತಿರುವೆ? ದೇವಾ! ಈತನ ಲ್ಲವೇ ಪರಮಭಾಗ್ಯಶಾಲಿಯು! ಸಾಕ್ಷಾಲ್ಲಕ್ಷ್ಮೀದೇವಿಯುಕೂಡ, ಯಾವ ನಿನ್ನ ಪಾದರಜಸ್ಸಂಬಂಧವನ್ನು ಪಡೆಯಬೇಕೆಂಬುದಕ್ಕಾಗಿ, ಇತರ ಕಾಮಿತ ಗಳೆಲ್ಲವನ್ನೂ ನಿರಾಕರಿಸಿ, ಬಹುಕಾಲದವರೆಗೆ ವ್ರತನಿಷ್ಠೆಳಾಗಿ ದೃಢತಪಸ್ಸ ನ್ನು ಮಾಡಿದಳೋ, ಅಂತಹ ಪಾದರಜಸ್ಸು ಈಗ ಅನಾಯಾಸವಾಗಿ ಈ ನಮ್ಮ ಪತಿಯತಲೆಯಮೇಲೆ ಬೀಳಬೇಕಾದರೆ, ಇವನ ಪುಣ್ಯಪ್ರಭಾವವೆ ಷ್ಟಿರಬೇಕು? ಇದು ಯಾವ ಪುಣ್ಯಪ್ರಭಾವವೆಂಬುದನ್ನು ಆತನಾಗಲಿ, ನಾವಾಗಲಿ ತಿಳಿಯಲಾರೆವು! ದೇವಾ! ಹೆಚ್ಚೇಕೆ? ನಿನ್ನ ಪಾದರಜಸ್ಸನ್ನು ಪ ಡೆದವರು, ಸ್ವರ್ಗಸುಖಕ್ಕೂ ಆಸೆಪಡರು! ಪರಮೇಷ್ಠಿಪದವಿಯನ್ನೂ ಅ ಪೇಕ್ಷಿಸರು! ಚಕ್ರವರ್ತಿತ್ವಕ್ಕೂ ಆಶಿಸಲಾರರು! ಅತಲವಿತಲಾದಿಲೋ ಕಾಧಿಪತ್ಯವನ್ನೂ ನಿರಾಕರಿಸುವರು! ಅಣಿಮಾದಿಯೋಗಸಿದ್ಧಿಗಳನ್ನೂ ಬಲ್ಲ

ರು! ಪುನರ್ಜನ್ಮವಿಲ್ಲದ ಕೈವಲ್ಯಕ್ಕೂ ಆಸೆಪಡರು. ಅವರು ನಿನ್ನ ಪಾದಸೇವೆಯನ್ನು ಹೊರತು ಬೇರೊಂದನ್ನೂ ಕಣ್ಣೆತ್ತಿ ನೋಡದೆ, ಅದನ್ನೇ ಎಲ್ಲಕ್ಕೂ ಮೇಲಾದ ಸುಖವೆಂದು ತಿಳಿಯುವರು! ದೇವಾ! ಕೇವಲತಾಮಸಜನ್ಮದಲ್ಲಿ ಹುಟ್ಟಿದ ಈ ಸರ್ಪಕ್ಕೆ, ಕೋಪಸ್ವಭಾವವಿರುವುದೇನೂ ಆಶ್ಚರ್ಯವಲ್ಲ! ಅಂತವನಿಗೂಕೂಡ ಈಗ ಮತ್ತೊಬ್ಬರಿಗೆ ದುರ್ಲಭವಾದ ನಿನ್ನ ಪಾದಸಂಬಂಧವು ಲಭಿಸಿತಲ್ಲವೆ? ಆದರೇನು? ಇಂದೊಂದು ವಿಶೇಷವಲ್ಲ! ಪ್ರಾರಬ್ಧಕರ್ಮವಶದಿಂದ, ಸಂಸಾರಚಕ್ರದಲ್ಲಿ ಸುತ್ತಿ ತೊಳಲುತ್ತಿರುವ ದೇಹಿಗಳು, ಹೀಗೆಯೇ ಯಾದೃಚ್ಛಿಕವಾಗಿ ನಿನ್ನ ಕೃಪೆಗೆ ಪಾತ್ರರಾಗಬೇಕಲ್ಲದೆ, ನಿನ್ನ ಕೃಪೆಗೆ ಕಾರಣವೇನೂ ಬೇಕಾಗಿರುವುದಿಲ್ಲ. ದೇವಾ! ಷಡ್ಗುಣಪರಿಪೂರ್ಣನಾದ ನಿನಗೆ ನಮಸ್ಕಾರವು! ಮಹಾಮಹಿಮೆಯುಳ್ಳವನಾಗಿದ್ದರೂ, ಸಾಮಾನ್ಯಪುರುಷನಂತೆ ಸರ್ವಸುಲಭನಾಗಿರುವ ನಿನಗೆ ನಮಸ್ಕಾರವು! ಸಮಸ್ತಭೂತಗಳಿಗೂ ನಿವಾಸಸ್ಥಾನನಾಗಿ, ಸಮಸ್ತಭೂತಗಳಿಗೂ ಆದಿಭೂತನಾದ ನಿನಗೆ ನಮಸ್ಕಾರವು! ಸಮಸ್ತಜೀವಗಳಿಗೂ ಆಧಾರನಾಗಿ, ಪರಮಾತ್ಮನೆನಿಸಿಕೊಂಡ ನಿನಗೆ ನಮಸ್ಕಾರವು! ಆಶ್ರಿತರ ಅನಿಷ್ಟನಿವಾರಣಕ್ಕೂ, ಇಷ್ಟಪ್ರಾಪ್ತಿಗೂ ಅವಶ್ಯಕಗಳಾದ ಜ್ಞಾನವಿಜ್ಞಾನಗಳಿಗೆ ನಿಧಿಯೆನಿಸಿಕೊಂಡ ನಿನಗೆ ನಮಸ್ಕಾರವು! ಎಲ್ಲಕ್ಕಿಂತಲೂ ಬೃಹತ್ತಾದುದರಿಂದ ಬ್ರಹ್ಮನೆನಿಸಿಕೊಂಡ ನಿನಗೆ ನಮಸ್ಕಾರವು! ಅಘಟಿತಘಟನಾಸಾಮರ್ಥ್ಯವೇ ಮೊದಲಾದ ಅನಂತಶಕ್ತಿಗಳುಳ್ಳ ನಿನಗೆ ನಮಸ್ಕಾರವು. ದೇವಾ! ನೀನು ಹೇಯಗುಣಸಂಬಂಧವಿಲ್ಲದೆ, ಸ್ವರೂಪಸ್ವಭಾವಗಳಲ್ಲಿ ವಿಕಾರವಿಲ್ಲದ್ದೆ ಒಂದೇ ರೂಪದಲ್ಲಿರುವನಾದರೂ, ಶರೀರಭೂತಗಳಾದ ಪ್ರಕೃತಿಪುರುಷರ ಮೂಲಕವಾಗಿ ಅನೇಕವಿಕಾರಗಳನ್ನು ತೋರಿಸುತ್ತಿರುವುದರಿಂದ ಪ್ರಾಕೃತನೆಂದೂ ಕರೆಯಲ್ಪಡುವೆ! ಕಾಲಶರೀರಕನಾಗಿಯೂ, ಕಾಲಚಕ್ರಕ್ಕೆ ಆಧಾರನಾಗಿಯೂ, ಸರ್ವಕಾಲಾವಯವಗಳಿಗೂ ಸಾಕ್ಷಿಯಾಗಿಯೂ ಇರುವ ನಿನಗೆ ನಮಸ್ಕಾರವು! ವಿಶ್ವಸ್ವರೂಪನಾಗಿಯೂ, ವಿಶ್ವಶರೀರಕನಾಗಿಯೂ, ವಿಶ್ವಕಾರಣನಾಗಿಯೂ ಇರುವ ನಿನಗೆ ನಮಸ್ಕಾರವು! ದೇವಾ! ಸೃಷ್ಟಿಗೆಮೊದಲು, ಸೂಕ್ಷ್ಮಪ್ರಕೃತಿಯನ್ನು ಶರೀರವಾಗಿ

ಹೊಂದಿದ್ದವನೂ ನೀನೇ! ಆ ಪ್ರಕೃತಿಯ ಪರಿಣಾಮರೂಪಗಳಾದ ಆಕಾಶಾದಿಪಂಚಭೂತಗಳು, ಶಬ್ದಾದಿಪಂಚತನ್ಮಾತ್ರಗಳು, ದಶೇಂದ್ರಿಯಗಳು, ಪಂಚಪ್ರಾಣಗಳು, ಮನಸ್ಸು, ಬುದ್ಧಿ, ವಾಸನೆ, ಎಂಬೀ ಸ್ಥೂಲಾವಸ್ಥೆಗಳಲ್ಲಿಯೂ ನೀನೇ ಅವುಗಳನ್ನು ಶರೀರವಾಗಿ ಹೊಂದಿರತಕ್ಕವನು. ಮತ್ತು ಸತ್ವಾದಿತ್ರಿಗುಣಗಳಮೂಲಕವಾಗಿ ಜೀವನಿಗೆ ದೇಹಾತ್ಮಾಭಿಮಾನವನ್ನು ಹುಟ್ಟಿಸಿ, ಆತ್ಮಸ್ವರೂಪವನ್ನು ತಿಳಿಯದಹಾಗೆ ಮಾಡತಕ್ಕವನೂ ನೀನೇ! ಆ ಅಜ್ಞಾನವನ್ನು ನೀಗಿಸಿ, ಜ್ಞಾನವಿಕಾಸವನ್ನುಂಟುಮಾಡತಕ್ಕವನೂ ನೀನೇ! ಮತ್ತು ನೀನು, ದೇಶಕಾಲಪರಿಚ್ಛೇದವಿಲ್ಲದೆ ಸರ್ವವ್ಯಾಪಿಯಾದುದರಿಂದ ಅನಂತನು! ಅಣುವಾದ ಜೀವನಲ್ಲಿಯೂ ಒಳಹೊಕ್ಕು ಧಾರಕನಾದುದರಿಂದ ಸೂಕ್ಷ್ಮನು! ನಿರ್ವಿಕಾರನು! ಯಾವಾಗಲೂ ಕಂದುಕುಂದಿಲ್ಲದ ಜ್ಞಾನವಿಕಾಸವುಳ್ಳವನು. ವೇದಾಂತವಾಕ್ಯಗಳ ಸಿಷ್ಕೃಷ್ಟಾರ್ಥವನ್ನು ತಿಳಿಯದೆ, ಬುದ್ಧಿಭೇದದಿಂದ ನಾನಾವಿಧವಿತಂಡವಾದಗಳನ್ನು ಮಾಡತಕ್ಕವರಿಗೂ, ಅವರ ವಾದಕ್ಕನುರೂಪವಾಗಿ ನಾನಾರೂಪಗಳಿಂದ ತೋರತಕ್ಕವನೂ ನೀನೇ! ಆ ವಿತಂಡವಾದಿಗಳು ತಮ್ಮ ವಾದಗಳಿಗಾಗಿ ಉಪಯೋಗಿಸತಕ್ಕ ಶಬ್ದಾರ್ಥಶಕ್ತಿಗಳಿಗೂ ನೀನೇ ನಿರ್ವಾಹಕನು. ದೇವಾ! ನಿನ್ನ ಸ್ವರೂಪಸ್ವಭಾವಗಳನ್ನು ಶಾಸ್ತ್ರದಿಂದಲೇ ತಿಳಿಯಬೇಕು. ಆ ಶಾಸ್ತ್ರಪ್ರಮಾಣಗಳಿಗೂ ನೀನೇ (ಮೂಲವು) ಪ್ರವರ್ತಕನು. ನೀನು ಸರ್ವಜ್ಞನು. ಫಲಾಪೇಕ್ಷೆಯಿಂದ ನಡೆಸತಕ್ಕ (ಪ್ರವೃತ್ತಿ) ಕರ್ಮಗಳಿಗೂ, ಫಲಾಪೇಕ್ಷೆಯಿಲ್ಲದೆ ನಡೆಸತಕ್ಕ (ನಿವೃತ್ತಿ) ಕರ್ಮಗಳಿಗೂ ನೀನೇ ಪ್ರವರ್ತನು ಉಪನಿಷದ್‌ಜ್ಞಾನಕ್ಕೆ ಪ್ರವರ್ತಕನಾದುದರಿಂದ, ನೀನೇ ನಿಗಮನೆನಿಸಿಕೊಳ್ಳುವೆ. ಇಂತಹ ನಿನಗೆ ನಮಸ್ಕಾರವು. ಓ ದೇವಾ! ರಾಮಕೃಷ್ಣಾದಿವಿಭವಾವತಾರಗಳಿಂದಲೂ, ಪ್ರದ್ಯುಮ್ನಾನಿರುದ್ಧಾದಿವ್ಯೂಹಾವತಾರಗಳಿಂದಲೂ, ಆಶ್ರಿತರಿಗೆ ದುಃಖನಿವಾರಣವನ್ನು ಮಾಡಿ ಪಾಲಿಸತಕ್ಕ ಪ್ರಭುವಾದ ನಿನಗೆ ನಮಸ್ಕಾರವು. ಪ್ರಭೂ! ಆಶ್ರಿತರಿಗೆ ಆತ್ಮಜ್ಞಾನವೆಂಬ ಗುಣವನ್ನು ಪ್ರಕಾಶಗೊಳಿಸತಕ್ಕವನೂ ನೀನೇ! ನಿನ್ನಲ್ಲಿ ವಿಮುಖರಾದವರಿಗೆ, ತ್ರಿಗುಣಾತ್ಮಕವಾದ ಮಾಯೆಯಿಂದ ಆತ್ಮಜ್ಞಾನವನ್ನು ಮರೆಸತಕ್ಕ

ವನೂ ನೀನೇ ! ಆದರೆ ಈ ಜ್ಞಾನಸಂಕೋಚವಿಕಾಸಗಳಿಗೂ ಗುಣಪರಿಣಾಮರೂಪವಾದ ಆವರವರ ಮನೋವ್ಯಾಪಾರವೇ ಕಾರಣವೇಹೊರತು, ನೀನು ಪಕ್ಷಪಾತಬುದ್ಧಿಯಿಂದ ಹೀಗೆ ಮಾಡತಕ್ಕವನಲ್ಲ. ಅವರವರ ಮನೋವ್ಯಾಪಾರವನ್ನನುಸರಿಸಿಯೇ ನೀನು ಆವರವರಿಗೆ ಗೋಚರಿಸತಕ್ಕವನು. ಅಪರಿಚ್ಛಿನ್ನವಾಗಿಯೂ, ಯಾವಾಗಲೂ ಸಂಕುಚಿತವಾಗದೆಯೂ ಇರತಕ್ಕ ಜ್ಞಾನಕ್ಕೆ ನೀನೊಬ್ಬನೇ ಆಶ್ರಯನಾದುದರಿಂದ, ಸ್ವಯಂವಿದನೆನಿಸಿಕೊಳ್ಳುವೆ. ಸಮಸ್ತಜೀವರಾಶಿಗಳ ಗುಣಾನುರೂಪವಾದ ಅಂತಃಕರಣಪ್ರವೃತ್ತಿಯನ್ನೂ ನೀನು ಒಮ್ಮೆಯೇ ಸಾಕ್ಷಾತ್ಕರಿಸಬಲ್ಲವನು ನಿನ್ನ ವ್ಯಾಪಾರವಿಹಾರಗಳು ಬೇರೆ ಯಾರಿಗೂ ಗೋಚರವಲ್ಲ ಚಿದಚಿತ್ತುಗಳ ವಿಕಾರದಿಂದೇರ್ಪಟ್ಟ ದೇವಮನುಷ್ಯಾದಿಸಮಸ್ತಪ್ರಪಂಚಗಳಿಗೂ, ಅವರ ಬುದ್ಧಿವೃತ್ತಿಗಳಿಗೂ ನೀನೇ ಸಾಧಕನು ಇಂದ್ರಿಯಗಳಿಗೂ ನೀನೇ ನಿಯಾಮಕನು. ತಾಪತ್ರಯದಲ್ಲಿ ಸಿಕ್ಕಿ ನರಳುವ ಜೀವರಾಶಿಗಳ ಉಜ್ಜೀವನವನ್ನೇ ನೀನು ಸರ್ವದಾ ಮನನಮಾಡತಕ್ಕವನಾದುದರಿಂದ, ಮುನಿಯೆನಿಸಿಕೊಳ್ಳುವೆ, (ಪೂರ್ಣಕಾಮನಾದ ನಿನಗೆ ಯಾವುದೂ ಅಪೇಕ್ಷಿತವಲ್ಲದುದರಿಂದ, ನೀನು ನಿತ್ಯಮೌನದಲ್ಲಿ ಪ್ರಪಂಚವ್ಯಾಪಾರವನ್ನು ನೋಡುತ್ತಿರುವೆ.) ನೀಚೋತ್ತಮಗಳೆನಿಸಿಕೊಂಡ ಬಂಧಮೋಕ್ಷಗಳ ಗತಿಯನ್ನು ನೀನು ಚೆನ್ನಾಗಿ ಬಲ್ಲವನಾಗಿದ್ದರೂ, ಅವರವರ ಕರ್ಮಾನುಸಾರವಾಗಿ ಪ್ರಾಣಿಗಳನ್ನು ನೀನೇ ಆಯಾಗತಿಗೆ ಸೇರಿಸತಕ್ಕವನು. ಸಮಸ್ತಪುರುಷಾರ್ಥಗಳಿಗೂ ನೀನೇ ಅಧಿಪತಿಯು. ಇಂತಹ ನಿನಗೆ ನಮಸ್ಕಾರವು. ನಿನ್ನ ಶರೀರದಿಂದಲೇ ಸಮಸ್ತಪ್ರಪಂಚವೂ ಉಂಟಾಗಿರುವುದರಿಂದ, ನೀನು ವಿಶ್ವನೆಂದೂ. ನಿನ್ನ ಸ್ವರೂಪವು ಪ್ರಪಂಚಕ್ಕಿಂತಲೂ ಭಿನ್ನವಾದುದರಿಂದ ಅವಿಶ್ವನೆಂದೂ ಹೇಳಲ್ಪಡುವೆ. ಮತ್ತು ನೀನು ಆ ಸಮಸ್ತಪ್ರಪಂಚವನ್ನೂ ಒಮ್ಮೆಯೇ ಸಾಕ್ಷಾತ್ಕರಿಸಬಲ್ಲವನು. ಆ ಸಮಸ್ತಪ್ರಪಂಚದ ಉತ್ಪತ್ತಿಗೂ ನೀನೇ ಕಾರಣನು. ಓ ವಿಭೂ ! ನೀನು ಪೂರ್ಣಕಾಮನಾದುದರಿಂದ ಮನಸ್ಸಂಕಲ್ಪವೊಂದುಹೊರತು ಬೇರೆ ವ್ಯಾಪಾರವಿಲ್ಲದವನು! ಕಾಲವೆಂಬ ಶಕ್ತಿಯಿಂದ ರಜಸ್ಸತ್ವತಮೋಗುಣಗಳ ಮೂಲಕವಾಗಿ, ಈ ಪ್ರಪಂಚದ ಸೃಷ್ಟಿಸ್ಥಿತಿ

ಸಂಹಾರಗಳನ್ನು ನಡೆಸತಕ್ಕವನೂ ನೀನೇ! ಲೋಕದಲ್ಲಿ ರಾಜಸತಾಮಸಾದಿ ಗುಣಗಳಿಂದ ಅಧೋಗತಿಯನ್ನು ಹೊಂದತಕ್ಕ ಜೀವಗಳನ್ನೂ ಕೂಡ, ನೀನು ಕೃಪಾದೃಷ್ಟಿಯಿಂದ ನೋಡಿ, ಈ ವಿಧವಾದ ದಂಡನಾದಿಗಳಿಂದ ಎಚ್ಚರಿಸಿ ಅವರನ್ನುದ್ಧರಿಸುತ್ತಿರುವೆ. ಹೀಗೆ ನಿರಂಕುಶವಾದ ಜಗದ್ವ್ಯಾಪಾರದಿಂದ ಕ್ರೀಡಿಸುವ ನಿನಗೆ ನಮಸ್ಕಾರವು ಲೋಕದಲ್ಲಿ ಸತ್ವಾದಿಗುಣಗಳಿಂದ ಬೇರೆಬೇರೆಸ್ವಭಾವವುಳ್ಳ ಸಮಸ್ತಜೀವವರ್ಗಗಳೂ ನಿನಗೆ ದೇಹವೆನಿಸಿರುವುದರಿಂದ ಎಲ್ಲವೂ ನಿನಗೆ ಅನುಗ್ರಹಿಸಲ್ಪಡತಕ್ಕವುಗಳೇ! "ಎಲ್ಲರನ್ನೂ ಒಂದೇವಿಧವಾಗಿ ಅನುಗ್ರಹಿಸಿಬಿಟ್ಟರೆ, ಜಗತ್ತಿನ ವಿವಿಧವ್ಯಾಪಾರಗಳಿಗೆ ಭಂಗವುಂಟಾಗುವುದಿಲ್ಲವೆ?" ಎಂದರೆ, ಯಾವಾಗಲೂ. ನೀನು ರಕ್ಷಣಕರ್ತನಾದುದರಿಂದ ಆಶ್ರಿತರನ್ನುದ್ಧರಿಸುವುದಕ್ಕಾಗಿಯೇ ಈ ಅವತಾರಗಳನ್ನೆತ್ತುತ್ತಿರುವೆ. ಹಿಂದೆ ಅನೇಕಜನ್ಮಗಳಲ್ಲಿ ಎಷ್ಟೋ ಅಪರಾಧಗಳನ್ನು ಮಾಡಿದ್ದರೂ, ಕೊನೆಗೆ ಅಪರಾಧಕ್ಷಾಪಣೆಯಿಂದ ಶಾಂತರಾದವರನ್ನು ನೀನು ಪರಮಪ್ರೇಮದಿಂದುದ್ಧರಿಸತಕ್ಕವನು. ಆದುದರಿಂದ ಈಗ ಶಾಂತನಾಗಿ ಶರಣಾಗತನಾಗಿರುವ ಈ ನಮ್ಮ ಪತಿಯನ್ನು ನೀನು ಅನುಗ್ರಹಿಸಿದಮಾತ್ರಕ್ಕೆ ನಿನ್ನ ಲೋಕವ್ಯಾಪಾರರೂಪವಾದ ವಿನೋದಗಳಿಗೆ ಭಂಗವೇನೂ ಬಾರದು. ಪ್ರಭುವಾದವನು ತನ್ನ ಪ್ರಜೆಗಳು ಮಾಡಿದ ಅಪರಾಧವನ್ನು ಮೊದಲು ಒಂದೆರಡಾವರ್ತಿ ಕ್ಷಮಿಸಿ, ಅವರನ್ನು ರಕ್ಷಿಸಬೇಕಾದುದೇ ಧರ್ಮವು. ತಂದೆಯು ಅರಿಯದಮಕ್ಕಳ ಅಪರಾಧವನ್ನು ಕ್ಷಮಿಸುವಂತೆ ಈತನ ಅಪರಾಧವನ್ನು ನೀನು ಒಂದೆರಡಾವರ್ತಿ ಕ್ಷಮಿಸಬೇಕಾದುದೇ ಸಹಜವಲ್ಲವೆ ? ಈ ನಮ್ಮ ಪತಿಯು, ನಿನ್ನ ನಿಜವನ್ನು ತಿಳಿಯದೆ, ಅಜ್ಞತೆಯಿಂದ ಮಾಡಿದ ಅಪರಾಧಕ್ಕಾಗಿ ನೀನು ಕೋಪಿಸಕೂಡದು. ಓ ಭಗವಂತಾ ! ನಿನ್ನ ಪಾದಾಹತಿಯಿಂದ ಪ್ರಾಣವನ್ನು ಬಿಡುವಷ್ಟು ದುರವಸ್ಥೆಯಲ್ಲಿರುವ ಈ ಸರ್ಪವನ್ನು ನೀನು ಅನುಗ್ರಹಿಸಿ ರಕ್ಷಿಸಬೇಕು. ದೇವಾ ! ನಮಗೆ ಪತಿಭಿಕ್ಷವನ್ನು ಕೊಟ್ಟು ಕಾಪಾಡಬೇಕು. ಈ ಕಾಳಿಯನು ನಮಗೆ ಪ್ರಾಣಸಮಾನನಾದುದರಿಂದ, ಈಗ ನೀನು ಇವನನ್ನು ಬಿಟ್ಟುಕೊಟ್ಟರೆ, ನಮ್ಮೆಲ್ಲರಿಗೂ ಪ್ರಾಣದಾನಮಾಡಿದಂತಾಗುವುದು. ಕೃಷ್ಣಾ ! "ಕ್ರೂರಸ್ವಭಾವ

ದಿಂದ ಲೋಕಕಂಟಕವಾದ ಸರ್ಪಜಾತಿಯನ್ನು ರಕ್ಷಿಸುವುದರಿಂದ ಲೋಕಕ್ಕೆ ಹಾನಿಯಲ್ಲವೆ?" ಎಂದು ನೀನು ಶಂಕಿಸಬೇಡ! ನಾವೆಲ್ಲರೂ ನಿನ್ನ ಕಿಂಕರಿಯರು, ಮುಂದೆ ನಿನ್ನ ಆಜ್ಞಾಧೀನರಾಗಿ ನಡೆದುಕೊಳ್ಳುವುದಕ್ಕೂ ಸಿದ್ಧರಾಗಿರುವೆವು. ಈ ನಮ್ಮ ಪತಿಯೂಕೂಡ ನಿನ್ನ ಆಜ್ಞೆಯನ್ನು ಶ್ರದ್ಧೆಯಿಂದ ನಡೆಸುವುದಕ್ಕೆ ಸಿದ್ಧನಾಗಿರುವನು. ಪ್ರಕೃತದಲ್ಲಿ ಅವನಿಗೆ ಪ್ರಾಣಭಯವಿಲ್ಲದಂತೆ ಮಾಡು" ಎಂದರು.

ಓ ಪರೀಕ್ಷಿದ್ರಾಜಾ ! ಹೀಗೆ ನಾಗಪತ್ನಿಯರೆಲ್ಲರೂ ದೈನ್ಯದಿಂದ ಪ್ರಾರ್ಥಿಸುವುದನ್ನು ಕೇಳಿ, ಕೃಷ್ಣನಿಗೆ ಅವರಲ್ಲಿ ಕನಿಕರವು ಹುಟ್ಟಿತು. ತನ್ನ ಪಾದಾಹತಿಯಿಂದ ತಲೆಯೆತ್ತಲಾರದೆ ಮೂರ್ಛಿತನಾಗಿ ಬಿದ್ದಿದ್ದ ಕಾಳಿಯನನ್ನು ಬಿಟ್ಟುಬಿಟ್ಟನು. ಕಾಳಿಯನಿಗೆ ಕ್ರಮಕ್ರಮವಾಗಿ ಮೂರ್ಛೆತಿಳಿದು, ಮೆಲ್ಲಮೆಲ್ಲಗೆ ಉಸಿರಾಡುವುದಕ್ಕೂ ಆರಂಭವಾಯಿತು. ಅವನ ಇಂದ್ರಿಯಗಳಿಗೂ, ಪ್ರಾಣಗಳಿಗೂ ಸ್ವಲ್ಪಸ್ವಲ್ಪವಾಗಿ ಪಟುತ್ವವುಂಟಾಯಿತು. ಆಗ ಕಾಳಿಯನು ಎಷ್ಟೋಕಷ್ಟದಿಂದ ಮೆಲ್ಲಗೆ ತಲೆಯೆತ್ತಿ, ಬದ್ಧಾಂಜಲಿಯಾಗಿ ಕೃಷ್ಣನಮುಂದೆ ದೈನ್ಯದಿಂದ ಹೀಗೆಂದು ಪ್ರಾರ್ಥಿಸುವನು. ‘ಓ ದೇವಾ! ನಮ್ಮ ಜಾತಿಗೆ ಕ್ರೂರಸ್ವಭಾವವು ಜನ್ಮಸಿದ್ಧವಾದುದು! ನಾವು ಕೇವಲತಮೋಗುಣವುಳ್ಳವರಾದುದರಿಂದ ದೀರ್ಘಕೋಪವೂ ನಮ್ಮ ಜಾತಿಗೆ ಸಹಜವು ! ಪ್ರಾಣಿಗಳಿಗೆ ಜನ್ಮಸಿದ್ಧವಾದ ಸ್ವಭಾವವನ್ನು ಬಿಟ್ಟುಬಿಡಬೇಕೆಂದರೆ ಹೇಗೆ ತಾನೇ ಸಾಧ್ಯವು? ಪಿಶಾಚಿಯಂತೆ ಅವರವರ ಸ್ವಭಾವವು ಅವರವರನ್ನು ಬೆನ್ನಟ್ಟಿಬರುವುದು. ದೇವಾ ! ಹೀಗೆ ಪ್ರಾಣಿಗಳಿಗೆ ಆಯಾ ಸ್ವಭಾವವನ್ನು ಏರ್ಪಡಿಸಿದವನಾರು ? ನೀನಲ್ಲವೆ? ಸೃಷ್ಟಿಕರ್ತನಾದ ನೀನೇ ನಮ್ಮಂತಹ ತಿರ್ಯಗ್ಜಂತುಗಳಿಗೆ, ಆಯಾಗುಣಗಳಿಗೆ ತಕ್ಕಂತೆ ಬೇರೆಬೇರೆ ಸ್ವಭಾವಗಳನ್ನೂ, ಶಕ್ತಿಸಾಮರ್ಥ್ಯಗಳನ್ನೂ ಕಲ್ಪಿಸಿ, ಅದಕ್ಕೆ ತಕ್ಕಂತೆ ಅವುಗಳ ಉತ್ಪತ್ತಿಸ್ಥಾನವೂ, ವೀರ್ಯವೂ, ಆಕೃತಿಯೂ, ಬುದ್ಧಿಯೂ, ನಾನಾವಿಧವಾಗಿರುವಂತೆ ಮಾಡಿರುವೆ ಹಾಗೆ ನಿನ್ನಿಂದ ಸೃಷ್ಟಿಸಲ್ಪಟ್ಟ ನಾನಾಬಗೆಯ ತಿರ್ಯಗ್ಜಂತುಗಳಲ್ಲಿ ನಾವೂ ಒಂದುಜಾತಿಯವರು. ಸರ್ಪಜಾತಿಗೆ ಕೋಪವೂ, ಕ್ರೂರಸ್ವಭಾವವೂ ಜನ್ಮಸಿದ್ಧವಾಗಿಯೇ ಏರ್ಪಟ್ಟಿರುವುದು. ಇವೆಲ್ಲವೂ

ನಿನ್ನ ಮಾಯಾಕಾರ್ಯಗಳು! ಆ ನಿನ್ನ ಮಾಯೆಗೆ ಬದ್ಧರಾಗಿ ನಡೆಯುತ್ತಿರುವ ನಾವು, ನಿನ್ನಿಂದಲೇ ಕಲ್ಪಿಸಲ್ಪಟ್ಟ ನಮ್ಮ ಕೋಪಸ್ವಭಾವವನ್ನು ಹೇಗೆ ತಾನೇ ಬಿಡಬಲ್ಲೆವು? ಗಂಟುಹಾಕಿದವನೇ ಬಿಚ್ಚಬೇಕೆಂಬ ನ್ಯಾಯದಂತೆ, ನಮಗೆ ಸಹಜವಾದ ಈ ಕ್ರೂರಸ್ವಭಾವವನ್ನು ಬಿಡಿಸುವುದಕ್ಕೂ ನೀನು ಹೊರತು ಬೇರೆ ಸಮರ್ಥರಿಲ್ಲ! ನಿನ್ನ ಅನುಗ್ರಹದಿಂದಲೇ ನಮಗೆ ಸದ್ಬುದ್ಧಿಯುಂಟಾಗಬೇಕು. ದೇವಾ! ನೀನು ಸರ್ವಜ್ಞನು! ಸರ್ವಸ್ವತಂತ್ರನು! ಆದುದರಿಂದ ಮುಂದೆ ನಮ್ಮನ್ನು ಯಾವ ರೀತಿಯಲ್ಲಿರಿಸಬೇಕೆಂಬುದನ್ನು ತಿಳಿದು, ಅದರಂತೆ ನಡೆಸುವುದಕ್ಕೆ ನೀನೇ ಬಾಧ್ಯನು! ಕೃಷ್ಣಾ! ಈಗ ನನ್ನ ವಿಷಯದಲ್ಲಿ ಅನುಗ್ರಹವಾಗಲಿ, ನಿಗ್ರಹವಾಗಲಿ, ಯಾವುದು ನಿನಗೆ ಉಚಿತವೆಂದು ತೋರುವುದೋ ಹಾಗೆ ನಡೆಸಬಹುದು. ನಾವಂತೂ ನಿನ್ನ ಆಜ್ಞಾಧೀನರಾಗಿ ನಡೆಯುವುದಕ್ಕೆ ಸಿದ್ಧರಾಗಿರುವೆವು." ಎಂದನು.

ಲೋಕಕ್ಷೇಮಕ್ಕಾಗಿಯೇ ಮಾಯಾಮಾನುಷರೂಪದಿಂದವತರಿಸಿದ ಕೃಷ್ಣನು, ಕಾಳಿಯನ ದೈನ್ಯೋಕ್ತಿಯನ್ನು ಕೇಳಿ ದಯಾರ್ದ್ರಹೃದಯನಾಗಿ, "ಓ ಕಾಳಿಯಾ? ಹಾಗಿದ್ದರೆ ಇನ್ನುಮೇಲೆ ನೀನು ಇಲ್ಲಿ ನಿಲ್ಲಬೇಡ! ಈಗಲೇ ಈ ಮಡುವನ್ನು ಬಿಟ್ಟು ಸಮುದ್ರಕ್ಕೆ ಹೋಗಿ ಅಲ್ಲಿ ವಾಸಮಾಡುತ್ತಿರು! ಈ ಮಡುವಿನಸುತ್ತಲೂ ವಿಶೇಷವಾಗಿ ಗೋವುಗಳೂ, ಮನುಷ್ಯರೂ ವಾಸಮಾಡುವುದರಿಂದ, ನಿನ್ನಿಂದ ಅವರಿಗೆ ಬಾಧೆಯುಂಟಾಗಬಾರದು. ಇಲ್ಲಿನ ಗೋಪಾಲಕರೆಲ್ಲರೂ, ಇನ್ನುಮೇಲೆ ತಮ್ಮ ಪತ್ನೀಪುತ್ರಾದಿಪರಿವಾರಗಳೊಡನೆ ಈ ಮಡುವಿನಲ್ಲಿಳಿದು ಸಂತೋಷದಿಂದ ವಿಹರಿಸಲಿ! ಕಾಳಿಯಾ! ಈಗ ನಾನು ನಿನ್ನನ್ನು ದಂಡಿಸಿದೆನೆಂದು ನೀನು ಚಿಂತಿಸಬೇಡ! ಈ ಚರಿತ್ರವು ಲೋಕಪ್ರಸಿದ್ಧವಾಗಿ, ನಿನ್ನ ಅಪಾರಕೀರ್ತಿಗೆ ಕಾರಣವಾಗಲಿ! ಮತ್ತು ಯಾವಪುರುಷನು ಪ್ರಾತಸ್ಸಾಯಂಕಾಲಗಳೆಂಬ ಉಭಯಸಂಧ್ಯೆಗಳಲ್ಲಿಯೂ, ಈ ಚರಿತ್ರವನ್ನು ಧ್ಯಾನಿಸಿ ಕೀರ್ತಿಸುವನೋ, ಅವನಿಗೆ ಎಂದಿಗೂ ಸರ್ಪಭಯವಿಲ್ಲದಿರಲಿ! ಮತ್ತು ಈಗ ನಾನು ಈಜಾಡಿದ ಈ ಮಡುವಿನಲ್ಲಿ ಸ್ನಾನಮಾಡಿ, ದೇವರ್ಷಿಪಿತೃತರ್ಪಣಗಳನ್ನು ನಡೆಸತಕ್ಕವರೂ, ಇಲ್ಲಿ ಉಪವಾಸಾದಿವ್ರತಗಳನ್ನು ನಡೆಸತಕ್ಕವರೂ, ಇಲ್ಲಿ ನನ್ನನ್ನು ಸ್ಮರಿಸಿ ಪೂಜಿ

ಸತತ್ವವರೂ, ಸಮಸ್ತಪಾಪಗಳಿಂದ ಮುಕ್ತರಾಗಿ ಸದ್ಗತಿಯನ್ನು ಹೊಂದಲಿ! ಓ ಸರ್ಪರಾಜಾ! ಮೊದಲೇ ನೀನು ಗರುಡನ ಭಯಕ್ಕಾಗಿ ಆ ದ್ವೀಪವನ್ನು ಬಿಟ್ಟು ಈ ಮಡುವಿಗೆ ಬಂದು ಸೇರಿರುವಾಗ, ತಿರುಗಿ ಅಲ್ಲಿಗೆ ಹೋಗುವುದು ಹೇಗೆಂದು ನೀನು ಭಯಪಡಬೇಕಾದುದಿಲ್ಲ! ಈಗ ನನ್ನ ಹಜ್ಜೆಯ ಗುರುತು, ನಿನ್ನ ತಲೆಯಮೇಲಿರುವುದರಿಂದ, ಅದನ್ನು ನೋಡಿದೊಡನೆ ಗರುಡನು ನಿನ್ನನ್ನು, ಗೌರವಿಸಿ ಪೂಜಿಸುವನೇಹೊರತು, ನಿನ್ನನ್ನು ಭಕ್ಷಿಸಲಾರನು. ಧೈರ್ಯದಿಂದ ಹೋಗು" ಎಂದನು.

ಅಮೃತಸಮಾನವಾದ ಈ ಕೃಷ್ಣನ ವಾಕ್ಯಗಳನ್ನು ಕೇಳಿ, ಕಾಳಿಯನೂ, ಅವನ ಪತ್ನಿಯರೂ ಪರಮಸಂತೋಷದಿಂದ ಮುಂದೆ ಬಂದು, ಕೃಷ್ಣನಿಗೆ ನಮಸ್ಕರಿಸಿ, ದಿವ್ಯವಸ್ತ್ರಾಭರಣಗಳಿಂದಲೂ, ಗಂಧಪುಷ್ಪಾದಿಗಳಿಂದಲೂ, ನಾಗರತ್ನಗಳಿಂದಲೂ, ಉತ್ಪಲಮಾಲಿಕೆಗಳಿಂದಲೂ ಆ ಭಗವಂತನನ್ನು ಪೂಜಿಸಿ, ಸಂತೋಷಗೊಳಿಸಿದರು. ಒಡನೆಯೇ ಕಾಳಿಯನು ತನ್ನ ಪತ್ನೀ ಪುತ್ರಾದಿ ಸಮಸ್ತಪರಿವಾರಗಳೊಡಗೂಡಿ, ತಾನು ಮೊದಲಿದ್ದ ರಮಣಕದ್ವೀಪಕ್ಕೆ ಹೊರಟನು. ರಾಜಾ! ಹೀಗೆ ಕೇವಲವಿಷಮಯವಾಗಿದ್ದ ಆ ಮಡುವಿನ ಜಲವೆಲ್ಲವೂ, ಶ್ರೀಕೃಷ್ಣಾನುಗ್ರಹದಿಂದ ಅಮೃತಸಮಾನವಾಗಿ, ಎಲ್ಲರಿಗೂ ಕ್ರೀಡಾಸ್ಥಾನವಾಯಿತು. ಇದು ಹದಿನಾರನೆಯ ಅಧ್ಯಾಯವು.

---

### { ಕಾಳಿಯನು ಸಮುದ್ರವನ್ನು ಬಿಟ್ಟು ಕಾಳಿಂದೀ ಮಡುವಿಗೆ ಬಂದ ಕಾರಣವು. }

ಆಗ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು “ಓ ಮಹರ್ಷೀ! ಕಾಳಿಯನು ಸಮುದ್ರದಲ್ಲಿದ್ದ ರಮಣಕದ್ವೀಪವನ್ನು ಬಿಟ್ಟು, ಈ ಕಾಳಿಂದೀ ಮಡುವಿಗೆ ಬರಲು ಕಾರಣವೇನು? ಇತರಸರ್ಪಗಳೆಲ್ಲವೂ ಸಮುದ್ರದಲ್ಲಿ ನಿರ್ಭಯವಾಗಿರುವಾಗ, ಈ ಕಾಳಿಯನೊಬ್ಬನುಮಾತ್ರ ಗರುಡನ ವಿಷಯದಲ್ಲಿ ಅಷ್ಟು ದ್ವೇಷವನ್ನು ಸಂಪಾದಿಸಿದುದೇಕೆ? ಈ ವೃತ್ತಾಂತವನ್ನು ಸವಿಸ್ತರವಾಗಿ ತಿಳಿಸಬೇಕು” ಎಂದನು. ಅದಕ್ಕಾ ಶುಕಮುನಿಯು “ರಾಜಾ! ಕೇಳು! ಪೂರ್ವದಲ್ಲಿ, ಒಮ್ಮೆ ಲೋಕಕ್ಕೆ ಸರ್ಪಬಾಧೆಯು

ಬಹಳವಾಗಿ ಹೆಚ್ಚಿತು. ಜನರೆಲ್ಲರೂ ಆ ಸರ್ಪಗಳ ಬಾಧೆಯನ್ನು ತಡೆಯುವು ದಕ್ಕೆ ಉಪಾಯವೇನೆಂದಾಲೋಚಿಸಿ,ಕೊನೆಗೆ ಅವರೆಲ್ಲರೂ ಸೇರಿ ಒಂದೊಂ ದು ತಿಂಗಳ ಪರ್ವ (ಅಮಾವಾಸ್ಯೆಯ) ದಿನದಲ್ಲಿ, ಸಮಸ್ತಭಕ್ಷ್ಯಭೋಜ್ಯಗ ಳೊಡನೆ ಸರ್ಪಗಳಿಗೆ ಬೇಕಾದ ಆಹಾರಸಾಮಗ್ರಿಗಳನ್ನೊದಗಿಸಿಕೊಡು ವುದಾಗಿಯೂ, ಸರ್ಪಗಳು ಅವುಗಳಿಂದ ತೃಪ್ತಿಹೊಂದಿ, ತಮ್ಮನ್ನು ಕಚ್ಚದಿ ರಬೇಕೆಂದೂ ಒಪ್ಪಂದವನ್ನು ಮಾಡಿಕೊಂಡು, ಹಾಗೆಯೇ ನಡೆಸುತ್ತಬಂ ದರು. ಆ ಸರ್ಪಗಳೂಕೂಡ ತಮಗೆ ಗರುಡನಿಂದುಂಟಾದ ಭಯವನ್ನು ತಪ್ಪಿಸಿಕೊಳ್ಳುವುದಕ್ಕಾಗಿ, ಜನರಿಂದ ತಮಗೆ ಬಂದ ಉಪಹಾರಗಳಲ್ಲಿ ಸ್ವಲ್ಪಭಾಗವನ್ನು ಗರುಡನಿಗೊಪ್ಪಿಸಿ, ಮಿಕ್ಕುದನ್ನು ತಾವು ತಿನ್ನುತ್ತ ಸುಖ ದಿಂದಿರುತಿದ್ದುವು. ಗರುಡನೂ ಅವುಗಳಿಂದ ತೃಪ್ತನಾಗಿ ಅಲ್ಲಿನ ಹಾವುಗ ಳನ್ನು ಬಾಧಿಸದೆ ಸುಮ್ಮನಿರುತಿದ್ದನು. ಹೀಗೆ ಅಲ್ಲಿದ್ದ ಒಂದೊಂದು ಸರ್ಪವೂ ತನ್ನತನ್ನ ಭಾಗವನ್ನು ಗರುಡನಿಗೆ ತಂದೊಪ್ಪಿಸುತ್ತಿರುವಾಗ, ಕದ್ರುವಿನ ಮಗನಾದ ಈ ಕಾಳಿಯನೊಬ್ಬನುಮಾತ್ರ, ತನ್ನ ವಿಷದ ಹೆಮ್ಮೆ ಯಿಂದಲೂ, ವೀರ್ಯದ ಕೊಬ್ಬಿನಿಂದಲೂ ಮತ್ತನಾಗಿ, ಆ ಗರುಡನನ್ನು ಲಕ್ಷ್ಯಮಾಡದೆ, ತನಗೆ ಬಂದ ಭಾಗದಲ್ಲಿ ಸ್ವಲ್ಪವನ್ನಾದರೂ ಕೊಡದೆ ತಾನೇ ಭಕ್ಷಿಸುತ್ತಬಂದನು. ಈ ಸಂಗತಿಯು ತಿಳಿದಕೂಡಲೆ, ಗರುಡನು ಅತ್ಯಾಕ್ರೋಶದಿಂದ ಆ ಕಾಳಿಯನನ್ನೇ ಕಬಳಿಸಿಬಿಡಬೇಕೆಂದು ವೇಗದಿಂದ ಬಂದನು. ಆಗ ಕಾಳಿಯನೂ ತನ್ನ ವೀರ್ಯದ ಕೊಬ್ಬಿನಿಂದ ಗರುಡನಿಗೆ ಭಯಪಡದೆ, ಇದಿರುಬಿದ್ದು ಕ್ರೂರದೃಷ್ಟಿಯಿಂದ ನೋಡುತ್ತ, ಹೆಡೆ ಗಳನ್ನು ಬಿಚ್ಚಿಕೊಂಡು ಮೇಲೆದ್ದನು. ನಾಲಗೆಗಳನ್ನು ಉದ್ದಕ್ಕೆ ನೀಡಿ ಬು ಸುಗುಟ್ಟುತ್ತ, ತನ್ನ ವಿಷದ ಹಲ್ಲುಗಳಿಂದ ಗರುಡನನ್ನು ಕಚ್ಚುತಿದ್ದನು.ಆದ ರೇನು? ಚಿಕ್ಕಿನ ಮುಂದೆ ಇಲಿಯಾಟವೆ? ಆಗ, ಮಹಾಪರಾಕ್ರಮಿಯಾಗಿ ಯೂ, ಪ್ರಚಂಡವೇಗವುಳ್ಳವನಾಗಿಯೂ, ಇರುವ ವಿಷ್ಣುವಾಹನವಾದ ಗರುಡನು, ಅತಿಕುಪಿತನಾಗಿ, ಸುವರ್ಣಛಾಯೆಯುಳ್ಳ ತನ್ನ ಎಡದ ರೆಕ್ಕೆ ಯಿಂದ ಆ ಕಾಳಿಯನ ತಲೆಯಮೇಲೆ ವೇಗದಿಂದಪ್ಪಳಿಸಿದನು. ಈ ಒಂದೇ ಪ್ರಹಾರಕ್ಕೆ ಕಾಳಿಯನ ಆರ್ಭಟವೆಲ್ಲವೂ ಅಡಗಿಹೋದುವು! ಒಡನೆಯೇ

ಅವನು ಈ ಮಡುವಿಗೆ ಗರುಡನು ಬರಲಾರನೆಂಬುದನ್ನು ತಿಳಿದು ಆ ಸಮುದ್ರವನ್ನು ಬಿಟ್ಟು, ಇಲ್ಲಿಗೆ ಬಂದು ಸೇರಿಕೊಂಡನು. ಅದರ ಕಾರಣವನ್ನೂ ತಿಳಿಸುವೆನು ಕೇಳು! ಸೌಭರಿಯೆಂಬ ಮಹರ್ಷಿಯು ಹಿಂದೊಮ್ಮೆ ಈ ಮಡುವಿನ ತೀರದಲ್ಲಿ ತಪಸ್ಸು ಮಾಡುತಿದ್ದನು. ಅಗಾಧವಾದ ಈ ಮಡುವಿನಲ್ಲಿ ಬಹಳ ಮೀನುಗಳು ಸುಖವಾಗಿ ವಾಸಿಸುತಿದ್ದುವು. ಗರುಡನು ಸಂಚಾರವಶದಿಂದ ಇದರ ಸಮೀಪಕ್ಕೆ ಬಂದಾಗ, ಅವನಿಗೆ ಈ ಮಡುವಿನಲ್ಲಿ ಒಂದಾನೊಂದು ದೊಡ್ಡಮತ್ಸ್ಯವು ದೃಷ್ಟಿಗೋಚರವಾಯಿತು. ಮತ್ಸ್ಯವು ಗರುಡನಿಗೆ ಬಹಳ ಪ್ರಿಯವಾದ ಆಹಾರವಾದುದರಿಂದ, ಗರುಡನು ಅದನ್ನು ಹಿಡಿಯುವುದಕ್ಕೆ ಯತ್ನಿಸಿದನು. ಸರ್ವಭೂತದಯಾಪರನಾದ ಸೌಭರಿಯು "ಬೇಡ! ಬೇಡ!" ವೆಂದು ಬಹಳವಾಗಿ ನಿವಾರಿಸುತಿದ್ದರೂ ಕೇಳದೆ ಗರುಡನು, ತನ್ನ ಹಸಿವಿನ ಆತುರದಿಂದ ಅದನ್ನು ಹಿಡಿದು ಭಕ್ಷಿಸಿಬಿಟ್ಟನು. ಆ ಮಡುವಿನಲ್ಲಿದ್ದ ಇತರಮತ್ಸ್ಯಗಳೆಲ್ಲವೂ, ತಮಗೆ ಪ್ರಭುವಾದ ಆ ಮತ್ಸ್ಯವು ಮೃತ್ಯುವಶವಾದುದನ್ನು ಕಂಡು, ಬಹಳವಾಗಿ ದುಃಖಿಸುತಿದ್ದುವು. ಇದನ್ನು ನೋಡಿ ಸೌಭರಿಯು, ಬಹಳ ಕನಿಕರಗೊಂಡು, ಇನ್ನುಮೇಲಾದರೂ ಅಲ್ಲಿನ ಮತ್ಸ್ಯಗಳಿಗೆ ಅಪಾಯವಿಲ್ಲದೆ ಮಾಡಬೇಕೆಂಬ ಬುದ್ಧಿಯಿಂದ "ಇದುಮೊದಲು, ಎಂದಾದರೂ ಗರುಡನು ಇಲ್ಲಿಗೆ ಬಂದು, ಇಲ್ಲಿನ ಮತ್ಸ್ಯಗಳನ್ನು ಹಿಡಿದಪಕ್ಷದಲ್ಲಿ, ಒಡನೆಯೇ ಅವನಿಗೆ ಮರಣವುಂಟಾಗಲಿ" ಎಂದು ಶಪಿಸಿದನು. ಈ ಸಂಗತಿಯು ಕಾಳಿಯನೊಬ್ಬನಿಗೆ ಹೊರತು, ಬೇರೆ ಯಾವ ಸರ್ಪಕ್ಕೂ ತಿಳಿಯದು. ಈ ಧೈರ್ಯದಿಂದಲೇ ಕಾಳಿಯನು ಇಲ್ಲಿ ವಾಸಮಾಡುತಿದ್ದು, ಈಗ ತಿರುಗಿ ಕೃಷ್ಣನಿಂದ ತಾನು ಮೊದಲಿದ್ದ ಸ್ಥಾನಕ್ಕೇ ಹೊರಡಿಸಲ್ಪಟ್ಟನು.

ರಾಜೇಂದ್ರಾ! ಅದು ಹಾಗಾಯಿತಷ್ಟೆ? ಇತ್ತಲಾಗಿ ಕೃಷ್ಣನು ಕಾಳಿಯನಲ್ಲಿ ಅನುಗ್ರಹವನ್ನು ತೋರಿಸಿದುದಕ್ಕಾಗಿ, ನಾಗಪತ್ನಿಯರೆಲ್ಲರೂ, ದಿವ್ಯವಾದ ಗಂಧಪುಷ್ಪವಸ್ತ್ರಾಭರಣಗಳನ್ನು ಸಮರ್ಪಿಸಿ ಕೃಷ್ಣನನ್ನು ಪೂಜಿಸಿದುದಾಗಿ ಹೇಳಿದೆನಲ್ಲವೆ? ಸರ್ಪದ ಬಾಯಿಗೆ ಸಿಕ್ಕಿ ಬಿದ್ದಿದ್ದ ಕೃಷ್ಣನು, ಹೊಸವಸ್ತ್ರಾಭರಣಗಳಿಂದಲೂ, ದಿವ್ಯಗಂಧಾನುಲೇಪನದಿಂದಲೂ ಅಲಂ

ಕೃತನಾಗಿ, ಅಪೂರ್ವಕಾಂತಿಯಿಂದ ಹೊರಗೆ ಬಂದಾಗ, ಇತ್ತಲಾಗಿ ಅದು ವರೆಗೆ ಅವನನ್ನು ಕಾಣದೆ ದುಃಖಿಸುತಿದ್ದ ಗೊಲ್ಲಮಕ್ಕಳ ಸಂತೋಷವನ್ನು ಕೇಳಬೇಕೆ ? ಹೋಗಿದ್ದ ಜೀವವನ್ನು ತಿರುಗಿ ಪಡೆದ ಇಂದ್ರಿಯಗಳಂತೆ, ದುಃಖದಿಂದ ಮೈಮರೆತಿದ್ದವರೆಲ್ಲರೂ ಸಂತೋಷದಿಂದ ಮೇಲೆದ್ದರು. ಮುಂದೆ ಬಂದು ಬಾರಿಬಾರಿಗೂ, ಕೃಷ್ಣನನ್ನಾಲಿಂಗಿಸಿಕೊಳ್ಳುತಿದ್ದರು. ಯಶೋದೆ, ರೋಹಿಣಿ, ಮೊದಲಾದ ಗೋಪಿಯರೂ, ನಂದಾದಿಗೋಪಾಲಕರೂ ಮೂರ್ಛೆತಿಳಿದೆದ್ದು,ಆಗಲೇ ತಾವು ಕೃತಕೃತ್ಯರಾದಂತೆ ಸಂತೋಷದಿಂದುಬ್ಬುತಿದ್ದರು. ಅಷ್ಟುಮಂದಿಯಲ್ಲಿ ಬಲರಾಮನೊಬ್ಬನುಮಾತ್ರ ಕೃಷ್ಣನ ಪ್ರಭಾವವನ್ನು ಬಲ್ಲವನಾಗಿದ್ದುದರಿಂದ, ಮನಸ್ಸಿನಲ್ಲಿ ಸ್ವಲ್ಪವೂ ಕಳವಳಪಿಲ್ಲದಿದ್ದು, ಕೃಷ್ಣನು ಬಂದೊಡನೆ ಅವನನ್ನಾಲಿಂಗಿಸಿ, ತೊಡೆಯಮೇಲೆ ಕುಳ್ಳಿರಿಸಿಕೊಂಡು, ಅವನ ಮುಖವನ್ನು ನೋಡಿ ನಗುತಿದ್ದನು. ಕೃಷ್ಣನು ಬಂದುದನ್ನು ನೋಡಿ ಗೋಪಾಲಕರುಮಾತ್ರವಲ್ಲದೆ, ಅಲ್ಲಿ ದುಃಖಿತವಾಗಿದ್ದ ದನಕರುಗಳೂ,ಬಾಡಿದ್ದ ಮರಗಿಡುಗಳೂ ಉಲ್ಲಾಸಹೊಂದಿದುವು. ಅನೇಕವೃದ್ಧಬ್ರಾಹ್ಮಣರೂ,ಅವರ ಪತ್ನಿಯರೂ ಸಂತೋಷದಿಂದ ನಂದನ ಬಳಿಗೆ ಬಂದು “ನಂದಾ! ನಿನ್ನ ಮಗುವು ಸರ್ಪದ ಬಾಯಿಗೆ ಸಿಕ್ಕಿ ಬದುಕಿಬಂದುದು ನಿನ್ನ ಭಾಗ್ಯವಿಶೇಷವು! ನಮಗೆ ಬಹಳಸಂತೋಷವಾಯಿತು” ಎಂದು ಸಮಾಧಾನಹೇಳುತಿದ್ದರು. ಮಹಾಭಾಗ್ಯವತಿಯಾದ ಯಶೋದೆಯು, ಹೋಗಿದ್ದ ಪ್ರಾಣವು ತಿರುಗಿ ಬಂದಂತೆ ತನ್ನ ಸಮೀಪಕ್ಕೆ ಬಂದ ಕೃಷ್ಣನನ್ನು ಬಾರಿಬಾರಿಗೂ ಆಲಿಂಗಿಸಿ, ತೊಡೆಯಮೇಲೆ ಕುಳ್ಳಿರಿಸಿಕೊಂಡು, ಆನಂದಬಾಷ್ಪವನ್ನು ಸುರಿಸುತಿದ್ದಳು. ಇಷ್ಟರಲ್ಲಿ ಸೂರ್ಯಾಸ್ತಮಯವಾಗಿ ಸುತ್ತಲೂ ಕತ್ತಲೆಕವಿಯಿತು. ಆ ಕಗ್ಗತ್ತಲೆಯಲ್ಲಿ ಹಿಂತಿರುಗಿ ಮನೆಗೆ ಬರುವುದಕ್ಕೆ ಸಾಧ್ಯವಿಲ್ಲದೆ ಹೋಗಲು, ಆಗ ಕೃಷ್ಣನು ತನ್ನ ತಂದೆ, ತಾಯಿ, ಮೊದಲಾದ ಬಂಧುಗಳಿಗೂ ಇತರಗೋಪಾಲಕರಿಗೂ, ಆ ಯಮುನಾತೀರದಲ್ಲಿಯೇ ವಾಸಸ್ಥಾನವನ್ನು ಕಲ್ಪಿಸಿ, ತನ್ನಣ್ಣನಾದ ರಾಮನೊಡನೆಯೂ, ತನ್ನ ಸ್ನೇಹಿತರೊಡನೆಯೂ, ತಾನೂ ಆ ರಾತ್ರಿಯಲ್ಲಿ ಅಲ್ಲಿಯೇ ನಿಂತುಬಿಟ್ಟನು. ಎಲ್ಲರೂ ಹಸಿವು ಬಾಯಾರಿಕೆಗಳಿಂದಲೂ, ದೇಹಶ್ರಮದಿಂದಲೂ ಬ

ಹಳವಾಗಿ ಸುಕ್ಕಿ ಬೆಂಡಾಗಿ ಮಲಗಿದ್ದರು. ಇಷ್ಟರಲ್ಲಿ ಸಮೀಪದ ಕಾಡಿನಲ್ಲಿ ಒಂದು ಕಾಡುಗಿಚ್ಚು ಹುಟ್ಟಿ, ಸುತ್ತಲೂ ವ್ಯಾಪಿಸುತ್ತಬಂದಿತು. ಕ್ರಮಕ್ರಮವಾಗಿ, ಇಲ್ಲಿ ಮಲಗಿದ್ದ ಮಂದೆಯನ್ನೂ ಆವರಿಸಿಕೊಂಡಿತು. ಎಲ್ಲರೂ ಆ ಕಾಡುಗಿಚ್ಚಿನ ಬೇಗೆಯಲ್ಲಿ ಸಿಕ್ಕಿ ಸಾಯುವ ಸ್ಥಿತಿಯಲ್ಲಿದ್ದರು. ಅಲ್ಲಲ್ಲಿ ಮಲಗಿದ್ದವರೆಲ್ಲರೂ ಸಂಭ್ರಮದಿಂದೆದ್ದು, ಕೃಷ್ಣನ ಬಳಿಗೆ ಬಂದು "ಅಯ್ಯೋ! ಇನ್ನೇನುಗತಿ! ಕೃಷ್ಣಾ! ಕೃಷ್ಣಾ! ಓ ಮಹಾತ್ಮಾ! ರಾಮಾ! ಅಮಿತಪರಾಕ್ರಮಾ! ಅದೋ! ನೋಡಿರಿ! ಭಯಂಕರವಾದ ದಾವಾಗ್ನಿಯು ಸುತ್ತಲೂ ಆವರಿಸಿಕೊಂಡಿರುವುದು. ಅದಕ್ಕೆ ನಾವೆಲ್ಲರೂ ಮೊತ್ತಕ್ಕೆ ಆಹುತಿಯಾಗುವ ಕಾಲವು ಬಂದಂತಿದೆ. ಕಾಲಾಗ್ನಿಯಂತೆ ಉರಿಯುತ್ತ ಬರುವ ಈ ಬೆಂಕಿಯನ್ನು ತಪ್ಪಿಸಿಕೊಳ್ಳುವುದಕ್ಕೆ ಉಪಾಯವೊಂದೂ ನಮಗೆ ತೋರಲಿಲ್ಲವಲ್ಲಾ! ಕೃಷ್ಣಾ! ಪ್ರಭೂ! ಹೇಗಾದರೂ ನಮ್ಮ ಪ್ರಾಣವನ್ನುಳಿಸಬೇಕು" ನಿನ್ನನ್ನು ಬಿಟ್ಟರೆ ಈಗ ನಮಗೆ ಬೇರೆ ದಿಕ್ಕಿಲ್ಲ! ಎಂದರು. ಅವರ ದೈನ್ಯವನ್ನು ನೋಡಿ ನಗುತ್ತ, ಕೃಷ್ಣನು ಮುಂದೆ ಹೋಗಿ, (ಹೋಮಾಂತದಲ್ಲಿ ಅಗ್ನಿಯನ್ನು ಆತ್ಮಸಮಾರೋಪಣಮಾಡುವಂತೆ) ಆ ಬೆಂಕಿಯನ್ನು ಕೈಯಿಂದೆತ್ತಿ ಕುಡಿದುಬಿಟ್ಟನು. ಇದು ಹದಿನೇಳನೆಯ ಅಧ್ಯಾಯವು.

---

### ಗ್ರೀಷ್ಮರ್ತು ವರ್ಣನವು.

ರಾಜಾ! ಕೇಳು! ಆ ರಾತ್ರಿಯು ಕಳೆದು ಬೆಳಗಾದಮೇಲೆ, ಕೃಷ್ಣನು ತನ್ನ ಸಮಸ್ತಬಂಧುಮಿತ್ರರೊಡನೆ ಅಲ್ಲಿಂದ ಹೊರಟನು ದಾರಿಯುದ್ದಕ್ಕೂ ಗೋಪಾಲಕರು ಆ ಕೃಷ್ಣನ ವೈಭವವನ್ನೇ ಹೇಳಿಹೇಳಿ ಕೊಂಡಾಡುತ್ತಬಂದರು. ಎಲ್ಲರೂ ಹಿಂತಿರುಗಿ ಮಂದೆಗೆ ಬಂದು ಸೇರಿದರು. ರಾಮಕೃಷ್ಣರಿಬ್ಬರೂ ಹೀಗೆ ತಮ್ಮ ಪರಸ್ವರೂಪವನ್ನು ಮರೆಸಿಕೊಂಡು, ಗೊಲ್ಲರ ಮಕ್ಕಳಂತೆ ವಿವಿಧವಿನೋದಗಳಿಂದ ಕಾಲವನ್ನು ಕಳೆಯುತ್ತಿರುವಾಗ, ವಸಂತಋತುವು ಕಳೆದು ಗ್ರೀಷ್ಮಕಾಲವು ಪ್ರಾರಂಭಿಸಿತು ಈ ಗ್ರೀಷ್ಮಕಾಲವೆಂಬುದು, ಬಿಸಿಲಿನ ತಾಪದಿಂದ ಪ್ರಾಣಿಗಳಿಗೆ ಅಷ್ಟಾಗಿ ಸುಖಕರವಲ್ಲದಿದ್ದರೂ, ಈ ಬೃಂದಾವನವಾಸಿಗಳಿಗೆಮಾತ್ರ, ಅಲ್ಲಿನ ದೇಶಗುಣದಿಂದ,

ವಸಂತಕಾಲದಂತೆಯೇ ಆನಂದಕರವಾಗಿ ತೋರುತಿದ್ದಿತು. ರಾಜಾ! ಭಗವಂತನಾದ ಶ್ರೀಕೃಷ್ಣನು, ತನ್ನ ಅಂಶಭೂತನಾದ ಬಲರಾಮನೊಡನೆ ವಾಸಮಾಡುತ್ತಿರುವಾಗ, ಅಲ್ಲಿನ ಸುಖಸಂಪತ್ತಿಯನ್ನು ಹೇಳಬೇಕಾದುದೇನು? ಕಾಲಸ್ವಭಾವದಿಂದ, ಅಲ್ಲಲ್ಲಿ ಜೀರುಂಡೆಗಳು ಕರ್ಣಕಠೋರವಾಗಿ ಕೂಗುತಿದ್ದರೂ, ಸುತ್ತಲೂ ಹರಿಯುತಿದ್ದ ಗಿರಿನದಿಗಳ ಪ್ರವಾಹಧ್ವನಿಯು, ಅದನ್ನು ಮರೆಸಿ ಕಿವಿಗಿಂಪಾಗಿ ಕೇಳಿಸುತಿತ್ತು. ಮತ್ತು ಆ ಗಿರಿನದಿಗಳ ಪ್ರವಾಹದ ಶುಂತುರುಗಳು, ನಾನಾದಿಕ್ಕುಗಳಿಗೂ ವ್ಯಾಪಿಸುತಿದ್ದುದರಿಂದ, ಆ ವನಪ್ರದೇಶದಲ್ಲಿರುವ ಗಿಡುಬಳ್ಳಿಗಳೆಲ್ಲವೂ ಬಿಸಿಲಿನ ತಾಪಕ್ಕೆ ಕಂದದೆ, ಯಾವಾಗಲೂ ಸೊಂಪೇರಿ ಮೆರೆಯುತಿದ್ದುವು. ಆ ಬೃಂದಾವನದಸುತ್ತಲೂ ಕೆರೆತೊರೆಗಳೂ, ಗಿರಿನದಿಗಳೂ ಯಾವಾಗಲೂ ಜಲಸಮೃದ್ಧವಾಗಿದ್ದುದರಿಂದ, ಅವುಗಳಮೇಲೆ ಬೀಸಿಬರುವ ಗಾಳಿಯು, ಜಲಕಣಗಳಿಂದಲೂ, ಕಮಲಕಲ್ಹಾರಾದಿ ಪುಷ್ಪಧೂಳಿಗಳಿಂದಲೂ ಮಿಶ್ರವಾಗಿ, ಅಲ್ಲಿನ ಜನರಿಗೆ ಬೇಸಗೆಯಲ್ಲಿಯೂಕೂಡ, ಬಿಸಿಲುಬೆಂಕಿಗಳ ತಾಪವೇ ತೋರದಂತೆ ಮಾಡುತಿತ್ತು. ಈ ಜಲಮಿಶ್ರವಾದ ಗಾಳಿಯಿಂದ ಆ ವನಭೂಮಿಯೆಲ್ಲವೂ ಎಳಗರಿಗಳ ಹಸಿರುಬಣ್ಣದಿಂದ ಸೊಂಪೇರಿ ಸೊಗಸುಬೀರುತಿತ್ತು. ಆ ಬೇಸಗೆಯಲ್ಲಿಯೂ ಅಲ್ಲಿನ ನದಿಗಳು ಜಲಪೂರ್ಣವಾಗಿ ಪ್ರವಹಿಸುತ್ತ, ತಮ್ಮ. ಅಲೆದಾಟಗಳಿಂದ ಉಭಯಪಾರ್ಶ್ವದ ಮಳಲುದಿಣ್ಣೆಗಳನ್ನೂ, ಅದರ ಸುತ್ತಿನಪ್ರದೇಶಗಳನ್ನೂ ಕೆಸರಿಲ್ಲದಹಾಗೆಯೇ ತಂಪೇರಿಸುತಿದ್ದುವು. ಇದರಿಂದ, ಹಿಮಾಂತೆ ಉಲ್ಬಣವಾದ ಆಗಿನ ಬಿಸಿಲಿನತಾಪವುಕೂಡ, ಆ ಬೃಂದಾವನದ ನೆಲದ ತಂಪನ್ನಾಗಲಿ, ಗಿಡಗಳ ಸೊಂಪನ್ನಾಗಲಿ ಕೆಡಿಸಲಾರದೆ ಹೋಯಿತು. ಅಲ್ಲಿ ಗಿಡುಬಳ್ಳಿಗಳೆಲ್ಲವೂ ಬೇಸಗೆಯಲ್ಲಿಯೂಕೂಡ ಪುಷ್ಪಫಲಸಮೃದ್ಧವಾಗುವುವು. ಮೃಗಪಕ್ಷಿಗಳು ಯಾವಾಗಲೂ ಸಂತೋಷದಿಂದ ಕೂಗುತ್ತಿರುವುವು. ಭ್ರಮರಝುಂಕಾರದೊಡನೆ ನವಿಲುಗಳು ನರ್ತಿಸುತ್ತಿರುವುವು. ಗಿಳಿ ಕೋಗಿಲೆಗಳು ಆನಂದದಿಂದ ಕೂಗುತ್ತಿರುವುವು. ಹೀಗೆ ಸರ್ವವಿಧದಿಂದಲೂ ಅತಿಮನೋಹರವಾದ ಆ ವನಸನ್ನಿವೇಶವನ್ನು ನೋಡಿದಾಗ, ಕೃಷ್ಣನಿಗೆ, ತನ್ನ ಕ್ರೀಡಾಸಖರೊಡನೆ ಅಲ್ಲಿ ಆಟಪಾಟಗಳಿಂದ

ವಿನೋದಿಸಬೇಕೆಂಬ ಉದ್ದೇಶವು ಹುಟ್ಟಿತು. ಒಡನೆಯೇ ಬಲರಾಮ ನನ್ನೂ ಇತರಸ್ನೇಹಿತರನ್ನೂ ಕರೆದುಕೊಂಡು, ತನ್ನ ಮಂದೆಯ ಹಸುಗಳ ನ್ನಟ್ಟಿಕೊಂಡು,ಕೊಳಲನ್ನು ನುಡಿಸುತ್ತ ಆ ವನವನ್ನು ಪ್ರವೇಶಿಸಿದನು.ಅಲ್ಲಿ ರಾಮಕೃಷ್ಣರಿಬ್ಬರೂ ತಮ್ಮ ಸ್ನೇಹಿತರೊಡನೆ ಅಲ್ಲಲ್ಲಿ ವಿನೋದದಿಂದ ವಿಹರಿಸುತಿದ್ದರು. ಅವರ ಆಟಪಾಟಗಳ ಸಂಭ್ರಮವನ್ನು ಕೇಳಬೇಕೆ ? ಅಲ್ಲಲ್ಲಿ ಸಿಕ್ಕಿದ ಚಿಗುರುಗಳಿಂದಲೂ, ನವಿಲುಗರಿಗಳಿಂದಲೂ, ಹೂಗೊಂಚ ಲುಗಳಿಂದಲೂ, ಗೈರಿಕಧಾತುಗಳಿಂದಲೂ, ಬೇರೆಬೇರೆ ತರದ ಆಭರಣಗಳ ನ್ನು ಮಾಡಿ,ಬೇರೆಬೇರೆ ವೇಷವನ್ನು ಧರಿಸಿ ಕುಣಿದಾಡುವರು. ಆಗಾಗ ಒ ಬ್ಬರಿಗೊಬ್ಬರು ಅವರವರ ಶಕ್ತಿತಾರತಮ್ಯವನ್ನು ಪರೀಕ್ಷಿಸುವುದಕ್ಕಾಗಿ, ಬಾ ಹುಯುದ್ಧವನ್ನಾರಂಭಿಸುವರು. ಕೃಷ್ಣನು ಕುಣಿಯುವುದಕ್ಕೆ ನಿಂತಾಗ ಅವನ ಹಿಂದೆ ಕೆಲವರು ಹಾಡುವರು ! ಕೆಲವರು ಕೊಳಲನ್ನು ನುಡಿಸುವರು! ಕೆಲವರು ಮುಂದೆ ನಿಂತು ಅದನ್ನು ನೋಡಿ "ಕೃಷ್ಣಾ!ಶಹಬಾಸ್‌ಭಲೆಭಲೆ" ಎಂದು ಶ್ಲಾಘಿಸುವರು! ನಾಟಕದಲ್ಲಿ ವೇಷಧಾರಿಗಳಾದ ನಟರು, ತಮ್ಮಂ ತೆಯೇ ವೇಷಧಾರಿಯಾದ ಮತ್ತೊಬ್ಬ ನಟನನ್ನು ಸ್ತುತಿಸುವಂತೆ ಗೋಪಾ ಲರೂಪದಿಂದ್ದ ದೇವತೆಗಳು, ಗೊಲ್ಲನಾಗಿ ವೇಷವನ್ನು ಧರಿಸಿದಪರಮಾತ್ಮ ನನ್ನು, ಆಯಾ ನಟನೆಯನ್ನನುಸರಿಸಿಯೇ ಸ್ತುತಿಸುತಿದ್ದರು. ಕಾಕಪಕ್ಷದಿಂ ದ (ಜುಟ್ಟುಬಿಡಿಸುವುದಕ್ಕೆ ಮೊದಲು ಮಕ್ಕಳಿಗೆ ಮುಂದಲೆಯಲ್ಲಿ ಎಳೆದು ಕಟ್ಟಿದ ಕೂದಲು) ಶೋಭಿತರಾದ ಆ ರಾಮಕೃಷ್ಣರಿಬ್ಬರೂ ಇತರಬಾಲಕ ರೊಡನೆ ಸೇರಿ, ಒಮ್ಮೊಮ್ಮೆ ಹಿಡಿಯಾಟವನ್ನಾಡುವುದು: ಒಬ್ಬರಿಗೊ ಬ್ಬರು ಕೈಗೆ ಸಿಕ್ಕದಹಾಗೆ, ನಾನಾಗತಿಯಿಂದ ಸುತ್ತುವುದು, ಹಾರುವು ದು, ಸಮೀಪಕ್ಕೆ ಬಂದವರನ್ನು ಕೆಳಕ್ಕೆ ನೂಕಿ ಓಡುವುದು ದೂರದಲ್ಲಿ ನಿಂ ತು ತೋಳುಗಳನ್ನು ತಟ್ಟುವುದು, ಎಳೆದಾಡುವುದು, ಮಲ್ಲಯುದ್ಧವನ್ನು ಮಾಡುವುದು, ಹೀಗೆ ವಿಚಿತ್ರವಿನೋದಗಳಿಂದ ಕ್ರೀಡಿಸುತಿದ್ದರು. ಒಮ್ಮೊ ಮ್ಮೆ ಇತರಬಾಲಕರು ಕುಣಿಯುವುದಕ್ಕೆ ನಿಂತಾಗ, ರಾಮಕೃಷ್ಣರೇ ಅವರ ಹಿಂದೆ, ಹಾಡುತ್ತಲೂ, ವಾದ್ಯಗಳನ್ನು ನುಡಿಸುತ್ತಲೂ, ತಾಳಹಾಕುತ್ತ ಲೂ ಅವರನ್ನು "ಭಲೆ! ಶಹಬಾಸ್" ಎಂದು ಪ್ರೋತ್ಸಾಹಿಸುವರು. ಒ

ವೊಮ್ಮೆ ಬಿಲ್ವಪತ್ರೆ, ನೆಲ್ಲಿ, ಕುಂಭಫಲ, ಮುಂತಾದ ಹಣ್ಣುಗಳಿಂದಲೂ, ಮುತ್ತಿನ ಚಿಪ್ಪುಗಳಿಂದಲೂ, ವಿವಿಧಕ್ರೀಡೆಗಳನ್ನಾಡುವರು. ಒವೊಮ್ಮೆ ಒಬ್ಬರಿಗೊಬ್ಬರು ಮುಟ್ಟಬಾರದೆಂದು ಅಂಟುಕಟ್ಟುವುದು, ಮತ್ತೊಮ್ಮೆ ಕಣ್ಣುಗಳನ್ನುಮುಚ್ಚಿ ಒಬ್ಬರನ್ನೊಬ್ಬರು ಹಿಡಿಯುವುದು, ಒವೊಮ್ಮೆ ಮೃಗಗಳಂತೆಯೂ, ಪಕ್ಷಿಗಳಂತೆಯೂ ನಟಿಸುವುದು, ಒವೊಮ್ಮೆ ಕಪ್ಪೆಗಳಂತೆ ಕುಪ್ಪುವುದು, ಕಪಿಗಳಂತೆ ಹಾಸ್ಯಮಾಡುವುದು, ಹಂಬುಗಳನ್ನು ಹೆಣೆದು ಮರದ ಕೊಂಬೆಗಳಿಗೆ ತೂಗುಹಾಕಿ ಉಯ್ಯಾಲೆಯಾಡುವುದು, ಮತ್ತೊಮ್ಮೆ ರಾಜಮಂತ್ರಿಪ್ರಧಾನಿಗಳಂತೆ ನಟಿಸುವುದು, ಹೀಗೆ ಆ ರಾಮಕೃಷ್ಣಾದಿಗಳೆಲ್ಲರೂ, ಲೋಕಪ್ರಸಿದ್ಧವಾದ ವಿವಿಧವಿನೋದಗಳಿಂದ, ಅಲ್ಲಲ್ಲಿನ ನದೀತೀರಗಳಲ್ಲಿಯೂ, ಬೆಟ್ಟದ ತಪ್ಪಲುಗಳಲ್ಲಿಯೂ, ಗವಿಗಳಲ್ಲಿಯೂ ಅರಣ್ಯಗಳಲ್ಲಿಯೂ, ಜಲಾಶಯಗಳಲ್ಲಿಯೂ ದನಗಳನ್ನು ಮೇಯಿಸುತ್ತ, ವಿನೋದದಿಂದ ಸಂಚರಿಸುತ್ತಿದ್ದರು

### ಪ್ರಲಂಬವಧವು.

ಹೀಗೆ ಗೋಪಾಲಕರೆಲ್ಲರೂ ಆಟಪಾಟಗಳಿಂದ ಮೈಮರೆತಿರುವ ಸಮಯವನ್ನುನೋಡಿ. ಪ್ರಲಂಬನೆಂಬ ರಾಕ್ಷಸನೊಬ್ಬನು, ಕೃಷ್ಣನನ್ನು ಕೊಲ್ಲಬೇಕೆಂಬ ಉದ್ದೇಶದಿಂದ, ಗೊಲ್ಲಹುಡುಗನಂತೆ ವೇಷಧಾರಿಯಾಗಿ ಅವರ ಗುಂಪಿನಲ್ಲಿ ಸೇರಿಕೊಂಡನು. ಸರ್ವಜ್ಞನಾದ ಕೃಷ್ಣನು, ಅವನ ಕಪಟತಂತ್ರವನ್ನು ಬಲ್ಲವನಾಗಿದ್ದರೂ. ಇದೇ ನೆವದಿಂದ ಅವನನ್ನು ಕೊಲ್ಲಬೇಕೆಂದೆಣಿಸಿ, ಅವನನ್ನೂ ಆಟದಲ್ಲಿ ಸೇರಿಸಿಕೊಳ್ಳುವುದಕ್ಕೆ ಸಮ್ಮತಿಸಿ ಅವನೊಡನೆ ಸ್ನೇಹವನ್ನೇ ತೋರಿಸುತ್ತ, ಇತರಗೋಪಾಲಬಾಲಕರನ್ನು ಕುರಿತು “ಎಲೈ ಮಿತ್ರರೆ! ನಾವೆಲ್ಲರೂ ಈಗ ಬೇರೆಬೇರೆ ಎರಡುಕಕ್ಷಿಯಾಗಿ ವಿಭಾಗಿಸಿಕೊಂಡು, ಕುದುರೆಚಂಡಾಟವನ್ನಾಡುವೆವು! ಒಂದೊಂದುಕಕ್ಷಿಯಲ್ಲಿ ಸಮಾನಬಲವುಳ್ಳವರು ತಮ್ಮ ತಮ್ಮೊಳಗೆ ಜೋಡಿಜೋಡಿಯಾಗಿ ನಿಲ್ಲಲಿ! ಆಯಾಗುಂಪಿಗೆ ಒಬ್ಬೊಬ್ಬನು ಪ್ರಮುಖ (ಹೆಬ್ಬಾರಿ) ನಾಗಿರಲಿ! ಈ ಆಟದಲ್ಲಿ “ಯಾವಪಕ್ಷದವರು ಗೆಲ್ಲುವರೋ ನೋಡುವೆವು” ಎಂದನು. ಎಲ್ಲರೂ ಅದಕ್ಕೆ ಸಮ್ಮತಿಸಿ, ರಾಮಕೃಷ್ಣರಿಬ್ಬರನ್ನೇ ಒಂದೊಂ

ದು ಗುಂಪಿಗೆ ಪ್ರಮುಖರನ್ನಾಗಿ ನಿಲ್ಲಿಸಿದರು. ಕೆಲವರು ರಾಮನ ಪಕ್ಷಕ್ಕೂ, ಮತ್ತೆ ಕೆಲವರು ಕೃಷ್ಣನಪಕ್ಷಕ್ಕೂ ನಿಂತರು. ಈ ಆಟದಲ್ಲಿ ಸೋತವರು ಗೆದ್ದವರನ್ನು ತಮ್ಮ ಬೆನ್ನಮೇಲೇರಿಸಿಕೊಂಡು, ಒಂದು ಪಾರ್ಶ್ವದಿಂದ ಮತ್ತೊಂದು ಪಾರ್ಶ್ವಕ್ಕೆ ಓಡಬೇಕೆಂಬ ನಿಯಮವನ್ನು ಮಾಡಿಕೊಂಡಿದ್ದರು ಹೀಗೆ ಆ ಉಭಯಪಕ್ಷದವರೂ, ತಮ್ಮ ಜಯಾಪಜಯಗಳಿಗೆ ತಕ್ಕಂತೆ, ಒಮ್ಮೆ ಆರೋಹಕರಾಗಿಯೂ, ಮತ್ತೊಮ್ಮೆ ವಾಹಕರಾಗಿಯೂ ನಾನಾವಿಧವಿನೋದಗಳಿಂದ ಆಟವಾಡುತ್ತ, ತಮ್ಮತಮ್ಮ ಮಂದೆಗಳನ್ನೂ ಎಚ್ಚರದಿಂದ ನೋಡಿಕೊಳ್ಳುತ್ತ, ಸಮೀಪದಲ್ಲಿದ್ದ ಭಾಂಡೀರಕವೆಂಬ ಒಂದಾನೊಂದು ಆಲದ ಮರದಬಳಿಗೆ ಬಂದುಸೇರಿದರು. ಅಲ್ಲಿಯೂ ಅವರು ಇದೇ ಆಟವನ್ನಾಡುತ್ತಿರುವಾಗ, ಕೃಷ್ಣಪಕ್ಷದವರಿಗೆ ಆಟವು ಸೋತುಹೋಯಿತು. ರಾಮಪಕ್ಷದವರು ಗೆದ್ದರು. ಕೃಷ್ಣನು ರಾಮಪಕ್ಷದವನಾದ ಶ್ರೀದಾಮನೆಂಬವನನ್ನು ಬೆನ್ನಮೇಲೇರಿಸಿಕೊಂಡು ಓಡುತಿದ್ದನು. ಹಾಗೆಯೇ ಕೃಷ್ಣನಕಡೆಗೆ ಸೇರಿದ್ದ ಭದ್ರಸೇನನೆಂಬವನು ವೃಷಭನೆಂಬವನನ್ನು ಹೊತ್ತುಕೊಂಡನು. ಕಪಟವೇಷದಿಂದ ಬಂದಿದ್ದ ಪ್ರಲಂಬಾಸುರನು, ಬಲರಾಮನನ್ನು ಬೆನ್ನಮೇಲೇರಿಸಿಕೊಂಡನು. ಈ ಪ್ರಲಂಬನು ಕೃಷ್ಣನನ್ನೆತ್ತಿಕೊಂಡುಹೋಗಬೇಕೆಂಬ ಉದ್ದೇಶದಿಂದಲೇ ಬಂದವನಾಗಿದ್ದರೂ, ಹಿಂದೆ ತೃಣಾವರ್ತನಿಗುಂಟಾದ ಅವಸ್ಥೆಯನ್ನು ಸ್ಮರಿಸಿಕೊಂಡು, ಕೃಷ್ಣನನ್ನು ಹೊರುವುದು ಸಾಧ್ಯವಲ್ಲವೆಂದು ತಿಳಿದು, ರಾಮನನ್ನಾದರೂ ಹಾರಿಸಿಕೊಂಡು ಹೋಗಬೇಕೆಂಬದುರುದ್ದೇಶದಿಂದಲೇ ಕೃಷ್ಣನ ಪಕ್ಷಕ್ಕೆ ಸೇರಿದ್ದನು. ರಾಮನು ತನ್ನ ಬೆನ್ನಮೇಲೆ ಏರಿ ಕುಳಿತೊಡನೆ, ಈ ರಾಕ್ಷಸನು, ಇತರ ಬಾಲಕರೆಲ್ಲರಿಗಿಂತಲೂ ಹೆಚ್ಚುವೇಗದಿಂದ ಓಡಲಾರಂಭಿಸಿ, ಎಷ್ಟು ದೂರದವರೆಗೆ ಹೊತ್ತುಕೊಂಡು ಹೋಗಬೇಕೆಂಬ ನಿಯಮವಿದ್ದಿತೋ, ಅದಕ್ಕಿಂತಲೂ ಬಹುದೂರದವರೆಗೆ ಸಾಗಿಸಿಬಿಟ್ಟನು. ಎಲ್ಲರೂ ನಿಲ್ಲಬೇಕಾದ ಸ್ಥಳದಲ್ಲಿ ನಿಲ್ಲದೆ ಹೀಗೆ ಅವನೊಬ್ಬನುಮಾತ್ರ, ರಾಮನನ್ನೆತ್ತಿಕೊಂಡು ಬಹುದೂರದವರೆಗೆ ಹೋಗುತ್ತಿರುವುದಕ್ಕೆ ಕಾರಣವೇನೆಂದು ಬಾಲಕರೆಲ್ಲರೂ ಸಂಭ್ರಾಂತರಾಗಿ ನೋಡುತಿದ್ದರು. ಪರ್ವತದಂತೆ ಮಹಾಭಾರವುಳ್ಳ ರಾಮ

ನನ್ನು ಬಹುದೂರದವರೆಗೆ ಹೊತ್ತು ತಂದುದರಿಂದ, ಆ ರಾಕ್ಷಸನಿಗೆ ಬಹಳ ಆಯಾಸವು ತೋರಿತು. ಅವನಿಗೆ ಮೊದಲಿದ್ದ ಕಾಲಿನ ವೇಗವೂ ಕ್ರಮಕ್ರಮವಾಗಿ ತಗ್ಗುತ್ತ ಬಂದು, ಮುಂದೆ ಹೆಜ್ಜೆಯಿಡುವುದಕ್ಕೇ ಸಾಧ್ಯವಿಲ್ಲದಂತಾಯಿತು. ಒಡನೆಯೇ ಆ ರಾಕ್ಷಸನು,ಆ ಸಣ್ಣರೂಪದಿಂದ ಬಲರಾಮನನ್ನು ಹೊರುವುದು ಸಾಧ್ಯವಲ್ಲವೆಂದು ತಿಳಿದು, ತನಗೆ ಸಹಜವಾದ ದೊಡ್ಡ ರಾಕ್ಷಸಾಕೃತಿಯನ್ನು ತಾಳಿ, ಬಲರಾಮನನ್ನು ಬೆನ್ನಮೇಲೆ ಹೊತ್ತಿದ್ದಂತೆಯೇ ಅಂತರಿಕ್ಷಕ್ಕೆ ಹಾರಿಬಿಟ್ಟನು. ಕರೀಮೈಯುಳ್ಳ ಆ ರಾಕ್ಷಸನು, ಸುವರ್ಣಾಭರಣಗಳಿಂದಲಂಕೃತವಾದ ಶುಭ್ರದೇಹವುಳ್ಳ ಬಲರಾಮನನ್ನು ಹೊತ್ತುಕೊಂಡು ಆಕಾಶದಲ್ಲಿ ಹಾರುತ್ತಿರುವಾಗ, ಮಿಂಚಿನ ಕಾಂತಿಯಿಂದಾವೃತವಾಗಿ ಚಂದ್ರಬಿಂಬದೊಡಗೂಡಿದ ಕಾಳಮೇಘದಂತೆ ತೋರುತಿದ್ದನು. ಆಗ ಆ ರಾಕ್ಷಸನ ಭಯಂಕರಾಕಾರವನ್ನು ಕೇಳಬೇಕೆ? ಆಕಾಶವನ್ನು ಭೇದಿಸುವಂತೆ ಅತ್ಯುನ್ನತವಾದ ಮೈ! ಉರಿಯನ್ನು ಕಾರುತ್ತಿರುವ ಕಣ್ಣಾಲೆಗಳು! ಹಣೆಯಲ್ಲಿ ಭಯಂಕರವಾದ ಹುಬ್ಬುಗಂಟುಗಳು! ಸೀಡಿದ ಕೋರೆದಾಡೆಗಳು! ಅಗ್ನಿಜ್ವಾಲೆಯಂತೆ ಕೆಂಪಾದ ತಲೆಕೂದಲು! ಕೈಬಳೆ,ಕಿರೀಟ, ಕುಂಡಲ, ಮೊದಲಾದ ರಾಕ್ಷಸಯೋಗ್ಯವಾದ ಆಭರಣಗಳಿಂದ ಅದ್ಭುತವಾದ ಆಕೃತಿ! ಇಂತಹ ಘೋರರೂಪವನ್ನು ಕಂಡಾಗ, ಬಲರಾಮನಿಗೂ ಮನಸ್ಸಿನಲ್ಲಿ ಮೊದಲು ಸ್ವಲ್ಪಭಯವು ತೋರಿತು. ಕೊನೆಕೊನೆಗೆ ಬಲರಾಮನು, ತಮ್ಮಿಬ್ಬರಿಗಿರುವ ಬಲಪರಾಕ್ರಮಾದಿತಾರತಮ್ಯವನ್ನು ಮನಸ್ಸಿನಲ್ಲಿ ಯೋಚಿಸಿ, ಭಯವನ್ನುಬಿಟ್ಟು, ಕೋಪವನ್ನು ತಂದುಕೊಂಡು, ಇಂದ್ರನು ವಜ್ರಾಯುಧದಿಂದ ಪರ್ವತವನ್ನು ತಾಡಿಸುವಂತೆ, ಮೇಲೆ ಕುಳಿತಿದ್ದಹಾಗೆಯೇ ದೃಢವಾದ ವಜ್ರಮುಷ್ಟಿಯಿಂದ ಆ ರಾಕ್ಷಸನ ತಲೆಯಮೇಲೆ ಅಪ್ಪಳಿಸಿದನು. ಈ ಒಂದೇ ಮುಷ್ಟಿಪ್ರಹಾರಕ್ಕೆ ಆ ರಾಕ್ಷಸ ತಲೆಯು ಎರಡುಸೀಳಾಯಿತು! ಆಗಲೇ ಆ ರಾಕ್ಷಸನು ಬಾಯಲ್ಲಿ ರಕ್ತವನ್ನು ಕಾರುತ್ತ, "ಹೋ" ಎಂದು ಕೂಗಿ, ವಜ್ರಾಹತವಾದ ಪರ್ವತದಂತೆ, ಬಲರಾಮನು ಬೆನ್ನಮೇಲಿದ್ದಹಾಗೆಯೇ ಕೆಳಗೆ ಬಿದ್ದುಸತ್ತನು. ಈ ರಾಕ್ಷಸವಧವನ್ನು ನೋಡಿ, ಅಲ್ಲಿದ್ದ ಗೋಪಾಲಕರೆಲ್ಲರೂ ಬಲರಾಮನನ್ನು "ಭಲೆ!

ಭಲೆ ! " ಎಂದು ಕೊಂಡಾಡುತ್ತ ಆಶ್ಚರ್ಯಮಗ್ನರಾಗಿದ್ದರು. ಎಲ್ಲರೂ ಪ್ರೇಮಪುರಸ್ಸರವಾಗಿ ಬಲರಾಮನಿಗೆ ಆಶೀರ್ವಾದಗಳನ್ನು ಮಾಡುತ್ತ, ಸತ್ತು ಬದುಕಿಬಂದವನನ್ನು ಕಂಡಂತೆ, ಅತ್ಯಾನಂದದಿಂದ ಮುಂದೆ ಬಂದು ಒಬ್ಬೊಬ್ಬರೂ ಅವನನ್ನಾಲಂಗಿಸಿ, ಅವನ ಪರಾಕ್ರಮವನ್ನು ಕೊಂಡಾಡುತಿದ್ದರು. ಪಾಪಿಯಾದ ಪ್ರಲಂಬಾಸುರನ ವಧವನ್ನು ನೋಡಿ, ದೇವತೆಗಳೆಲ್ಲರೂ ಪರಮಹರ್ಷಿತರಾಗಿ, ಬಲರಾಮನಮೇಲೆ ಪುಷ್ಪವರ್ಷವನ್ನು ಕರೆದು, " ಭಲೆ ! ಶಹಬಾಸು! ರಾಮಾ ! ಭಲೆ ! " ಎಂದು ಅವನ ಪರಾಕ್ರಮವನ್ನು ಹೊಗಳುತಿದ್ದರು. ಇದು ಹದಿನೆಂಟನೆಯ ಅಧ್ಯಾಯವು.

---

ಕೃಷ್ಣನು ಕಾಡುಗಿಚ್ಚನ್ನು ಪಾನಮಾಡಿದ ವೃತ್ತಾಂತವು.

ರಾಜೇಂದ್ರಾ ಕೇಳು! ಹೀಗೆ ಗೋಪಾಲಕರು ತಮ್ಮ ಹಸುಗಳನ್ನು ಮೇಯುವುದಕ್ಕೆ ಬಿಟ್ಟು, ಅಲ್ಲಲ್ಲಿ ತಾವು ಆಟವಾಡುತ್ತಿರುವಾಗ, ಅವರ ದನಕರುಗಳೆಲ್ಲವೂ ಮುಂದೆಮುಂದೆ ಹುಲ್ಲಿನ ಆಸೆಯಿಂದ ಬಹುದೂರಕ್ಕೆ ಹೋಗಿ, ಕೊನೆಗೆ ದೊಡ್ಡಪರ್ವತಬಿಲದಂತಿದ್ದ ಬಂದು ಕಡ್ಡಿಯ ಮೆಳೆಯಲ್ಲಿ ಪ್ರವೇಶಿಸಿ ಬಿಟ್ಟುವು. ಅಲ್ಲಲ್ಲಿದ್ದ, ಆಡು, ಕುರಿ, ಹಸು ಮುಂತಾದುವುಗಳೊಡನೆ ! ಅವುಗಳನ್ನು ಕಾಯುತಿದ್ದವರೂ, ಕಾಡಿಂದ ಕಾಡಿಗೆ ಸುತ್ತುತ್ತ, ಬಿಸಿಲಿನ ತಾಪದಿಂದಲೂ, ಬಾಹದಿಂದಲೂ ಪೀಡಿತರಾಗಿ,ಪಟ್ಟವಾಗಿ ಬೆಳೆದಿದ್ದ ಒಂದಾನೊಂದು ಮೆಳೆಯಲ್ಲಿ ಹೋಗಿ ಸೇರಿಬಿಟ್ಟರು. ಇತ್ತಲಾಗಿ ಬಲರಾಮಾದಿಗಳು, ಸಮೀಪದಲ್ಲಿ ತಮ್ಮ ಮಂದೆಯನ್ನು ಕಾಣದೆ, ಅವು ಹೋದದಾರಿಯನ್ನೂ ತಿಳಿಯದೆ, ಅವಕ್ಕೆ ಏನಪಾಯವುಂಟಾಯಿತೋ ಎಂದು ಕಳವಳಿಸುತ್ತ ಹುಡುಕುವುದಕ್ಕೆ ಹೊರಟರು. ಅಲ್ಲಲ್ಲಿ ತಮ್ಮ ಹಸುಗಳು ಕಾಲಿಂದತುಳಿದು,ಹಲ್ಲಿಂದ ಕಡಿದ ಹುಲ್ಲುಕಡ್ಡಿಗಳನ್ನುತ್ತು ಹಸುಗಳ ಹಜ್ಜೆಯ ಗುರುತುಗಳನ್ನು ನೋಡುತ್ತ, ಅದೇ ದಾರಿಯನ್ನು ಹಿಡಿದು ಬಹುದೂರದವರೆಗೆ ಹೋದರು. ಎಷ್ಟು ದೂರಕ್ಕೆ ಹೋದರೂ, ತಮಗೆ ಪ್ರಾಣಭೂತವಾದ ಗೋಧನವು ಕಣ್ಣಿಗೆ ಕಾಣದುದರಿಂದ ಚಿಂತಾಕ್ರಾಂತರಾಗಿದ್ದರು. ಆ ಕಾಡಿನಲ್ಲಿ ಪಟ್ಟವಾಗಿ ಬೆಳೆದ ನೊದೆಯ ಹುಲ್ಲಿನ ಮೆಳೆಯಲ್ಲಿ, ಮುಂದೆ

ಹೋಗುವುದಕ್ಕೂ ದಾರಿ ತಿಳಿಯದಂತಾಯಿತು. ಎಲ್ಲಿಯೋ ದೂರದಲ್ಲಿ ಕೆಲವು ಹಸುಗಳು ದಾರಿತಿಳಿಯದೆ ಕೂಗಿಕೊಳ್ಳುವ ಧ್ವನಿಯುಮಾತ್ರ ಇವರ ಕಿವಿಗೆ ಬೀಳುತಿತ್ತು. ಅದರ ದಾರಿಯನ್ನು ತಿಳಿಯುವುದಕ್ಕೂ ಪಾರಿತೋರದೆ, ವಿಫಲಪ್ರಯತ್ನರಾಗಿ ದಾಹದಿಂದಲೂ ಆಯಾಸದಿಂದಲೂ ಬಹಳವಾಗಿ ಬಳಲಿ ಬೇಸತ್ತು, ನಿರಾಶರಾಗಿ ಹಿಂತಿರುಗಿಬಿಟ್ಟರು. ಆದರೆ ಶ್ರೀಕೃಷ್ಣನೊಬ್ಬನುಮಾತ್ರ ಧೈರ್ಯಗುಂದದೆ, ಸಮೀಪದಲ್ಲಿ ಕಾಳಮೇಘದಂತೆ ವಿಶಾಲವಾಗಿ ಬೆಳೆದಿದ್ದ, ಮಹೋನ್ನತವಾದ ಒಂದು ವೃಕ್ಷವನ್ನೇರಿನಿಂತು, ಸುತ್ತಲೂ ಕಣ್ಣಿಟ್ಟು ನೋಡಿದನು. ಅಲ್ಲಿ ಕೆಲವು ಹಸುಗಳು ಆರ್ತಧ್ವನಿಯಿಂದ ಅರಚುತ್ತಿರುವುದನ್ನು ಕಂಡು, ಆಯಾ ಗೋವುಗಳ ಹೆಸರನ್ನು ಹಿಡಿದು ಕರೆಯಲಾರಂಭಿಸಿದನು. ಮೇಘಗಂಭೀರವಾದ ಈ ಕೃಷ್ಣನ ಕಂಠಧ್ವನಿಯನ್ನು ಕೇಳಿ, ಅಲ್ಲಿದ್ದ ಗೋವುಗಳು, ಸಂತೋಷದಿಂದ ಪ್ರತಿಧ್ವನಿಯನ್ನು ಕೊಟ್ಟುವು. ಆದರೇನು? ಇಷ್ಟರಲ್ಲಿ ಆ ಹೊದರಿನ ನಾಲ್ಕು ಕಡೆಗಳಲ್ಲಿಯೂ ಅಕಸ್ಮಾತ್ತಾಗಿ ದೊಡ್ಡ ಕಾಡುಗಿಚ್ಚು ತಲದೋರಿ, ವಾಯುಸಹಾಯದಿಂದ ಉರಿಯನ್ನು ಕೆದರುತ್ತ, ಅಲ್ಲಿನ ವೃಕ್ಷಗಳನ್ನೂ, ಜಂತುಗಳನ್ನೂ ದಹಿಸುತ್ತ ಬರುತಿತ್ತು. ಹೀಗೆ ನಾನಾಕಡೆಗಳಿಂದ ಆವರಿಸಿಬರುತ್ತಿರುವ ಕಾಡುಗಿಚ್ಚನ್ನು ನೋಡಿ, ಗೋವುಗಳೂ, ಗೋಪಾಲಕರೂ ಭಯದಿಂದ ತತ್ತಳಿಸುತ್ತ, ಮರಣೋನ್ಮುಖರಾದವರು ಭಗವಂತನನ್ನು ಕುರಿತು ಮೊರೆಯಿಡುವಂತೆ, ಬಲರಾಮಕೃಷ್ಣರನ್ನು ಕುರಿತು "ಕೃಷ್ಣಾ! ಕೃಷ್ಣಾ! ಓ ಮಹಾವೀರ್ಯಾ! ಅಮಿತಪರಾಕ್ರಮವುಳ್ಳ ಓ ರಾಮಾ! ಇದೋ! ಇಲ್ಲಿ ನಾವು ಕಾಡುಗಿಚ್ಚಿನಲ್ಲಿ ಸಿಕ್ಕಿ ಸಾಯುತ್ತಿರುವೆವು! ನಮ್ಮನ್ನು ಕಾಪಾಡಿರಿ! ನೀವಲ್ಲದೆ ಈಗ ನಮಗೆ ಬೇರೆ ದಿಕ್ಕಿಲ್ಲ! ನಿಮ್ಮಲ್ಲಿ ಶರಣಾಗತರಾಗಿರುವೆವು. ಕೃಷ್ಣಾ! ನಾವು ನಿಜವಾಗಿ ನಿನಗೆ ಬಂಧುಗಳಲ್ಲವೆ? ನೀನು ತಿಳಿಯದ ಧರ್ಮವಿಲ್ಲ! ನೀನೇ ನಮಗೆ ದಿಕ್ಕು! ನಿನ್ನನ್ನೇ ನಂಬಿಬಂದ ನಮ್ಮ ಅಪಾಯವನ್ನು ತಪ್ಪಿಸಬಾರದೆ?" ಎಂದು ಒಂದೇ ಕೂಗಾಗಿ ಕೂಗುತಿದ್ದರು. ರಾಜೇಂದ್ರಾ! ಆಗ ಕೃಷ್ಣನು ತನ್ನ ಬಂಧುಗಳೆಲ್ಲರೂ ಹೀಗೆ ದೈನ್ಯದಿಂದ ಮೊರೆಯಿಡುವುದನ್ನು ಕೇಳಿ ಕನಿಕರಗೊಂಡು "ಎಲೈ! ಭಯ

ಪಡಬೇಡಿರಿ ! ಸ್ವಲ್ಪಹೊತ್ತಿನವರೆಗೆ ಕಣ್ಣುಗಳನ್ನು ಮುಚ್ಚಿಕೊಂಡು ಸು ಮ್ಮನೆ ನಿಂತಿರಿ !" ಎಂದನು. ಅದರಂತೆ ಎಲ್ಲರೂ ತಮ್ಮತಮ್ಮ ಕಣ್ಣುಗ ಳನ್ನು ಮುಚ್ಚಿಕೊಂಡು ನಿಂತಿರುವಾಗ, ಕೃಷ್ಣನು ಭಯಂಕರವಾದ ಆ ಅಗ್ನಿ ಯನ್ನು ಕೈಯಿಂದ ತೆಗೆದು ಪಾನಮಾಡಿ, ಅವರೆಲ್ಲರನ್ನೂ ಅಪಾಯದಿಂದ ತಪ್ಪಿಸಿದನು. ಅವರು ತಿರುಗಿ ಕಣ್ಣುತೆರೆಯುವಷ್ಟರಲ್ಲಿ, ಅವರಿಗೆ ಬಂದಿದ್ದ ಅಪಾಯವು ತಪ್ಪಿ, ಮೊದಲಿದ್ದ ಭಾಂಡೀರವೃಕ್ಷದಬಳಿಯಲ್ಲಿಯೇ ತಾವೆಲ್ಲರೂ ನಿಂತಿರುವಹಾಗೆ ಕಾಣಿಸಿತು. ಅದನ್ನು ನೋಡಿ ಎಲ್ಲರೂ ಆಶ್ಚರ್ಯಭರಿತರಾದರು. ಹೀಗೆ ಶ್ರೀಕೃಷ್ಣನ ಯೋಗಮಾಯಾಪ್ರಭಾವ ದಿಂದ, ತಮಗೆ ಬಂದಿದ್ದ ಅಪಮೃತ್ಯುವು ತಪ್ಪಿದುದನ್ನುನೋಡಿ ಆ ಕೃಷ್ಣನು ಸಾಕ್ಷಾದ್ದೇವನೇಹೊರತು ಸಾಮಾನ್ಯಗೋಪಾಲಕನಲ್ಲವೆಂಬ ನಿಶ್ಚಯವೂ ಅವರ ಮನಸ್ಸಿಗೆ ಹುಟ್ಟಿತು. ಆಮೇಲೆ ಕೃಷ್ಣನು, ತನ್ನ ಗೋ ವುಗಳೆಲ್ಲವನ್ನೂ ಹಿಂತಿರುಗಿಸಿಕೊಂಡು, ಬಲರಾಮನೊಡನೆ, ಸಂತೋಷ ದಿಂದ ಕೊಳಲನ್ನು ನುಡಿಸುತ್ತ, ಇತರ ಗೋಪಬಾಲಕರೆಲ್ಲರಿಂದ ಸ್ತುತಿಸ ಲ್ಪಡುತ್ತ ಸಾಯಂಕಾಲದವೇಳೆಗೆ ಊರಿಗೆ ಬಂದು ಸೇರಿದನು. ಕೃಷ್ಣನಿ ಲ್ಲದ ಕ್ಷಣದಕಾಲವನ್ನೂ ನೂರಾರುಯುಗಗಳಂತೆ ಕಷ್ಟದಿಂದ ಕಳೆಯುತಿ ದ್ದ ಗೋಪಾಂಗನೆಯರು, ಅವನನ್ನು ಕಂಡೊಡನೆ ಪರಮಾನಂದಭರಿತರಾದ ರು. ಇದು ಹತ್ತೊಂಬತ್ತನೆಯ ಅಧ್ಯಾಯವು.

---

## ವರ್ಷಾಕಾಲ ವರ್ಣನವು.

ಆ ಗೋಪಾಲಕರೆಲ್ಲರೂ ಮನೆಗೆ ಬಂದಮೇಲೆ, ತಾವು ಕಾಡು ಗಿಚ್ಚಿನಿಂದ ತಪ್ಪಿ ಬಂದುದು. ಪ್ರಲಂಬಾಸುರವಧೆ, ಮೊದಲಾದ ರಾಮಕೃ ಷ್ಣರ ಅದ್ಭುತಕಾರ್ಯಗಳೆಲ್ಲವನ್ನೂ, ಯಶೋದೆ ಮೊದಲಾದ ಗೋಪ ಸ್ತ್ರೀಯರಿಗೆ ತಿಳಿಸಿದರು. ಊರಿನಲ್ಲಿದ್ದ ಗೋಪವೃದ್ಧರೂ, ಗೋಪಾಂಗ ನೆಯರೂ ಅದನ್ನು ಕೇಳಿ ಅತ್ಯಾಶ್ಚರ್ಯಭರಿತರಾಗಿ, ತಮ್ಮ ಮಕ್ಕಳಾದ ಆ ರಾಮಕೃಷ್ಣರಿಬ್ಬರೂ ದೇವಾಂಶಪುರುಷರಾಗಿರಬೇಕೇಹೊರತು ಸಾಮಾ ನ್ಯರಲ್ಲವೆಂದು ನಿಶ್ಚಯಿಸಿಕೊಂಡರು. ಇಷ್ಟರಲ್ಲಿ ಗ್ರೀಷ್ಮಕಾಲವು ಕಳೆದು



೧೮೫೬. ಶ್ರೀಕೃಷ್ಣನು ಕಾಡುಗಿಚ್ಚನ್ನು ನುಂಗಿದುದು.

ಸರ್ವಪ್ರಾಣಿಗಳಿಗೂ ಜೀವನಹೇತುವಾದ ಮಳೆಗಾಲವು ಪ್ರಾರಂಭಿಸಿತು. ದಿಕ್ಕುಗಳೆಲ್ಲವೂ ಮೋಡಕವಿದು ಪ್ರಕಾಶಹೀನವಾದುವು. ಆಗಾಗ ಆಕಾಶದಿಂದ ಸಿಡಿಲುಗಳು ಬೀಳುತಿದ್ದುವು. ಕಾಲಮೇಘಗಳು ಮಿಂಚುಗುಡುಗಳೊಡನೆ ಆಕಾಶದಲ್ಲಿ ದಟ್ಟವಾಗಿ ತುಂಬಿದುವು. ಸಹಜವಾಗಿ ಗುಣಗಳಿಂದ ಮೇಲೆನಿಸಿಕೊಂಡು ಬ್ರಹ್ಮಶಬ್ದವಾಚ್ಯನಾದ ಜೀವನು, ಪ್ರಕೃತಿಯಿಂದ ಮರೆಸಲ್ಪಟ್ಟಾಗ, ಸತ್ವಾದಿಗುಣಗಳಿಗೆ ವಶನಾಗಿ, ಜ್ಞಾನಪ್ರಕಾಶವಿಲ್ಲದಿರುವಂತೆ, ಮೇಘಾವೃತವಾದ ಆಕಾಶದಲ್ಲಿ ಸೂರ್ಯಚಂದ್ರಾದಿಗ್ರಹಗಳ ಪ್ರಕಾಶವಿಲ್ಲದಂತಾಯಿತು. ವರ್ಷಾಧಿಪತಿಯಾದ ಸೂರ್ಯನು, ಹಿಂದಿನ ಎಂಟು ತಿಂಗಳ ಕಾಲವೂ ತನ್ನ ಕಿರಣಗಳ ಮೂಲಕವಾಗಿ ಗ್ರಹಿಸಿದ ಜಲರೂಪವಾದ ಧನವೆಲ್ಲವನ್ನೂ, ಕಾಲವಶದಿಂದ ಹೊರಕ್ಕೆ ಕಕ್ಕಬೇಕಾದ ಸಮಯವು ಬಂದೊದಗಿತು. ಬಿರುಗಾಳಿಯಿಂದ ತೂರಿಸಲ್ಪಟ್ಟ ಮಹಾಮೇಘಗಳು, ವಿಶೇಷವಾದ ಮಿಂಚುಗಳನ್ನು ಹೊರಡಿಸುತ್ತ, ತಮ್ಮ ಕರುಣಾರಸವನ್ನು ಸುರಿಸುವಂತೆ, ಪ್ರಾಣಿಗಳಿಗೆ ಜೀವನಭೂತವಾದ ನೀರನ್ನು ಸುರಿಯುತಿದ್ದುವು. ಕಾಮ್ಯತಪಸ್ಸನ್ನು ಮಾಡಿ ಕೃಶನಾದವನು, ಆ ತಪಸ್ಸಿನಿಂದುಂಟಾದ ಫಲವನ್ನನುಭವಿಸುವಾಗ, ಮೈಯ್ಯುಬ್ಬಿ ಬೆಳೆಯುವಂತೆ, ಬೇಸಗೆಯ ತಾಪದಿಂದ ಒಣಗಿದ್ದ ಭೂಭಾಗವೆಲ್ಲವೂ ಮಳೆಯ ನೀರಿನಿಂದ ನೆನೆದು ಉಲ್ಲಾಸಹೊಂದುತ್ತ ಬಂದಿತು. ಕಲಿಪ್ರಾಬಲ್ಯದಲ್ಲಿ ವೈದಿಕಧರ್ಮಗಳೆಲ್ಲವೂ ಕೆಟ್ಟುಹೋಗಿ, ಪಾಷಂಡಧರ್ಮಗಳು ತಲೆಯೆತ್ತುವಂತೆ, ಸಂಧ್ಯಾಕಾಲಗಳಲ್ಲಿ ಚಂದ್ರಾದಿಗ್ರಹಗಳ ಕಾಂತಿಯು ತಗ್ಗಿ, ಮಿಂಚುಹುಳುಗಳ ಕಾಂತಿಯು ಹೆಚ್ಚಾಗಿ ತೋರುತಿದ್ದುವು. ಆಚಾರ್ಯನು ತನ್ನ ನಿತ್ಯಕರ್ಮಗಳಿಗಾಗಿ ಹೋಗಿದ್ದಾಗ, ಸದ್ದಿಲ್ಲದೆ ಸುಮ್ಮನೆ ಕಾಲವನ್ನು ಕಳೆಯುತ್ತಿದ್ದ ಶಿಷ್ಯರು, ಅವನು ನಿತ್ಯಕರ್ಮಗಳನ್ನು ಮುಗಿಸಿಕೊಂಡು ಬಂದಾಗ, ಅವನ ಧ್ವನಿಯನ್ನು ಕೇಳಿದೊಡನೆ ವೇದಾಧ್ಯಯನವನ್ನಾರಂಭಿಸುವಂತೆ, ಜಲಾಶಯದ ಸಂದುಗೊಂದುಗಳಲ್ಲಿ ಸದ್ದಿಲ್ಲದೆ ಮಲಗಿದ್ದ ಕಪ್ಪೆಗಳು, ಮೇಘಧ್ವನಿಯನ್ನು ಕೇಳಿದೊಡನೆ ರಟರಟಶಬ್ದವನ್ನು ಮಾಡತೊಡಗಿದುವು. ಇಂದ್ರಿಯಪರವಶರಾದ ಅಲ್ಪಮನುಷ್ಯರು, ದಾನಭೋಗಗಳೊಂದೂ ಇಲ್ಲದೆ

ತಾವು ಗಳಿಸಿಟ್ಟ ಮನೆ, ಮಠ, ಹಣ ಮುಂತಾದ ಆಸ್ತಿಗಳಿಂದ ಬೀಗಿ, ಉನ್ಮಾರ್ಗಪ್ರವರ್ತಕರಾಗುವಂತೆ, ಅಲ್ಪನದಿಗಳೆಲ್ಲವೂ ಜಲಪೂರ್ಣಗಳಾಗಿ ದಡವನ್ನು ಮೀರಿ ನಾನಾಕಡೆಗೆ ಉಕ್ಕಿಬರುತಿದ್ದುವು. ಡಾಂಭಿಕರಾದ ಹಣವಂತರು, ನಾನಾಬಣ್ಣದ ವಸ್ತ್ರಾಭರಣಗಳಿಂದ ತಮ್ಮ ಪಟಾಟೋಪವನ್ನು ತೋರಿಸುವಂತೆ, ಭೂಮಿಯೆಲ್ಲವೂ ಗರಿಕೆಗಳಿಂದಲೂ, ಇಂದ್ರಕೋಪಗಳಿಂದಲೂ, ಶಿಲೀಂಧ್ರಪುಷ್ಪಗಳಿಂದಲೂ, ಹಸುರು, ಕೆಂಪು, ಹಳದಿ ಬಣ್ಣಗಳಿಂದ ವಿಚಿತ್ರವಾಗಿ ಕಾಣುತಿತ್ತು. ಭೂಮಿಯೆಲ್ಲವೂ ಸಸ್ಯಸಮೃದ್ಧವಾಗಿ, ಕೃಷಿಮಾಡತಕ್ಕವರಿಗೆ ಸಂತೋಷವನ್ನೂ, ಇತರರಿಗೆ ಅದೃಷ್ಟಾಧೀನವಾಗಿ ಲಭಿಸಿದ ಭಾಗ್ಯವನ್ನು ನೋಡಿ ಸಹಿಸಲಾರದ ಅಸೂಯಾಳುಗಳಿಗೆ ಸಂಕಟವನ್ನೂ ಹೆಚ್ಚಿಸುತಿತ್ತು. ಸತ್ಪುರುಷರು ಶ್ರೀಹರಿಸೇವೆಯಿಂದ ಆನಂದಭರಿತರಾಗುವಂತೆ, ಸ್ಥಲಜಲಚರಪ್ರಾಣಿಗಳೆಲ್ಲವೂ ಹೊಸನೀರಿನ ಸೇವನೆಯಿಂದ ಉಲ್ಲಾಸಗೊಂಡಿದ್ದುವು. ಯೋಗವು ಚೆನ್ನಾಗಿ ಪರಿಪಕ್ವವಾಗದ ಮನುಷ್ಯನ ಮನಸ್ಸು, ರೂಪಾದಿವಿಷಯಗಳನ್ನು ಕಂಡಾಗ ಕಾಮಾಸಕ್ತವಾಗಿ ಕಲಗುವಂತೆ, ಅದುವರೆಗೆ ಗಂಭೀರವಾಗಿದ್ದ ಸಮುದ್ರವು, ನಾನಾಕಡೆಗಳಿಂದ ಬಂದು ಬೀಳುವ ನದಿಗಳೊಡಗೂಡಿ, ವಾಯುವೇಗಕ್ಕೆ ಸಿಕ್ಕಿ, ಉಲ್ಲೋಲಕಲ್ಲೋಲವಾಗಿ ಕದಲುತಿದ್ದಿತು. ಪ್ರಬಲವಾದ ಮಳೆಗಾಳಿಗೆ ಸಿಕ್ಕಿದಾಗಲೂ ಕದಲದೆ ನಿಂತಿದ್ದ ಪರ್ವತಗಳು, ಶ್ರೀಹರಿಯಲ್ಲಿ ನಟ್ಟ ಮನಸ್ಸುಳ್ಳವರು ಆಧ್ಯಾತ್ಮಿಕಾದಿತಾಪತ್ರಯಗಳು ಮೇಲೆ ಬಿದ್ದುಬಂದಾಗಲೂ, ಧೈರ್ಯಗೆಡದೆ ದೃಢಧ್ಯಾನದಲ್ಲಿ ನಿಲ್ಲುವುದನ್ನು ತೋರಿಸುವಂತಿದ್ದುವು. ಆಗಾಗ ಅಧ್ಯಯನಮಾಡದೆ ಬಿಟ್ಟ ವೇದಶಾಸ್ತ್ರಗಳು ಕಾಲಕ್ರಮದಿಂದ ಮರೆತು ಹೋಗುವಂತೆ, ಮಳೆಗಾಲದಲ್ಲಿ ವಿಶೇಷವಾಗಿ ಜನಸಂಚಾರವಿಲ್ಲದುದರಿಂದ, ಹುಲ್ಲುಬೆಳೆದು, ದಾರಿಗಳು ಮರೆಸಿಹೋಗುತ್ತ ಬಂದುವು. ಗುಣವಂತನಾದ ಪುರುಷನಲ್ಲಿಯೂಕೂಡ ಸ್ತ್ರೀಯರ ಸ್ನೇಹವು ಚಂಚಲವೆಂಬುದನ್ನು ತೋರಿಸುವಂತೆ, ಸರ್ವಲೋಕ ಜೀವನಹೇತುವಾದ ಮೇಘಗಳಲ್ಲಿ ಮಿಂಚುಗಳು ಆಗಾಗ ಕಂಡುಕಾಣಿಸದಿದ್ದುವು. ಸತ್ವಾದಿಗುಣಗಳ ಸಂಬಂಧವಿಲ್ಲದೆ ಶುದ್ಧನಾದ ಜೀವನು, ಕಾಲವಶದಿಂದ ಗುಣತ್ರಯಪರಿ

ಣಾಮರೂಪವಾದ ದೇಹದಲ್ಲಿ ಸೇರುವನೆಂಬುದನ್ನು ತೋರಿಸುವಂತೆ, ಶಬ್ದ ಗುಣವುಳ್ಳ ಆಕಾಶದಲ್ಲಿ, ನಿರ್ಗುಣವಾದ (ನಾಣಿಲ್ಲದ) ಇಂದ್ರಧನುಸ್ಸು ಕಾಣಿಸುತಿತ್ತು. ದೇಹದಿಂದಾವರಿಸಲ್ಪಟ್ಟ ಜೀವನಿಗೆ, ಆತ್ಮಸ್ವರೂಪವು ಮರೆತುಹೋಗಿ, ಹೊರಗಿನ ದೇಹವೇ ತಾನೆಂದು ತೋರುವಂತೆ,ಮೇಘಗಳು ಚಂದ್ರನನ್ನು ಮರೆಸಿ,ಆ ಚಂದ್ರನ ಕಾಂತಿಯಿಂದ ತಾವೇ ಬೆಳುಪೇರಿ ಶೋಭಿಸುತಿದ್ದುವು.ಸಾಧುಗಳು ಅಭ್ಯಾಗತರಾದ ಹರಿಭಕ್ತೋತ್ತಮರನ್ನು ಕಂಡು ಸಂತೋಷದಿಂದುಬ್ಬುತಂತೆ, ನವಿಲುಗಳು ಮೇಘಾಗಮವನ್ನು ನೋಡಿ ಸಂತೋಷದಿಂದುಬ್ಬುತಿದ್ದುವು. ಮೊದಲು ಕಷ್ಟಪಟ್ಟು ತಪಸ್ಸುಮಾಡಿ ಕೃಶರಾಗಿದ್ದವರು, ಆದರಿಂದುಂಟಾದ ಫಲಾನುಭವಕಾಲದಲ್ಲಿ ಸಂತೋಷದಿಂದುಬ್ಬುವಂತೆ, ಬೇಸಗೆಯಲ್ಲಿ ಒಣಗಿದ್ದ ಗಿಡಗಳೆಲ್ಲವೂ, ಮಳೆಗಾಲದಲ್ಲಿ ತಮ್ಮಬೇರುಗಳಿಂದ ಯಥೇಷ್ಟವಾಗಿ ಜಲಪಾನವನ್ನುಮಾಡಿ, ಫಲಪುಷ್ಪಾದಿಸಮೃದ್ಧಿಯಿಂದ ವಿಸ್ತಾರವಾಗಿ ಬೆಳೆದು ಕಂಗೊಳಿಸುತಿದ್ದುವು. ಅಲ್ಪಬುದ್ಧಿಯುಳ್ಳ ಪಾಮರರು, ಅತ್ಯಲ್ಪವಾದ ಸುಖಕ್ಕಾಸೆಪಟ್ಟು ಕೇವಲದುಃಖಪ್ರಚುರವಾದ ಸಂಸಾರದಲ್ಲಿ ನೆಲಸಿರುವಂತೆ, ಎಲ್ಲಿ ನೋಡಿದರೂ ಪ್ರವಾಹದಿಂದ ಕಲಗಿ ಕೆಸರಾದ ನೀರಿನಲ್ಲಿ, ಸಾರಸಪಕ್ಷಿಗಳು ಸಂತೋಷದಿಂದ ನಲಿಯುತ್ತಿದ್ದುವು. ಕಲಿಪ್ರಾಬಲ್ಯದಲ್ಲಿ ಪಾಷಂಡವಾದಗಳಿಂದ ವೇದಮಾರ್ಗಗಳೆಲ್ಲವೂ ಕೆಟ್ಟುಹೋಗುವಂತೆ, ಪ್ರವಾಹಗಳಿಂದ ಸೇತುವೆಗಳೆಲ್ಲವೂ ಮುರಿದುಬಿದ್ದುವು. ಯೋಗ್ಯರಾದ ಬ್ರಾಹ್ಮಣರ ಪ್ರೇರಣೆಯಿಂದ ರಾಜರು ತಮ್ಮ ಪ್ರಜೆಗಳಿಗೆ ಕಾಲಕಾಲಕ್ಕೆ ಬೇಕಾದ ಅಭೀಷ್ಟಗಳನ್ನು ಕರೆಯುವಂತೆ, ವಾಯುಪ್ರೇರಿತಗಳಾದ ಮೇಘಗಳು, ಸಮಸ್ತಪ್ರಾಣಿಗಳಿಗೂ ಅಮೃತದಂತೆ ಜೀವನಹೇತುವಾದ ಜಲವರ್ಷವನ್ನು ಕರೆಯುತಿದ್ದುವು. ಹೀಗೆ ವರ್ಷಾಕಾಲವು ನಡೆಯುತ್ತಿರುವಾಗ, ಕೃಷ್ಣನು ಬಲರಾಮಸಹಿತನಾಗಿ, ಎಂದಿನಂತೆ ಗೋವುಗಳನ್ನು ಮೇಯಿಸುವುದಕ್ಕಾಗಿ ಹೊರಟು, ಚೆನ್ನಾಗಿ ಮಾಗಿದ ಖರ್ಜೂರ,ನೇರಳೆ,ಮುಂತಾದ ಫಲವೃಕ್ಷಗಳಿಂದ ಮನೋಹರವಾದ ಅಲ್ಲಿನ ವನಗಳಲ್ಲಿ ಪ್ರವೇಶಿಸಿ ವಿಹರಿಸುತಿದ್ದನು. ಅವನೊಡನೆ ಇನ್ನೂ ಅನೇಕಗೋಪಾಲಕರೂ ತಮ್ಮತಮ್ಮ ಮಂದೆಯನ್ನಟ್ಟಿಕೊಂಡು

ಬರುತಿದ್ದರು. ಕೆಚ್ಚಲಿನ ಭಾರದಿಂದ ನಡೆಯಲಾರದ ಹಸುಗಳೂಕೂಡ, ಕೃಷ್ಣನು ತಮ್ಮ ಹೆಸರನ್ನು ಹಿಡಿದು ಕರೆದೊಡನೆ,ಸಂತೋಷದಿಂದ ಹಾಲನ್ನು ತೊರೆಯಿಕ್ಕುತ್ತ, ಗುಡಗುಡನೆ ಅವನಹಿಂದೆ ಓಡುತಿದ್ದುವು. ಹೀಗೆ ಕೃಷ್ಣನು ಸಮಸ್ತಪರಿವಾರಗಳೊಡನೆ ವನವನ್ನು ಪ್ರವೇಶಿಸಿ, ಆ ವರ್ಷಾಕಾಲದಲ್ಲಿ ಅಲ್ಲಲ್ಲಿ ಸೊಂಪೇರಿ ಬೆಳೆದು ಮಕರಂದವನ್ನು ಸ್ರವಿಸುತ್ತಿರುವ ವೃಕ್ಷಗಳ ಸಾಲನ್ನೂ, ಅಲ್ಲಲ್ಲಿ ಸಂತೋಷದಿಂದ ವಿಹರಿಸುತ್ತಿರುವ ವನಚರಪ್ರಾಣಿಗಳನ್ನೂ, ಅಲ್ಲಲ್ಲಿ ಗಂಭೀರಧ್ವನಿಯಿಂದ ಪ್ರವಹಿಸುತ್ತಿರುವ ಗಿರಿನದಿಗಳನ್ನೂ, ಅಲ್ಲಲ್ಲಿರುವ ಗುಹೆಗಳನ್ನೂ ನೋಡಿ ಆನಂದಿಸುತಿದ್ದನು. ಎಡೆಬಿಡದೆ ಮಳೆ ಬೀಳುವುದಕ್ಕಾರಂಭಿಸಿದಾಗ, ಕೃಷ್ಣನು ಅಲ್ಲಿಯೇ ಯಾವುದಾದರೂ ಒಂದು ಮರದಡಿಯಲ್ಲಿಯಾಗಲಿ, ಗುಹೆಯಲ್ಲಿಯಾಗಲಿ ಸೇರಿ,ಅಲ್ಲಲ್ಲಿ ಸಿಕ್ಕಿದ ಗಡ್ಡೆಗೆಣಸುಗಳನ್ನೇ ತಿಂದು ನಿಶ್ಚಿಂತವಾಗಿದ್ದುಬಿಡುವನು. ಒಮ್ಮೊಮ್ಮೆ ಮನೆಯಿಂದ ಕಟ್ಟಿಕೊಂಡು ಬಂದ ಮೊಸರನ್ನದ ಬುತ್ತಿಯನ್ನು ಹೊಳೆಗಳ ದಡದಲ್ಲಿರುವ ಕಲ್ಲುಬಂಡೆಯಮೇಲಿಟ್ಟುಕೊಂಡು, ಸಂಗಡಿಗರಾದ ಗೋಪಾಲಕರೊಡನೆಯೂ, ಬಲರಾಮನೊಡನೆಯೂ ವಿನೋದದಿಂದ ಭುಜಿಸುವನು. ಒಮ್ಮೊಮ್ಮೆ ಅಲ್ಲಲ್ಲಿನ ಹಸುರುಹುಲ್ಲಿನ ನೆಲದಮೇಲೆ ಕುಳಿತು, ತನ್ನ ಮಂದೆಯ ಗೋವುಗಳನ್ನು ನೋಡಿ ಆನಂದಿಸುತ್ತಿರುವನು. ಒಂದುಕಡೆಯಲ್ಲಿ ವೃಷಭಗಳು ಪುಷ್ಕಲವಾಗಿ ಮೇದು ಮದದಿಂದ ಕಣ್ಮುಚ್ಚಿ ಮೆಲುಕಾಡುತ್ತ ನಿಂತಿರುವುವು. ಮತ್ತೊಂದು ಕಡೆಯಲ್ಲಿ ಹಸುಗಳು ಕೆಚ್ಚಲಿನ ಭಾರದಿಂದ ತೂಗಾಡುತ್ತ ನಡೆಯುವುವು. ಕರುಗಳು ಬಾಲವನ್ನು ನಿಗುರಿಸಿ ಸಂತೋಷದಿಂದ ಹಾರಿಹಾರಿ ನೆಗೆಯುತ್ತ ಓಡಾಡುವುವು. ಹೀಗೆ ಸಮಸ್ತಪ್ರಾಣಿಗಳಿಗೂ ಉಲ್ಲಾಸಕರವಾದ ಆ ವರ್ಷಾಕಾಲದ ಸೊಗಸನ್ನು ನೋಡಿ, ಕೃಷ್ಣನು, ತನ್ನಿಂದ ಸೃಷ್ಟವಾದ ಕಾಲಮಹಿಮೆಯನ್ನು ತನ್ನಲ್ಲಿ ತಾನೇ ಕೊಂಡಾಡುತಿದ್ದನು.



ಶರದೃತುವರ್ಣನವು.

ಹೀಗೆ ರಾಮಕೃಷ್ಣರಿಬ್ಬರೂ ಸಂತೋಷದಿಂದ ವನಪ್ರದೇಶಗಳಲ್ಲಿ ವಿಹರಿಸುತ್ತ, ಆ ಎರಡುತಿಂಗಳ ಕಾಲವನ್ನು ಕಳೆದರು. ಆಮೇಲೆ ಶರದೃ

ತುವು ಆರಂಭಿಸಿತು. ಕ್ರಮಕ್ರಮವಾಗಿ ಕಾಲಮೇಘಗಳು ಕಣ್ಮರೆಯಾ ದುವು. ಆಕಾಶವು ಸ್ವಚ್ಛವಾಗುತ್ತ ಬಂಬತು. ಜಲಾಶಯಗಳೆಲ್ಲವೂ ತಿಳಿ ನೀರಿನಿಂದ ಕಂಗೊಳಿಸುತಿದ್ದುವು. ಬಿರುಗಾಳಿಯು ತಗ್ಗಿ ಸುಖಸ್ಪರ್ಶವಾದ ಮಂದಮಾರುತವು ಬೀಸತೊಡಗಿತು. ಯೋಗಿಗಳ ಮನಸ್ಸು ನಡುವೆ ಕಾಲ ವಶದಿಂದ ಯೋಗಭ್ರಷ್ಟವಾದರೂ, ತಿರುಗಿ ಯೋಗಾನುಷ್ಠಾನಬಲದಿಂದ ತನಗೆ ಸಹಜವಾದ ನೈರ್ಮಲ್ಯವನ್ನು ಹೊಂದುವಂತೆ, ವರ್ಷಾಕಾಲವಶದಿಂ ದ ಕೆಸರೇರಿದ ಜಲಾಶಯಗಳೆಲ್ಲವೂ, ಶರತ್ಕಾಲವು ತಲೆದೋರಿದೊಡನೆ, ತ ಮಗೆ ಸಹಜವಾದ ನೈರ್ಮಲ್ಯದಿಂದ ಶೋಭಿಸುತಿದ್ದುವು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಗಳೆಂಬ ನಾಲ್ಕಾಶ್ರಮಗಳಲ್ಲಿರುವವರು, ಕ್ರಮವಾಗಿ ನಡೆಸಬೇಕಾದ ಅಧ್ಯಯನ ಮೊದಲಾದ ಧರ್ಮಗಳಿಗೆ ಪ್ರತಿಬಂ ಧಕಗಳೆನಿಸಿಕೊಂಡ, ಅಜ್ಞಾನ, ವಿಷಯಾಸಕ್ತಿ, ಅಶಕ್ತಿ, ಕರ್ಮವಾಸನೆಯೆಂ ಬೀನಾಲ್ಕು ದೋಷಗಳೂ ಭಗವದ್ಭಕ್ತಿಯೋಗದಿಂದ ನಿವೃತ್ತವಾಗುವಂತೆ, ಶರತ್ಕಾಲವು ಬಂದೊಡನೆ, ಆಕಾಶದಲ್ಲಿ ಮೇಘಗಳೂ, ಕಾಲದಲ್ಲಿ ಮಿಂಚು ಮಳೆಗಾಳಿಗಳ ಸಂಪರ್ಕವೂ, ಭೂಮಿಯಲ್ಲಿ ಕೆಸರೂ, ಜಲದಲ್ಲಿ ಕಾ ಲುಷ್ಯವೂ ಕ್ರಮವಾಗಿ ನೀಗುತ್ತಬಂದುವು. ಭಗವದುಪಾಸಕರಾದ ಮು ನಿಗಳು, ಪುತ್ರಕಳತ್ರಾದಿಮೋಹಪಾಶಗಳೆಲ್ಲವನ್ನೂ ತೊರೆದು, ಕಲ್ಮಷವ ನ್ನು ನೀಗಿ, ಶಾಂತರಾಗಿ ಪ್ರಕಾಶಿಸುವಂತೆ, ಮೇಘಗಳು ತಮ್ಮಲ್ಲಿದ್ದ ಜಲ ರೂಪವಾದ ಸರ್ವಸ್ವವನ್ನೂ ಬಿಟ್ಟು, ಶುಭ್ರಕಾಂತಿಯಿಂದ ಶೋಭಿಸುತಿ ದ್ದುವು. ಜ್ಞಾನಿಗಳು ಯೋಗ್ಯರಾದ ಶಿಷ್ಯರಿಗೆಮಾತ್ರ ನಿರ್ಮಲವಾದ ತ ತ್ವಜ್ಞಾನವನ್ನುಪದೇಶಿಸುವಂತೆ, ಪರ್ವತಗಳು ಒಂದೊಂದುಕಡೆಯಲ್ಲಿ ಮಾ ತ್ರ ಶುದ್ಧಜಲವನ್ನು ಸ್ರವಿಸುತಲಿದ್ದುವು. ಅಜ್ಞಾನಿಗಳು ಕೇವಲಕುಟುಂ ಬಾಸಕ್ತಿಯಲ್ಲಿ ಮುಳುಗಿ,ತಮ್ಮ ಆಯುಃಕಾಲವು ವ್ಯರ್ಥವಾಗಿ ಕಳೆದು ಹೋ ಗುವುದನ್ನೂ ತಿಳಿಯದಿರುವಂತೆ, ಅಲ್ಪಜಲವುಳ್ಳ ಕೆರೆಕಟ್ಟೆಗಳ ತಳದ ಲ್ಲಿ ಸೇರಿದ ಜಲಜಂತುಗಳು,ತಾವು ವಾಸಮಾಡತಕ್ಕ ಜಲಾಶಯವು ದಿನದಿನ ಕ್ಕೆ ಶೋಷಿಸುತ್ತಿರುವುದನ್ನು ತಿಳಿಯದೆ, ಅಲ್ಪಸುಖದಿಂದ ಸಂತೋಷಿಸುತಿ ದ್ದುವು. ದರಿದ್ರರಾದ ಕುಟುಂಬಿಗಳು, ಹೊಟ್ಟೆಗೆ ಸಾಲದುದಕ್ಕಾಗಿ, ಮೇಲೆ

ಮೇಲೆ ಸಂಕಟದಿಂದ ಬೇಯುವಂತೆ, ಅಲ್ಪಜಲವುಳ್ಳ ಹಳ್ಳಕೊಳ್ಳಗಳಲ್ಲಿ ಸೇರಿದ್ಧ ಜಲಜಂತುಗಳಿಗೆ, ಕ್ರಮಕ್ರಮವಾಗಿ ಬಿಸಿಲಿನ ತಾಪವು ತಿಳಿಯುತ್ತ ಬಂದಿತು. ಜ್ಞಾನಿಗಳಿಗೆ, ಆತ್ಮವ್ಯತಿರಿಕ್ತಗಳಾದ ದೇಹಾದಿಗಳಲ್ಲಿ ಕ್ರಮಕ್ರಮವಾಗಿ ಅಹಂಕಾರಮಮಕಾರಗಳು ಬಿಟ್ಟುಹೋಗುವಂತೆ ಭೂಮಿಯ ಕೆಸರೂ, ಸಸ್ಯವರ್ಗಗಳ ಅಪಕ್ವತೆಯೂ, ಮೆಲ್ಲಮೆಲ್ಲಗೆ ನೀಗುತ್ತ ಬಂದುವು. ಆತ್ಮಜ್ಞಾನನಿಷ್ಠನಾದ ಯೋಗಿಯು, ದೇಹಶೋಷಣವಾಗುತಿದ್ದರೂ, ಅನ್ನಪಾನಾದಿಗಳಿಗಾಗಿ ದುಡಿಯದೆ ಶಾಂತನಾಗಿರುವಂತೆ, ಸಮುದ್ರವು ಅಲೆಯಾಟಗಳಿಲ್ಲದೆ ನಿಶ್ಚಲವಾದ ನೀರಿನಿಂದ ಶಾಂತವಾಗಿದ್ದಿತು. ಯೋಗಿಗಳು ತಮ್ಮ ಇಂದ್ರಿಯಗಳಮೂಲಕವಾಗಿ ಬಾಹ್ಯವಿಷಯಗಳಿಗೆ ಎಳೆಯಲ್ಪಡುವ ಜ್ಞಾನವನ್ನು, ಪ್ರಾಣನಿರೋಧದಿಂದ, ಆತ್ಮಸಾಕ್ಷಾತ್ಕಾರದಕಡೆಗೆ ತಿರುಗಿಸುವಂತೆ, ಕೃಷಿಮಾಡತಕ್ಕವರು, ದೃಢವಾದ ಅಣೆಕಟ್ಟುಗಳಿಂದ ಅಲ್ಲಲ್ಲಿನ ಪ್ರವಾಹಗಳನ್ನು ತಡೆದು, ಆ ನೀರನ್ನು ತಮ್ಮತಮ್ಮ ಗದ್ದೆಗಳಿಗೆ ಸಾಗಿಸುತಿದ್ದರು. ಶ್ರೀಕೃಷ್ಣನು ಗೋಪಸ್ತ್ರೀಯರಿಗೆ ದೇಹಾಭಿಮಾನದಿಂದುಂಟಾದ ವಿರಹತಾಪವನ್ನು ಆತ್ಮತತ್ವಬೋಧೆಯಿಂದ ನೀಗಿಸುವಂತೆ, ಹಗಲಲ್ಲಿ ಸೂರ್ಯನ ಬಿಸಿಲಿನಿಂದ ಪ್ರಾಣಿಗಳಿಗುಂಟಾದ ತಾಪವನ್ನು, ಚಂದ್ರನು ರಾತ್ರಿಯಲ್ಲಿ ತನ್ನ ಕಿರಣಗಳಿಂದ ನಿವಾರಿಸುತಿದ್ದನು. ಸತ್ವಗುಣಪ್ರಚುರವಾದ ಮನಸ್ಸಿನಲ್ಲಿ ಕಲ್ಮಷವು ನೀಗಿ, ವೇದಾರ್ಥಗಳು ಸ್ಪಷ್ಟವಾಗಿ ತೋರುವಂತೆ, ಮೇಘಗಳಿಲ್ಲದೆ ನಿರ್ಮಲವಾದ ಆಕಾಶದಲ್ಲಿ ಗ್ರಹನಕ್ಷತ್ರಾದಿಗಳ ಕಾಂತಿಯು ಸ್ಪಷ್ಟವಾಗಿ ತೋರುತಿದ್ದಿತು. ಭಗವಂತನ ಪೂರ್ಣಾಂಶಭೂತನಾದ ಕೃಷ್ಣನು ಯಾದವರೊಡಗೂಡಿ ಪ್ರಕಾಶಿಸುವಂತೆ, ಆಕಾಶದಲ್ಲಿ ಪೂರ್ಣಚಂದ್ರನು, ನಕ್ಷತ್ರಸಮೂಹದ ನಡುವೆ ಪ್ರಕಾಶಿಸುತಿದ್ದನು. ಶರತ್ಕಾಲದಲ್ಲಿ ಪುಷ್ಪಸಮೃದ್ಧವಾದ ತೋಟಗಳಿಂದ ಬೀಸುತಿದ್ದ ಸಮಶೀತೋಷ್ಣವಾದ ಗಾಳಿಯು, ಸಮಸ್ತಜನರ ಸಂತಾಪವನ್ನೂ ನೀಗಿಸುತಿದ್ದರೂ, ಕೃಷ್ಣನಿಂದ ಮೋಹಿತವಾದ ಮನಸ್ಸುಳ್ಳ ಗೋಪಸ್ತ್ರೀಯರಿಗೆ, ವಿರಹತಾಪವು ಹೆಚ್ಚುತ್ತ ಬಂದಿತು. ಫಲಗಳಿಂದ ಹಿಂಬಾಲಿಸಲ್ಪಡುವ ಭಗವದುಪಾಸನಾಕ್ರಿಯೆಗಳಂತೆ, ಈ ಶರದಾಗಮದಲ್ಲಿ ಗೋವುಗಳು, ಹೆ

ಣ್ಣುಹಕ್ಕಿಗಳು, ಮುಂತಾದ ಸ್ತ್ರೀಜಾತಿಗಳೆಲ್ಲವೂ ತಮ್ಮತಮ್ಮ ಪ್ರಿಯರಿಂದ ಹಿಂಬಾಲಿಸಲ್ಪಡುತ್ತ, ಗರ್ಭವನ್ನು ಧರಿಸಿ ಶೋಭಿಸುತಿದ್ದುವು. ಧಾರ್ಮಿಕನಾದ ರಾಜನನ್ನು ಕಂಡಾಗ, ಚೋರರುಹೊರತು, ಇತರಸಮಸ್ತಪ್ರಜೆಗಳೂ ನಿರ್ಭಯರಾಗಿ ಉಲ್ಲಾಸಹೊಂದುವಂತೆ, ಸೂರ್ಯೋದಯಕಾಲದಲ್ಲಿ ನೈದಿಲೆಗಳುಹೊರತು, ಬೇರೆ ಎಲ್ಲಾ ನೀರುಹೂಗಳೂ ಉಲ್ಲಾಸದಿಂದರಳಿದುವು. ಈ ಶರತ್ಕಾಲದಲ್ಲಿ ಭೂಭಾಗವೆಲ್ಲವೂ ಪಕ್ವವಾದ ಧಾನ್ಯದ ತೆನೆಗಳಿಂದ ಮನೋಹರವಾಗಿ, ಪುರಗ್ರಾಮಗಳೇ ಮೊದಲಾದ ಸಮಸ್ತಸ್ಥಳಗಳೂ, ಹೊಸಧಾನ್ಯಗಳನ್ನು ಭುಜಿಸುವುದಕ್ಕೆ ಮೊದಲು ನಡೆಸತಕ್ಕ ಆಗ್ರಯಣವೆಂಬ ಯಾಗಕಾರ್ಯಗಳಿಂದಲೂ, ಇಂದ್ರಿಯಪ್ರೀತ್ಯರ್ಥವಾದ ಇತರಮಹೋತ್ಸವಸಂಭ್ರಮಗಳಿಂದಲೂ ಶೋಭಿತವಾಗಿದ್ದುವು. ಅದರಲ್ಲಿಯೂ ಮುಖ್ಯವಾಗಿ ಭಗವದಂಶಭೂತರಾದ ಬಲರಾಮಕೃಷ್ಣರಿಂದ,ಸಮಸ್ತಭೂಭಾಗಕ್ಕೂ ಅಪೂರ್ವವಾದ ಶೋಭಾತಿಶಯವುಂಟಾಯಿತು! ತಪಸ್ಸಿದ್ಧರಾದವರು, ತಮ್ಮ ಪ್ರಾರಬ್ಧಕರ್ಮವು ಮುಗಿಯುವಕಾಲವು ಬಂದೊಡನೆ, ಶರೀರವನ್ನು ನೀಗಿ, ಈ ಲೋಕವನ್ನು ಬಿಟ್ಟು ಪರಲೋಕದಲ್ಲಿ ತಮ್ಮ ತಪಃಫಲವನ್ನನುಭವಿಸುವಂತೆ, ಅದುವರೆಗೆ ಮಳೆಯದೆಸೆಯಿಂದ ಅತ್ತಿತ್ತ ಕದಲಲಾರದೆ ನಿರ್ಬಂಧದಲ್ಲಿದ್ದ ವರ್ತಕರು, ಸನ್ಯಾಸಿಗಳು, ರಾಜರು, ಯಾತ್ರಾರ್ಥಿಗಳು ಇವರೆಲ್ಲರೂ, ಶರತ್ಕಾಲವು ಬಂದೊಡನೆ ಸಂಚಾರಾರ್ಥವಾಗಿ ಹೊರಟು, ತಮ್ಮತಮ್ಮ ಪ್ರಯೋಜನಗಳನ್ನು ಕೈಗೂಡಿಸಿಕೊಳ್ಳುತಿದ್ದರು. ಇದು ಇಪ್ಪತ್ತನೆಯ ಅಧ್ಯಾಯವು.

---

{ಗೋಪಸ್ತ್ರೀಯರು ಶ್ರೀಕೃಷ್ಣನ ವೇಣುಗಾನದ ಸೊಗಸನ್ನು ವರ್ಣಿಸಿಕೊಂಡಾಡುತಿದ್ದುದು.}

ರಾಜಾ! ಆ ಶರತ್ಕಾಲದಲ್ಲಿ ಯಾವ ವನವನ್ನು ನೋಡಿದರೂ ಸ್ವಚ್ಛಜಲವುಳ್ಳ ಸರೋವರಗಳು ಶೋಭಿಸುತ್ತಿರುವುವು. ಎಲ್ಲಿ ನೋಡಿದರೂ ಕಮಲಗಂಧವುಳ್ಳ ಗಾಳಿಯು ಬೀಸುತ್ತಿರುವುದು. ಹೀಗೆ ಸರ್ವಜನಮನೋರಂಜಕವಾದ ಕಾಲದಲ್ಲಿ, ಕೃಷ್ಣನು ಎಂದಿನಂತೆ ತನ್ನ ಮಂದೆಯ

ನ್ನಟ್ಟಿಕೊಂಡು, ತನ್ನ ಸಂಗಡಿಗರಾದ ಇತರಗೋಪಾಲಕರೊಡನೆ ವನವನ್ನು ಪ್ರವೇಶಿಸಿದನು. ಆಗಿನ ವನಲಕ್ಷ್ಮಿಯ ಸೊಗಸನ್ನು ಕೇಳಬೇಕೆ? ಎಲ್ಲಿ ನೋಡಿದರೂ ಪುಷ್ಪಿತಗಳಾದ ಗಿಡುಬಳ್ಳಿಗಳು! ಅವುಗಳಲ್ಲಿ ಮಕರಂದಪಾನದಿಂದ ಮದಿಸಿದ ಭ್ರಮರಗಳ ಝುಂಕಾರಗಳು! ಅಲ್ಲಲ್ಲಿ ತಿಳಿನೀರಿನಿಂದ ತುಂಬಿ ತುಳುಕಾಡುತ್ತಿರುವ ಕೆರೆತೊರೆಗಳು! ಅವುಗಳಲ್ಲಿ ಜಲಪಕ್ಷಿಗಳ ಮಧುರಧ್ವನಿಗಳು! ಸುತ್ತಲೂ ಮನೋಹರವಾದ ಪರ್ವತಶ್ರೇಣಿಗಳು! ಅವುಗಳಲ್ಲಿ ಪುಷ್ಕಲವಾಗಿ ಫಲಗಳನ್ನು ತಿಂದು ಮದವೇರಿದ ಪಕ್ಷಿಗಳ ಕೋಲಾಹಲಗಳು.! ಈ ಸೌಂದರ್ಯಸನ್ನಿವೇಶಗಳನ್ನು ನೋಡುತ್ತ, ಅಲ್ಲಲ್ಲಿ ಮಂದೆಯನ್ನು ಮೇಯಿಸುತ್ತಿರುವಾಗ, ಕೃಷ್ಣನ ಮನಸ್ಸಿಗೆ ಒಂದು ಬಗೆಯ ಉಲ್ಲಾಸವು ತೋರಿ, ಆಧ್ವನಿಗಳ ನಡುವೆ ತಾನೂ ಕೊಳಲನ್ನು ನುಡಿಸತೊಡಗಿದನು. ದೂರದಲ್ಲಿದ್ದ ಕೆಲವು ಗೋಪಸ್ತ್ರೀಯರಿಗೆ ಈ ಧ್ವನಿಯು ಕೇಳಿಸಿತು. ಒಂದು ಕ್ಷಣಮಾತ್ರದವರೆಗೆ ಕೃಷ್ಣನು ಕಣ್ಣಿಗೆ ಬೀಳದಿದ್ದರೆ, ವಿರಹತಾಪದಿಂದ ದುಃಖಿಸುತಿದ್ದ ಆ ಗೋಪಸ್ತ್ರೀಯರು, ಎಂತವರಿಗೂ ಕಾಮೋದ್ದೀಪಕವಾದ ಆ ವೇಣುಗಾನವನ್ನು ಕೇಳಿದೊಡನೆ, ಮೋಹಪರವಶರಾಗಿ, ತಮ್ಮೊಳಗೆ ಒಬ್ಬರಿಗೊಬ್ಬರು ಆ ವೇಣುಗಾನದ ಸೊಗಸನ್ನು ತಮತಮಗೆ ತೋರಿದಂತೆ ವರ್ಣಿಸತೊಡಗಿದರು! ಆದರೇನು? ಆ ಕೃಷ್ಣನ ರೂಪಗುಣ ಚೇಷ್ಟಾದಿಗಳು ಅವರ ನೆನಪಿಗೆ ಬಂದಹಾಗೆಲ್ಲಾ, ಅವರಿಗೆ ಮೋಹಪಾರವಶ್ಯದಿಂದ ಮಾತೇ ಹೊರಡದಂತಾಯಿತು. ತಲೆಯಲ್ಲಿ ನವಿಲುಗರಿ! ಕಿವಿಯಮೇಲೆ ಕರ್ಣಿಕಾರಪುಷ್ಪದ ಗೊಂಚಲು! ನಡುವಿನಲ್ಲಿ ಸುವರ್ಣಛಾಯೆಯುಳ್ಳ ಪಟ್ಟೆಮಡಿ! ಕೊರಲಲ್ಲಿ ವೈಜಯಂತೀಮಾಲಿಕೆ! ಇಂತಹ ಮೋಹನಾಕಾರದಿಂದ ಕೃಷ್ಣನು, ಕೊಳಲಿನ ರಂಧ್ರಕ್ಕೆ ತನ್ನ ಅಧರಾಮೃತವನ್ನು ತುಂಬುತ್ತ, ಅನೇಕಗೋಪಾಲಕರಿಂದ ಪರಿವೃತನಾಗಿ, ತನ್ನ ಪಾದಚಿಹ್ನಗಳಿಂದ ಬೃಂದಾರಣ್ಯವನ್ನಲಂಕರಿಸುತ್ತ ಅಲ್ಲಲ್ಲಿ ಸಂಚರಿಸುತ್ತಿರುವುದನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡಾಗ, ಅವರಿಗೆ ಮೋಹದಿಂದ ಏನೂ ತೋರದಂತಾಯಿತು. ಕೊನೆಗೆ ಪ್ರಯತ್ನದಿಂದ ಚೇತರಿಸಿಕೊಂಡು ಹೀಗೆಂದು ವರ್ಣಿಸುವರು. ‘‘ಆಹಾ! ಓ ಸಖಿಯರೆ! ಪ್ರೀತಿ

ಪೂರ್ವಕವಾದ ಕಟಾಕ್ಷವೀಕ್ಷಣದೊಡನೆ ಕೊಳಲೂದುತ್ತ, ತನ್ನ ಸಂಗಡಿಗರೊಡಗೂಡಿ ವಿಹರಿಸುತ್ತಿರುವ ರಾಮಕೃಷ್ಣರ ಮುಖಸೌಂದರ್ಯವನ್ನು ಪಾನಮಾಡುವುದೇ ಕಣ್ಣುಗಳನ್ನು ಪಡೆದುದಕ್ಕೆ ಮುಖ್ಯಫಲವಲ್ಲದೆ ಬೇರೆಯಲ್ಲ! ನೋಡಿದಿರೇ.! ಮಾವಿನ ಚಿಗುರು, ನವಿಲುಗರಿ, ಹೂಗೊಂಚಲು, ತಾವರೆನೈದಿಲೆಗಳ ಹಾರಗಳು, ಇವುಗಳ ಕಾಂತಿಯಿಂದ ನಾನಾವರ್ಣವುಳ್ಳ ವಸ್ತ್ರವನ್ನು ಧರಿಸಿ,ವಿಚಿತ್ರವೇಷದಿಂದೊಪ್ಪುತ್ತ, ರಂಗಸ್ಥಳದಲ್ಲಿ ವೇಷಧಾರಿಗಳಾಗಿ ನಿಂತ ನಟರಂತೆ ಗೊಲ್ಲರನಡುವೆ ನಿಂತು,ವೇಣುಗಾನಮಾಡುತ್ತಿರುವ ಆ ರಾಮಕೃಷ್ಣರ ಲೀಲೆಗಿಂತಲೂ ಲೀಲೆಯುಂಟೆ ? ಆಹಾ! ಆ ಕೃಷ್ಣನ ಕೈಯಲ್ಲಿರುವ ಕೊಳಲು ಏನು ಪುಣ್ಯವನ್ನುಮಾಡಿತೋ? ನಾವೆಲ್ಲರೂ ಅನುಭವಿಸಬೇಕಾದ ಆ ಕೃಷ್ಣನ ಅಧರಾಮೃತವನ್ನು ತಾನೊಂದೇ ಅನವರತವೂ ಪಾನಮಾಡುತ್ತಿರುವುದಲ್ಲಾ ! ಆ ಕೃಷ್ಣನು ಕೊಳಲೂದುವಾಗ, ಅವನ ಬಾಯಿಂದುದಿರದ ಒಂದೆರಡು ಹನಿಗಳಾದರೂ ನಮಗೆ ಸಿಕ್ಕುವುವೆ ? ಅದೂ ಇಲ್ಲ! ಆ ಭುಕ್ತಶೇಷವೂಕೂಡ ಈ ಬೃಂದಾವನದಲ್ಲಿರುವ ನದಿಗಳಲ್ಲಿಯೋ, ವೃಕ್ಷಮೂಲದಲ್ಲಿಯೋ ಬಿದ್ದು ಹೋಗುವುವು. ಸಾಧುಗಳಿಗೆ ಭಗವನ್ನಿವೇದಿತವಾದ ಶೇಷಾನ್ನವನ್ನು ಭುಜಿಸುವಾಗ ಆನಂದಾತಿಶಯದಿಂದ ಮೈಯಲ್ಲಿ ರೋಮಾಂಚವೂ, ಕಣ್ಣುಗಳಲ್ಲಿ ಆನಂದಬಾಷ್ಪವೂ ಹೊರಡುವಂತೆ, ಆನದಿಗಳು ಕಮಲ ವಿಕಾಸದಿಂದಲೂ, ವೃಕ್ಷಗಳು ಪುಷ್ಪರಸವನ್ನು ತೊಟ್ಟಿಕ್ಕುವುದರಿಂದಲೂ, ತಮ್ಮ ಆನಂದವನ್ನು ಹೊರಪಡಿಸುತ್ತಿರುವುವು ನೋಡಿರಿ! ಆಹಾ! ಶ್ರೀಕೃಷ್ಣನ ಪಾದಕಮಲದ ರೇಖೆಯಿಂದ ಅಂಕಿತವಾದ ಈ ಬೃಂದಾವನವು, ತನ್ನಿಂದ ಸಮಸ್ತ ಭೂಮಂಡಲಕ್ಕೂ ಎಣೆಯಿಲ್ಲದ ಕೀರ್ತಿಯನ್ನು ತರುವುದು. ಆ ಕೃಷ್ಣನ ಮೇಘಗಂಭೀರವಾದ ವೇಣುಗಾನವನ್ನೂ, ಅದನ್ನು ಕೇಳಿ ಸಂತೋಷದಿಂದ ಆಡುತ್ತಿರುವನವಿಲುಗಳ ನರ್ತನವನ್ನೂ ನೋಡಿ, ಇತರಜಂತುಗಳೆಲ್ಲವೂ,ಸುತ್ತಲಿರುವ ಪರ್ವತವನ್ನೇರಿ ನಿಂತು, ತಮ್ಮ ಇತರವ್ಯಾಪಾರಗಳೆಲ್ಲವನ್ನೂ ಬಿಟ್ಟು, ಸ್ತಬ್ಧವಾಗಿ ನೋಡುತ್ತಿರುವುವು ನೋಡಿರಿ! ಅಜ್ಞಜಂತುಗಳಾದ ಈ ಹೆಣ್ಣು ಜಿಂಕೆಗಳೂ ಕೂಡ, ವಿಚಿತ್ರವೇಷವುಳ್ಳ ಆ ಕೃಷ್ಣನ ವೇಣುಗಾನವನ್ನು ಕೇಳಿ, ಸ್ನೇಹ

ಪೂರ್ವಕವಾದ ತಮ್ಮ ದೃಷ್ಟಿಯಿಂದಲೇ ಆ ಕೃಷ್ಣನಿಗೆ ಪೂಜೆಯನ್ನರ್ಪಿಸುವಂತೆ ನೋಡುತ್ತಿರುವುವು. ಆಹಾ! ಇವು ತಿರ್ಯಕ್ಕುಗಳಾದರೂ ಎಷ್ಟು ಧನ್ಯಗಳು ! ಅವುಮಾತ್ರವೇ ಅಲ್ಲ! ಅವುಗಳ ಪಕ್ಕದಲ್ಲಿ ಗಂಡುಜಿಂಕೆಗಳೂ ಆಶ್ಚರ್ಯಪರವಶವಾಗಿ ನೋಡುತ್ತಿರುವುವು ನೋಡಿರಿ! ನಾವು ಈ ಕೃಷ್ಣನಂತಹ ಮತ್ತೊಬ್ಬ ಪುರುಷನನ್ನು ಕಣ್ಣೆತ್ತಿನೋಡಿದರೆ ನಮ್ಮ ಪತಿಗಳು, ಸಹಿಸುವರೆ? ಅದೂ ಹೋಗಲಿ! ಸಖಿಯರೆ! ಅದೋ! ಮೇಲೆ ನೋಡಿರಿ! ವಿಮಾನಚಾರಿಗಳಾದ ದೇವತಾಸ್ತ್ರೀಯರು, ತಮ್ಮ ಪತಿಗಳ ತೊಡೆಯಮೇಲೆ ಕುಳಿತಿರುವಾಗಲೂ, ಅವರನ್ನು ಲಕ್ಷ್ಯಮಾಡದೆ, ರೂಪಶೀಲಗಳಲ್ಲಿ ಸಮಸ್ತಸ್ತ್ರೀಯರಿಗೂ ನೇತ್ರೋತ್ಸವದಂತಿರುವ ಆ ಕೃಷ್ಣನ ಸೌಂದರ್ಯಕ್ಕೂ, ಅವನ ವೇಣುಗಾನಕ್ಕೂ ಮೋಹಿತರಾಗಿರುವುದನ್ನು ನೋಡಿದಿರಾ! ಅವರು ಆ ಕೃಷ್ಣನನ್ನು ಒಂದಾವರ್ತಿ ನೋಡಿದಮಾತ್ರಕ್ಕೆ ಧೈರ್ಯಗೆಟ್ಟು, ಹೂಮುಡಿಗಳು ಉದುರಿಬಿದ್ದುದನ್ನೂ, ಸೀರೆಯು ಸಡಿಲಿದುದನ್ನೂ ತಿಳಿಯದೆ, ಮೈಮರೆತಿರುವರು ನೋಡಿರಿ! ಇದೋ! ತಿರ್ಯಗ್ಜಂತುಗಳಾದ ಈ ಗೋವುಗಳು, ಆ ಕೃಷ್ಣನ ಮುಖದಿಂದ ಹೊರಡುತ್ತಿರುವ ವೇಣುಗಾನಾಮೃತವನ್ನು, ಸ್ವಲ್ಪಮಾತ್ರವೂ ಕೆಳಗೆ ಬೀಳದಂತೆ ಕಿವಿಯಲ್ಲಿ ತುಂಬಿಕೊಳ್ಳುವುವೋ ಎಂಬಂತೆ, ಕಿವಿಗಳನ್ನು ನೆಟ್ಟಗೆ ನಿಗುರಿಸಿ ನಿಂತಿರುವುವು ನೋಡಿರಿ! ಈ ಕರುಗಳೂಕೂಡ, ಕೃಷ್ಣನ ವೇಣುಗಾನವು ಕಿವಿಗೆ ಬಿದ್ದೊಡನೆ, ತೊರೆಯಿಕ್ಕುತ್ತಿರುವ ತಮ್ಮ ತಾಯಿಯ ಸ್ತನದಕಡೆಗೂ ದೃಷ್ಟಿಯಿಡದೆ, ಬಾಯಲ್ಲಿ ತುಂಬಿದ ಹಾಲು ಕೆಳಗೆ ಚೆಲ್ಲಿ ಹೋಗುವುದನ್ನೂ ತಿಳಿಯದೆ, ನಟ್ಟ ಕಿವಿಯಿಂದ ಕೇಳುತ್ತ, ದೃಷ್ಟಿಮಾರ್ಗವಾಗಿ ತಮ್ಮ ಮನಸ್ಸಿನೊಳಗೆ ಪ್ರವೇಶಿಸಿದ ಆ ಕೃಷ್ಣನೊಡನೆ, ಆಲಿಂಗನಸುಖವನ್ನನುಭವಿಸುವಂತೆ, ಕಣ್ಣುಗಳಿಂದ ಆನಂದಬಾಷ್ಪವನ್ನು ಸುರಿಸುತ್ತಿರುವುವು ನೋಡಿರಿ! ಅಮ್ಮಾ! ಈ ಆಶ್ಚರ್ಯವನ್ನು ನೋಡಿದೆಯಾ ? ಪ್ರಾಯಕವಾಗಿ ಈ ವನದಲ್ಲಿರುವ ಪಕ್ಷಿಗಳೆಲ್ಲವನ್ನೂ ಮಹಾತಪಸ್ವಿಗಳಾದ ಋಷಿಗಳೆಂದೇ ಹೇಳಬಹುದು! ಏಕೆಂದರೆ, ಇವು ಫಲಪುಷ್ಪಗಳಿಂದಲೂ, ಚಿಗುರುಗಳಿಂದಲೂ ತುಂಬಿದ ಈ ಮರದ ಕೊಂಬೆಗಳಮೇಲೆ ಕುಳಿತಿದ್ದರೂ, ಆ ಭೋಗ್ಯವಸ್ತುಗಳಲ್ಲಿಯೂ ಆಸೆಯಿಲ್ಲದೆ, ವಿರಕ್ತಿಯಿಂದ ಮೌನವ್ರತವನ್ನು ಹಿ

ಡಿದಂತೆ ನಿಶ್ಶಬ್ದವಾಗಿ, ಮನಸ್ಸಿನಲ್ಲಿ ಆ ಶ್ರೀಕೃಷ್ಣನ ರೂಪವನ್ನೂ, ಅವನ ವೇಣುಗಾನವನ್ನೂ, ಅನುಭವಿಸುವುದರಲ್ಲಿಯೇ ಆತುರವುಳ್ಳವುಗಳಾಗಿ, ಕಣ್ಣುಮುಚ್ಚಿ ನಿಂತಿರುವುವು ನೋಡು! ಹೀಗೆ ಮುನಿಚರ್ಯೆಯುಳ್ಳ ಇವುಗಳನ್ನು ಸಾಮಾನ್ಯಪಕ್ಷಿಗಳೆಂದು ಹೇಳಬಹುದೆ? ಈ ಚೇತನಗಳ ಸಂಗತಿಯೂ ಹೋಗಲಿ! ಅಚೇತನಗಳಾದ ಈ ನದಿಗಳನ್ನು ನೋಡಿರಿ! ಈ ನದಿಗಳು ಕೃಷ್ಣನ ವೇಣುಗಾನವನ್ನು ಕೇಳಿ, ಚಿತ್ತಭ್ರಮಣವನ್ನು ಹೊಂದಿದಂತೆ, ಸುಳಿಗಳನ್ನು ಹೊರಡಿಸುತ್ತಿರುವುವು, ಕಾಮತಾಪದಿಂದ ಧೈರ್ಯಗೆಟ್ಟಂತೆ ಶಾಂತವಾಗಿ ಪ್ರವಹಿಸುವುವು ಕೃಷ್ಣನನ್ನಾಲಿಂಗಿಸುವುದಕ್ಕಾಗಿ ಕೈಗಳನ್ನು ನೀಡುವಂತೆ ಅಲೆಗಳನ್ನು ಹೊರಡಿಸುತ್ತಿರುವುವು ನೋಡಿರಿ! ಆ ಕೃಷ್ಣನ ಪಾದಾರವಿಂದಗಳಿಗೆ ಕಮಲಗಳನ್ನು ಕಾಣಿಕೆಯಾಗಿ ಒಪ್ಪಿಸುವಂತೆ ತಮ್ಮಲ್ಲಿರುವ ಕಮಲಕಲ್ಹಾರಾದಿ ಪುಷ್ಪಗಳನ್ನು ತೀರಕ್ಕೆ ತಳ್ಳುತ್ತಿರುವುವು ನೋಡಿದಿರಾ! ಇದೋ! ಲೋಕಾರ್ತಿಹರನಾಗಿ, ಮೇಘಶ್ಯಾಮಲಮೂರ್ತಿಯಾದ ಕೃಷ್ಣನು, ರಾಮಾದಿಗೋಪಾಲಕರೊಡನೆ ಯಮುನಾತೀರದಲ್ಲಿ ವೇಣುಗಾನವನ್ನು ಮಾಡುತ್ತ ಮಂದೆಯನ್ನು ಮೇಯಿಸುತ್ತಿರುವಾಗ, ಆಕಾಶದಲ್ಲಿ ಮೇಘಗಳು ತಮಗೆ ಸಮಾನರೂಪವುಳ್ಳ ಆ ಕೃಷ್ಣನಲ್ಲಿ ಸ್ನೇಹಭಾವದಿಂದ,ಅವನ ಆಯಾಸಪರಿಹಾರಾರ್ಥವಾಗಿ ಕೊಡೆಯಹಾಗೆನಿಂತು,ಅವನನೆತ್ತಿಯ ಮೇಲೆ ಬೀಳುವ ಬಿಸಿಲನ್ನು ಮರೆಸುವುವು. ಪುಷ್ಪವರ್ಷದಂತೆ ಅವನ ಮೈಮೇಲೆ ಸಣ್ಣತುಂತುರುಗಳನ್ನು ದರಿಸುವುವು ನೋಡಿರಿ! ಎಲೆ ಸಖಿ! ನಮಗಿಂತಲೂ ಈ ಕಾಡಿನಲ್ಲಿರುವ ಬೇಡಿತಿಯರೇ ಧನ್ಯರಲ್ಲವೆ? ಪುಣ್ಯಶ್ಲೋಕನಾದ ಆ ಆ ಕೃಷ್ಣನ ಪಾದಾರವಿಂದದಲ್ಲಿ,ಸಾಕ್ಷಾಲ್ಲಕ್ಷ್ಮೀದೇವಿಯ ಸ್ತನಾಗ್ರದಿಂದಂಟಿಬಂದ ಕುಂಕುಮಪರಾಗವು, ಈ ವನಪ್ರದೇಶದ ಗರಿಕೆಯಮೇಲೆ ಅಲ್ಲಲ್ಲಿ ಸಂಬಂಧಿಸಿರುವುದನ್ನು ನೋಡಿ, ಇಲ್ಲಿನ ಬೇಡಿತಿಯರು, ಅದನ್ನೆತ್ತಿ ತಮ್ಮ ಸ್ತನಗಳಿಗೂ, ತಲೆಗೂ, ಲೇಪಿಸಿಕೊಳ್ಳುತ್ತ, ತಮಗೆ ಆ ಕೃಷ್ಣನ ವಿಷಯದಲ್ಲಿರುವ ಕಾಮತಾಪವನ್ನು ತಗ್ಗಿಸಿಕೊಳ್ಳುವರು. ಅಷ್ಟುಮಾತ್ರಭಾಗ್ಯಕ್ಕೂ ನಾವು ಪಾತ್ರರಾಗಲಿಲ್ಲವೆ? ಇದೋ! ಇತ್ತಲಾಗಿ ಶ್ರೀಕೃಷ್ಣನ ಪಾದಾರವಿಂದವನ್ನು ತನ್ನ ತಲೆಯಲ್ಲಿ ಹೊತ್ತು, ತನ್ನಲ್ಲಿರುವ ಹುಲ್ಲು, ನೀರು, ಗಡ್ಡೆ, ಗೆಣ

ಸು ಮುಂತಾದ ಆಹಾರಗಳಿಂದ, ಆ ಕೃಷ್ಣನನ್ನೂ,ಅವನ ಕಡೆಯ ಗೋಪಾಲಕರನ್ನೂ ತೃಪ್ತಿಗೊಳಿಸುತ್ತಿರುವ ಈ ಗೋವರ್ಧನಾದ್ರಿಯು, ಶ್ರೀಹರಿಯನ್ನೂ, ಹರಿಭಕ್ತರನ್ನೂ ಪ್ರೀತಿಯಿಂದಾರಾಧಿಸುವ ಹಂದಾಸರಿಗೆ, ತಾನೇ ಮೇಲುಪಙ್ಕ್ತಿಯೆಂಬುದನ್ನು ತೋರಿಸುತ್ತಿರುವುದು ನೋಡಿರಿ! ಓಸಖಿಯರೆ! ಎಲ್ಲಕ್ಕಿಂತಲೂ ಅತಿಶಯವಾದ ಮತ್ತೊಂದಾಶ್ಚರ್ಯವನ್ನು ನೋಡಿರಿ ! ಹಸುವಿನ ಕಾಲುಕುಣಿಕೆಯ ಹಗ್ಗವನ್ನು ತಲೆಗೆ ಸುತ್ತಿ,ಅವುಗಳ ಕೊರಳಿನ ಹಗ್ಗವನ್ನು ಭುಜದಮೇಲೆ ಹಾಕಿಕೊಂಡು, ರಾಮಕೃಷ್ಣರಿಬ್ಬರೂ ಗೊಲ್ಲಮಕ್ಕಳೊಡನೆ ದನಗಳನ್ನು ಮೇಯಿಸುತ್ತಬರುವಾಗ, ಅವರ ಕೊಳಲಿನ ಧ್ವನಿಯನ್ನು ಕೇಳಿ, ಚೇತನಗಳೆಲ್ಲವೂ ಅಚೇತನಗಳಂತೆ ನಿಶ್ಚಲವಾಗಿ ನಿಲ್ಲುವುವು. ಅಚೇತನಗಳಾದ ವೃಕ್ಷಾದಿಗಳೆಲ್ಲವೂ ಚೇತನಗಳಂತೆ ಪುಲಕಿತವಾಗುವುವು. ಹೀಗೆ ಸ್ಥಾವರಜಂಗಮಗಳ ಸ್ವಭಾವವನ್ನೇ ಮಾರ್ಪಡಿಸತಕ್ಕ ಆ ವೇಣುಗಾನದ ಸೊಗಸನ್ನು ಎಷ್ಟೆಂದು ಹೇಳಬಹುದು" ಎಂದು ಗೋಪಸ್ತ್ರೀಯರು, ಬೃಂದಾವನಚಾರಿಯಾದ ಕೃಷ್ಣನ ಲೀಲೆಗಳನ್ನು ವರ್ಣಿಸುತ್ತ, ತನ್ಮಯತ್ವವನ್ನು ಹೊಂದಿದಂತೆ, ಕೃಷ್ಣಧ್ಯಾನಪರರಾಗಿದ್ದರು. ಇದು ಇಪ್ಪತ್ತೊಂದನೆಯ ಅಧ್ಯಾಯವು.

---

## ಗೋಪೀವಸ್ತ್ರಾಪಹಾರವು.

ರಾಜಾ ! ಈ ವಿನೋದಗಳಿಂದ ಶರದೃತುವು ಕಳೆಯಿತು. ಹೇಮಂತಋತುವು ಆರಂಭಿಸಿತು. ಈ ಋತುವಿನ ಮೊದಲನೆಯ ಭಾಗವಾದ ಮಾರ್ಗಶೀರ್ಷಮಾಸದಲ್ಲಿ ಗೋಕುಲದಲ್ಲಿದ್ದ ಗೋಪಕನ್ಯೆಯರು, ಕಾತ್ಯಾಯನೀವ್ರತವೆಂಬ ಒಂದಾನೊಂದು ವ್ರತವನ್ನಾರಂಭಿಸಿದರು. ಒಂದು ತಿಂಗಳವರೆಗೆ ಶಾಸ್ತ್ರೋಕ್ತವಾದ ಆಹಾರನಿಯಮದಿಂದ ಈ ವ್ರತವನ್ನು ನಡೆಸುತಿದ್ದರು. ಅರುಣೋದಯಕಾಲದಲ್ಲಿ ಯಮುನಾನದಿಗೆ ಹೋಗಿ,ಸ್ನಾನಮಾಡಿ, ಅಲ್ಲಿನ ಮಳಲಿನಲ್ಲಿ ಕಾತ್ಯಾಯನೀಪ್ರತಿಮೆಯನ್ನು ಮಾಡಿಟ್ಟು, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯಾದಿಗಳಿಂದ ಆ ಪ್ರತಿಮೆಯನ್ನು ಪೂಜಿಸುತಿದ್ದರು. ಈ ಪೂಜಾವಿಧಾನವು ಮುಗಿದಮೇಲೆ, ಎಲ್ಲರೂ ಆ ದೇವಿಯಮುಂದೆ ಬದ್ಧಾಂ

ಜಲಿಗಳಾಗಿ ನಿಂತು “ಓ ಕಾತ್ಯಾಯನೀ! ಓ ಮಹಾದೇವೀ! ಓ ಮಹಾಯೋಗಿನೀ! ಹೇ ಅಧೀಶ್ವರೀ! ನಿನಗೆ ನಮಸ್ಕಾರವು ! ನಂದಗೋಪಕುಮಾರನಾದ ಕೃಷ್ಣನೇ ನಮಗೆ ಪತಿಯಾಗುವಂತೆ ಅನುಗ್ರಹಿಸಬೇಕು.” ಎಂದು ಪ್ರತಿದಿನವೂ ಪೂಜೆಯನ್ನುಮಾಡಿ ವರಪ್ರಾರ್ಥನೆಯನ್ನು ಮಾಡುತಿದ್ದರು. ಹೀಗೆ ಗೋಪಕನ್ಯೆಯರೆಲ್ಲರೂ ಕೃಷ್ಣನಲ್ಲಿ ನಟ್ಟ ಮನಸ್ಸುಳ್ಳವರಾಗಿ, ಆತನೇ ತಮಗೆ ಪತಿಯಾಗಬೇಕೆಂಬ ಉದ್ದೇಶದಿಂದ, ಒಂದು ತಿಂಗಳವರೆಗೆ ದೃಢವ್ರತವನ್ನು ಹಿಡಿದು, ಭದ್ರಕಾಳಿಯನ್ನು ಪೂಜಿಸುತಿದ್ದರು. ಹೀಗೆ ವ್ರತವನ್ನು ನಡೆಸುತ್ತಿರುವಾಗ, ಕೊನೆಗೆ ಒಂದಾನೊಂದುದಿವಸದಲ್ಲಿ, ಎಂದಿನಂತೆ ಕೆಲವು ಗೋಪಕನ್ಯೆಯರು, ಉಷಃಕಾಲದಲ್ಲಿಯೇ ಎದ್ದು, ತಮ್ಮ ಸಖಿಯರನ್ನೂ ಎಬ್ಬಿಸಿಕೊಂಡು, ವಿಲಾಸದಿಂದ ಒಬ್ಬರ ಭುಜದಮೇಲೊಬ್ಬರು ಕೈಹಾಕಿಕೊಂಡು, ದಾಳಿಯುದ್ದಕ್ಕೂ ಶ್ರೀಕೃಷ್ಣನ ವಿಷಯವಾದ ಹಾಡುಗಳನ್ನೇ ಹಾಡುತ್ತ, ಸ್ನಾನಮಾಡುವುದಕ್ಕಾಗಿ ಯಮುನಾನದಿಗೆ ಬಂದರು. ಅಲ್ಲಿ ತಾವುತಾವು ಧರಿಸಿದ ಸೀರೆಗಳನ್ನು ಎಂದಿನಂತೆ ಆ ಘಟ್ಟದ ಸೋಪಾನದ ಮೇಲೆ ಸುತ್ತಿಟ್ಟು ನೀರಿನಲ್ಲಿಳಿದರು.

ಅಲ್ಲಿಯೂ ಶ್ರೀಕೃಷ್ಣನ ವಿಷಯವಾದ ಹಾಡುಗಳನ್ನೇ ಹಾಡುತ್ತ, ಸಂತೋಷದಿಂದ ಮೈಮರೆತು ಜಲಕ್ರೀಡೆಯನ್ನಾಡುತಿದ್ದರು ಹೀಗೆ ಗೋಪಕನ್ಯೆಯರೆಲ್ಲರೂ ಸಂತೋಷದಿಂದ ಮೈಮರೆತಿರುವುದನ್ನು ತಿಳಿದು, ಸರ್ವಜ್ಞನಾದ ಕೃಷ್ಣನು, ಅವರ ವ್ರತಕ್ಕೆ ಆಗಲೇ ಫಲಸಿದ್ಧಿಯನ್ನು ತೋರಿಸಬೇಕೆಂಬ ಉದ್ದೇಶದಿಂದ, ತನ್ನ ಸಂಗಡಿಗರಾದ ಕೆಲವು ಗೋಪಾಲಕರೊಡನೆ ಅಲ್ಲಿಗೆ ಬಂದನು. ಅಲ್ಲಿ ಆ ಕನ್ಯೆಯರೆಲ್ಲರೂ ತಮ್ಮತಮ್ಮ ಸೀರೆಗಳನ್ನು ದಡದ ಮೇಲಿಟ್ಟು, ನಿರ್ವಾಣವಾಗಿ ನೀರಿನಲ್ಲಿಳಿದಿರುವುದನ್ನು ಕಂಡನು. ಅವರಿಗೆ ತಿಳಿಯದಂತೆ ಆ ಸೀರೆಗಳೆಲ್ಲವನ್ನೂ ಕೈಗೆತ್ತಿಕೊಂಡು, ಸಮೀಪದಲ್ಲಿದ್ದ ಉನ್ನತವಾದ ಒಂದಾನೊಂದು ಕಡವಿನ ಮರವನ್ನೇರಿ ಕುಳಿತನು. ಇದನ್ನು ನೋಡಿ ಅವನೊಡನೆ ಬಂದಿದ್ದ ಇತರಬಾಲಕರೆಲ್ಲರೂ ಕೈಕಟ್ಟಿ ನಗುವುದಕ್ಕಾರಂಭಿಸಿದರು. ಕೃಷ್ಣನೂ ಮರದಮೇಲೆ ಕುಳಿತಹಾಗೆಯೇ, ಆ ಗೋಪಸ್ತ್ರೀಯರ ಕಿವಿಗೆ ಬೀಳುವಂತೆ ಕೇಕೆಹಾಕಿ ನಗುತಿದ್ದನು. ಈ ಅಟ್ಟ

ಹಾಸಧ್ವನಿಗಳು ಕಿವಿಗೆ ಬಿದ್ದಮೇಲೆ, ಆ ಗೋಪಕನ್ಯೆಯರಿಗೆ ಮೈಮೇಲೆ ಎಚ್ಚರವುಂಟಾಗಿ, ತಿರುಗಿನೋಡುವಾಗ ದಡದಮೇಲೆ ತಾವಿಟ್ಟಿದ್ದಕಡೆಯಲ್ಲಿ ತಮ್ಮ ಸೀರೆಗಳಿರಲಿಲ್ಲ! ಕೃಷ್ಣನು ಮರದ ಕೊಂಬೆಯಮೇಲೆ ಕುಳಿತು ನಗುತ್ತಿರುವನು! ಮರದ ಕೆಳಗೆ ಅವನ ಸ್ನೇಹಿತರು ಕೇಕೆಹಾಕಿ ನಗುತ್ತಿರುವರು! ಈ ಸ್ಥಿತಿಯನ್ನು ನೋಡಿದಾಗ ಅವರಿಗುಂಟಾದ ಭಯವನ್ನೂ, ನಾಚಿಕೆಯನ್ನೂ ಕೇಳಬೇಕೆ" ಎಲ್ಲರೂ ತಲೆಯನ್ನು ತಗ್ಗಿಸಿ, ಕಂಠಪ್ರಮಾಣದವರೆಗೆ ನೀರಿನಲ್ಲಿ ಮುಳುಗಿ, ಆ ಜಲದಲ್ಲಿಯೇ ತಮ್ಮ ಅವಯವಗಳನ್ನು ಮರೆಸಿಕೊಂಡು, ಹಿಂದುಮುಂದು ತೋರದೆ ಕಳವಳಿಸುತಿದ್ದರು. ಆಗ ಕೃಷ್ಣನು ಅವರ ಕಳವಳವನ್ನು ನೋಡಿ ನಗುತ್ತ, ಪರಿಹಾಸವಾಕ್ಯದಿಂದ ಅವರನ್ನು ಕುರಿತು "ಎಲೈ ಬಾಲೆಯರೆ! ಭಯಪಡಬೇಡಿರಿ! ಇದೋ! ನಿಮ್ಮ ಸೀರೆಗಳೆಲ್ಲವೂ ನನ್ನಲ್ಲಿರುವುವು! ನೀವು ಇಲ್ಲಿಗೆ ಬಂದು, ನಿಮ್ಮನಿಮ್ಮ ಸೀರೆಗಳನ್ನು ಧಾರಾಳವಾಗಿ ಕೇಳಿ ತೆಗೆದುಕೊಳ್ಳಬಹುದು! ನಾನು ಪರಿಹಾಸಕ್ಕಾಗಿ ಹೇಳುವೆನೆಂದು ತಿಳಿಯಬೇಡಿರಿ! ನಿಜವಾಗಿ ಹೇಳುವೆನು! ಅಯ್ಯೋ ಪಾಪ! ನೀವು ಕಳೆದ ಒಂದು ತಿಂಗಳಿಂದಲೂ ವ್ರತವನ್ನು ಮಾಡಿ ಎಷ್ಟೋ ಆಯಾಸಪಟ್ಟಿರುವಿರಿ! ನಿಮ್ಮ ಮೈಯೆಲ್ಲವೂ ಬಹಳ ಬಡವಾಗಿರುವುದು! ಈ ಸ್ಥಿತಿಯಲ್ಲಿ ನಿಮ್ಮೊಡನೆ ನನಗೆ ಪರಿಹಾಸವೆ? ಅಷ್ಟೇಕೆ? ಇದುವರೆಗೆ ನಾನು ಎಂದಿಗೂ ಸುಳ್ಳಾಡಿದವನಲ್ಲ! ಈಗ ನೀವು ಒಬ್ಬೊಬ್ಬರಾಗಿಯಾಗಲಿ, ಎಲ್ಲರೂ ಒಟ್ಟಾಗಿ ಸೇರಿಯಾಗಲಿ, ಇಲ್ಲಿಗೆ ಬಂದು ನಿಮ್ಮನಿಮ್ಮ ವಸ್ತ್ರಗಳನ್ನು ತೆಗೆದುಕೊಳ್ಳಬಹುದು," ಎಂದನು. ಎಷ್ಟು ಹೇಳಿದರೇನು? ಆ ಗೋಪಕನ್ಯೆಯರು ಇನ್ನೂ ಮದುವೆಯಿಲ್ಲದ ಸಣ್ಣ ಹುಡುಗಿಯರಾಗಿದ್ದರೂ, ಗಂಡಸರಮುಂದೆ ನಿರ್ವಾಣವಾಗಿ ಬಂದು ನಿಲ್ಲುವುದಕ್ಕೆ ಮನಸ್ಸೊಪ್ಪುವುದೆ? ಅವರೆಲ್ಲರೂ ನಾಚಿಕೆಯಿಂದ ಬಗ್ಗಿದ ತಲೆಯನ್ನೆತ್ತದೆ ಹಾಗೆಯೇ ನೀರಿನಲ್ಲಿ ನಿಂತಿದ್ದರು. ಅವರಿಗೆ ಕೃಷ್ಣನ ಪರಿಹಾಸೋಕ್ತಿಯನ್ನು ಕೇಳಿ ಮನಸ್ಸಿನಲ್ಲಿ ಕೋಪವು ಅಂಕುರಿಸುತಿದ್ದರೂ, ಅವನಲ್ಲಿದ್ದ ಸಹಜವಾದ ಪ್ರೇಮವು, ಅವರ ಕೋಪವನ್ನು ಹಾಗೆಯೇ ಅಡಗಿಸಿಬಿಡುತಿತ್ತು.



೧೯೦೧. ಗೋಪೀವಸ್ತ್ರಾಪಹರಣವು.

ಅದರಿಂದ ಬಾಯೆತ್ತದೆ, ತಮ್ಮೊಳಗೆ ತಾವು ಒಬ್ಬರಿಗೊಬ್ಬರು ಮುಖವನ್ನು ನೋಡುತ್ತ,ನಾಚಿಕೆಯಿಂದ ತಲೆಯನ್ನು ತಗ್ಗಿಸಿ ಸುಮ್ಮನೆ ನಿಂತಿದ್ದರು. ಆ ಹಿಮಗಾಲದಲ್ಲಿ, ಅದರಲ್ಲಿಯೂ ಉಷಃಕಾಲದಲ್ಲಿ, ಎಷ್ಟು ಹೊತ್ತಿನವರೆಗೆ ನೀರಿನಲ್ಲಿರುವುದಕ್ಕಾದೀತು! ಚಳಿಯಿಂದ ಅವರ ಮೈಯಲ್ಲಿ ನಡುಕವು ತೋರಿತು! ಆಗಿನ ಚಳಿಗೆ ತಡೆಯಲಾರದೆ, ಮೆಲ್ಲಗೆ ಮುಖವನ್ನೆತ್ತಿ ಕೃಷ್ಣನೊಡನೆ ಮಾತಾಡುವುದಕ್ಕೆ ತೊಡಗಿದರು. ಅವರಲ್ಲಿ ಒಬ್ಬಳು ನಯವಾಕ್ಯದಿಂದ ಕೃಷ್ಣನನ್ನು ಕುರಿತು “ಕೃಷ್ಣಾ! ಬೇಡವಪ್ಪ! ಇಂತಹ ಕಾರ್ಯವನ್ನು ಮಾಡಬಾರದು! ನೀನು ನಮ್ಮ ಪ್ರಭುವಾದ ನಂದಗೋಪನಿಗೆ ಮುದ್ದುಮಗನಾದುದರಿಂದ, ಅವನಿಗೆ ನಿನ್ನಲ್ಲಿ ವಿಶೇಷವಾದ ಪ್ರೇಮವುಂಟೆಂಬುದನ್ನು ನಾವೂ ಬಲ್ಲೆವು. ಆದುದರಿಂದ ನಾವೊಬ್ಬರೂ ನಿನಗೆ ಇದಿರುಮಾತಾಡುವುದಕ್ಕಿಲ್ಲ! ನಿನ್ನಲ್ಲಿರುವ ಪ್ರೀತಿಯಿಂದ ನಂದಗೋಪನೂ ನಿನ್ನನ್ನು ಶಿಕ್ಷಿಸಲಾರನು! ಇವೆಲ್ಲವನ್ನೂ ತಿಳಿದೇ ನೀನು ಇಷ್ಟು ಸ್ವಾತಂತ್ರ್ಯವನ್ನು ವಹಿಸಿದಹಾಗಿದೆ! ಕೃಷ್ಣಾ! ಹೀಗೆ ಮಾಡಬಾರದು! ಇದೋ! ಚಳಿಯಿಂದ ನಡುಗುತ್ತಿರುವೆವು! ನಮ್ಮ ಸೀರೆಗಳನ್ನು ಕೊಟ್ಟುಬಿಡು!” ಎಂದಳು. ಮತ್ತೊಬ್ಬಳು ದೈನ್ಯದಿಂದ “ಕೃಷ್ಣಾ! ಓ ಶ್ಯಾಮಸುಂದರಾ! ನಾವೆಲ್ಲರೂ ನಿನಗೆ ದಾಸಿಯರು! ನೀನು ಹೇಳಿದ ಕಾರ್ಯವನ್ನು ಮಾಡುವೆವು. ನೀನು ಧರ್ಮಜ್ಞನಲ್ಲವೆ? ಸ್ತ್ರೀಯರು ನಿರ್ವಾಣವಾಗಿರುವಾಗ ನೋಡಬಹುದೆ? ನಮ್ಮ ವಸ್ತ್ರಗಳನ್ನು ಕೊಟ್ಟುಬಿಡು!” ಎಂದಳು. ಮತ್ತೊಬ್ಬಳು ಕೋಪನಟನೆಯಿಂದ ಕೃಷ್ಣನನ್ನು ಹೆದರಿಸುತ್ತ “ಕೃಷ್ಣಾ! ಏನಿದು! ಈ ಕಾರ್ಯವು ನಿನಗೆ ಸರಿಯಲ್ಲ! ನಮ್ಮ ಬಟ್ಟೆಗಳನ್ನು ಕೊಟ್ಟುಬಿಡು! ಇಲ್ಲದಿದ್ದರೆ ನಾವೆಲ್ಲರೂ ನಂದಗೋಪನಿಗೆ ಹೇಳಿ ನಿನಗೆ ತಕ್ಕ ಶಿಕ್ಷೆಯನ್ನು ಮಾಡಿಸುವೆವು” ಎಂದಳು. ಇದನ್ನು ಕೇಳಿ ಕೃಷ್ಣನು ನಗುತ್ತ, ಅವರನ್ನು ಕುರಿತು “ಓ ಸ್ತ್ರೀಯರೆ! ಈ ನಿಮ್ಮ ಲಲ್ಲೆ ಮಾತುಗಳಿಗೆ ನಾನು ಮರುಳಾಗುವವನಲ್ಲ! ನಿಮ್ಮ ಬೆದರಿಕೆಗೆ ನಾನು ಹೆದರುವವನೂ ಅಲ್ಲ! ನನಗೆ ದಾಸಭೂತರಾಗಿ, ನಾನು ಹೇಳಿದ ಮಾತನ್ನು ನಡೆಸತಕ್ಕವರಿಗೆ ನಾನೂ ದಾಸನಾಗಿರುವೆನು. ಏನು! ನೀವು ನಿಮ್ಮ 'ರಾಜ

ಲ್ಲಿ ಹೇಳಿ ನನ್ನನ್ನು ಶಿಕ್ಷಿಸುವಿರಾ! ಈ ಗುಟ್ಟುಬೆದರಿಕೆಯನ್ನು ನಾನು ಬಲ್ಲೆನು! ಈಗ ನೀರಿನಿಂದ ಮೇಲೆದ್ದುಬರಲಾರದೆ ನಾಚಿಕೆಪಡುತ್ತಿರುವ ನೀವು, ರಾಜನಬಳಿಗೆ ಹೋಗುವುದು ನಿಜವೆ? ಅದೂ ಹೋಗಲಿ! ನೀವು ನನಗೆ ದಾಸಿಯರಾಗಿ ನಡೆದುಕೊಳ್ಳುವೆವೆಂದು ಹೇಳಿದಿರಲ್ಲವೆ? ಅದು ನಿಜವಾದರೆ, ಈಗಲೇ ನಾನು ಹೇಳಿದ ಮಾತನ್ನು ನಡೆಸಿರಿ! ಮೇಲೆ ಬಂದು ನಿಮ್ಮ ನಿಮ್ಮ ವಸ್ತ್ರಗಳನ್ನು ತೆಗೆದುಕೊಳ್ಳಿರಿ!"ಎಂದನು,ಇದರಮೇಲೆ ಆ ಕನ್ಯೆಯರಿಗೆ, ಮುಂದೆ ಬಾಯೆತ್ತುವುದಕ್ಕೇ ಅವಕಾಶವಿಲ್ಲದೆ ಹೋಯಿತು. ಬೇರೆ ವಿಧಿಯಿಲ್ಲದೆ,ಅವರೆಲ್ಲರೂ ಮೇಲೆಬಂದೇ ತಮ್ಮ ಬಟ್ಟೆಗಳನ್ನು ತೆಗೆದುಕೊಳ್ಳಬೇಕಾಯಿತು! ಅವರೊಬ್ಬೊಬ್ಬರೂ, ಸ್ತ್ರೀಜಾತಿಗೆ ಕೇವಲ ಲಜ್ಜಾಸ್ಪದವಾದ ತಮ್ಮ ಸ್ತನಜಘನಗಳೆರಡನ್ನು ಮಾತ್ರ ಒಂದೊಂದುಕೈಯಿಂದ ಮರೆಸಿಕೊಂಡು,ಮೈಬಗ್ಗಿದಹಾಗೆಯೇ,ಮೇಲೆ ಬಂದು, ಮರದಕೆಳಗೆ ನಿಂತು "ಕೃಷ್ಣಾ! ಇನ್ನಾದರೂ ನಮ್ಮ ಸೀರೆಗಳನ್ನು ಕೊಡು" ಎಂದರು. ಬಾಲ್ಯಯೌವನಗಳೆರಡಕ್ಕೂ ಮಧ್ಯವಯಸ್ಸಿನಲ್ಲಿರುವ ಆ ಸಣ್ಣಹುಡುಗಿಯರು, ನಿಷ್ಕಪಟಭಾವದಿಂದ, ತಾನು ಹೇಳಿದಂತೆ ನಡೆಸಿದುದನ್ನು ನೋಡಿ, ಕೃಷ್ಣನಿಗೆ ಮನಸ್ಸಿನಲ್ಲಿ ಕನಿಕರವು ಹುಟ್ಟಿತು. ಹಾಗಿದ್ದರೂ ಅದನ್ನು ಹೊರಕ್ಕೆ ಕಾಣಿಸದೆ, ಅವರನ್ನು ಇನ್ನೂ ಒಂದೆರಡುವಿಧದಲ್ಲಿ ಪರೀಕ್ಷಿಸಬೇಕೆಂಬ ಉದ್ದೇಶದಿಂದ, ಅರರಿಗೆ ಆಸೆಯನ್ನು ತೋರಿಸುವುದಕ್ಕಾಗಿ,ತಾನು ಬಚ್ಚಿಟ್ಟಿದ್ದ,ಬಟ್ಟೆಗಳೆಲ್ಲವನ್ನೂ, ಅವರಿಗ್ಯಚೆನ್ನಾಗಿ ಕಾಣುವಂತೆ, ಆ ಮರದ ಕೊಂಬೆಗಳಲ್ಲಿ ಬೇರೆಬೇರೆಯಾಗಿ ಹರಡಿಟ್ಟು, ಮಂದಹಾಸಪೂರ್ವಕವಾಗಿ ಹೀಗೆಂದು ಹೇಳುವನು. "ಓ ಕನ್ಯೆಯರೆ! ಇದೋ! ನಿಮ್ಮ ವಸ್ತ್ರಗಳೆಲ್ಲವೂ ಇಲ್ಲಿರುವುವು ನೋಡಿರಿ! ಇವುಗಳನ್ನು ನಿಮಗೆ ನಾನು ಹಿಂತಿರುಗಿ ಕೊಡುವುದರಲ್ಲಿ ಏನೂ ಅಡ್ಡಿಯಿಲ್ಲ! ಆದರೆ ಈಗ ನೀವು ಮಾಡಿದುದು ಬಹಳ ತಪ್ಪು! ವ್ರತನಿಷ್ಠರಾದ ನೀವು ಹೀಗೆ ನಿರ್ವಾಣವಾಗಿ ನೀರಿನಲ್ಲಿಳಿಯಬಹುದೆ? ಇದರಿಂದ ನೀವು ನಿಮ್ಮ ದೇವಿಯನ್ನೊಲಿಸುವುದಕ್ಕೆ ಬದಲು, ಅವಳಲ್ಲಿ ದೊಡ್ಡ ಅಪರಾಧವನ್ನು ಮಾಡಿದಂತಾಗಲಿಲ್ಲವೆ? ಈಗಲೂ ನೀವೆಲ್ಲರೂ ಆ ಅಪರಾಧಕ್ಷಾಪಣಕ್ಕಾಗಿ ನಿಮ್ಮನಿಮ್ಮ ತಲೆಯಮೇಲೆ ಕೈಜೋಡಿಸಿ,ನನಗೆ ಕೈಮುಗಿಸು

ಪ್ರಾರ್ಥಿಸಿರಿ! ಹಾಗಿಲ್ಲದೆ ನಿಮ್ಮ ಪಾಪವು ನೀಗಲಾರದು. ಹಾಗೆ ಮಾಡಿ ದಮೇಲೆ ನಿಮ್ಮ ಸೀರೆಗಳನ್ನು ಕೊಟ್ಟುಬಿಡುವೆನು" ಎಂದನು. ಕೃಷ್ಣನು ಹೇಳಿದ ಈ ಮಾತೂ ಧರ್ಮಯುಕ್ತವಾಗಿ ತೋರಿದುದರಿಂದ, ಆ ಕನ್ಯೆಯ ರೊಬ್ಬೊಬ್ಬರೂ, ಒಂದು ಕೈಯಿಂದಮಾತ್ರ ತಮ್ಮ ನಾಚಿಕೆಯನ್ನು ಮರೆ ಸಿಕೊಂಡು, ಎದೆಯಮೇಲಿದ್ದ ಮತ್ತೊಂದು ಕೈಯನ್ನು ಮೇಲಕ್ಕೆತ್ತಿ, ಆ ಏಕಹಸ್ತದಿಂದಲೇ ನಮಸ್ಕರಿಸಿದರು. ಅದನ್ನು ನೋಡಿ ಕೃಷ್ಣನು ಕೋಪ ವನ್ನು ನಟಿಸುತ್ತ "ಛೀ! ಛೀ! ಇದೇನಿದು! ಒಂದು ಕೈಯಿಂದ ನಮ ಸ್ಕಾರವೆ! ಓ ಕನ್ಯೆಯರೆ! ಒಂದು ಕೈಯಿಂದ ನಮಸ್ಕಾರಮಾಡಿದವ ರಿಗೆ, ಆ ಕೈಯನ್ನು ಕತ್ತರಿಸಿ ಹಾಕುವುದೇ ಉಚಿತದಂಡವೆಂದು ಶಾಸ್ತ್ರಜ್ಞ ರು ವಿಧಿಸಿರುವರು. ಆದುದರಿಂದ ಮನುಷ್ಯನು ಯಾವಾಗಲೂ ಎರ ಡು ಕೈಗಳಿಂದಲೇ ನಮಸ್ಕರಿಸಬೇಕೆಂಬ ನಿಯಮವನ್ನು ನೀವು ಕೇಳಿಲ್ಲವೇನು? ಈಗ ನೀವು ಅಪರಾಧಕ್ಷಾಪಣಕ್ಕಾಗಿ ಮಾಡಿದ ಕಾರ್ಯವು ನಿಮಗೆ ಮತ್ತಷ್ಟು ಪಾಪಹೇತುವಾಯಿತಲ್ಲಾ! ಎರಡು ಕೈಗ ಳನ್ನೂ ತಲೆಯಮೇಲೆ ಜೋಡಿಸಿಟ್ಟು ನಮಸ್ಕರಿಸಿದವರಿಗಲ್ಲದೆ ನಾನು ಪ್ರಸ ನ್ನನಾಗಲಾರೆನು." ಎಂದನು. ಗೋಪಕನ್ಯೆಯರಿಗೆ ಆ ಮಾತೂ ಯುಕ್ತ ವಾಗಿಯೇ ತೋರಿತು! ಹೇಗಾದರೂ ತಮ್ಮ ವಸ್ತ್ರಗಳು ತಮಗೆ ಲಭಿಸಿ, ತಾವು ಕಷ್ಟಪಟ್ಟು ನಡೆಸಿದ ವ್ರತವು ಸಾರ್ಥಕವಾಗಬೇಕೆಂದು ಬಯಸು ತಿದ್ದ ಆ ಕುಮಾರಿಯರು, ಸಮಸ್ತವ್ರತಗಳಿಗೂ ಫಲಭೂತನಾಗಿಯೂ,ಸಮ ಸ್ತಪಾಪಗಳಿಗೂ ಪ್ರಾಯಶ್ಚಿತ್ತರೂಪನಾಗಿಯೂ ಇರುವ ಆ ಕೃಷ್ಣನ ಮಾತಿನಂತೆ, ನಿಶ್ಶೇಷವಾಗಿ ಲಜ್ಜೆಯನ್ನು ಬಿಟ್ಟು, ಎರಡು ಕೈಗಳನ್ನೂ ಮೇ ಲಕ್ಕೆತ್ತಿ, ತಲೆಯಮೇಲಿಟ್ಟು, ಅಂಜಲಿಬಂಧಪೂರ್ವಕವಾಗಿ ನಮಸ್ಕರಿಸಿದರು. ಆಗ ಕೃಷ್ಣನಿಗೆ ಅವರ ನಿಷ್ಕಪಟಭಾವವನ್ನು ನೋಡಿ ಸಂತೋಷವಾಯಿತು. ಆಗಲೂ ಅವರು ಲಜ್ಜೆಯಿಂದ ನೆಟ್ಟಗೆ ನಿಲ್ಲಲಾರದೆ, ಮೈಬಗ್ಗಿ ನಿಂತಿರುವು ದನ್ನು ನೋಡಿ, ಅವರಲ್ಲಿ ಕನಿಕರಗೊಂಡು, ಅವರವರ ವಸ್ತ್ರಗಳನ್ನು ಹಿಂತಿ ರುಗಿ ಕೊಟ್ಟುಬಿಟ್ಟನು. ರಾಜೇಂದ್ರಾ! ಹೀಗೆ ಕೃಷ್ಣನು, ಆ ಅರಿಯದ ಹುಡುಗಿಯರ ಸೀರೆಗಳೆಲ್ಲವನ್ನೂ ಅಪಹರಿಸಿದನು!ಅವರನ್ನು ಹಾಸ್ಯಮಾಡಿ ಹೆ

ಧರಿಸಿದ್ದನು! ನಾಚಿಕೆಯನ್ನು ಬಿಡಿಸಿದನು! ಈ ನಾನಾವಿಧಕುಚೇಷ್ಟೆಗಳಿಂದ ಅವರನ್ನು ಬೊಂಬೆಯಹಾಗೆ ಆಡಿಸಿದರೂ, ಆ ಕನ್ಯೆಯರಿಗೆ ಆ ಕೃಷ್ಣನಲ್ಲಿ ಪ್ರೇಮವಿಶೇಷವೇ ಉಕ್ಕುತಿತ್ತೇ ಹೊರತು, ಸ್ವಲ್ಪಮಾತ್ರವೂ ಕೋಪವುಂಟಾಗಲಿಲ್ಲ! ಎಲ್ಲರೂ ತಮ್ಮತಮ್ಮ ವಸ್ತ್ರಗಳನ್ನುಟ್ಟುಕೊಂಡು, ಆಗಲೂ ಮೋಹಪಾರವಶ್ಯದಿಂದ ಆ ಕೃಷ್ಣನನ್ನು ಬಿಟ್ಟುಹೋಗಲಾರದೆ, ಲಜ್ಜಾಗರ್ಭಿತವಾದ ದೃಷ್ಟಿಯಿಂದ ಆಗಾಗ ಆ ಕೃಷ್ಣನನ್ನೇ ನೋಡುತ್ತ ಅಲ್ಲಿಯೇ ನಿಂತಿದ್ದರು. ಆಗ ಕೃಷ್ಣನು, ಅವರೆಲ್ಲರೂ ತನ್ನ ಪಾದಸ್ಪರ್ಶಕ್ಕಾಗಿಯೇ ಅಷ್ಟೊಂದು ಕಷ್ಟಪಟ್ಟವರೆಂಬುದನ್ನು ತಿಳಿದು, ಅವರನ್ನು ಕುರಿತು ಹೀಗೆಂದು ಹೇಳುವನು. "ಓ ಸಾಧ್ವಿಯರೆ! ನೀವು ನನ್ನನ್ನೇ ವಿವಾಹವಾಗಿ, ನನ್ನ ಪಾದಸೇವೆಯನ್ನು ಮಾಡಬೇಕೆಂಬ ಉದ್ದೇಶದಿಂದಲೇ ಈ ವ್ರತವನ್ನು ನಡೆಸಿದಿರೆಂಬ ಸಂಗತಿಯನ್ನು ನಾನು ಬಲ್ಲೆನು. ನಾನೂ ಅದಕ್ಕೆ ಸಮ್ಮತಿಸಿರುವೆನು. ನಿಮ್ಮ ಸಂಕಲ್ಪವು ಸತ್ಯವಾಗಬೇಕಾದುದೇ ನ್ಯಾಯವು. ಆದರೆ ಒಂದು ವಿಚಾರವನ್ನು ಮಾತ್ರ ತಿಳಿಸುವೆನು. *ಕಾಮವೆಂಬುದು ಕೇವಲವಿಷಯೋಪಭೋಗದಲ್ಲಿ ಪರ್ಯವಸಾನಹೊಂದತಕ್ಕುದಾದರೂ, ನನ್ನ ವಿಷಯವಾದ ಕಾಮವು ಹಾಗಲ್ಲ! ನನ್ನಲ್ಲಿ ನಟ್ಟ ಮನಸ್ಸುಳ್ಳವರ ಕಾಮವು, ಕಾಮನಿರೋಧಕವಾದ ಮುಕ್ತಿಯನ್ನೇ ಕೈಗೂಡಿಸುವುದೇಹೊರತು, ಕೇವಲ ಕಾಮಕ್ಕಾಗಿ (ವಿಷಯೋಪಭೋಗಕ್ಕಾಗಿ) ಏರ್ಪಡಲಾರದು! ಕಾಮವೆಂಬುದು ಸಂಸಾರಕ್ಕೆ ಬೀಜವೆಂಬುದೇನೋ ವಾಸ್ತವವೇ! ಆದರೆ ಬೆಂಕಿಯಲ್ಲಿ ಹುರಿದ, ಅಥವಾ ಬೇಯಿಸಿದ ಬೀಜಕ್ಕೆ, ತಿರುಗಿ ಮೊಳೆಹೊರಡಿಸುವ ಶಕ್ತಿಯು ತಪ್ಪಿಹೋಗುವಂತೆ, ನನ್ನ ವಿಷಯವಾದ ಚಿಂತೆಯು, ಕರ್ಮವಾಸನಾರೂಪವಾದ ಅದರ ವೀರ್ಯವನ್ನು ಮುರಿದು ಬಿಡುವುದೆಂದು ತಿಳಿಯಿರಿ! ಓ ಬಾಲೆಯರೆ! ನೀವು ಯಾವ ಉದ್ದೇಶದಿಂದ ಈ ದೇವೀವ್ರತವನ್ನು ನಡೆಸಿದಿರೋ, ಅದರ ಫಲವು ಸಿದ್ಧಿಸಲಿ! ಮುಂದೆ ಒಂದಾನೊಂದು ಶರತ್ಕಾಲದ ರಾತ್ರಿಗಳನ್ನು ನೀವು ನನ್ನ ಸಹವಾಸಸೌಖ್ಯದಿಂದ ಕಳೆದು, ಪೂರ್ಣಮನೋರಥರಾಗಬಹುದು" ಎಂದನು. ಅದನ್ನುಕೇಳಿ ಆ ಗೋಪಕನ್ಯೆಯರು, ತಮ್ಮ ಉದ್ದೇಶವು ಕೈಗೂಡಿದಂತೆಯೇ ತಿಳಿ

ದು, ಆ ಕೃಷ್ಣನ ಪಾದಕಮಲಗಳನ್ನೇ ಅನವರತವೂ ಧ್ಯಾನಿಸುತ್ತ, ಗೋಕುಲಕ್ಕೆ ಹಿಂತಿರುಗಿ ಬಂದು ಸೇರಿದರು.

ಓ ರಾಜೇಂದ್ರಾ! ಹೀಗೆ ಕೆಲವು ತಿಂಗಳು ಕಳೆದಮೇಲೆ, ಮುಂದೆ ಮತ್ತೊಂದು ಗ್ರೀಷ್ಮಕಾಲದಲ್ಲಿ, ಕೃಷ್ಣನು ರಾಮಾದಿಗಳೊಡನೆ ಕಲೆತು, ಗೋವುಗಳನ್ನು ಮೇಯಿಸುತ್ತ, ಬೃಂದಾವನದಿಂದ ಬಹುದೂರಕ್ಕೆ ಬಂದುಬಿಟ್ಟನು. ಬಿಸಲಿನ ವೇಗವು ಹೆಚ್ಚುತ್ತಬಂದಿತು. ಆಗ ಆ ವನದಲ್ಲಿ ಬಿಸಲಿನಿಂದ ಬಳಲಿಬಂದವರಿಗೆ ಕೊಡೆಹಿಡಿದಂತೆ ನಿಂತಿರುವ ಕೆಲವು ವೃಕ್ಷಗಳನ್ನು ನೋಡಿ ಕೃಷ್ಣನು, ತನ್ನ ಸಂಗಡಿಗರಲ್ಲಿ ಒಬ್ಬೊಬ್ಬರ ಹೆಸರನ್ನೂ ಹಿಡಿದು ಕರೆಯುತ್ತ ಹೀಗೆಂದು ಹೇಳುವನು. "ಓ ಸ್ತೋಕಕೃಷ್ಣಾ! ಅಂಶಾ! ಓ ಶ್ರೀರಾಮಾ! ಸುಬಲಾ! ಅರ್ಜುನಾ! ವಿಶಾಲಾ! ವೃಷಭಾ! ತೇಜಸ್ವೀ! ದೇವಪ್ರಸ್ಥಾ! ವರೂಥಪಾ! ಈ ವೃಕ್ಷಗಳನ್ನು ನೋಡಿದಿರಾ! ಪರರಿಗಾಗಿಯೇ ತಮ್ಮ ಜೀವನವನ್ನುಪಯೋಗಿಸುತ್ತಿರುವ ಈ ವೃಕ್ಷಗಳ ಜನ್ಮವಲ್ಲವೇ ಧನ್ಯವು! ಇವು, ಮಂಜು, ಮಳೆ, ಗಾಳಿ, ಮುಂತಾದ ಕಷ್ಟಗಳಿಗೆ ತಾವು ತಲೆಯೊಡ್ಡಿನಿಂತು, ತಮ್ಮಲ್ಲಿ ಬಂದು ಮರೆಹೊಕ್ಕವರಿಗೆ ಆ ಬಾಧೆಯನ್ನು ತಪ್ಪಿಸುವುವು. ಪರೋಪಕಾರಾರ್ಥವಾದ ಇವುಗಳ ಜೀವನವೇ ಸುಜೀವನವು, ಸಾಧುಗಳಮನೆಗೆ ಹೋದ ಅತಿಥಿಗಳಂತೆ, ಇವುಗಳಬಳಿಗೆ ಬಂದವರು, ತಕ್ಕ ಫಲವನ್ನು ಹೊಂದಿಬರುವರೇಹೊರತು ವಿಫಲರಾಗಿ ಬರಲಾರರು. ಈ ವೃಕ್ಷಗಳು, ತಮ್ಮಲ್ಲಿರುವ, ಎಲೆ, ಚಿಗುರು, ಹೂ, ಹಣ್ಣು, ನೆರಳು, ಬೇರು, ನಾರು, ತೊಗಟೆ, ಕೊಂಬೆ, ಸುವಾಸನೆ, ಅಂಟು, ಇದ್ದಲು, ಮೊಳಕೆ, ಮೊದಲಾದ ಒಂದೊಂದು ವಸ್ತುಗಳಿಂದಲೂ, ಇತರರಿಗೆ ಪ್ರಯೋಜನವನ್ನುಂಟುಮಾಡುವುವು. ಇವುಗಳಂತೆಯೇ ಈ ಲೋಕದಲ್ಲಿ ಸಮಸ್ತಪ್ರಾಣಿಗಳೂ, ತಮ್ಮ ಪ್ರಾಣ, ಧನ, ಬುದ್ಧಿ, ಮನಸ್ಸು, ವಾಕ್ಕು ಮುಂತಾದ ಸಮಸ್ತಸಾಧನಗಳಿಂದಲೂ ಇತರರಿಗೆ ಉಪಕಾರವನ್ನು ಮಾಡುತ್ತಿರಬೇಕು! ಹೀಗಿದ್ದವರ ಜನ್ಮವೇ ಸಫಲವೆನಿಸುವುದು!" ಎಂದು ಹೇಳಿ, ಫಲಪುಷ್ಪಪಲ್ಲವಾದಿಗಳಿಂದ ಮನೋಹರಗಳಾದ ಆ ಮರಗಳ ತೋಪಿನ ಮಾರ್ಗವಾಗಿಯೇ ಅವರೊಡನೆ ದಾರಿನಡೆದು, ಯಮುನಾತೀರದಲ್ಲಿ ಒಂದಾನೊಂದು ಪ್ರದೇಶ

ಕ್ಕೆ ಬಂದು ಸೇರಿದನು. ಅಲ್ಲಿ ಹಸುಗಳಿಗೆ ನೀರನ್ನು ಕುಡಿಸಿ, ತಾನೂ ತನ್ನ ಸಂಗಡಿಗರೊಡನೆ ಜಲಪಾನವನ್ನು ಮಾಡಿ, ಆ ತೀರದ ಮಳಲುಭೂಮಿಯಲ್ಲಿ ಕುಳಿತು, ಅದಕ್ಕೆ ಸಮೀಪವಾದ ಉಪವನದಲ್ಲಿ ಹಸುಗಳನ್ನು ಮೇಯಿಸುತಿದ್ದನು. ಇಷ್ಟರಲ್ಲಿ ಕೆಲವು ಗೋಪಬಾಲಕರು ಹಸಿವಿನಿಂದ ಪೀಡಿತರಾಗಿ ರಾಮಕೃಷ್ಣರು ಕುಳಿತಿದ್ದ ಸ್ಥಳಕ್ಕೆ ಬಂದರು. ಇದು ಇಪ್ಪತ್ತೆರಡನೆಯ ಅಧ್ಯಾಯವು.

---

ಕೃಷ್ಣನು ಬ್ರಾಹ್ಮಣಪತ್ನಿಯರನ್ನು ಅನುಗ್ರಹಿಸಿದುದು.

ಆ ಗೋಪಾಲಕರು, ರಾಮಕೃಷ್ಣರಮುಂದೆ ನಿಂತು "ಮಹಾವೀರ್ಯವುಳ್ಳ ಓ ರಾಮಾ! ಓ ಕೃಷ್ಣಾ! ನಮಗೆ ಬಹಳ ಹಸಿವಾಗುತ್ತಿರುವುದು ನೀವು ಅದಕ್ಕೇನಾದರೂ ಉಪಾಯವನ್ನು ಯೋಚಿಸಬೇಕು!" ಎಂದರು, ಇದನ್ನು ಕೇಳಿ ಲೋಕೇಶ್ವರನಾದ ಕೃಷ್ಣನು, ಆ ವನದ ಮತ್ತೊಂದು ಕಡೆಯಲ್ಲಿ ವಾಸಮಾಡುತಿದ್ದ ತನ್ನ ಪರಮಭಕ್ತರಾದ ಕೆಲವು ಬ್ರಾಹ್ಮಣಪತ್ನಿಯರನ್ನು ಇದೇ ನೆವದಿಂದ ಅನುಗ್ರಹಿಸಬೇಕೆಂದು ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡು,ಮುಂದಿದ್ದ ಗೋಪಾಲಕರನ್ನು ಕುರಿತು "ಓ ಮಿತ್ರರೆ! ಅದೋ! ಅತ್ತಲಾಗಿ ಬಹುಶಾಸ್ತ್ರಜ್ಞರಾದ ಕೆಲವು ಬ್ರಾಹ್ಮಣರು, ಸ್ವರ್ಗಕಾಮರಾಗಿ,ದೇವತೆಗಳ ಪ್ರೀತ್ಯರ್ಥವಾದ ಆಂಗಿರಸವೆಂಬ ಒಂದಾನೊಂದು ಯಾಗವನ್ನಾರಂಭಿಸಿರುವರು.ನೀವು ಅಲ್ಲಿಗೆ ಹೋಗಿ ಪೂಜ್ಯನಾದ ನನ್ನಣ್ಣನ ಮತ್ತು ನನ್ನ ಹೆಸರನ್ನು ತಿಳಿಸಿದರೆ, ಅವರು ಅವಶ್ಯವಾಗಿ ನಿಮ್ಮನ್ನು ಆದರಿಸುವರು. ನಮಗೂ ಒಂದಿಷ್ಟು ಅನ್ನವನ್ನು ಕೇಳಿ ತನ್ನಿರಿ" ಎಂದನು. ಈ ಭಗವದಾಜ್ಞೆಯಂತೆ ಆ ಗೊಲ್ಲರೆಲ್ಲರೂ, ಯಜ್ಞದೀಕ್ಷಿತರಾಗಿದ್ದ ಆ ಆ ಬ್ರಾಹ್ಮಣರಿದ್ದ ಕಡೆಗೆ ಬಂದು,ಅವರಮುಂದೆ ಅಡ್ಡಬಿದ್ದು, ಕೈಜೋಡಿಸಿ ನಿಂತು "ಓ ಬ್ರಾಹ್ಮಣೋತ್ತಮರೆ! ಲಾಲಿಸಬೇಕು! ನಿಮಗೆ ಮಂಗಳವಾಗಲಿ! ನಾವು ಗೊಲ್ಲರು! ಬಲರಾಮಕೃಷ್ಣರ ಕಡೆಯವರು! ಇದೋ! ಇಲ್ಲಿಗೆ ಸ್ವಲ್ಪದೂರದಲ್ಲಿ ಆ ರಾಮಕೃಷ್ಣರಿಬ್ಬರೂ, ಹಸುಗಳನ್ನು ಮೇಯಿಸುತ್ತಿರುವರು. ನಾವೆಲ್ಲರೂ ಬೆಳಗಿನಿಂದ ಊಟವಿಲ್ಲದೆ ಬಹಳ ಹಸಿದು ಬಂ

ದಿರುವೆವು! ಆ ರಾಮಕೃಷ್ಣರೂ ಅನ್ನಾರ್ಥಿಗಳಾಗಿ ನಮ್ಮನ್ನು ಇಲ್ಲಿಗೆ ಕಳು ಹಿಸಿರುವರು. 'ಅವರಲ್ಲಿ ನಿಮಗೆ ಅಭಿಮಾನವಿದ್ದರೆ, ಅವರಿಗಾಗಿ ಒಂದಿಷ್ಟು ಅನ್ನವನ್ನು ಕೊಡಬೇಕು! ಸಮಸ್ತಧರ್ಮವನ್ನೂ ತಿಳಿದಿರುವ ನಿಮಗೆ ನಾವು ಹೇಳಬೇಕಾದುದೇನೂ ಇಲ್ಲ! ಯಜ್ಞದೀಕ್ಷೆಯಲ್ಲಿರುವ ನಿಮ್ಮ ಅನ್ನವನ್ನು ನಾವು ಭುಜಿಸಬಾರದೆಂದು ನೀವು ಶಂಕಿಸಬಾರದು! ದೀಕ್ಷಾಪೂರ್ವಕವಾದ ಅಗ್ನಿಷೋಮೀಯವೆಂಬ ಯಾಗದಲ್ಲಿ ಪಶುವಧವಾದಮೇಲೆಯೂ, ಸೌತ್ರಾಮಣಿಯೆಂಬ ಇಷ್ಟಿಯು ಮುಗಿದಮೇಲೆಯೂ, ಯಜ್ಞದೀಕ್ಷಿತನಾದವನ ಅನ್ನವನ್ನು ಭುಜಿಸುವುದರಲ್ಲಿ ದೋಷವಿಲ್ಲವೆಂದು ನಾವು ಹಿರಿಯರಿಂದ ಕೇಳಿರುವೆವು. ಆದುದರಿಂದ ನೀವು ಶಂಕೆಯಿಲ್ಲದೆ, ಹಸಿದುಬಂದ ನಮಗೆ ಅನ್ನವನ್ನಿಕ್ಕಬೇಕು!" ಎಂದರು. ಹೀಗೆ ಆ ಗೊಲ್ಲರು ಸಾಕ್ಷಾದ್ಭಗವಂತನೇ ಅನ್ನಾರ್ಥಿಯಾಗಿ ಯಾಚಿಸುತ್ತಿರುವನೆಂಬುದನ್ನು ಸೂಚಿಸಿದಾಗಲೂ, ಆ ಬ್ರಾಹ್ಮಣರು, ಅವರ ಮಾತನ್ನು ಕಿವಿಗೆ ಹಾಕಿಕೊಳ್ಳದೆ ಅಲಕ್ಷ್ಯವಾಗಿದ್ದುಬಿಟ್ಟರು. ಓ ಪರೀಕ್ಷಿದ್ರಾಜಾ! ಇದರ ಕಾರಣವೇನೆಂಬುದು ಬಲ್ಲೆಯಾ? ಆ ಬ್ರಾಹ್ಮಣರೆಲ್ಲರೂ ಅತ್ಯಲ್ಪವಾದ ಸ್ವರ್ಗಾದಿಸುಖಗಳಿಗೆ ಆಶೆಪಟ್ಟು, ಕೇವಲಕಾಮ್ಯಕರ್ಮದಲ್ಲಿ ನಿರತರಾಗಿದ್ದವರು. ಆತ್ಮತತ್ವವನ್ನರಿಯದ ಮೂಢರಾಗಿದ್ದರೂ, ತಾವೇ ಜ್ಞಾನವೃದ್ಧರೆಂಬ ದುರಭಿಮಾನದಿಂದ ಬೀಗಿಬೆರೆಯುತ್ತಿದ್ದವರು. ಅವರು ಆ ಪರಮಾತ್ಮನ ಮಹಿಮೆಯನ್ನು ಹೇಗೆ ತಾನೇ ಬಲ್ಲರು? ಆಹಾ! ಅವರ ಮೌಢ್ಯವನ್ನೇನೆಂದು ಹೇಳಬಹುದು! ಯಜ್ಞಸಾಧನೆಗೆ ಬೇಕಾದ ಕಾಲದೇಶಗಳೂ, ಚರುಪುರೋಡಾಶಾದಿದ್ರವ್ಯಗಳೂ, ಮಂತ್ರತಂತ್ರಗಳೂ, ಋತ್ವಿಕ್ಪುರೋಹಿತರೂ, ತ್ರೇತಾಗ್ನಿಗಳೂ, ಯಜ್ಞಭೋಜಿಗಳಾದ ದೇವತೆಗಳೂ, ಯಜ್ಞದೀಕ್ಷಿತನೂ, ಕ್ರತು, ಧರ್ಮ, ಮುಂತಾದುವುಗಳೆಲ್ಲವೂ ಯಾವನ ಸ್ವರೂಪವೆನಿಸಿರುವುವೋ, ಯಾವನೇ ಸಮಸ್ತಯಜ್ಞಗಳಿಗೂ ಫಲಭೂತನಾಗಿರುವನೋ, ಅಂತಹ ಸಾಕ್ಷಾತ್ಪರಬ್ರಹ್ಮರೂಪನಾದ ಕೃಷ್ಣನು, ತಾನೇ ಅನ್ನಾರ್ಥಿಯಾಗಿ ತಮ್ಮಲ್ಲಿ ಯಾಚಿಸುತ್ತಿರುವಾಗಲೂ, ಆ ಬ್ರಾಹ್ಮಣರು ದೇಹಾಭಿಮಾನದಿಂದ, ಅಲ್ಪಸುಖಕ್ಕಾಸೆಪಟ್ಟು, ಕರ್ಮಪ್ರವಣರಾಗಿ, ಆ ಕೃಷ್ಣನನ್ನು ಸಾಮಾನ್ಯಮನುಷ್ಯನೆಂದೇ ತಿಳಿದು

ಉಂಟೆಂದಾಗಲಿ, ಇಲ್ಲವೆಂಬಾಗಲಿ ಆ ಗೊಲ್ಲರಿಗೆ, ಯಾವ ಉತ್ತರವನ್ನೂ ಕೊಡದೆ ಅಲಕ್ಷ್ಯದಿಂದಿದ್ದರು. ಇದನ್ನು ನೋಡಿ ಗೋಪಾಲಕರು, ನಿರಾಶರಾಗಿ ಹಿಂತಿರುಗಿ ಬಂದು, ನಡೆದ ಸಂಗತಿಯನ್ನು ರಾಮಕೃಷ್ಣರಿಗೆ ತಿಳಿಸಿದರು. ಅದನ್ನು ಕೇಳಿ ಕೃಷ್ಣನು ನಗುತ್ತ, ತಾನೇ ಸರ್ವಲೋಕೇಶ್ವರನಾಗಿ, ಸರ್ವಫಲಪ್ರದನಾಗಿದ್ದರೂ, ಲೋಕನಟನೆಯನ್ನನುಸರಿಸಿ ಅವರನ್ನು ಕುರಿತು "ಓ ಗೋಪಾಲಕರೆ! ಯಾಚನೆಗೆ ಹೋದಮೇಲೆ ಮಾನಾವಮಾನಗಳನ್ನು ಗಣಿಸಬಾರದು! ಈಗಲೂ ಮತ್ತೊಮ್ಮೆ ನೀವು ಅಲ್ಲಿಗೆ ಹೋಗಿ, ಆ ಬ್ರಾಹ್ಮಣರಿಗೆ ತಿಳಿಯದಹಾಗೆ ಅವರ ಪತ್ನಿಯರನ್ನು ಕಂಡು, ಅವರಿಗೆ ನಮ್ಮ ಹೆಸರನ್ನು ತಿಳಿಸಿ ಕೇಳಿರಿ! ಅವರಿಗೆ ನಮ್ಮಲ್ಲಿ ನಿಜವಾದ ಪ್ರೇಮವುಂಟು! ಅವರ ದೇಹವು ಅಲ್ಲಿದ್ದರೂ, ಅವರ ಮನಸ್ಸೆಲ್ಲವೂ ನಮ್ಮ ಮೇಲೆಯೇ ಇರುವುದು! ಹೋಗಿರಿ!" ಎಂದನು. ಅದರಂತೆಯೇ ಗೊಲ್ಲರು, ತಿರುಗಿ ಬ್ರಾಹ್ಮಣಪತ್ನಿಯರ ಮನೆಗೆ ಬಂದು, ಅಲ್ಲಿ ದೇಹವನ್ನಲಂಕರಿಸಿಕೊಂಡು, ಸುಖಾಸೀನರಾಗಿದ್ದ ಆ ಸ್ತ್ರೀಯರಿಗೆ ನಮಸ್ಕರಿಸಿ, ವಿನಯಪೂರ್ವಕವಾಗಿ ಹೀಗೆಂದು ಹೇಳುವರು. "ಓ ಬ್ರಾಹ್ಮಣಪತ್ನಿಯರೆ! ನಿಮಗೆ ನಮಸ್ಕಾರವು, ನಮ್ಮ ಮಾತನ್ನು ಲಾಲಿಸಬೇಕು! ಇದೋ! ಇತ್ತಲಾಗಿ ಈ ವನದಲ್ಲಿ,ಹಸುಗಳನ್ನು ಮೇಯಿಸುವುದಕ್ಕಾಗಿ ಬಂದಿರುವ ಕೃಷ್ಣನು ನಮ್ಮನ್ನು ಕಳುಹಿಸಿರುವನು ಆ ಕೃಷ್ಣನು ತನ್ನಣ್ಣನಾದ ಬಲರಾಮನೊಡನೆ ಮಂದೆಯನ್ನು ಮೇಯಿಸುತ್ತ ಬಹುದೂರದವರೆಗೆ ಬಂದುಬಿಟ್ಟುದರಿಂದ, ಸಕಾಲಕ್ಕೆ ಆಹಾರವಿಲ್ಲದೆ ಬಹಳವಾಗಿ ಹಸಿದಿರುವನು. ಅವನಿಗೂ ಅವನ ಕಡೆಯುವರಾದ ನಮಗೂ ಹಸಿವು ತೀರುವಂತೆ ನೀವು ಅನ್ನವನ್ನಿಕ್ಕಬೇಕು" ಎಂದರು. ಅನವರತವೂ ಆ ಕೃಷ್ಣನ ಕಥೆಯನ್ನೇ ಸ್ಮರಿಸುತ್ತ, ಅವನ ದರ್ಶನವನ್ನೇ ನಿರೀಕ್ಷಿಸುತಿದ್ದ ಆ ಬ್ರಾಹ್ಮಣಪತ್ನಿಯರಿಗೆ, ರಾಮಕೃಷ್ಣರು ಬಂದಿರುವರೆಂಬ ಮಾತು ಕಿವಿಗೆ ಬಿದ್ದಾಗ, ಅವರ ಸಡಗರವನ್ನು ಕೇಳಬೇಕೆ? ಒಬ್ಬೊಬ್ಬರೂ ತಮ್ಮತಮ್ಮ ಮನೆಯಲ್ಲಿ ಭಕ್ಷ್ಯ, ಭೋಜ್ಯ, ಚೋಷ್ಯ, ಪಾನೀಯಗಳೆಂಬ ನಾಲ್ಕುಬಗೆಯ ಆಹಾರಸಾಮಗ್ರಿಗಳೊಡನೆ ರುಚಿರುಚಿಯಾದ ಅಡಿಗೆಯನ್ನು ಸಿದ್ಧಪಡಿಸಿ, ಪಾತ್ರಗಳಲ್ಲಿ ತುಂಬಿಕೊಂಡು, ಸಮುದ್ರಗಾಮಿನಿಗಳಾದ ನ

ದಿಗಳಂತೆ, ಆತ್ಯಾತುರದಿಂದ ಕೃಷ್ಣನಿದ್ದ ಸ್ಥಳಕ್ಕೆ ಹೊರಟರು. ಆ ಸ್ತ್ರೀಯರು ಬಹುಕಾಲದಿಂದ ಕೃಷ್ಣನಲ್ಲಿಯೇ ನಟ್ಟಮನಸ್ಸುಳ್ಳವರು. ಹೊರಡುವಾಗ ಅವರವರ ಪತಿಗಳೂ, ಅಣ್ಣತಮ್ಮಂದಿರೂ, ತಂದೆ ತಾಯಿಗಳೂ, ಮಕ್ಕಳೂ, ಎಷ್ಟೋವಿಧದಿಂದ ನಿವಾರಿಸಿದರೂ ಕೇಳದೆ, ನೆಟ್ಟಗೆ ಯಮುನಾತೀರಕ್ಕೆ ಬಂದು,ಅಲ್ಲಿ,ಅಶೋಕವೃಕ್ಷಗಳ ಎಳಚಿಗುರುಗಳಿಂದ ಮನೋಹರವಾದ ಉಪವನದಲ್ಲಿ ಕೃಷ್ಣನು ಅನೇಕಗೋಪಾಲಕರಿಂದ ಪರಿವೃತನಾಗಿ ಬಲರಾಮನೊಡನೆ ಸಂಚರಿಸುತ್ತಿರುವುದನ್ನು ಕಂಡರು. ಮೇಘಶ್ಯಾಮಲವಾದ ಮೈ! ಅದರಮೇಲೆ ಹೊಂಬಣ್ಣದ ಪಟ್ಟೆಮಡಿ! ಕೊರಲಲ್ಲಿ ಕಾಡುಹೂವಿನ ದಂಡೆ! ಮೈಮೇಲೆ ನವಿಲುಗರಿ, ಅರಿದಳ, ಚಿಗುರೆಲೆ, ಮುಂತಾದ ವಿಚಿತ್ರಾಲಂಕಾರಗಳು! ಹೀಗೆ ಕೃಷ್ಣನು ವೇಷಧಾರಿಯಾದ ನಟನಂತೆ ತನ್ನ ಸ್ನೇಹಿತನೊಬ್ಬನ ಹೆಗಲಮೇಲೆ ಎಡಗೈಯನ್ನೂರಿ, ಬಲಗೈಯಿಂದ ಲೀಲಾರ್ಥವಾದ ತಾವರೆಹೂವನ್ನು ತಿರುಗಿಸುತ್ತಿರುವನು. ಕಿವಿಯಮೇಲೆ ನೈದಿಲೆಯ ಹೂವನ್ನು ಸಿಕ್ಕಿಸಿರುವನು. ಕೆನ್ನೆಗಳಮೇಲೆ ಮುಂಗುರುಳು ತೂಗಾಡುತ್ತಿರುವುದು. ಮುಖದಲ್ಲಿ ಮಂದಹಾಸವು ತುಳುಕುತ್ತಿರುವುದು. ಇಂತಹ ದಿವ್ಯಾದ್ಭುತರೂಪವುಳ್ಳ ಆ ಕೃಷ್ಣನನ್ನು ಕಂಡೊಡನೆ ಆ ಸ್ತ್ರೀಯರೆಲ್ಲರೂ ಆನಂದಪರವಶರಾದರು. ಹಿಂದೆ ಅನೇಕಾವರ್ತಿ ಆ ಕೃಷ್ಣನ ಗುಣಗಳನ್ನು ಮಾತ್ರ ಕೇಳಿ, ಅವನಲ್ಲಿ ನಟ್ಟಮನಸ್ಸುಳ್ಳವರಾಗಿದ್ದ ಆ ಸ್ತ್ರೀಯರಿಗೆ, ಈಗ ಪ್ರತ್ಯಕ್ಷವಾಗಿ ಆ ರೂಪವನ್ನು ಕಂಡಾಗ ಅವರ ಸಂತೋಷವನ್ನು ಕೇಳಬೇಕೆ?" ಆ ಕೃಷ್ಣನ ದಿವ್ಯಾಕೃತಿಯನ್ನು ತಮ್ಮ ನೇತ್ರರಂಧ್ರಗಳಿಂದ ಹೃದಯದಲ್ಲಿ ಸೇರಿಸಿ, ಬಹುಕಾಲದವರೆಗೆ ತಮ್ಮ ಮನಸ್ಸಿನಿಂದಲೇ ಅವನ ದೇಹಾಲಿಂಗನಸೌಖ್ಯವನ್ನನುಭವಿಸುತಿದ್ದರು. ಭಗವದ್ದರ್ಶನಕ್ಕಾಗಿ ಆತುರಪಡುತ್ತಿರುವ ಹರಿಭಕ್ತರು, ಪರಮಾತ್ಮಸಾಕ್ಷಾತ್ಕಾರದಿಂದ ತಾಪತ್ರಯವನ್ನು ನೀಗಿ, ಬ್ರಹ್ಮಾನಂದವನ್ನನುಭವಿಸುವಂತೆ, ಆ ಸ್ತ್ರೀಯರೂ ಕೃಷ್ಣಧ್ಯಾನಮಾತ್ರದಿಂದ, ತಾವು ಬಹುಕಾಲದಿಂದನುಭವಿಸುತಿದ್ದ ವಿರಹತಾಪವನ್ನು ಮರೆತು ಆನಂದಿತರಾದರು. ಆಗ ಸರ್ವಜ್ಞನಾದ ಕೃಷ್ಣನು, ತನ್ನನ್ನು ನೋಡಬೇಕೆಂಬ ಉದ್ದೇಶದಿಂದ ಆಸ್ತ್ರೀ

ಯರು ತಮ್ಮ ಪತಿಪುತ್ರಗೃಹಾದಿಗಳಲ್ಲಿಯೂ ಆಸೆಯನ್ನು ತೊರೆದು ಬಂದುದನ್ನು ತಿಳಿದು, ಮಂದಹಾಸಪೂರ್ವಕವಾಗಿ ಅವರನ್ನು ಕುರಿತು. "ಓ ಭಾಗ್ಯವತಿಯರೆ! ನಿಮಗೆ ಸುಖಾಗಮನವೆ? ಕುಳಿತುಕೊಳ್ಳಿರಿ! ನಿಮಗೆ ನನ್ನಿಂದಾಗಬೇಕಾದುದೇನು ? ನನ್ನನ್ನು ನೋಡಬೇಕೆಂಬ ಉದ್ದೇಶದಿಂದಲೇ ನೀವು ಬಂದವರಲ್ಲವೆ? ನಿಮ್ಮಂತವರಿಗೆ ಇದು ಯುಕ್ತವಾಗಿಯೇ ಇರುವುದು! ಸ್ವಪ್ರಯೋಜನವನ್ನು ಬಲ್ಲ ವಿವೇಕಿಗಳು, ನನ್ನಲ್ಲಿ ಯಾವ ಫಲೋದ್ದೇಶವನ್ನೂ ಇಡದೆ ಅವಿಚ್ಛಿನ್ನವಾದ ಭಕ್ತಿಯನ್ನು ಮಾಡುವರು. ತಮ್ಮ ತಮ್ಮ ಆತ್ಮಕ್ಕಿಂತಲೂ ಅವರಿಗೆ ನಾನೇ ಪ್ರಿಯತಮನು. ಓ ಸ್ತ್ರೀಯರೆ ! ಲೋಕದಲ್ಲಿ ಪ್ರಾಣಿಗಳಿಗೆ ತಮ್ಮತಮ್ಮ ಪ್ರಾಣಗಳೂ, ಬುದ್ಧಿಯೂ, ಮನಸ್ಸೂ, ದೇಹವೂ, ಹೆಂಡಿರುಮಕ್ಕಳೂ, ಧನಾದಿಗಳೂ, ಯಾವ ಆತ್ಮಸಂಬಂಧದಿಂದಲೇ ಪ್ರಿಯವೆನಿಸುವುವೋ, ಆ ಆತ್ಮಕ್ಕಿಂತಲೂ ಪ್ರಿಯವಾದ ವಸ್ತುವು ಬೇರೆ ಯಾವುದುಂಟು ? ಸಮಸ್ತಪ್ರಾಣಿಗಳಿಗೂ ನಾನೇ ಆತ್ಮಭೂತನಾದುದರಿಂದ, ನೀವು ನನ್ನನ್ನು ಪ್ರೀತಿಸುವುದೇನೋ ಸಹಜವೇ! ನಿಮ್ಮ ಪ್ರೀತಿಗಾಗಿ ನಾನು ಸಂತೋಷಪಟ್ಟೆನು. ನಿಮಗೆ ನನ್ನ ದರ್ಶನವಾಯಿತಷ್ಟೆ? ಇನ್ನು ನೀವು ಹೋಗಬಹುದು ! ಗೃಹಸ್ಥಧರ್ಮಪರಾಯಣರಾದ ನಿಮ್ಮ ಪತಿಗಳು, ನಿಮ್ಮೊಡಗೂಡಿಯೇ ತಮ್ಮ ಯಜ್ಞವನ್ನು ಪೂರ್ತಿಗೊಳಿಸಬೇಕಾದುದರಿಂದ, ನೀವು ಇಲ್ಲಿ ನಿಲ್ಲುವುದು ಸರಿಯಲ್ಲ!" ಎಂದನು. ಅದಕ್ಕಾ ಸ್ತ್ರೀಯರು. ಓ ಪ್ರಭೂ! ನೀನು ಹೀಗೆ ಪರುಷವಾಕ್ಯದಿಂದ ನಮ್ಮನ್ನು ಅನಾದರಿಸಬಾರದು! ನಿನ್ನ ಪಾದಾಶ್ರಯಕ್ಕಾಗಿ ಬಂದ ನಮ್ಮನ್ನು ನೀನು ಹಿಂತಿರುಗಿ ಕಳುಹಿಸುವುದು ಯುಕ್ತವೆ? ಮರೆಹೊಕ್ಕವರನ್ನು ಬಿಡುವುದಿಲ್ಲವೆಂಬ ನಿನ್ನಮಾತನ್ನು ನೀನು ನಡೆಸಬೇಡವೆ ? ಕೃಷ್ಣಾ! ನೀನು ನಿನ್ನ ಪಾದಾಗ್ರದಿಂದೊತ್ತರಿಸಿದ ತುಲಸೀಮಾಲಿಕೆಯನ್ನಾದರೂ ನಮ್ಮ ಶಿರಸ್ಸಿನಿಂದ ಧಾರಣಮಾಡಿ ಧನ್ಯರಾಗಬೇಕೆಂಬ ಉದ್ದೇಶದಿಂದ, ನಾವು ನಮ್ಮ ಪತಿಪುತ್ರಾದಿ ಸಮಸ್ತಬಂಧುಗಳನ್ನೂ ಬಿಟ್ಟು, ಅವರ ಮಾತನ್ನೂ ಲಕ್ಷ್ಯಮಾಡದೆ ಬಂದಿರುವೆವಲ್ಲಾ ! ಈಗ ನಾವು ಹಿಂತಿರುಗಿ ಹೋದರೆ ನಮ್ಮ ಪತಿಗಳಾಗಲಿ, ತಂದೆತಾಯಿಗಳಾಗಲಿ, ಮಕ್ಕಳಾಗಲಿ, ಸಹೋದರರಾಗಲಿ, ಇಷ್ಟಮಿತ್ರ



೨೯೧೦. ಶ್ರೀಕೃಷ್ಣನು ಬ್ರಾಹ್ಮಣಪತ್ನಿಯರನ್ನನುಗ್ರಹಿಸಿದುದು.

ಬಂಧುಗಳಾಗಲಿ ಪರಿಗ್ರಹಿಸುವರೆ ? ಇನ್ನು ನಮಗೆ ಬೇರೆ ದಿಕ್ಕಾರು ? ನಿನ್ನನ್ನು ಸಂಬಿಬಂದುದಕ್ಕೆ ನಾವು ಉಭಯಭ್ರಷ್ಟರಾದೆವಲ್ಲಾ ! ನಿನ್ನ ಕಾಲಮೇಲೆ ಬಿದ್ದ ನಮ್ಮನ್ನು ನೀನೇ ತಿರಸ್ಕರಿಸಿದರೆ ನಮ್ಮ ಗತಿಯೇನು? ಕೃಷ್ಣಾ! ಓ ಅರಿಂದಮಾ ! ನಾವು ನಿನ್ನಲ್ಲಿಯೇ ಇರುವೆವು! ನೀನೇ ನಮ್ಮನ್ನುದ್ಧರಿಸಬೇಕು." ಎಂದರು.

ಆದಕ್ಕಾ ಕೃಷ್ಣನು"ಓ ಸಾಧ್ವಿಯರೆ!ನೀವು ನಿಮ್ಮ ಬಂಧುಗಳ ಮಾತನ್ನು ನಿರಾಕರಿಸಿ ಬಂದುದಕ್ಕಾಗಿ, ಅವರು ನಿಮ್ಮನ್ನು ತಿರುಗಿ ಸೇರಿಸಿಕೊಳ್ಳಲಾರರೆಂದು ಭಯಪಡಬೇಡಿರಿ ! ನಿಮ್ಮ ಪತಿಗಳಾಗಲಿ, ತಂದೆ ತಾಯಿಗಳಾಗಲಿ, ಸಹೋದರರಾಗಲಿ, ನಿಮ್ಮ ಮಕ್ಕಳಾಗಲಿ, ನಿಮ್ಮಲ್ಲಿ ಕೋಪಿಸಲಾರರು ! ಇತರಜನವೂ ನಿಮ್ಮನ್ನು ನಿಂದಿಸಲಾರದು! ದೇವತೆಗಳೂ ನಿಮ್ಮಲ್ಲಿ ದೋಷವನ್ನೆಣಿಸಲಾರರು ! ನೀವು ಮಾಡಿದ ಕಾರ್ಯಕ್ಕಾಗಿ ಅವರೆಲ್ಲರಿಗೂ ನಿಮ್ಮಲ್ಲಿ ಮೊದಲಿಗಿಂತಲೂ ಹೆಚ್ಚಾಗಿ ಗೌರವಬುದ್ಧಿಯೇ ಹುಟ್ಟುವುದು. ನೀವು ಧೈರ್ಯದಿಂದ ಹೋಗಿರಿ! ಇದಲ್ಲದೆ ನೀವು ನನ್ನ ಸಾಕ್ಷಾತ್ಸಂಬಂಧವನ್ನಪೇಕ್ಷಿಸಿ ಬಂದುದಾಗಿ ಹೇಳಿದಿರಲ್ಲವೆ! ಅದು ತಪ್ಪು ! ಪ್ರಾಣಿಗಳಿಗೆ ಪರಸ್ಪರದೇಹಸಂಬಂಧದಿಂದುಂಟಾಗತಕ್ಕ ಸುಖವು,ತಾತ್ಕಾಲಿಕವಾಗಿ ಕ್ಷಣಮಾತ್ರದಲ್ಲಿ ಪರ್ಯವಸಾನಹೊಂದುವುದೇಹೊರತು, ಅವಿಚ್ಛಿನ್ನವಾಗಿ ನಡೆದುಬರಲಾರದು. ವಿಯೋಗದಶೆಯಲ್ಲಿ ಆ ಮನಸ್ಸಿನ ಭಾವನೆಯು, ಎಡೆಬಿಡದೆ ಅನುಸರಿಸಿಬರುವುದು. ಆದುದರಿಂದ ನೀವು ನನ್ನ ಪರೋಕ್ಷದಲ್ಲಿದ್ದಾಗಲೇ ನಿಮ್ಮ ಮನಸ್ಸು ನನ್ನಲ್ಲಿಯೇ ಲೀನವಾಗುವುದು. ಕೊನೆಗೆ ಅದರಿಂದ ನೀವು ಸಂಸಾರವಿಮುಕ್ತರಾಗಿ ನನ್ನೊಡನೆ ನಿತ್ಯಸಾನ್ನಿಧ್ಯದಲ್ಲಿರಬಹುದು. ಎಲೈ ಸ್ತ್ರೀಯರೆ ! ಪರೋಕ್ಷದಲ್ಲಿದ್ದು ಆಗಾಗ ನನ್ನ ಕೀರ್ತನಗಳನ್ನು ಕಿವಿಯಿಂದ ಕೇಳುತ್ತಿರುವುದು, ಮನಸ್ಸಿನಲ್ಲಿ ನನ್ನ ರೂಪವನ್ನು ಸಾಕ್ಷಾತ್ಕರಿಸುವುದು ನನ್ನ ಸ್ವರೂಪವನ್ನು ಭಾವಿಸುವುದು, ನನ್ನ ಗುಣಗಳನ್ನು ಬಾಯಿಂದ ಕೊಂಡಾಡುವುದು, ಈವಿಧವಾದ ಕಾರ್ಯಗಳಿಂದ ನನ್ನಲ್ಲಿ ಭಕ್ತಿಭಾವವು ಹುಟ್ಟುವಂತೆ, ನನ್ನ ಸಮೀಪದಲ್ಲಿದ್ದಾಗ ಹುಟ್ಟಲಾರದು ! ಆದುದರಿಂದ ನೀವು ನಿಮ್ಮ ನಿಮ್ಮ ಗೃಹಗಳಿಗೆ ಹೋಗಿರಿ !" ಎಂದನು. ಓ ಪರೀಕ್ಷಿದ್ರಾಜಾ !

ಕೃಷ್ಣನು ಈ ಮಾತನ್ನು ಹೇಳಿದಮೇಲೆ, ಅವರೆಲ್ಲರೂ ತಮ್ಮ ಯಜ್ಞವಾಟಕ್ಕೆ ಹಿಂತಿರುಗಿದರು. ಅವರ ಪತಿಗಳೂಕೂಡ ಮೊದಲು ತಮಗಿದ್ದ ಕೋಪವನ್ನು ಮರೆತು, ಅವರನ್ನಾದರಿಸಿ ಕರೆದುಕೊಂಡು, ಪತ್ನೀಸಮೇತರಾಗಿ ತಮ್ಮ ಯಜ್ಞಕಾರ್ಯವನ್ನು ಮುಗಿಸಿದರು. ಕೃಷ್ಣಸಾನ್ನಿಧ್ಯದಿಂದ ಹಿಂತಿರುಗಿ ಬಂದ ಅಷ್ಟುಮಂದಿ ಬ್ರಾಹ್ಮಣಪತ್ನಿಯರಲ್ಲಿ, ಒಬ್ಬಳುಮಾತ್ರ, ತನ್ನ ಪತಿಯಿಂದ ತಿರಸ್ಕೃತಳಾಗಿ, "ಕೃಷ್ಣಾ! ನೀನೇ ಗತಿ!" ಎಂದು ಸ್ವಲ್ಪಹೊತ್ತಿನವರೆಗೆ ಕೃಷ್ಣನನ್ನು ಸ್ಮರಿಸುತ್ತ, ಆ ಭಾವನಾವಿಶೇಷದಿಂದ ತನ್ಮಯತ್ವವನ್ನುಹೊಂದಿ, ಆಗಲೇ ತನಗೆ ಕರ್ಮಮೂಲಕವಾಗಿ ಬಂದ ದೇಹವನ್ನು ನೀಗಿ, ಮುಕ್ತಿಯನ್ನೂ ಹೊಂದಿದಳು.

ರಾಜಾ! ಇತ್ತಲಾಗಿ ಕೃಷ್ಣನು ಆ ಬ್ರಾಹ್ಮಣಪತ್ನಿಯರು ತಂದುಕೊಟ್ಟ ಭಕ್ಷ್ಯಭೋಜ್ಯಾದಿಗಳನ್ನು ತನ್ನ ಸಂಗಡಿಗರೆಲ್ಲರಿಗೂ ಕೊಟ್ಟು, ತಾನೂ ಭೋಜನಮಾಡಿ ಸಂತುಷ್ಟನಾದನು. ಹೀಗೆ ಲೀಲಾಮನುಷ್ಯನಾದ ಭಗವಂತನು, ಲೋಕನಟನೆಯನ್ನು ನಟಿಸುತ್ತ, ಗೋವುಗಳನ್ನೂ, ಗೋಪಾಲಕರನ್ನೂ, ಗೋಪಿಯರನ್ನೂ, ತನ್ನರೂಪದಿಂದಲೂ,ತನ್ನ ಮಾತುಗಳಿಂದಲೂ, ತನ್ನಕಾರ್ಯಗಳಿಂದಲೂ ಸಂತೋಷಗೊಳಿಸುತಿದ್ದನು. ಇಷ್ಟರಲ್ಲಿ ಇತ್ತಲಾಗಿ ಬ್ರಾಹ್ಮಣರಿಗೂ ವಿವೇಕಜ್ಞಾನವು ಹುಟ್ಟಿತು. ಸಾಕ್ಷಾದ್ಭಗವಂತನೇ ಕೃಷ್ಣರೂಪದಿಂದ ಯದುಕುಲದಲ್ಲಿ ಅವತರಿಸಿರುವ ಸಂಗತಿಯೂ ಅವರ ಸ್ಮರಣೆಗೆ ಬಂದಿತು. ಲೀಲಾಮಾನುಷರೂಪದಿಂದಿರುವ ಆ ರಾಮಕೃಷ್ಣರಿಬ್ಬರೂ, ತಮ್ಮಲ್ಲಿ ಅನ್ನಾರ್ಥಿಗಳಾಗಿ ಯಾಚಿಸಿದಾಗ, ಅವರನ್ನು ತಾವು ತಿರಸ್ಕರಿಸಿದ ಮಹಾಪರಾಧಕ್ಕಾಗಿ ಪಶ್ಚಾತ್ತಾಪಪಡುತ್ತ, ಮನಸ್ಸಿನಲ್ಲಿ ದುಃಖದಿಂದ ಕುದಿಯುತಿದ್ದರು. ತಮ್ಮಪತ್ನಿಯರಿಗೆ ಆ ಭಗವಂತನಲ್ಲಿರುವ ನಿರ್ಹೇತುಕವಾದ ಭಕ್ತಿಯನ್ನೂ, ತಮ್ಮ ಅಜ್ಞತೆಯನ್ನೂ ನೋಡಿ ತಮ್ಮನ್ನು ತಾವೇ ಹೀಗೆಂದು ನಿಂದಿಸಿಕೊಳ್ಳುವರು. "ಛೀ! ನಾವು ಹುಟ್ಟಿ ಫಲವೇನು? ನಮ್ಮ ಇಷ್ಟುಮಂದಿಮಿತ್ರರು! ನಮ್ಮ ಆಚಾರಗಳು! ನಮ್ಮವ್ರತಗಳು! ನಾವು ಇದುವರೆಗೆ ಅನೇಕಶಾಸ್ತ್ರಗಳನ್ನೋದಿದುದು! ನಮ್ಮ ಕುಲೋನ್ನತಿ! ನಮ್ಮ ಯಜ್ಞಾದಿಕ್ರಿಯೆಗಳು! ನಮ್ಮ ಕರ್ಮಶಕ್ತಿ! ಇವೆಲ್ಲವನ್ನೂ

ಸುಡಬೇಕಲ್ಲವೆ? ಆ ಭಗವಂತನಲ್ಲಿ ಭಕ್ತಿಯನ್ನು ಹುಟ್ಟಿಸುವುದಕ್ಕೆ ಸಾಧಕಗಳಾಗದಿದ್ದಮೇಲೆ ಇವುಗಳಿಂದೇನು? ಮುಖ್ಯವಾಗಿ ಭಗವಂತನ ಮಾಯೆಯು ಯೋಗಿಗಳನ್ನೂ ಮೋಹಗೊಳಿಸುವುದು! ಲೋಕದಲ್ಲಿ ಬ್ರಾಹ್ಮಣಜಾತಿಯಲ್ಲಿ ಹುಟ್ಟಿ, ಇತರವರ್ಣದವರೆಲ್ಲರಿಗೂ ಹಿತೋಪದೇಶಕರಾದ ಗುರುಗಳೆನಿಸಿಕೊಂಡ ನಾವೇ, ನಮ್ಮ ಶ್ರೇಯಸ್ಸನ್ನು ಕಾಣದೆ, ಅನುಪಯೋಗವಾದ ಕರ್ಮಗಳಲ್ಲಿ ಬಿದ್ದು ತೊಳಲುತ್ತಿರುವೆವು! ಶಾಸ್ತ್ರಜ್ಞಾನಾದಿಗಳೊಂದೂ ಇಲ್ಲದ ನಮ್ಮ ಹೆಂಗಸರಿಗೆ, ಲೋಕನಾಥನಾದ ಕೃಷ್ಣನಲ್ಲಿ ನಿರ್ಹೇತುಕವಾದ ಭಕ್ತಿಭಾವವು ಹುಟ್ಟಿ, ಅದರಿಂದ ಅವರು ಮನೆಮಂದಿಮಕ್ಕಳೆಂಬ ಸಂಸಾರಪಾಶಗಳನ್ನು ಕಿತ್ತು ಹಾಕುತ್ತಿರುವರು. ಆಹಾ! ಇದಲ್ಲವೇ ಆಶ್ಚರ್ಯವು! ಅವರಿಗೆ ನಮ್ಮಂತೆ ಉಪನಯನಾದಿಸಂಸ್ಕಾರಗಳಿಲ್ಲ! ಗುರುಕುಲವಾಸವಿಲ್ಲ! ತಪಸ್ಸಿಲ್ಲ! ಆತ್ಮಜ್ಞಾನವಿಲ್ಲ! ಶೌಚಾಚಾರಗಳಿಲ್ಲ! ಯಜ್ಞಯಾಗಾದಿಕ್ರಿಯೆಗಳಿಗೂ ಅಧಿಕಾರವಿಲ್ಲ! ಹಾಗಿದ್ದರೂ ಅವರಿಗೆ ಯೋಗೀಶ್ವರನಾದ ಶ್ರೀಕೃಷ್ಣನಲ್ಲಿ ದೃಢಭಕ್ತಿಯು ಹುಟ್ಟಿರುವುದು ಮೇಲೆ ಹೇಳಿದ ಸಂಸ್ಕಾರಾದಿಗಳೆಲ್ಲವೂ ಇದ್ದರೂ, ನಮಗೆ ಆ ವಿಧವಾದ ಭಕ್ತಿಯು ಹುಟ್ಟಲಿಲ್ಲ! ಆಹಾ! ಆ ಶ್ರೀಕೃಷ್ಣನು ಗೋಪಾಲಕರ ಮೂಲಕವಾಗಿ ಅನ್ನವನ್ನು ಯಾಚಿಸಿದುದು ನಮ್ಮನ್ನು ಅನುಗ್ರಹಿಸುವುದಕ್ಕಾಗಿಯೇಹೊರತು ಬೇರೆಯಲ್ಲ! ಪೂರ್ಣಕಾಮನಾಗಿ, ಕೈವಲ್ಯಾದಿ ಪುರುಷಾರ್ಥಗಳೆಲ್ಲಕ್ಕೂ ತಾನೇ ಪ್ರಭುವಾಗಿರುವ ಆ ಶ್ರೀಕೃಷ್ಣನಿಗೆ ದಾಸಭೂತರಾದ ನಮ್ಮಿಂದ ಆಗಬೇಕಾದುದೇನು? ಇವೆಲ್ಲವೂ ಅವನ ಲೋಕನಟನೆಗಳಲ್ಲವೆ ಬೇರೇನು? ನಾವು ಗೃಹಾದಿಗಳಲ್ಲಿ ಮೋಹದಿಂದ ಅಲ್ಪಸುಖಕ್ಕಾಸೆಪಟ್ಟು ಅದನ್ನು ಯೋಚಿಸದೆ ಹೋದಮೇಲೆ, ನಮ್ಮ ದುರದೃಷ್ಟವನ್ನೇನೆಂದು ಹೇಳಬಹುದು? ಅವನು ನಮ್ಮಲ್ಲಿ ಬಂದು ಅನ್ನವನ್ನು ಯಾಚಿಸಬೇಕೆ? ಸಾಕ್ಷಾಲ್ಲಕ್ಷ್ಮೀದೇವಿಯೂ ಕೂಡ, ಇತರ ಸಮಸ್ತದೇವತೆಗಳನ್ನೂ ಬಿಟ್ಟು, ಒಂದಾವರ್ತಿಯಾದರೂ ಯಾವನ ಪಾದಸ್ಪರ್ಶವಾದರೆ ಸಾಕೆಂದು, ಶುದ್ಧಮನಸ್ಸಿನಿಂದ ಸೇವಿಸುತ್ತಿರುವಳೋ, ಅಂತಹ ಸರ್ವೇಶ್ವರನೇ ನಮ್ಮಲ್ಲಿ ಅನ್ನವನ್ನು ಯಾಚಿಸಬೇಕಾದರೆ, ಇದು ಅವನ ಮಾಯೆಯಲ್ಲವೆ? ಯಜ್ಞಸಾಧ

ನಗಳಾದ, ದೇಶ, ಕಾಲ, ದ್ರವ್ಯ, ಮಂತ್ರ, ತಂತ್ರ, ಅಗ್ನಿ, ಮೊದಲಾದುವುಗಳೂ, ಋತ್ವಿಕ್ಕುಗಳೂ, ಯಜ್ಞಾಧಿದೇವತೆಗಳೂ, ಯಜಮಾನನೂ ಕ್ರತುಗಳೂ, ಧರ್ಮಗಳೂ, ಇವೆಲ್ಲವೂ ಯಾವನ ಸ್ವರೂಪವೆನಿಸಿರುವುದೋ, ಆ ಸಾಕ್ಷಾನ್ಮಹಾವಿಷ್ಣುವೇ ಕೃಷ್ಣನೆಂಬ ಹೆಸರಿನಿಂದ ಯಾದವಕುಲದಲ್ಲಿ ಅವತರಿಸಿರುವನೆಂಬುದನ್ನು ಅನೇಕಾವರ್ತಿ ಕೇಳಿದ್ದಾಗಲೂ, ಮೂಢರಾದ ನಮಗೆ ಅದು ಸ್ಮರಣೆಗೆ ಬಾರದೆ ಹೋಯಿತಲ್ಲಾ! ಅನ್ನಾರ್ಥಿಯಾಗಿ ಬಂದ ಆ ಪರಮಪುರುಷನಿಗಿಂತಲೂ,ನಮ್ಮ ಯಜ್ಞವೇ ದೊಡ್ಡದೆಂದು ತಿಳಿದೆವಲ್ಲಾ!" ಎಂದು ಹೇಳಿ, ಅವರೆಲ್ಲರೂ ತಮ್ಮ ಅಪರಾಧಕ್ಷಾಪಣಕ್ಕಾಗಿ ಭಗವಂತನನ್ನು ಹೀಗೆಂದು ಪ್ರಾರ್ಥಿಸುವರು "ಅಪ್ರತಿಹತಸಂಕಲ್ಪನಾದ ಓ ಭಗವಂತಾ! ನಿನಗೆ ನಮಸ್ಕಾರವು! ಕೃಷ್ಣಾ! ನಿನಗೆ ನಮಸ್ಕಾರವು! ದೇವಾ! ನೀನೇ ನಮ್ಮನ್ನು ನಿನ್ನ ಮಾಯೆಯಿಂದ ಮೋಹಗೊಳಿಸಿ, ಈ ಕರ್ಮಮಾರ್ಗದಲ್ಲಿ ತೊಳಲಿಸುತ್ತಿರುವೆಯಲ್ಲದೆ ನಮಗೆ ಸ್ವಾತಂತ್ರ್ಯವೆಲ್ಲಿಯದು ? ನೀನೇ ನಮ್ಮನ್ನು ಮಾಯೆಯಿಂದ ಮೋಹಗೊಳಿಸಿ, ನಿನ್ನ ಮಹಿಮೆಯು ನಮಗೆ ತಿಳಿಯದಂತೆಯೂ ಮಾಡಿರುವೆ? ಆದುದರಿಂದ ನಮ್ಮ ಅಪರಾಧವನ್ನು ನೀನು ಕ್ಷಮಿಸಬೇಕಾದುದೇ ನ್ಯಾಯ್ಯವು!" ಹೀಗೆ ಆ ಬ್ರಾಹ್ಮಣರು ತಮ್ಮ ತಪ್ಪನ್ನು ತಿಳಿದು ಪಶ್ಚಾತ್ತಾಪದಿಂದ ಕೊರಗುತಿದ್ದರು. ಅವರಿಗೆ ಆಗಲೇ ಹೋಗಿ ರಾಮಕೃಷ್ಣರನ್ನು ಸಾಕ್ಷಾತ್ತಾಗಿ ನೋಡಿ, ಅಪರಾಧಕ್ಷಾಪಣವನ್ನು ಮಾಡಿ ಬರಬೇಕೆಂಬ ಆತುರವು ಮನಸ್ಸಿನಲ್ಲಿದ್ದರೂ, ಕಂಸನ ಭಯಕ್ಕಾಗಿ ಅಲ್ಲಿಯೇ ನಿಂತುಬಿಟ್ಟರು. ಇದು ಇಪ್ಪತ್ತುಮೂರನೆಯ ಅಧ್ಯಾಯವು.

---

## ಗೋವರ್ಧನೋದ್ಧಾರಣಕಥಾರಂಭವು. ಇಂದ್ರಯಾಗಭಂಜನವು.

ಹೀಗೆ ಕೃಷ್ಣನು ಬಲರಾಮನೊಡಗೂಡಿ, ಇನ್ನೂ ಅನೇಕ ಲೀಲೆಗಳನ್ನು ತೋರಿಸುತ್ತ ಆ ಬೃಂದಾವನದಲ್ಲಿಯೇ ವಾಸಿಸುತ್ತಿರುವಾಗ, ಒಮ್ಮೆ ಗೋಪಾಲಕರೆಲ್ಲರೂ, ವರ್ಷಾಧಿದೇವತೆಯಾದ ಇಂದ್ರನ ಪ್ರೀತ್ಯರ್ಥವಾಗಿ ಇಂದ್ರಯಾಗವೆಂಬ ಒಂದು ಮಹೋತ್ಸವವನ್ನಾರಂಭಿಸಿದರು. ಸರ್ವಾತ್ಮ

ನಾಗಿಯೂ, ಸರ್ವಸಾಕ್ಷಿಯಾಗಿಯೂ ಇರುವ ಭಗವಂತನು, ಅವರು ಆ ಉತ್ಸವವನ್ನು ನಡೆಸುವ ಉದ್ದೇಶವೇನೆಂಬುದನ್ನು ಬಲ್ಲವನಾಗಿದ್ದರೂ, ಮನುಷ್ಯಲೀಲೆಯನ್ನು ನಟಿಸುವುದಕ್ಕಾಗಿ,ಏನೂ ತಿಳಿಯದವನಂತೆ.ವಯೋವೃದ್ಧರಾದ ನಂದಾದಿಗಳ ಬಳಿಗೆ ಬಂದು, ವಿನಯದಿಂದ ಪ್ರಶ್ನೆಮಾಡುವನು. ''ಓ ಜನಕಾ! ನೀವೆಲ್ಲರೂ ಇಷ್ಟು ಸಂಭ್ರಮದಿಂದ ಓಡಾಡುವ ಕಾರಣವೇನು? ಯಾರಿಗಾಗಿ, ಯಾವ ಫಲವನ್ನುದ್ದೇಶಿಸಿ ಈ ಯಾಗವನ್ನು ಮಾಡುವಿರಿ! ಇದನ್ನು ಮುಖ್ಯವಾಗಿ ನಿಂತು ನಡೆಸತಕ್ಕ ಯಜಮಾನನಾರು? ಇದನ್ನು ತಿಳಿಯಬೇಕೆಂದು ನನಗೆ ಬಹಳ ಕುತೂಹಲವಿರುವುದರಿಂದ, ವಿವರಿಸಿ ಹೇಳಬೇಕು. ಅದರಲ್ಲಿ ನನಗೆ ತಿಳಿಸಬಾರದ ರಹಸ್ಯವೇನೂ ಇಲ್ಲವಷ್ಟೆ? ತಾನೆಂದೂ, ಇತರರೆಂದೂ ಭೇದದೃಷ್ಟಿಯಿಲ್ಲದೆ, ಶತ್ರುಗಳಲ್ಲಿಯೂ, ಮಿತ್ರರಲ್ಲಿಯೂ, ಉದಾಸೀನರಲ್ಲಿಯೂ ಸಮದೃಷ್ಟಿಯುಳ್ಳವರಾಗಿ, ಸಮಸ್ತಜೀವಗಳನ್ನೂ ಒಂದೇವಿಧವಾಗಿ ಭಾವಿಸತಕ್ಕ ನಿಮ್ಮಂತಹ ಸಾಧುಗಳಿಗೆ ಗೋಪ್ಯವಾದಕಾರ್ಯವಾವುದೂ ಇಲ್ಲ!ಒಂದುವೇಳೆ ವಿಷಮದೃಷ್ಟಿಯುಳ್ಳವರಾದವರೂ ಕೂಡ, ಶತ್ರುಗಳಲ್ಲಿಯೂ ಉದಾಸೀನರಲ್ಲಿಯೂ ಭೇದಬುದ್ಧಿಯನ್ನಿಟ್ಟರೂ ಇಡಬಹುದು. ಸ್ನೇಹಿತರ ವಿಷಯದಲ್ಲಿ ಅವರೂ ತಮ್ಮ ಮನಸ್ಸಿನಲ್ಲಿರುವುದನ್ನು ಮರೆಸದೆ ಹೇಳಿಬಿಡುವರು. ಆದುದರಿಂದ ನನ್ನಲ್ಲಿ ನಮಗೆ ಸಹಜವಾದ ಸ್ನೇಹಭಾವವಿದ್ದರೆ,ಇದರ ಕಾರಣವನ್ನು ನನಗೆ ತಿಳಿಸಬೇಕು!ಇದಲ್ಲದೆ ಬುದ್ಧಿವಂತರಾದವರು, ತಮ್ಮ ಇಷ್ಟಮಿತ್ರರೊಡನೆ ಆಲೋಚನೆಮಾಡಿಯೇ ಕಾರ್ಯಗಳನ್ನು ನಡೆಸುವರು. ಆದರಿಂದಲೇ ಬುದ್ಧಿಶಾಲಿಗಳಿಗೆ ಆರಂಭಿಸಿದ ಕಾರ್ಯವು ಕೈಗೂಡಬರುವುದು ಹಾಗೆ ಯೋಚಿಸದೆ ಕಾರ್ಯವನ್ನು ನಡೆಸತಕ್ಕವರಿಗೆ, ಹಿಡಿದಕಾರ್ಯವು ಸಫಲವಾಗಲಾರದು. ಆದುದರಿಂದ ಈಗ ನೀವು ಆರಂಭಿಸಿರುವ ಈ ಯಜ್ಞಕಾರ್ಯವನ್ನು, ಮುಂದಿನ ಫಲಾಫಲವಿಚಾರವನ್ನು ಮಾಡಿ ನಡೆಸುತ್ತಿರುವಿರಾ? ಅಥವಾ ಅಂಧಪರಂಪರೆಯಾಗಿ ಬಂದ ಲೋಕಾಚಾರವನ್ನನುಸರಿಸಿ ನಡೆಸುತ್ತಿರುವರಾ? ಈ ವಿಚಾರವನ್ನು ನನಗೆ ತಿಳಿಸಬೇಕು" ಎಂದನು. ಅದಕ್ಕಾ ನಂದನು ''ಕೃಷ್ಣಾ! ಕೇಳು! ವರ್ಷಕ್ಕೆ(ಮಳೆಗೆ) ಪರ್ಜನ್ಯನೆಂಬವನು ಅಧಿದೇವತೆಯೆನಿಸಿರುವನು. ಇಂದ್ರನೇ

ಆ ಹೆಸರಿನಿಂದ ಕರೆಯಲ್ಪಡುವನು. ಮಳೆಯನ್ನು ಕರೆಯತಕ್ಕ ಮೇಘಗಳು ಇಂದ್ರನಿಗೆ ಶರೀರವೆನಿಸಿರುವುವು. ಪ್ರಾಣಿಗಳಿಗೆ ಜೀವನಾಧಾರವಾದ ನೀರು ಆ ಮೇಘಗಳಿಂದಲೇ ಲಭಿಸಬೇಕಲ್ಲವೆ ? ಆ ಜಲದಿಂದ, ನಮಗೆ ಲಭಿಸಿದ ವಸ್ತುಗಳಮೂಲಕವಾಗಿ, ನಾವೂ ಇತರಜನರೂ ಮೇಘಾಧಿಪತಿಯಾದ ಇಂದ್ರನನ್ನು ಆರಾಧಿಸಬೇಕು ! ಇದರ ಫಲವೇನೆಂದು ಕೇಳುವೆಯಾ ? ಇಹಲೋಕದಲ್ಲಿ ಲಭಿಸಬೇಕಾದ ಧರ್ಮಾರ್ಥಕಾಮಗಳೆಂಬ ಮೂರು ಪುರುಷಾರ್ಥಗಳ ಸಿದ್ಧಿಗಾಗಿಯೂ, ನಾವು ಈ ಯಾಗದಿಂದ ಅವನನ್ನಾರಾಧಿಸಬೇಕು! ಆ ಯಾಗಶೇಷದಿಂದಲೇ ನಮ್ಮನಮ್ಮ ಜೀವನವನ್ನು ನಡೆಸಬೇಕು. ಮಳೆಯಿಂದಲೇ ನಮಗೆ ಜೀವನವು ! ಮೇಲೆ ಹೇಳಿದ ಪುರುಷಾರ್ಥತ್ರಯದಲ್ಲಿ ಅಪೇಕ್ಷೆಯುಳ್ಳ ಪುರುಷರಿಗೆ, ಆ ಇಂದ್ರನೇ ಫಲಸಿದ್ಧಿಯನ್ನುಂಟುಮಾಡತಕ್ಕವನು. ಕೃಷ್ಣಾ ! ಈ ಇಂದ್ರಯಾಗವೆಂಬುದು ನಮಗೆ ಹಿರಿಯರ ಕಾಲದಿಂದ ಕುಲಪರಂಪರೆಯಾಗಿ ನಡೆದು ಬಂದ ಧರ್ಮವು. ಕಾಮದಿಂದಲೋ ದ್ರವ್ಯಲೋಭದಿಂದಲೊ, ಇತರರ ಭಯದಿಂದಲೋ, ಅಥವಾ ದ್ವೇಷಬುದ್ಧಿಯಿಂದಲೋ ಇದನ್ನು ನಡೆಸದೆ ಬಿಟ್ಟುಬಿಟ್ಟವರಿಗೆ ಶ್ರೇಯಸ್ಸುಂಟಾಗಲಾರದು. ಆದುದರಿಂದ ನಮ್ಮೆಲ್ಲರಿಗೂ ಕುಲಪರಂಪರೆಯಾಗಿ ಬಂದ ಈ ಹಬ್ಬವನ್ನು ನಾವು ನಡೆಸುತ್ತಿರುವೆವು." ಎಂದನು.

ಹೀಗೆ ನಂದನೂ, ಇತರ ಗೋಪವೃದ್ಧರೂ ಹೇಳುತ್ತಿರುವ ಮಾತನ್ನು ಕೇಳಿ ಕೃಷ್ಣನು, ಇದೇ ನೆವದಿಂದ ಇಂದ್ರನಿಗೆ ಕೋಪವನ್ನು ಹುಟ್ಟಿಸಿ, ಆ ಮೂಲಕವಾಗಿ ಅವನಿಗೂ ತಾನು ನಿಯಾಮಕನೆಂಬುದನ್ನು ಲೋಕಕ್ಕೆ ತೋರಿಸಬೇಕೆಂದು ಮನಸ್ಸಿನಲ್ಲಿ ಸಂಕಲ್ಪಿಸಿ, ನಂದಾದಿಗಳನ್ನು ನೋಡಿ ನಗುತ್ತ ಹೀಗೆಂದು ಹೇಳುವನು ''ಓ ಜನಕಾ! ಏನು ಹೇಳಿದೆ? ಅರ್ಥಕಾಮಾದಿಪುರುಷಾರ್ಥಗಳಿಗೆಲ್ಲಾ ವರ್ಷವೇ ಆಧಾರವೆಂದೂ, ವರ್ಷಾಧಿಪತಿಯಾದ ಇಂದ್ರನಿಂದಲೇ ಆ ಫಲಸಿದ್ಧಿಯಾಗಬೇಕೆಂದೂ, ಅವನನ್ನು ನಾವೆಲ್ಲರೂ ಆರಾಧಿಸಬೇಕೆಂದೂ ಹೇಳಿದೆಯಲ್ಲವೆ? ಇದು ಕೇವಲಭ್ರಮವು ? ಲೋಕದಲ್ಲಿ ಸಮಸ್ತಜಂತುಗಳೂ ಕರ್ಮದಿಂದಲೇ ಹುಟ್ಟುವುವು! ಆ ಕರ್ಮದಿಂದಲೇ ಲಯಹೊಂದುವುವು. ಈ ನಡುವೆ ಜೀವಿತಕಾಲದಲ್ಲಿ ಸಂಭವಿಸು

ವ ಸುಖ!ದುಃಖ,ಭಯ,ಮುಂತಾದುವುಗಳೂ ಕರ್ಮಾನುಸಾರವಾಗಿಯೇ ನಡೆಯುವುವು. ಸತ್ತಮೇಲೆ ಅನುಭವಿಸಬೇಕಾದ ಲೋಕಾಂತರಸುಖಗಳೂ ಕರ್ಮಾನುಸಾರವಾಗಿರುವುವು! "ಆದರೆ ಅವರವರ ಕರ್ಮಾನುಸಾರವಾಗಿ, ಅವರವರಿಗೆ ಆಯಾಫಲಗಳನ್ನು ತಂದು ಜೋಡಿಸುವುದಕ್ಕಾದರೂ ಈಶ್ವರನೊಬ್ಬನಿರಬೇಕಲ್ಲವೆ ?" ಎಂದರೆ, ಜನಕಾ! ಆ ಈಶ್ವರನೂ ಅವರವರ ಕರ್ಮಾನುಸಾರವಾಗಿಯೇ ಫಲವನ್ನು ಕೊಡತಕ್ಕವನು. ಆ ವಿಷಯದಲ್ಲಿ ತಾನು ಸ್ವಾತಂತ್ರ್ಯವನ್ನು ವಹಿಸದೆ ಆಯಾ ಕರ್ಮಕರ್ತಗಳನ್ನೇ ಅನುಸರಿಸುವನು. ಹೀಗೆ ಸರ್ವೇಶ್ವರನೇ ಈ ವಿಷಯದಲ್ಲಿ ಪರತಂತ್ರನಾಗಿ ಕಾರ್ಯವನ್ನು ನಡೆಸುತ್ತಿರುವಾಗ, ಆಯಾ ಕರ್ಮಾನುವರ್ತಿಗಳಾಗಿರುವ ಪ್ರಾಣಿಗಳ ವಿಷಯದಲ್ಲಿ ಇಂದ್ರನು ಮಾಡತಕ್ಕುದೇನಿದೆ? ಸತ್ವಾದಿಗುಣಗಳಿಗೆ ತಕ್ಕಂತೆ ಆಯಾ ಪ್ರಾಣಿಗಳ ಸ್ವಭಾವವು ಬೇರ್ಪಡುವುವು. ಆ ಸ್ವಭಾವಕ್ಕೆ ತಕ್ಕಂತೆ ಕರ್ಮಗಳಲ್ಲಿ ಪ್ರವೃತ್ತಿಯುಂಟಾಗುವುದು. ಆಯಾಕರ್ಮಗಳಿಗೆ ತಕ್ಕಂತೆ ಫಲವನ್ನು ಹೊಂದುವುವು ಹೀಗೆ ಜೀವರಾಶಿಯೆಲ್ಲವೂ ತನ್ನ ಸ್ವಭಾವಕ್ಕೆ ಕಟ್ಟುಬಿದ್ದು, ಆಸ್ವಭಾವವನ್ನೇ ಅನುವರ್ತಿಸುತ್ತಿರುವುವು. ದೇವಾಸುರಮನುಷ್ಯಾದಿಗಳೊಡಗೂಡಿದ ಸಮಸ್ತಪ್ರಪಂಚವೂ, ಸಾತ್ವಿಕ ರಾಜಸ ತಾಮಸಗಳೆಂಬ ಸ್ವಸ್ವಭಾವದಲ್ಲಿಯೇ ನೆಲೆಗೊಂಡಿರುವುದು ಜನಕಾ! ಈಗ ನೀವು ಆರಾಧಿಸಬೇಕೆಂದಿರುವ ಇಂದ್ರನೂ ತನ್ನ ಕರ್ಮಾನುಗುಣವಾಗಿಯೇ ನಡೆಸಲ್ಪಡುತ್ತಿರುವನು. ಹೀಗೆ ತಾನೇ ಅಸ್ವತಂತ್ರನಾದ ಇಂದ್ರನು, ನಿಮಗೆ ಯಾವ ಪುರುಷಾರ್ಥವನ್ನು ಕೈಗೂಡಿಸಬಲ್ಲನು? ತನ್ನ ಸ್ಥಿತಿಯನ್ನೇ ತಾನು ಬದಲಾಯಿಸಿಕೊಳ್ಳಲಾರದವನು, ನಿಮಗೆ ಕರ್ಮಾನುಗುಣವಾಗಿ ಅನುಭವಿಸಬೇಕಾದುದನ್ನು ಬದಲಾಯಿಸಬಲ್ಲನೆ? ಸರ್ವೇಶ್ವರನೊಬ್ಬನುಮಾತ್ರ, ಆಯಾಜೀವಗಳನ್ನು ಸದಸತ್ಕಾರ್ಯಗಳಲ್ಲಿ ಪ್ರೇರಿಸುವುದರಮೂಲಕವಾಗಿ, ಅವರ ಸುಖದುಃಖಗಳಿಗೆ ದಾರಿಯನ್ನು ತೋರಿಸಬಲ್ಲನೇಹೊರತು, ಫಲವನ್ನು ಕೊಡುವಾಗಮಾತ್ರ,ತಾನೂ,ಆ ಕರ್ಮಗಳನ್ನೇ ಆಧಾರವಾಗಿಟ್ಟುಕೊಳ್ಳುವನು. ಈಶ್ವರನೂ ಈ ವಿಷಯದಲ್ಲಿ ಪರತಂತ್ರನೇ! ಕರ್ಮದಿಂದಲೇ ಪ್ರತಿಜಂತುವೂ ಉತ್ತಮಾಧಮಜನ್ಮಗಳನ್ನು ಹೊಂದಿ, ಕೊನೆಗೆ ಅದನ್ನು ಬಿಟ್ಟುಬಿಡುವುದು. ಶತ್ರುಮಿತ್ರೋದಾಸೀನಾದಿ

ದೂ, ಮಿತ್ರನೆಂದೂ, ಉದಾಸೀನನೆಂದೂ, ಗುರುವೆಂದೂ, ಇಂದ್ರಾದಿ ದೇವತೆಗಳೆಂದೂ ಹೇಳಿಸಿಕೊಳ್ಳುವುದೆಲ್ಲವೂ ಅವರವರ ಕರ್ಮಮೂಲಕವಾಗಿ ಬಂದ ಸ್ಥಿತಿಗತಿಗಳೇಹೊರತು ಬೇರೆಯಲ್ಲ! ಹೀಗೆ ಕರ್ಮವೇ ಅವರವರ ಸುಖದುಃಖಗಳಿಗೆ ಹೇತುವಾದುದರಿಂದ, ನಿಜಸ್ವಭಾವಕ್ಕೆ ತಕ್ಕಂತೆ ಕರ್ಮಗಳನ್ನು ನಡೆಸತಕ್ಕ ಪುರುಷನು, ತನ್ನ ಸ್ಥಿತಿಗತಿಗೆ ಕಾರಣವಾದ ಕರ್ಮವನ್ನಲ್ಲವೇ ಗೌರವಿಸಿ ಪೂಜಿಸಬೇಕು! ಆ ಕರ್ಮದ ಪ್ರಭಾವವನ್ನು ಎಷ್ಟೆಂದು ಹೇಳಬಹುದು? ಜನಕಾ! ಮುಖ್ಯವಾಗಿ ಲೋಕದಲ್ಲಿ ಯಾವಪುರುಷನು ಯಾವ ವೃತ್ತಿಯಿಂದ ಜೀವಿಸುವನೋ ಆ ವೃತ್ತಿಗೆ ಸಾಧನಗಳಾದ ವಸ್ತುಗಳನ್ನೇ ಅವನು ದೈವವೆಂದು ಭಾವಿಸಿ ಪೂಜಿಸಬೇಕಾದುದುಚಿತವು. ತನಗೆ ಜೀವನಹೇತುವಾದ ವಸ್ತುವನ್ನು ಬಿಟ್ಟು ಬೇರೊಂದನ್ನು ಪೂಜಿಸತಕ್ಕವನು, ಎಂದಿಗೂ ಅದರಿಂದ ಕ್ಷೇಮವನ್ನು ಪಡೆಯಲಾರನು. ಕೈಹಿಡಿದ ಗಂಡನನ್ನು ಬಿಟ್ಟು ಜಾರನನ್ನು ಸೇವಿಸುವ ಹೆಂಗಸಿನ ಸ್ಥಿತಿಯಂತೆ, ಅವನ ಸ್ಥಿತಿಯು ಕೊನೆಗೆ ಹಾಸ್ಯಾಸ್ಪದವಾಗುವುದು. ಬ್ರಾಹ್ಮಣನು ವೇದಾಧ್ಯಯನದಿಂದಲೂ ಕ್ಷತ್ರಿಯನು ರಾಜ್ಯಪಾಲನದಿಂದಲೂ, ವೈಶ್ಯನು ಕೃಷಿವಾಣಿಜ್ಯಾದಿವಾರ್ತೆಯಿಂದಲೂ, ಶೂದ್ರನು ಈ ಮೇಲಿನ ಮೂರುವರ್ಣದವರ ಸೇವೆಯಿಂದಲೂ ಜೀವಿಸಬೇಕೆಂಬುದು ಶಾಸ್ತ್ರವಿಧಿಯು! ವಾರ್ತೆಯೆಂಬುದರಲ್ಲಿ ಕೃಷಿ, ವಾಣಿಜ್ಯ, ಗೋರಕ್ಷಣೆ, ಕುಸೀದಗಳೆಂಬ (ಹಣವನ್ನು ಬಡ್ಡಿಗೆ ಕೊಟ್ಟು ಅದರಿಂದ ಜೀವಿಸುವುದು) ನಾಲ್ಕು ಭೇದಗಳುಂಟು! ನಾವು ಯಾವಾಗಲೂ ಗೋರಕ್ಷಣೆಯಿಂದ ಜೀವಿಸತಕ್ಕವರು! ಈ ನಮ್ಮ ವೃತ್ತಿಗೂ ಇಂದ್ರನಿಗೂ ಸಂಬಂಧವೇನು? ಸತ್ವ, ರಜಸ್ಸು, ತಮಸ್ಸು ಎಂಬೀ ಮೂರುಗುಣಗಳೂ ಕ್ರಮವಾಗಿ ಪ್ರಾಣಿಗಳ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣಗಳೆನಿಸಿರುವುವು. ಈ ಮೂರುಗುಣಗಳಿಂದಲೇ ಪ್ರಪಂಚವ್ಯಾಪಾರವೆಲ್ಲವೂ ನಡೆದು ಹೋಗುವುದು. ಇವುಗಳಲ್ಲಿ ರಜೋಗುಣವೆಂಬುದು ಸ್ತ್ರೀ ಪುರುಷರ ಸಂಯೋಗಕ್ಕೆ ಹೇತುವಾಗಿ, ಅದರಿಂದ ಜಗತ್ತಿನ ಉತ್ಪತ್ತಿಕಾರ್ಯವು ನಡೆಯುವುದು. ಮೇಘಗಳೂ ಆ ರಜಸ್ಸ್ವಭಾವದಿಂದ ಪ್ರೇರಿಸಲ್ಪಟ್ಟೇ ಕಾಲಕಾಲಕ್ಕೆ ಮಳೆಯನ್ನು ಸುರಿಸಿಹೋಗುವುವು. ಪ್ರಾಣಿಗಳಿಗೆ ಆ ಮಳೆಯಿಂದ

ಜೀವನವು ನಡೆಯುಹೋಗುವುದು! ಇದರಲ್ಲಿ ಇಂದ್ರನು ಮಾಡಬೇಕಾದ ಕಾರ್ಯವೇನಿದೆ? ಜನಕಾ! ನಾವು ಗೊಲ್ಲರು! ನಮಗೆ ಪಟ್ಟಣಗಳಾಗಲಿ, ಜನಪದಗಳಾಗಲಿ, ಗ್ರಾಮಗಳಾಗಲಿ, ಮನೆಗಳಾಗಲಿ ಯಾವುದೂ ಇಲ್ಲ! ನಾವು ಯಾವಾಗಲೂ ಕಾಡುಗುಡ್ಡಗಳಲ್ಲಿದ್ದು ಕಾಲವನ್ನು ಕಳೆಯತಕ್ಕವರು! ಪಶುಗಳಿಂದಲೇ ನಮಗೆ ಜೀವನವು. ಬ್ರಾಹ್ಮಣರು ನಮಗೆ ಕುಲಗುರುಗಳು! ಬೆಟ್ಟಗಳು ನಮಗೆ ವಾಸಸ್ಥಾನಗಳು! ಆದುದರಿಂದ ನಾವು ಗೋವುಗಳನ್ನೂ, ಬ್ರಾಹ್ಮಣರನ್ನೂ, ಪರ್ವತಗಳನ್ನೂ ಆರಾಧಿಸಬೇಕಲ್ಲದೆ, ಇಂದ್ರನಿಂದ ನಮಗೇನು? ಈಗ ನೀವೆಲ್ಲರೂ ಆ ಇಂದ್ರನ ಪೂಜೆಗಾಗಿ ಸಿದ್ಧಗೊಳಿಸಿರತಕ್ಕ ಸಾಧನಗಳಿಂದಲೇ, ಈ ಪರ್ವತವನ್ನು ಪೂಜಿಸಿರಿ! ಬಗೆಬಗೆಯ ಅಡಿಗೆಗಳನ್ನು ಸಿದ್ಧಪಡಿಸಿರಿ! ತೊವ್ವೆ, ಪಾಯಸ, ಗೋದುವೆಯನ್ನ, ಚಕ್ಕುಲಿ, ಕಜ್ಜಾಯ ಮುಂತಾದುವುಗಳೆಲ್ಲಾ ಸಿದ್ಧವಾಗಲಿ! ನಮ್ಮ ಮಂದೆಯಲ್ಲಿ ಸಿಕ್ಕುವ ಹಾಲು, ಮೊಸರು, ಬೆಣ್ಣೆ ಮುಂತಾದುವುಗಳನ್ನೆಲ್ಲಾ ಸಂಗ್ರಹಿಸಿಡಿರಿ! ಬ್ರಹ್ಮವಾದಿಗಳಾದ ಬ್ರಾಹ್ಮಣರಮೂಲಕವಾಗಿ ಹೋಮಕಾರ್ಯಗಳನ್ನು ಮಾಡಿಸಿರಿ! ಅವರಿಗೆ ಮೃಷ್ಟಾನ್ನಭೋಜನವನ್ನಿಡಿರಿ! ಭೂರಿದಕ್ಷಿಣೆಗಳನ್ನು ಕೊಡಿರಿ! ಗೋದಾನವನ್ನು ಮಾಡಿರಿ! ಮತ್ತು ನಮ್ಮ ಮಂದೆಯನ್ನು ಕಾಯುತ್ತಿರುವ ನಾಯಿಗಳಿಗೂ, ಚಂಡಾಲರಿಗೂ, ಪತಿತರಿಗೂ ಇತರ ಹೀನಜಾತಿಯವರಿಗೂ ಸಮೃದ್ಧವಾಗಿ ಅನ್ನವನ್ನಿಕ್ಕಿ ಸಂತೋಷಪಡಿಸಿರಿ! ನಮ್ಮ ಗೋವುಗಳಿಗೆ ಸಮೃದ್ಧವಾಗಿ ಹುಲ್ಲನ್ನು ಹಾಕಿರಿ! ಈ ಪರ್ವತಕ್ಕೂ ಬಲಿಯನ್ನು ಕೊಟ್ಟು ಪೂಜಿಸಿರಿ! ನಾವೆಲ್ಲರೂ ಸುಗಂಧವಸ್ತ್ರಾದಿಗಳಿಂದ ಅಲಂಕೃತರಾಗಿ, ಹಬ್ಬದೂಟವನ್ನು ಮಾಡಿ, ನಮ್ಮ ಗೋವುಗಳನ್ನೂ, ಬ್ರಾಹ್ಮಣರನ್ನೂ, ಅಗ್ನಿಗಳನ್ನೂ, ಈ ಪರ್ವತಗಳನ್ನೂ ಪ್ರದಕ್ಷಿಣ ಮಾಡುವೆವು. ಜನಕಾ! ಇದೇ ನನ್ನ ಅಭಿಪ್ರಾಯವು! ಇದರಮೇಲೆ ನಿಮ್ಮ ಇಷ್ಟದಂತೆ ನಡೆಸಬಹುದು! ಮುಖ್ಯವಾಗಿ ಗೋವುಗಳಿಗೂ, ಬ್ರಾಹ್ಮಣರಿಗೂ ಈಪರ್ವತಕ್ಕೂ ಪೂಜೆಯನ್ನು ನಡೆಸಿದರೆ, ನನ್ನ ಮನಸ್ಸಿಗೆ ತೃಪ್ತಿಯಾಗುವುದು." ಎಂದನು. ಓ ಪರೀಕ್ಷಿದ್ರಾಜಾ! ಕಾಲರೂಪಿಯಾದ ಭಗವಂತನು, ಇಂದ್ರನ ಹೆಮ್ಮೆಯನ್ನು ಮುರಿಯಬೇಕೆಂಬ ಉದ್ದೇಶದಿಂದಲೇ ಈ ಮಾತ

ನ್ನು ಹೇಳಿದನು. ನಂದಾದಿಗಳಿಗೆ ಆದರ ನಿಜಸ್ಥಿತಿಯು ತಿಳಿಯದಿದ್ದರೂ, ಆ ಕೃಷ್ಣನ ಮಾತು ಅವರಿಗೆ ಬಹಳ ಸಮಂಜಸವೆಂದೇ ತೋರಿತು. ಆ ಕೃಷ್ಣನು ಹೇಳಿದಂತೆಯೇ ಅವರೆಲ್ಲರೂ ಇಂದ್ರಯಾಗವನ್ನು ನಿಲ್ಲಿಸಿ, ಅದಕ್ಕಾಗಿ ಸಂಗ್ರಹಿಸಿದ್ದ ಸಾಮಗ್ರಿಗಳಿಂದಲೇ, ಬ್ರಾಹ್ಮಣರನ್ನೂ, ಪರ್ವತಗಳನ್ನೂ, ಗೋವುಗಳನ್ನೂ ಆರಾಧಿಸತೊಡಗಿದರು. ಬ್ರಾಹ್ಮಣರಿಂದ ಸ್ವಸ್ತಿವಾಚನಗಳನ್ನು ಮಾಡಿಸಿದರು! ಹಸುಗಳಿಗೆ ಯಥೇಚ್ಛವಾದ ಹುಲ್ಲನ್ನೂ, ಪರ್ವತಕ್ಕೆ ಬಲಿಯನ್ನೂ ಕೊಟ್ಟು, ತಮ್ಮ ಮಂದೆಯನ್ನು ಮುಂದಿಟ್ಟುಕೊಂಡು, ತಾವೂ ವಸ್ತ್ರಾಭರಣಗಳಿಂದಲಂಕೃತರಾಗಿ, ತಮ್ಮತಮ್ಮ ಸ್ತ್ರೀಯರೊಡನೆ ಎತ್ತಿನ ಬಂಡಿಗಳನ್ನೇರಿ ಕುಳಿತು, ಕೃಷ್ಣನ ಚರಿತ್ರಗಳನ್ನು ಹಾಡುತ್ತ, ಬ್ರಾಹ್ಮಣರ ಸ್ವಸ್ತಿವಾಚನಗಳೊಡನೆ ಆ ಪರ್ವತವನ್ನು ಪ್ರದಕ್ಷಿಣಮಾಡಿದರು. ಓ ಪರೀಕ್ಷಿದ್ರಾಜಾ ! ಆಗ ಕೃಷ್ಣನು ಮಾಡಿದ ಮತ್ತೊಂದು ಚಮತ್ಕಾರವನ್ನು ಹೇಳುವೆನು ಕೇಳು ! ನಂದಾದಿಗಳು ಕೃಷ್ಣನ ನಿರ್ಬಂಧಕ್ಕಾಗಿ ಈ ಕಾರ್ಯವನ್ನು ನಡೆಸಿದರೂ, ಈ ಹಬ್ಬವನ್ನು ನಡೆಸುವಾಗ, ಅವರ ಮನಸ್ಸಿಗೆ ನಂಬಿಕೆಯಿರಲಿಲ್ಲ! ನಾವು “ಅಚೇತನವಾದ ಈ ಪರ್ವತಕ್ಕೆ ಬಲಿಯನ್ನು ಕೊಟ್ಟು ಪ್ರಯೋಜನವೇನು? ಕೊಟ್ಟ ಬಲಿಗಳನ್ನು ಗ್ರಹಿಸುವುದಕ್ಕಾಗಲಿ, ನಮ್ಮನ್ನು ಅನುಗ್ರಹಿಸುವುದಕ್ಕಾಗಲಿ ಇದಕ್ಕೆ ಶಕ್ತಿಯೆಲ್ಲಿಯದು?” ಎಂಬೀ ಶಂಕೆಯು ಮಾತ್ರ ಅವರ ಮನಸ್ಸನ್ನು ಬಿಟ್ಟು ಹೋಗಲಿಲ್ಲ”ಹಾಗಿದ್ದರೂ ಕೃಷ್ಣನ ನಿರ್ಬಂಧಕ್ಕಾಗಿ ಅವರೆಲ್ಲರೂ ಅವನು ಹೇಳಿದಂತೆ ನಡೆಸುತಿದ್ದರು. ಸರ್ವಜ್ಞನಾದ ಕೃಷ್ಣನು, ಅವರ ಶಂಕೆಯನ್ನು ನೀಗಿಸುವುದಕ್ಕಾಗಿ, ತಾನು ಕೃಷ್ಣರೂಪದಿಂದ ಅವರ ನಡುವೆ ನಿಂತಿದ್ದಹಾಗೆಯೇ, ಬೇರೊಂದು ದೊಡ್ಡರೂಪದಿಂದ ಬಂದು, ಅವರು ಕೊಟ್ಟ ಉಪಹಾರಗಳೆಲ್ಲವನ್ನೂ ಭಕ್ಷಿಸುತ್ತ “ಓ ಗೋಪಾಲಕರೆ! ಇದೋ! ನಾನೇ ಪರ್ವತವು! ನಿಮ್ಮ ಪೂಜೆಗಾಗಿ ಸಂತೋಷಪಟ್ಟೆನು” ಎಂದು ಕೂಗಿ ಹೇಳಿದನು. ಇದನ್ನುನೋಡಿ ಎಲ್ಲರೂ ಆಶ್ಚರ್ಯಪಡುತ್ತಿರುವಾಗ, ಇತ್ತಲಾಗಿ ಗೋಪಾಲಕರ ಗುಂಪಿನಲ್ಲಿದ್ದ ಬಾಲರೂಪಿಯಾದ ಕೃಷ್ಣನು, ತನ್ನ ಬಂಧುಗಳನ್ನು ಕುರಿತು. “ಓ ಜನಕಾ ! ಎಲೈ ಗೋಪಾಲಕರೆ! ಈ ಆಶ್ಚರ್ಯವನ್ನು ನೋಡಿದಿರಾ! ಈ ಪರ್ವತವು ನಮ್ಮ ಪೂಜೆ

ಯನ್ನು ಕೈಕೊಳ್ಳುವುದಕ್ಕಾಗಿ,ಪುರುಷರೂಪವನ್ನು ತಾಳಿಬಂದು ನಮ್ಮನ್ನು ಅನುಗ್ರಹಿಸುತ್ತಿರುವುದು. ಆಹಾ! ಇದಲ್ಲವೇ ನಮ್ಮ ಭಾಗ್ಯವು! ಇದು ಕಾಮರೂಪಿಯೆಂದು ತೋರುವುದು. ನಾವು ಇದನ್ನು ತಿರಸ್ಕರಿಸಿ ಇಂದ್ರಯಾಗವನ್ನೇ ಮಾಡಿದ್ದರೆ,ಇದು ಆಗಲೇ ನಮ್ಮನ್ನು ಧ್ವಂಸಮಾಡಿಬಿಡುತಿತ್ತಲ್ಲವೆ? ಆದುದರಿಂದ ಈಗ ನಾವು ಮಾಡಿದುದೇ ಸರಿ!ಇನ್ನು ನಾವು,ನಮ್ಮ ಮತ್ತು ನಮ್ಮ ಗೋವುಗಳ ಕ್ಷೇಮಕ್ಕಾಗಿ, ಇದಕ್ಕೆ ನಮಸ್ಕರಿಸಿ, ಅಪರಾಧಕ್ಷಾಪಣವನ್ನು ಮಾಡುವೆವು." ಎಂದು ಹೇಳುತ್ತ, ಮೊದಲು ತಾನೇ ಮುಂದೆ ಬಂದು, ಉದ್ದಕ್ಕೆ ಅಡ್ಡಬಿದ್ದು, ಆ ಪರ್ವತಕ್ಕೆ ಸಾಷ್ಟಾಂಗಪ್ರಣಾಮವನ್ನು ಮಾಡುವನೆವದಿಂದ, ತನಗೆ ತಾನೇ ನಮಸ್ಕರಿಸಿಕೊಂಡನು. ಇದನ್ನು ನೋಡಿ ಇತರಗೋಪಾಲರೂ ಅದಕ್ಕೆ ನಮಸ್ಕರಿಸಿದರು. ರಾಜೇಂದ್ರಾ! ಹೀಗೆ ಶ್ರೀಕೃಷ್ಣನ ಪ್ರೇರಣೆಯಿಂದ, ನಂದಾದಿಗೋಪಾಲಕರೆಲ್ಲರೂ, ಇಂದ್ರಯಾಗಕ್ಕೆ ಪ್ರತಿಯಾಗಿ, ಗೋಬ್ರಾಹ್ಮಣರಿಗೂ, ಗೋವರ್ಧನಪರ್ವತಕ್ಕೂ ಪೂಜೆಯನ್ನೊಪ್ಪಿಸಿ, ಕೃಷ್ಣನೊಡನೆ ತಮ್ಮ ಊರಿಗೆ ಹಿಂತಿರುಗಿ ಬಂದರು. ಇದು ಇಪ್ಪತ್ತುನಾಲ್ಕನೆಯ ಅಧ್ಯಾಯವು.

---

**{ ಇಂದ್ರನು ಕೋಪದಿಂದ ಸಂವರ್ತಕಾದಿಮೇಘಗಳನ್ನು ಪ್ರೇರಿಸಿ, ಗೋಕುಲದಲ್ಲಿ ಅತಿವೃಷ್ಟಿಯನ್ನು ಸುರಿಸಿದುದು. }**

ರಾಜೇಂದ್ರಾ! ಕೇಳು! ಹೀಗೆ ಗೋಪಾಲಕರು, ಕೃಷ್ಣನ ಬಲದಿಂದ ತನಗೆ ನಡೆಯಬೇಕಾದ ಪೂಜೆಯನ್ನು ತಪ್ಪಿಸಿದುದಕ್ಕಾಗಿ ಇಂದ್ರನಿಗೆ ಅವರಮೇಲೆ ಅತ್ಯಾಕ್ರೋಶವುಂಟಾಯಿತು. ತಾನೇ ಲೋಕಪ್ರಭುವೆಂದು ತಿಳಿದು ಗರ್ವಾಂಧನಾಗಿದ್ದ ಆ ಇಂದ್ರನು, ನಂದಾದಿಗೋಪಾಲಕರಿಗೂ, ಅವರ ಮಂದೆಗಳಿಗೂ ಹಾನಿಯನ್ನುಂಟುಮಾಡಬೇಕೆಂಬದುರುದ್ದೇಶದಿಂದ, ಪ್ರಳಯಕಾಲದಲ್ಲಿ ಲೋಕನಾಶಕ್ಕಾಗಿ ಕಳುಹಿಸತಕ್ಕ ಸಾಂವರ್ತಕವೆಂಬ ಮೇಘಸಮೂಹವನ್ನು ಕರೆಸಿ, ಹೀಗೆಂದು ಹೇಳುವನು. "ಓ ಮೇಘಗಳೆ ! ನಿಲ್ಲುವುದಕ್ಕೆ ನೆಳಲಿಲ್ಲದೆ, ಕಾಡಿನಲ್ಲಿ ಅಲೆಯುತ್ತಿದ್ದರೂ, ಬೃಂದಾವನದಲ್ಲಿ ವಾಸಮಾಡುವ ಆ ಗೊಲ್ಲರು, ಐಶ್ವರ್ಯಮದದಿಂದ ಮಾಡಿದ ಕಾರ್ಯವನ್ನು

ನೋಡಿದಿರಾ ? ಕೇವಲಮನುಷ್ಯಮಾತ್ರನಾದ ಆ ಕೃಷ್ಣನ ಮಾತನ್ನು ನಂಬಿ, ದೇವತೆಗಳಾದ ನಮ್ಮನ್ನು ತಿರಸ್ಕರಿಸಿದರಲ್ಲವೆ? ಬುದ್ಧಿಕ್ಲೇಶಕರವಾದ ಆತ್ಮವಿದ್ಯೆಗಾಗಿ ಶ್ರಮಪಡದೆ, ಯಾಗಾದಿಕರ್ಮಗಳನ್ನೇ ನಾವೆಯಾಗಿಟ್ಟುಕೊಂಡು, ಸಂಸಾರಸಮುದ್ರವನ್ನು ದಾಟುವುದು ವಿವೇಕಿಗಳ ಕಾರ್ಯವು ! ನಮ್ಮಂತಹ ದೇವತೆಗಳನ್ನಾರಾಧಿಸುವುದರಿಂದ, ಅವರವರಿಗೆ ಬೇಕಾದ ಪುರುಷಾರ್ಥಗಳೆಲ್ಲವೂ ಕೈಗೂಡುವುವು. ಹೀಗಿರುವಾಗಲೂ ಬುದ್ಧಿಯಿಲ್ಲದ ಆ ಗೋಪಾಲಕರು, ಬಾಯಾಳಿಯಾಗಿಯೂ, ಮೂರ್ಖನಾಗಿಯೂ, ಅವಿಧೇಯನಾಗಿಯೂ, ಏನೂ ತಿಳಿಯದ ಬಾಲನಾಗಿದ್ದರೂ ಪಂಡಿತಂಮನ್ಯನಾಗಿಯೂ ಇರುವ, ಕೇವಲಮನುಷ್ಯಮಾತ್ರನಾದ ಆ ಕೃಷ್ಣನ ಮಾತನ್ನು ನಂಬಿ, ನಮ್ಮೆಲ್ಲರಿಗೂ ಅವಮಾನವನ್ನು ಮಾಡಿರುವರು. ಹೀಗೆ ಆ ಕೃಷ್ಣನ ಬಲದಿಂದಲೂ, ಧನಮದದಿಂದಲೂ ಬೀಗಿ ಬೆರೆಯುತ್ತಿರುವ ಆ ಗೊಲ್ಲರ ಅಹಂಕಾರವನ್ನು ಮುರಿಯದೆ ಬಿಡಬಾರದು. ಆದುದರಿಂದ ಈಗಲೇ ನೀವು ದೊಡ್ಡ ಮಳೆಯನ್ನು ಕರೆದು, ಆ ಗೊಲ್ಲರ ಗರ್ವವನ್ನಡಗಿಸಬೇಕು ! ಅವರ ಮಂದೆಗಳೆಲ್ಲವೂ ಮಳೆಯಲ್ಲಿ ಸಿಕ್ಕಿ ಸಾಯುವಂತೆ ಮಾಡಬೇಕು! ಇನ್ನು ನೀವು ಗೋಕುಲದಕಡೆಗೆ ಹೊರಡಿರಿ! ನಾನೂ ಐರಾವತವನ್ನೇರಿ ಮಹಾವೇಗವುಳ್ಳ ಸಪ್ತಮಾರುತಗಳೊಡನೆ ನಿಮಗೆ ಬೆಂಬಲವಾಗಿ ಅಲ್ಲಿಗೆ ಬರುವೆನು ನಾವೆಲ್ಲರೂ ಸೇರಿ ಗೋಪಾಲಕರನ್ನು ಧ್ವಂಸಮಾಡಬೇಕು" ಎಂದನು ಈ ಇಂದ್ರಾಜ್ಞೆಯನ್ನು ಕೇಳಿದೊಡನೆ, ಮೇಘಗಳೆಲ್ಲವೂ ವಾಯುಪ್ರೇರಿತಗಳಾಗಿ, ನಿರಂಕುಶವೇಗದಿಂದ ಹೊರಟು, ಗೋಕುಲದಮೇಲೆ ಮಹಾವೃಷ್ಟಿಯನ್ನು ಕರೆಯತೊಡಗಿದುವು. ಕ್ಷಣಕ್ಷಣಕ್ಕೂ ಮಿಂಚುಗಳು! ಭಯಂಕರವಾದ ಗುಡುಗಿನ ಧ್ವನಿಗಳು! ವೃ! ನ್ನದೊಡ್ಡ ಆಲಿಕಲ್ಲುಗಳು! ಮರದ ತೊಲೆಗಳಂತೆ ಎಡೆಬಿಡದೆ ಬೀಳುತ್ತಿರುವ ನೀರಿನ ಹನಿಗಳು! ಹೀಗೆ ಆ ಮೇಘಗಳು ತಮ್ಮ ಸರ್ವಶಕ್ತಿಯನ್ನೂ ಉಪಯೋಗಿಸಿ, ಎಡೆಬಿಡದೆ ಮಳೆಯನ್ನು ಕರೆಯುತ್ತಿದ್ದುವು. ಕ್ಷಣಮಾತ್ರದೊಳಗಾಗಿ ಭೂಮಿಯೆಲ್ಲವೂ ಕೇವಲಜಲಮಯವಾಗಿ, ಹಳ್ಳತಿಟ್ಟುಗಳೇ ಕಾಣದಂತಾಯಿತು. ಮಿತಿಮೀರಿದ ಮಳೆ, ಮತ್ತು ಬಿರುಗಾಳಿ,ಇವುಗಳ ಬಡಿತಕ್ಕೆ ತಡೆಯಲಾರದೆ, ದನಕರು

ಗಳೆಲ್ಲವೂ ನಡುಗುತಿದ್ದುವು. ಗೋಪಗೋಪಿಯರೆಲ್ಲರೂ ಚಳಿಯ ಬಾಧೆಯಿಂದ ತತ್ತಳಿಸುತಿದ್ದರು. ಆಗ ಸಮಸ್ತಗೋಪಾಲಕರೂ ಬೇರೆ ಏನನ್ನೂ ತೋರದೆ "ಗೋವಿಂದನೇ ಗತಿ" ಎಂದು ಭಗವಂತನಮೇಲೆ ಭಾರವನ್ನು ಹಾಕಿ, ತಮ್ಮ ತಮ್ಮ ಮಕ್ಕಳುಮರಿಗಳನ್ನು ಮೈಯಲ್ಲಿ ಹುದುಗಿಸಿಕೊಂಡು, ಮಳೆಯಲ್ಲಿ ನಡುಗುತ್ತ ಕೃಷ್ಣನಬಳಿಗೆ ಬಂದು ಮೊರೆಯಿಡುವರು. "ಕೃಷ್ಣಾ! ಕೃಷ್ಣಾ! ಮಹಾಭಾಗಾ! ಓ ಪ್ರಭೂ! ನಿನ್ನನ್ನೇ ನಂಬಿ ಬಂದ ಈ ಗೋಕುಲವೆಲ್ಲವೂ ಮಳೆಯಲ್ಲಿ ಸಿಕ್ಕಿ ಸಾಯುತ್ತಿರುವುದು! ಪರ್ಜನ್ಯದೇವನ ತೀವ್ರಕೋಪಕ್ಕೆ ಪಾತ್ರರಾದ ನಮ್ಮನ್ನು ರಕ್ಷಿಸಬೇಕು ದೇವಾ! ನೀನು ಭಕ್ತವತ್ಸಲನಲ್ಲವೆ?" ಎಂದು ಆ ಕೃಷ್ಣನ ಪಾದಮೂಲದಲ್ಲಿ ಬಿದ್ದು ಶರಣಾಗತಿಯನ್ನು ಮಾಡಿದರು ಆಗ ಕೃಷ್ಣನು, ಗೋಪಾಲಕರೆಲ್ಲರೂ ಕಲ್ಲುಮಳೆಗೆ ಸಿಕ್ಕಿ, ಅಲ್ಲಲ್ಲಿ ಮೂರ್ಛಿತರಾಗಿ ಬೀಳುತ್ತಿರುವುದನ್ನು ಕಂಡು, ಅದು ದೇವೇಂದ್ರನ ಚೇಷ್ಟೆಯೆಂಬುದನ್ನು ತಿಳಿದು, ತನ್ನಲ್ಲಿ ತಾನು ಹೀಗೆಂದಾಲೋಚಿಸುವನು. "ಆಹಾ! ಈಗ ಮಳೆಗಾಲವಲ್ಲದಿದ್ದರೂ ಭಯಂಕರವಾದ ಆಲಿಕಲ್ಲುಗಳೊಡನೆ ಎಡೆಬಿಡದೆ ಮಳೆಯು ಸುರಿಯುತ್ತಿರುವುದು. ಬಿರುಗಾಳಿಯ ವೇಗವು ತಡೆಯಲಸಾಧ್ಯವಾಗಿರುವುದು. ಇಂದ್ರನು, ತನ್ನ ಯಾಗವು ಪ್ರತಿಹತವಾಯಿತೆಂಬ ಕೋಪದಿಂದ, ಈ ಗೋಕುಲವನ್ನು ನಾಶಮಾಡುವುದಕ್ಕಾಗಿಯೇ ಈ ಕುಚೇಷ್ಟೆಯನ್ನಾರಂಭಿಸಿದಂತಿದೆ! ಆದರೇನು? ಇರಲಿ! ಅದಕ್ಕೆ ತಕ್ಕ ಪ್ರತೀಕಾರವನ್ನು ನನ್ನ ಸಾಮರ್ಥ್ಯದಿಂದ ಸಾಧಿಸುವೆನು. ತಾವೇ ಲೋಕಪಾಲಕರೆಂದು ತಿಳಿದು, ಅಜ್ಞಾನದಿಂದ ಪ್ರವರ್ತಿಸುತ್ತಿರುವ ಆ ದೇವತೆಗಳಿಗೆ, ಐಶ್ವರ್ಯಮದದಿಂದುಂಟಾದ ಅಹಂಕಾರವನ್ನು ತಗ್ಗಿಸುವುದಕ್ಕೆ ಇದೇ ತಕ್ಕ ಸಮಯವು ಸತ್ವಗುಣಪ್ರಧಾನರಾದ ದೇವತೆಗಳಿಗೆ, ಸಹಜವಾಗಿ ನನ್ನಲ್ಲಿ ಭಕ್ತಿಯುಂಟು! ನನ್ನಲ್ಲಿ ಭಕ್ತಿಯುಳ್ಳವರಿಗೆ, ತಾವೇ ಪ್ರಭುಗಳೆಂಬ ಅಹಂಕಾರವು ಹುಟ್ಟುವುದಕ್ಕೆ ಕಾರಣವಿಲ್ಲ! ಹಾಗಿದ್ದರೂ ಪ್ರಕೃತಿವಶದಿಂದ ಅವರಿಗೆ ತತ್ಕಾಲಕ್ಕೆ ಈ ಗರ್ವವು ಹುಟ್ಟಿರಬೇಕೆಂದು ತೋರುವುದು ಈಗಲೇ ಈ ಅಹಂಕಾರವನ್ನು ಮುರಿಯದಿದ್ದರೆ, ಮುಂದೆ ಅವರಿಗೆ ಕ್ಷೇಮವಾಗಲಾರದು! ಆದುದರಿಂದ ಅವರಿಗೆ

ಈಗ ಮಾನಭಂಗವನ್ನು ಮಾಡುವುದರಿಂದ, ಅವರನ್ನು ಸನ್ಮಾರ್ಗಕ್ಕೆ ತರುವೆನು. ಈಗ ನಾನು ಅವರಿಗೆ ಮಾಡತಕ್ಕ ಗರ್ವಭಂಗವು ಅನುಗ್ರಹವೇ ಹೊರತು ದಂಡನೆಯಾಗಲಾರದು! ಮುಖ್ಯವಾಗಿ ಈಗ ನನ್ನನ್ನೇ ದಿಕ್ಕಾಗಿ ನಂಬಿದ ಈ ಗೋಕುಲವನ್ನು ಅಪಾಯವಿಲ್ಲದೆ ರಕ್ಷಿಸುವುದಕ್ಕೂ, ದೇವತೆಗಳನ್ನು ಸನ್ಮಾರ್ಗಕ್ಕೆ ತರುವುದಕ್ಕೂ ಈಗ ತಕ್ಕ ಉಪಾಯವನ್ನು ಮಾಡದೆ ತೀರದು. ಆಶ್ರಿತರನ್ನು ರಕ್ಷಿಸಬೇಕಾದುದೇ ನನ್ನ ವ್ರತವು." ಎಂದು ನಿಶ್ಚಯಿಸಿ, ಮುಂದಿದ್ದ ಗೋವರ್ಧನಪರ್ವತವನ್ನು, ತನ್ನ ಒಂದೇ ಕೈಯಿಂದ ಮೀಟಿ ಮೇಲಕ್ಕೆತ್ತಿಬಿಟ್ಟನು. ಬಾಲಕರು ಕೊಡೆಯನ್ನು ಹಿಡಿದುಕೊಳ್ಳುವಂತೆ, ಲೀಲೆಯಿಂದ ಅದನ್ನು ತನ್ನ ಎಡಗೈಕಿರುಬೆರಳಿನ ತುದಿಯಲ್ಲಿ ನಿಲ್ಲಿಸಿಕೊಂಡು ನಿಂತನು. ಹೀಗೆ ಕೃಷ್ಣನು ಆ ದೊಡ್ಡಪರ್ವತವನ್ನು ಕೊಡೆಯಂತೆ ಮೇಲಕ್ಕೆತ್ತಿ ಹಿಡಿದು, ಮುಂದಿದ್ದ ನಂದಾದಿಗೋಪಾಲಕರನ್ನು ಕುರಿತು ಹೀಗೆಂದು ಹೇಳುವನು. "ಅಮ್ಮಾ! ಓ ಜನಕಾ! ಎಲೈ ಗೋಪಾಲಕರೆ! ನೀವೆಲ್ಲರೂ ನಿಮ್ಮನಿಮ್ಮ ಗೋಧನಗಳೊಡನೆ ಈ ಪರ್ವತದಕೆಳಗೆ ಬಂದು ಸುಖವಾಗಿ ನಿಲ್ಲಿರಿ! ನಾನು ಈ ಪರ್ವತವನ್ನು ಹೊರಲಾರದೆ ನಿಮ್ಮ ತಲೆಯ ಮೇಲೆ ಎತ್ತಿಹಾಕಿಬಿಡುವೆಂದು ನೀವು ಹೆದರಬೇಡಿರಿ! ಧೈರ್ಯದಿಂದ ಬಂದು ನಿಲ್ಲಿರಿ! ಇನ್ನು ನೀವು ಈ ಮಳೆಗಾಳಿಗಳಿಗಾಗಿ ಭಯಪಡಬೇಕಾದುದಿಲ್ಲ! ಅದನ್ನು ತಪ್ಪಿಸುವುದಕ್ಕಾಗಿಯೇ ನಾನು ಈ ಪರ್ವತವನ್ನು ನಿಮಗೆ ಕೊಡೆಯಹಾಗೆ ಎತ್ತಿ ಹಿಡಿದಿರುವೆನು." ಎಂದನು. ಕೃಷ್ಣನ ಮಾತನ್ನು ಕೇಳಿ, ಆ ಗೋಪಾಲಕರೆಲ್ಲರೂ ಮನಸ್ಸಿನಲ್ಲಿದ್ದ ಭಯವನ್ನು ಬಿಟ್ಟು, ತಮ್ಮತಮ್ಮ ಮಂದೆಗಳನ್ನೂ, ಮಕ್ಕಳುಮರಿಗಳನ್ನೂ, ತಮ್ಮ ಅನುಚರರನ್ನೂ ಕರೆದುಕೊಂಡುಬಂದು, ತಮತಮಗೆ ಅನುಕೂಲವಾದ ಸ್ಥಳವನ್ನು ನೋಡಿ ಆ ಬೆಟ್ಟದ ಕೆಳಗೆ ಸೇರಿದರು. ಹೀಗೆಯೇ ಏಳುದಿನಗಳವರೆಗೆ ಕೃಷ್ಣನು, ಹಸಿವು ಬಾಯಾರಿಕೆಗಳನ್ನೂ ಲಕ್ಷ್ಯಮಾಡದೆ, ದೇಹಸುಖವನ್ನೂ ಅಪೇಕ್ಷಿಸದೆ, ಆ ಗೋಪಾಲಕರೊಡಗೂಡಿ, ಮಳೆಗಾಳಿಗಳ ಆರ್ಭಟವನ್ನು ನೋಡಿ ನಗುತ್ತ ಅತ್ತಿತ್ತ ಕದಲದೆ ನಿಂತಿದ್ದನು. ಕೃಷ್ಣನ ಈ ಶಕ್ತಿಯನ್ನು ನೋಡಿ ಇಂದ್ರನಿಗೆ ಅತ್ಯಾಶ್ಚರ್ಯವಾಯಿತು. ತನ್ನ ಪ್ರಯತ್ನವೆಲ್ಲವೂ ವಿಫಲವಾಯಿ-



೧೯೨೪. ಗೋವರ್ಧನೋದ್ಧರಣವು.

ತೆಂಬ ನಾಚಿಕೆಯಿಂದ, ತಾನು ಕಳುಹಿಸಿದ್ದ ಮೇಘಗಳನ್ನು ಮುಂದೆ ಮಳೆ ಸುರಿಯದಂತೆ ನಿವಾರಿಸಿಬಿಟ್ಟನು. ಒಡನೆಯೇ ಮಳೆಗಾಳಿಗಳು ನಿಂತುಹೋ ದುವು ಆಕಾಶದಲ್ಲಿದ್ದ ಮೇಘಗಳೆಲ್ಲವೂ ಮರೆಯಾದುವು. ಬಿಸಿಲು ಕಾಣಿ ಸುತ್ತಬಂದಿತು. ಇದನ್ನು ನೋಡಿ ಕೃಷ್ಣನು, ತನ್ನ ಸುತ್ತುಮುತ್ತಲೂ ಸೇ ರಿದ್ದ ಗೋಪಾಲಕರನ್ನು ಕುರಿತು "ಓ ಜನರಾ! ಓ ಗೋಪಾಲಕರೆ! ಇ ನ್ನು ನಿಮ್ಮ ಮಂದೆಗಳೊಡನೆ ಎಲ್ಲಿಗೆ ಬೇಕಾದರೂ ನಿರ್ಭಯವಾಗಿ ಹೋಗಬಹುದು ಮಳೆಗಾಳಿಗಳು ಅಡಗಿಹೋದುವು! ಅಲ್ಲಲ್ಲಿ ಉಕ್ಕಿ ಹರಿಯುತಿದ್ದ ಪ್ರವಾಹಗಳೆಲ್ಲವೂ ತಗ್ಗಿರುವುವು! ಇನ್ನು ಹೊರಡಿರಿ" ಎಂದನು. ಆಮೇಲೆ ಗೋಪಾಲಕರೆಲ್ಲರೂ, ತಮ್ಮತಮ್ಮ ಬಂಡಿಗಳೊ ಡನೆ ತಮ್ಮ ಮಂದೆಯನ್ನೂ ಅಟ್ಟಿಕೊಂಡು,ಸಂತೋಷದಿಂದ ಹೊರಕ್ಕೆ ಬಂ ದರು. ಸ್ತ್ರೀ ಬಾಲವೃದ್ಧರೆಲ್ಲರೂ ಸುಖವಾಗಿ ಹೊರಗೆ ಬಂದಮೇಲೆ, ಕೃ ಷ್ಣನು, ಆ ವನದಲ್ಲಿದ್ದ ಸಮಸ್ತಭೂತಗಳೂ ನೋಡುತಿದ್ದಹಾಗೆಯೇ, ಲೀಲಾಜಾಲವಾಗಿ ಆಪರ್ವತವನ್ನು ಯಥಾಸ್ಥಾನದಲ್ಲಿರಿಸಿಬಿಟ್ಟನು. ಆಗ ಅಲ್ಲಿ ದ್ದ ಗೋಪಾಲಕರಿಗೆ ಕೃಷ್ಣನವಿಷಯದಲ್ಲಿ ಉಕ್ಕಿಬರುತಿದ್ದ ಪ್ರೇಮಾತಿಶ ಯವನ್ನು ಕೇಳಬೇಕೆ? ಒಬ್ಬೊಬ್ಬರೂ ಯಥಾಯೋಗ್ಯವಾಗಿ ಆಲಿಂಗನಾ ದಿಗಳಿಂದ ಆ ಕೃಷ್ಣನನ್ನು ಮನ್ನಿಸಿದರು. ಗೋಪಸ್ತ್ರೀಯರು, ಅವನಿಗೆ ಮೊಸರು, ಅಕ್ಷತೆ, ಮುಂತಾದ ಮಂಗಳವಸ್ತುಗಳನ್ನೂ, ಮಂಗಳತೀರ್ಥಗಳ ನ್ನೂ ತಂದು, ಆಶೀರ್ವಾದಪೂರ್ವಕವಾಗಿ ಪೂಜೆಯನ್ನು ನಡೆಸಿದರು. ರೋ ಹಿಣೀಯಶೋದೆಯರೂ, ನಂದಗೋಪನೂ, ಬಲರಾಮನೂ ಸ್ನೇಹದಿಂದ ಬಂದು ಕೃಷ್ಣನನ್ನಾಲಿಂಗಿಸಿ, ಶುಭಾಶೀರ್ವಾದಗಳನ್ನು ಮಾಡಿದರು. ಆ ಕಾಶದಲ್ಲಿ ದೇವ, ಗಂಧರ್ವ, ಸಿದ್ಧ, ಚಾರಣಾದಿಗಳೆಲ್ಲರೂ ಕೃಷ್ಣನ ಮಹಿಮೆ ಯನ್ನು ಕೊಂಡಾಡುತ್ತ ಅವನಮೇಲೆ ಪುಷ್ಪವರ್ಷವನ್ನು ಕರೆದರು. ಶಂಖ ದುಂದುಭಿ ಮೊದಲಾದ ದೇವವಾದ್ಯಗಳು ನುಡಿಸಲ್ಪಟ್ಟುವು ತುಂಬುರು ಮೊದಲಾದ ಗಂಧರ್ವರೆಲ್ಲರೂ ಆಕಾಶದಲ್ಲಿ ನೆರೆದು ಗಾನಗಳಿಂದ ಕೃಷ್ಣನ ಗುಣಗಳನ್ನು ಕೊಂಡಾಡುತಿದ್ದರು. ಆಮೇಲೆ ಕೃಷ್ಣನು ತನ್ನಲ್ಲಿ ಪರಮ ಪ್ರೇಮವುಳ್ಳ ಸಮಸ್ತಗೋಪಿಯರಿಂದ ಪರಿವೃತನಾಗಿ, ಬಲರಾಮನೊಡ

ಗೂಡಿ, ಅಲ್ಲಿಂದ ಹಿಂತಿರುಗಿ ಮನೆಗೆ ಬಂದು ಸೇರಿದನು ದಾರಿಯುದ್ದಕ್ಕೂ ಗೋಪಸ್ತ್ರೀಯರು ಆ ಕೃಷ್ಣನ ಗುಣಗಳನ್ನೇ ಹಾಡುತ್ತ, ಯಾವಾಗಲೂ ಆ ಕೃಷ್ಣನನ್ನೇ ಹೃದಯದಲ್ಲಿಟ್ಟುಕೊಂಡು ಸಂತೋಷದಿಂದ ನಕ್ಕುತ್ತ, ತಮ್ಮ ನಿವಾಸಗಳಿಗೆಬಂದರು. ಇದು ಇಪ್ಪತ್ತೈದನೆಯ ಅಧ್ಯಾಯವು

---

**ಗೋಪಾಲಕರು ಕೃಷ್ಣನ ಅದ್ಭುತವ್ಯಾಪಾರಗಳನ್ನು ನೋಡಿ ಆಶ್ಚರ್ಯದಿಂದ ಒಬ್ಬರಿಗೊಬ್ಬರು ವಿಚಾರಮಾಡುತಿದ್ದುದು,**

ಹೀಗೆ ಕೃಷ್ಣನು ಆಗಾಗ ನಡೆಸುತಿದ್ದ ಅದ್ಭುತಕಾರ್ಯಗಳನ್ನು ನೋಡಿ ಆವನ ನಿಜಸ್ಥಿತಿಯನ್ನು ತಿಳಿಯದ ಗೋಪಾಲಕರೆಲ್ಲರೂ ಆಶ್ಚರ್ಯಭರಿತರಾಗಿ, ನಂದಗೋಪನಬಳಿಗೆ ಬಂದು ಹೀಗೆಂದು ಹೇಳುವರು "ಪ್ರಭೂ! ಇದೇನಿದು? ನಿನ್ನ ಮಗನಾದ ಈ ಕೃಷ್ಣನು ನಡೆಸಿದ ಒಂದೊಂದುಕಾರ್ಯವೂ ಮಹಾದ್ಭುತವಾಗಿರುವುದು. ಆ ಕಾರ್ಯಗಳನ್ನು ನೋಡಿದರೆ, ಇವನು ಸಾಮಾನ್ಯಮನುಷ್ಯನಂತೆ ತೋರುವುದಿಲ್ಲ! ಇವನು ಯಾವನೋ ಮಹಾಪುರುಷನಾಗಿರಬೇಕು ! ಈತನ ಮಹಿಮೆಯನ್ನು ನೋಡಿದರೆ ಇವನು ಕೇವಲಹೀನವಾದ ನಮ್ಮ ಗೊಲ್ಲರ ಕುಲದಲ್ಲಿ ಹುಟ್ಟಲೇಬಾರದೆಂದು ತೋರುವುದು (ಆಹಾ ! ಏಳುವರ್ಷದ ಬಾಲಕನು, ಅಷ್ಟು ದೊಡ್ಡಪರ್ವತವನ್ನು ಮೀಟಿ ತೆಗೆದು. ಮಹಾಗಜವು ತನ್ನ ಸೊಂಡಿಲಿಂದ ಕಮಲವನ್ನೆತ್ತಿದಂತೆ ಲೀಲೆಯಿಂದ ಒಂದೇ ಕೈಯಲ್ಲಿ ಎತ್ತಿಹಿಡಿದನಲ್ಲಾ? ಇದೇನಾಶ್ಚರ್ಯವು? ಅದೂ ಹೋಗಲಿ ! ಅವನು ಇನ್ನೂ ಕಣ್ಣುಬಿಡಲಾರದ ಸಣ್ಣಕೂಸಾಗಿರುವಾಗಲೇ ಮಹಾಬಲವುಳ್ಳಪೂತನೆಯೆಂಬ ರಾಕ್ಷಸಿಯ ಸ್ತನ್ಯಪಾನಮಾಡುತ್ತ, ಕಾಲವು ಶರೀರದ ಯೌವನವನ್ನು ಅಪಹರಿಸುವಂತೆ, ಬೇರೊಬ್ಬರಿಗೆ ತಿಳಿಯದಹಾಗೆಯೇ, ಆ ರಾಕ್ಷಸಿಯ ಪ್ರಾಣಗಳನ್ನೇ ಹೀರಿಬಿಟ್ಟನು? ಆದರಮೇಲೆ ಈತನು ಇನ್ನೂ ಮೂರುತಿಂಗಳ ಕೂಸಾಗಿ, ಹಾಸಿಗೆಯಮೇಲೆ ಮಲಗಿ ಕೈಕಾಲುಗಳನ್ನೊದರುತ್ತ ಅಳುತ್ತಿರುವಾಗ, ಇವನ ಕಾಲಾಟಕ್ಕೆ ದೊಡ್ಡಬಂಡಿಯು ತಲೆಕೆಳಗಾಗಿ ಉರುಳಿಬಿದ್ದು ಪುಡಿಪುಡಿಯಾಯಿತಲ್ಲವೆ ? ಇದು

ಹೇಗೆ? ಮತ್ತು ಇವನು ಒಂದುವರ್ಷದ ಮಗುವಾಗಿದ್ದಾಗ, ತೃಣಾವರ್ತನೆಂಬ ರಾಕ್ಷಸನು ಸುಳಿಗಾಳಿಯಾಗಿ ಬಂದು ಆಕಾಶಕ್ಕೆ ಹಾರಿಸಿಕೊಂಡು ಹೋಗುತ್ತಿರುವಲ್ಲಿ, ಆವನ ಕಂಠವನ್ನು ಹಿಸುಕಿಕೊಂದನಲ್ಲಾ! ಈ ಆಶ್ಚರ್ಯವನ್ನೇನೆಂದು ಹೇಳಬಹುದು! ಅದರಿಂದಾಚೆಗೆ ಇವನು ಮನೆಯಲ್ಲಿ ಹಾಲು, ಮೊಸರು, ಬೆಣ್ಣೆ ಮುಂತಾದುವುಗಳನ್ನು ಕದ್ದು ತಿನ್ನುವುದನ್ನು ನೋಡಿ, ತಾಯಿಯು ಇವನನ್ನು ಒರಳಿಗೆ ಕಟ್ಟಿಹಾಕಿದಾಗ, ಎರಡು ಮರಗಳ ನಡುವೆ ನುಗ್ಗಿ, ತನ್ನ ಎಳೆಯಾಟದಲ್ಲಿ ಆ ದೊಡ್ಡಮರಗಳನ್ನೇ ಮುರಿದು ಹಾಕಿದನಲ್ಲಾ! ಈ ವೈಚಿತ್ರ್ಯವನ್ನೇನೆಂದು ಹೇಳಬಹುದು? ಅದರಿಂದಾಚೆಗೆ ಇವನು, ತನ್ನ ಸಂಗಡಿಗರೊಡನೆ ಕಾಡಿನಲ್ಲಿ ಮಂದೆಯನ್ನು ಮೇಯಿಸುತ್ತ, ತನ್ನನ್ನು ನುಂಗುವುದಕ್ಕಾಗಿ ಬಂದ ಬಕಾಸುರನನ್ನು ಕೈಗಳಿಂದಲೇ ಎರಡುತುಂಡಾಗಿ ಸೀಳಿದನು! ಆಮೇಲೆ ಕರುವಿನ ಆಕಾರದಿಂದ ತನ್ನನ್ನು ಕೊಲ್ಲುವುದಕ್ಕಾಗಿ ಬಂದ ವತ್ಸಾಸುರನನ್ನು ಕೊಂದು, ಆ ಮೃತಶರೀರದಿಂದ ಮರದಲ್ಲಿದ್ದ ಬೇಲದ ಹಣ್ಣುಗಳೆಲ್ಲವನ್ನೂ ಉದುರಿಸಿದನು ಅದರಿಂದಾಚೆಗೆ ಅಣ್ಣನಾದ ಬಲರಾಮನೊಡಗೂಡಿ, ಗರ್ದಭಾಸುರನನ್ನೂ, ಅವನ ಬಂಧುಗಳನ್ನೂ ಸಂಹರಿಸಿ, ಫಲಸಮೃದ್ಧವಾದ ತಾಳೆಯ ತೋಪನ್ನು ನಿರುಪದ್ರವವಾಗಿ ಮಾಡಿದನು ಅದರಿಂದಾಚೆಗೆ ಬಲರಾಮನ ಕೈಯಿಂದ ಕ್ರೂರನಾದ ಪ್ರಲಂಬಾಸುರನನ್ನು ಕೊಲ್ಲಿಸಿದನು. ಗೋವುಗಳನ್ನೂ, ಗೋಪಾಲಕರನ್ನೂ ಕಾಡುಗಿಚ್ಚಿನಿಂದ ತಪ್ಪಿಸಿ ರಕ್ಷಿಸಿದನು. ಕ್ರೂರವಿಷವುಳ್ಳ ಕಾಳಿಯನೆಂಬ ಮಹಾಸರ್ಪವನ್ನು ಕಾಲಿಂದ ಮೆಟ್ಟಿ, ಅವನ ಕೊಬ್ಬನ್ನು ಮುರಿದು, ಅವನು ಆಕ್ರಮಿಸಿಕೊಂಡಿದ್ದ ಆ ಮಡುವಿನ ನೀರನ್ನು, ವಿಷದೋಷವಿಲ್ಲದಂತೆ ಮಾಡಿದನು.) ಇದರಮೇಲೆ ಮತ್ತೊಂದು ವಿಶೇಷವೇನೆಂದರೆ? ಓ ಪೂಜ್ಯಾ! ನಂದಾ! ಕೃಷ್ಣನು ನಿನ್ನ ಮಗನಾಗಿದ್ದರೂ, ನಮ್ಮೆಲ್ಲರಿಗೂ ಅವನಲ್ಲಿ ನಮ್ಮನಮ್ಮ ಮಕ್ಕಳಲ್ಲಿರುವುದಕ್ಕಿಂತಲೂ ಅತಿಶಯವಾದ ಪುತ್ರಪ್ರೇಮವು ಹುಟ್ಟುತ್ತಿರುವುದು ನಮಗೆ ಜನ್ಮಸಿದ್ಧವಾಗಿ ಬಂದ ಆ ಪ್ರೀತಿಯನ್ನು ಯಾವವಿಧದಿಂದಲೂ ತಪ್ಪಿಸಲು ಸಾಧ್ಯವಿಲ್ಲ. ಇದೇನಾಶ್ಚರ್ಯವು! ಆ ಕೃಷ್ಣನ ಹುಟ್ಟನ್ನು ನೋಡಿದರೆ, ನಮ್ಮಂತೆಯೇ ಗೊಲ್ಲನಾಗಿರುವನು. ಆ

ವನು ನಡೆಸತಕ್ಕ ಕಾರ್ಯಗಳಾದರೋ ಮನುಷ್ಯಶಕ್ತಿಯನ್ನು ಮೀರಿರುವುದು. ಇದರಿಂದ ಆವನು ನಿಜವಾಗಿ ನಿನ್ನ ಮಗನೋ, ಅಲ್ಲವೋ ಎಂದು ನಮಗೆ ಸಂದೇಹವಾಗಿದೆ! ಏಳುವರ್ಷದ ಬಾಲಕನೆಂದರೇನು? ಅಷ್ಟು ದೊಡ್ಡಪರ್ವತವನ್ನು ಕೈಯಿಂದೆತ್ತಿ ಹಿಡಿಯುವುದೆಂದರೇನು? ಈ ಸಂದೇಹವನ್ನು ನೀನೇ ನೀಗಿಸಬೇಕು" ಎಂದರು. ಅದಕ್ಕಾ ನಂದನು ಗೋಪಾಲಕರನ್ನು ಕುರಿತು" ಎಲೈ ಮಿತ್ರರ! ಕೇಳಿರಿ! ನಿಮಗೆ ನನ್ನ ಮಗನ ವಿಷಯದಲ್ಲಿರುವ ಸಂದೇಹವನ್ನು ನೀಗಿಸುವೆನು. ಈ ಕುಮಾರನವಿಷಯವಾಗಿ ಗರ್ಗಾಚಾರ್ಯರು ನನಗೆ ಕೆಲವು ಸಂಗತಿಗಳನ್ನು ಸೂಚಿಸಿರುವರು. ಅವನ್ನೇ ನಿಮಗೆ ಹೇಳುವೆನು. ಆ ಗರ್ಗಾಚಾರ್ಯರು ಹಿಂದೊಮ್ಮೆ ನನ್ನನ್ನು ಕರೆದು. "ನಂದಾ! ನಿನ್ನ ಮಗನು ಇದಕ್ಕೆ ಹಿಂದಿನ ಕೃತ, ತ್ರೇತಾ, ದ್ವಾಪರಗಳೆಂಬ ಮೂರುಯುಗಗಳಲ್ಲಿ, ಕ್ರಮವಾಗಿ ಬಿಳುಪು, ಕೆಂಪು, ಹಳದಿಬಣ್ಣಗಳಿಂದ ಹುಟ್ಟಿದ್ದು, ಈಗ ಕಪ್ಪುಬಣ್ಣದಿಂದ ಜನಿಸಿ, ಕೃಷ್ಣನೆನಿಸಿರುವನು. ಹಿಂದೊಮ್ಮೆ ಇವನೇ ವಸುದೇವನ ಮಗನಾಗಿ ಹುಟ್ಟಿದ್ದುದರಿಂದ, ವಾಸುದೇವನೆಂದೂ ಕರೆಯಲ್ಪಡುವನು. ಇದಲ್ಲದೆ ಇವನಿಗೆ, ಗುಣಗಳಿಗೂ, ಕರ್ಮಗಳಿಗೂ ತಕ್ಕಂತೆ, ಇನ್ನೂ ಬೇರೆಬೇರೆ ಅನೇಕನಾಮರೂಪಗಳುಂಟು! ಅವನ್ನು ನಾನು ಮಾತ್ರ ಬಲ್ಲೆನೇ ಹೊರತು ಬೇರೊಬ್ಬರಿಗೂ ತಿಳಿಯದು. ಇವನಿಂದ ನಿಮಗೆ ಮುಂದೆ ಅನೇಕವಿಧವಾದ ಶ್ರೇಯಸ್ಸುಂಟಾಗುವುದು. ನಿಮ್ಮ ಗೋಕುಲಕ್ಕೂ, ಗೋಪಾಲಕರಿಗೂ ಇವನು ಆನಂದವರ್ಧಕನಾಗುವನು. ಇವನಿಂದ ನಿಮಗೆ ಅನೇಕಕಷ್ಟಗಳು ತಪ್ಪುವುವು. ಹಿಂದೊಮ್ಮೆ ರಾಜ್ಯವು ಅರಾಜಕವಾಗಿ ಚೋರ (ಶತ್ರು) ಬಾಧೆಯು ಹೆಚ್ಚಿ, ಸಾಧುಗಳು ಸಂಕಟಪಡುತಿದ್ದರು. ಕೊನೆಗೆ ಈತನಸಹಾಯದಿಂದಲೇ ಅವರೆಲ್ಲರೂ ತಮ್ಮ ಶತ್ರುಗಳನ್ನು ಜಯಿಸಿ, ವೃದ್ಧಿಗೆ ಬಂದು ಕ್ಷೇಮವನ್ನು ಪಡೆದರು. ನಂದಾ! ಮಹಾತ್ಮನಾದ ಈ ನಿನ್ನ ಮಗನಲ್ಲಿ ಯಾರು ನಿಜವಾದ ಪ್ರೀತಿಯನ್ನು ಮಾಡುವರೋ, ಅವರನ್ನು, ವಿಷ್ಣುಪಕ್ಷದವರನ್ನು ರಾಕ್ಷಸರು ಹೇಗೋಹಾಗೆ, ಯಾವಶತ್ರುಗಳೂ ಇದಿರಿಸಲಾರರು! ಈ ಬಾಲಕನು ಗುಣಗಳಲ್ಲಿಯೂ, ಕೀರ್ತಿಯಲ್ಲಿಯೂ, ಭಾಗ್ಯದಲ್ಲಿಯೂ, ಮಹಿಮೆಯಲ್ಲಿಯೂ ಸಾಕ್ಷಾನ್ನಾರಾಯಣನಿಗೆ ಸಮಾನನು! ಅದುದರಿಂದ

ಈ ನಿನ್ನ ಮಗನು ಯಾವ ಅಸಾಧ್ಯಕಾರ್ಯಗಳನ್ನು ನಡೆಸಿದರೂ, ಅದಕ್ಕಾಗಿ ನೀನು ಆಶ್ಚರ್ಯಪಡಬೇಕಾದುದಿಲ್ಲ" ಎಂದು ಹೇಳಿರುವರು. ಗರ್ಗಾಚಾರ್ಯರು ನನ್ನೊಡನೆ ಈ ಮಾತನ್ನು ಹೇಳಿಹೋದುದುಮೊದಲು, ನಾನೂ ಈ ಕೃಷ್ಣನನ್ನು ಸಾಕ್ಷಾನ್ನಾರಾಯಣನೆಂದೇ ತಿಳಿದಿರುವೆನು"ಎಂದನು. ಹೀಗೆ ನಂದನು ಗರ್ಗಾಚಾರ್ಯನಮೂಲಕವಾಗಿ ತನಗೆ ತಿಳಿದ ಸಂಗತಿಗಳನ್ನು ಹೇಳಿದೊಡನೆ, ಗೋಪಾಲಕರೆಲ್ಲರೂ, ತಮ್ಮ ಮನಸ್ಸಿನಲ್ಲಿದ್ದ ಶಂಕೆಯನ್ನು ಬಿಟ್ಟು ಸಂತುಷ್ಟರಾಗಿ, ಕೃಷ್ಣನನ್ನೂ, ನಂದನನ್ನೂ ವಿಶೇಷಗೌರವದಿಂದ ಮನ್ನಿಸಿ ಪೂಜಿಸುತಿದ್ದರು ಓ ಪರೀಕ್ಷಿದ್ರಾಜಾ! ಹೀಗೆ ಕೃಷ್ಣನು ಗೋಕುಲದಲ್ಲಿದ್ದವರಿಗೆ ತನ್ನ ಮಹಿಮೆಯನ್ನು ತೋರಿಸುವುದಕ್ಕಾಗಿ, ಮೊದಲು, ಅವರು ಆರಂಭಿಸಿದ್ದ ಇಂದ್ರಯಾಗವನ್ನು ತಪ್ಪಿಸಿ, ಇಂದ್ರನಿಗೆ ಕೋಪವನ್ನು ಹುಟ್ಟಿಸಿದನು. ಆ ಕೋಪದಿಂದ ಇಂದ್ರನು, ಮಳೆಗಾಳಿಗಳಿಂದಲೂ, ಸಿಡಿಲುಗಳಿಂದಲೂ, ಶಿಲಾವರ್ಷದಿಂದಲೂ ಗೋಕುಲವನ್ನು ನಾಶಮಾಡುವುದಕ್ಕೆ ಯತ್ನಿಸಿದಾಗ, ಸ್ತ್ರೀಬಾಲವೃದ್ಧರು ಮೊದಲಾಗಿ ಅಲ್ಲಿನ ಪ್ರಜೆಗಳೂ, ಗೋವುಗಳೂ ಪ್ರಾಣಭಯದಿಂದ ಬಂದು ತನ್ನಲ್ಲಿ ಮರೆಹೊಗಲು, ತನ್ನ ಒಂದೇ ಕೈಯಿಂದ ಗೋವರ್ಧನಪರ್ವತವನ್ನೆತ್ತಿ, ಕೊಡೆಯಹಾಗೆ ಹಿಡಿದು, ಗೋಕುಲವನ್ನು ಅಪಾಯವಿಲ್ಲದೆ ರಕ್ಷಿಸಿದನು. ಹೀಗೆ ದೇವೇಂದ್ರನ ಮದವನ್ನಡಗಿಸಿ, ಗೋಕಲವನ್ನು ರಕ್ಷಿಸಿದ ಆ ಕೃಷ್ಣನು, ನಮ್ಮಲ್ಲಿ ಅನುಗ್ರಹವನ್ನು ತೋರಿಸಲಿ. ಇದು ಇಪ್ಪತ್ತಾರನೆಯ ಅಧ್ಯಾಯವು.

---

## ಗೋವಿಂದಪಟ್ಟಾಭಿಷೇಕವು.

ರಾಜಾ! ಕೃಷ್ಣನು ಗೋವರ್ಧನಪರ್ವತವನ್ನು ಕೊಡೆಯಾಗಿ ಹಿಡಿದು; ಗೋಕುಲದವರನ್ನು ರಕ್ಷಿಸಿದಮೇಲೆ, ಅತ್ತಲಾಗಿ ಇಂದ್ರನಿಗೆ, ತನ್ನಪ್ರಯತ್ನವು ವಿಫಲವಾದುದರಿಂದ ಮನಸ್ಸಿನಲ್ಲಿ ಬಹಳ ನಾಚಿಕೆ ಹುಟ್ಟಿತು. ತಾನೇ ತ್ರಿಲೋಕಾಧಿಪನೆಂದು ತಿಳಿದಿದ್ದ ಅವನ ಅಹಂಭಾವವೆಲ್ಲವೂ ಅಡಗಿಹೋಯಿತು. ಕೃಷ್ಣನ ವಿಷಯವಾಗಿ ಹಿಂದೆ ಅವನು ಕೇಳಿದ್ದ ಅದ್ಭುತಮಹಿಮೆಯೆಲ್ಲವೂ ಪ್ರತ್ಯಕ್ಷವಾಗಿ ಅವನ ಅನುಭವಕ್ಕೆ ಬಂದಂತಾಯಿ

ತು. ಅಂತಹ ಮಹಾಮಹಿಮನಾದ ಕೃಷ್ಣನಲ್ಲಿ ತಾನು ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪಪಡುತ್ತ, ಆ ಕೃಷ್ಣನಲ್ಲಿಗೆ ತಾನೇ ಬಂದು ಅಪರಾಧಕ್ಷಾಪಣವನ್ನು ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದನು. ಗೋಲೋಕದಿಂದ ಕಾಮಧೇನುವೂ ಹೊರಟುಬಂದಿತು. ಇಂದ್ರನು ಏಕಾಂತದಲ್ಲಿ ಕೃಷ್ಣನಬಳಿಗೆ ಬಂದು, ಅವನ ಪಾದಗಳಿಗೆ ತಲೆಯನ್ನು ಸೋಕಿಸಿ ಪ್ರಣಾಮಮಾಡಿ ಕೈಮುಗಿದು ಹೀಗೆಂದು ವಿಜ್ಞಾಪಿಸುವನು. “ದೇವಾ! ನೀನು ನೆಲೆಗೊಂಡಿರತಕ್ಕ ಸ್ಥಾನವು ಕೇವಲ ಶುದ್ಧಸತ್ವಮಯವಾದುದು! ಅಲ್ಲಿ ರಜಸ್ತಮಸ್ಸುಗಳ ಗಂಧಮಾತ್ರವೂ ತೋರಲಾರದು. ಆದುದರಿಂದಲೇ ಅದು ರಾಗದ್ವೇಷಾದಿಗಳಿಲ್ಲದೆ, ಕೇವಲ ಶಾಂತವಾಗಿ, ಮಹಾತಪಸ್ಸಿನಿಂದ ಲಭಿಸತಕ್ಕುದಾಗಿರುವುದು. ನಿನ್ನ ಮಾಯೆಯಿಂದ ಕಲ್ಪಿತವಾಗಿ, ಸತ್ವಾದಿಗುಣಕಾರ್ಯಗಳ ಪ್ರವಾಹವೆನಿಸಿಕೊಂಡ ಸಂಸಾರವಾಗಲಿ, ಆ ಸಂಸಾರಮೂಲಕವಾಗಿ ಶರೀರವನ್ನುಂಟುಮಾಡುವುದಕ್ಕೆ ಕಾರಣವಾದ ಕರ್ಮಾನುಬಂಧವಾಗಲಿ, ಆ ನಿನ್ನ ಸ್ಥಾನವನ್ನು ಮುಟ್ಟಲಾರವು. ಹೀಗೆ ನೀನಿರತಕ್ಕ ಸ್ಥಾನದಲ್ಲಿಯೇ ರಾಗದ್ವೇಷಾದಿಗಳ ಸಂಬಂಧವಿಲ್ಲದಿರುವಾಗ, ಸಾಕ್ಷಾತ್ತಾಗಿ ನಿನ್ನ ವಿಚಾರದಲ್ಲಿ ಹೇಳಬೇಕಾದುದೇನು ?

ಸಂಸಾರಹೇತುಗಳಾಗಿಯೂ, ಆತ್ಮಜ್ಞಾನವಿಲ್ಲದ ಅಜ್ಞರಿಗೆ ಲಕ್ಷಣವಾಗಿಯೂ ಇರುವ ರಾಗದ್ವೇಷಲೋಭಾದಿಗಳ ಪ್ರಸಕ್ತಿಯೇ ನಿನ್ನಲ್ಲಿಲ್ಲದಿದ್ದರೂ ಲೋಕದಲ್ಲಿ ದುಷ್ಟರನ್ನು ನಿಗ್ರಹಿಸಿ, ಧರ್ಮಸಂಸ್ಥಾಪನವನ್ನು ಮಾಡುವುದಕ್ಕಾಗಿ, ನೀನು ನಿನ್ನಲ್ಲಿ ಆ ಗುಣಗಳನ್ನು ತೋರಿಸುತ್ತಿರುವೆ. ಆ ಉದ್ದೇಶದಿಂದಲೇ ಈಗ ನನ್ನನ್ನೂ ನೀನು ದಂಡಿಸಿದೆ! ನೀನು ಹೀಗೆ ಕೆಲವರಲ್ಲಿ ನಿಗ್ರಹವನ್ನೂ, ಬೇರೆ ಕೆಲವರಲ್ಲಿ ಅನುಗ್ರಹವನ್ನೂ ತೋರಿಸಿದರೂ, ನಿನಗೆ ಅದರಿಂದ ಪಕ್ಷಪಾತದೋಷವು ಬರುವುದಿಲ್ಲ! ನಿನ್ನ ನಿಗ್ರಹವೂ ಅನುಗ್ರಹವೇ! ಹೇಗೆಂದರೆ, ನೀನೇ ಲೋಕಕ್ಕೆ ತಂದೆಯೂ, ಗುರುವೂ, ಪ್ರಭುವೂ ಆಗಿರುವುದರಿಂದ, ಆಯಾಪ್ರಾಣಿಗಳ ಹಿತಕ್ಕಾಗಿ ಅವರನ್ನು ಆಗಾಗ ದಂಡಿಸಿ ಸನ್ಮಾರ್ಗಕ್ಕೆ ತರತಕ್ಕ ಕಾರ್ಯವು ನಿನ್ನದಾಗಿರುವುದು. ಆದುದರಿಂದ ಲೋಕದಲ್ಲಿ ತಾವೇ ಪ್ರಭುಗಳೆಂದು ಗರ್ವಪಡತಕ್ಕ ನ

ನ್ನಂತವರ ಹೆಮ್ಮೆಯನ್ನಡಗಿಸಿ, ಸನ್ಮಾರ್ಗದಲ್ಲಿರಿಸುವುದಕ್ಕಾಗಿಯೇ ನೀನು ಈವಿಧವಾದ ಸ್ವೇಚ್ಛಾವಿಗ್ರಹಗಳಿಂದ ಅವತಾರವನ್ನೆತ್ತಿ, ಆಯಾ ಕಾಲೋಚಿತವಾದ ಕಾರ್ಯಗಳನ್ನು ನಡೆಸುವೆ! ನಮ್ಮಂತಹ ಮೂಢರಿಗೆ ನಿನ್ನ ಸ್ವರೂಪವು ಅಗೋಚರವಾದುದರಿಂದ, ನಾವೇ ಪ್ರಭುಗಳೆಂಬ ಅಹಂಕಾರವು ಹುಟ್ಟುವುದೇನೋ ಸಹಜವೇ! ಆಗಾಗ ನೀನು ನಿನ್ನ ದಂಡನೆಯಿಂದ ಅದನ್ನು ಮುರಿಯುತ್ತಿದ್ದರೆ, ನಮಗೆ ಆ ಗರ್ವವು ತಗ್ಗಿ ಸತ್ಪುರುಷರ ಮಾರ್ಗವನ್ನನುಸರಿಸುವುದಕ್ಕೆ ಅವಕಾಶವಾಗುವುದು. ಆದುದರಿಂದ ಓ ದೇವಾ! ನಿನ್ನ ನಿಗ್ರಹವೂ ನಮಗೆ ಅನುಗ್ರಹರೂಪವಾಗಿಯೇ ಪರಿಣಮಿಸುವುದು. ಕೃಷ್ಣಾ! ನಾನು ನಿನ್ನ ಪ್ರಭಾವವನ್ನು ತಿಳಿಯದೆ, ನನ್ನ ಪ್ರಭುತ್ವದ ಮದದಿಂದ ನಿನ್ನಲ್ಲಿ ಮಹಾಪರಾಧಮಾಡಿದೆನು! ಅಜ್ಞತೆಯಿಂದ ಮಾಡಿದ ನನ್ನ ಅಪರಾಧವನ್ನು ಮನ್ನಿಸಬೇಕು! ತಿರುಗಿ ನನಗೆ ಸರ್ವೇಶ್ವರನಾದ ನಿನ್ನ ವಿಷಯದಲ್ಲಿ ಈ ವಿಧವಾದ ದುರ್ಬುದ್ಧಿಯು ಹುಟ್ಟದಂತೆಯೂ ಅನುಗ್ರಹಿಸಬೇಕು! ಇದೇ ನನ್ನ ಪ್ರಾರ್ಥನೆ! ಓ ಅಧೋಕ್ಷಜಾ! ಯಾವುದಾದರೂ ಒಂದು ಧದಿಂದ ಸಮಸ್ತಚೇತನರನ್ನೂ ಅನುಗ್ರಹಿಸುವುದೇ ನಿನ್ನ ಅವತಾರಪ್ರಯೋಜನವು! ಭೂಮಿಗೆ ಭಾರಭೂತರಾದ ದುಷ್ಟಕ್ಷತ್ರಿಯರನ್ನು ನಿಗ್ರಹಿಸುವುದರಮೂಲಕವಾಗಿ, ಅವರಿಗೆ ಪುನರ್ಜನ್ಮವಿಲ್ಲದ ಮೋಕ್ಷವನ್ನೇ ಕೊಡುವೆ! ನಿನ್ನ ಪಾದಾಶ್ರಿತರಾದ ಸಾಧುಗಳಿಗೆ ಉತ್ತರೋತ್ತರಾಭ್ಯುದಯವನ್ನುಂಟುಮಾಡುತ್ತ, ಅವರಿಗೂ ಉತ್ತಮಪುರುಷಾರ್ಥವನ್ನು ಕೈಗೂಡಿಸುವೆ! ಆದುದರಿಂದ ಸರ್ವವಿಧದಿಂದಲೂ ಲೋಕಕ್ಷೇಮಕ್ಕಾಗಿಯೇ ನಿನ್ನ ಅವತಾರವು. ಓ ಷಾಡ್ಗುಣ್ಯಪರಿಪೂರ್ಣಾ! ನಿನಗೆ ನಮಸ್ಕಾರವು! ಓ ಮಹಾಪುರುಷಾ! ನಿನಗೆ ವಂದನವು! ಓ ವಾಸುದೇವಾ! ಕೃಷ್ಣಾ! ಭಕ್ತಪಾಲಕಾ! ನಿನಗೆ ನಮಸ್ಕಾರವು! ಕರ್ಮವಶದಿಂದಲ್ಲದೆ, ಸ್ವೇಚ್ಛೆಯಿಂದಲೇ ನಾನಾಶರೀರಗಳನ್ನು ಕೈಕೊಳ್ಳತಕ್ಕವನಾಗಿಯೂ, ಶುದ್ಧಜ್ಞಾನಸ್ವರೂಪನಾಗಿಯೂ, ಸರ್ವಸ್ವರೂಪನಾಗಿಯೂ, ಸಮಸ್ತಪ್ರಪಂಚಕ್ಕೂ ಬೀಜಭೂತನಾಗಿಯೂ, ಸರ್ವಭೂತಗಳಿಗೂ ಅಂತರಾತ್ಮನಾಗಿಯೂ ಇರುವ ನಿನಗೆ ನಮಸ್ಕಾರವು! ಓ ಭಗವಂತಾ! ನಿನ್ನ ಮಹಿಮೆಯನ್ನು ಕಾಣದೆ, ದೇಹಾಭಿಮಾನದಿಂದ ಬೀಗಿ

ನನ್ನನ್ನೇ ಪ್ರಭುವೆಂದು ತಿಳಿದಿದ್ದ ನಾನು, ನನ್ನ ಯಜ್ಞಕ್ಕೆ ಭಂಗವುಂಟಾದುದನ್ನು ನೋಡಿ ಸಹಿಸಲಾರದೆ, ಗೋಕುಲವನ್ನು ನಾಶಮಾಡುವುದಕ್ಕಾಗಿ ಮಳೆಗಾಳಿಗಳನ್ನು ಹೊರಡಿಸಿ, ನಿನ್ನಲ್ಲಿ ಮಹಾಪರಾಧಿಯಾದೆನು. ಆದರೇನು? ಈ ಅಪರಾಧವೇ ನನಗೆ ಶ್ರೇಯಃಕಾರಣವಾಯಿತು! ನನ್ನ ಪ್ರಯತ್ನವು ವಿಫಲವಾದುದರಿಂದ, ನನ್ನ ಮನಸ್ಸಿನಲ್ಲಿದ್ದ ಅಹಂಕಾರವು ಮುರಿಯಿತು! ನಿನ್ನ ಅನುಗ್ರಹಕ್ಕೆ ಪಾತ್ರನಾದೆನು. ಓ ಸರ್ವೇಶ್ವರಾ! ಸರ್ವಾತ್ಮನಾಗಿಯೂ, ಸರ್ವಗುರುವಾಗಿಯೂ ಇರುವ ನಿನ್ನಲ್ಲಿ ಮರೆಹೊಕ್ಕ ನನ್ನನ್ನು ರಕ್ಷಿಸಬೇಕು" ಎಂದು ಪ್ರಣಾಮಮಾಡಿ ಪ್ರಾರ್ಥಿಸಿದನು. ಆಗ ಕೃಷ್ಣನು, ಇಂದ್ರನ ದೈನ್ಯವನ್ನು ನೋಡಿ ಕನಿಕರಗೊಂಡು, ಮೇಘಗಂಭೀರಧ್ವನಿಯಿಂದ ಆತನನ್ನು ಕುರಿತು ಮಂದಹಾಸಪೂರ್ವಕವಾಗಿ ಹೀಗೆಂದು ಹೇಳುವನು. "ಇಂದ್ರಾ! ನೀನು ನಿನ್ನ ಇಂದ್ರಪದವಿಗಾಗಿ ಬಹಳ ಮದಾಂಧನಾಗಿ, ನನ್ನನ್ನೂ ಲಕ್ಷ್ಯಮಾಡದಿರುವುದನ್ನು ನೋಡಿ, ನಿನಗೆ ಆ ಗರ್ವವನ್ನು ಮುರಿದು ಯಾವಾಗಲೂ ನಿನ್ನ ಮನಸ್ಸು ನನ್ನ ಸ್ಮರಣೆಯಲ್ಲಿರುವಂತೆ ಮಾಡುವುದಕ್ಕಾಗಿಯೇ ನಾನು ನಿನ್ನ ಯಜ್ಞಕ್ಕೆ ಭಂಗವನ್ನುಂಟುಮಾಡಿದೆನು. ಆದುದರಿಂದ ಈಗ ನಾನು ನಿನಗೆ ಮಾಡಿದ ನಿಗ್ರಹವನ್ನು ಅನುಗ್ರಹವೆಂದೇ ತಿಳಿ! ಪ್ರಭುತ್ವದಿಂದಲೂ, ಸಂಪತ್ತಿನಿಂದಲೂ ಮದಿಸಿದವರು ನನ್ನನ್ನು ಮರೆತುಬಿಡುವವುದು ಸಹಜವು! ಅಂತವರನ್ನು ಅನುಗ್ರಹಿಸಬೇಕೆಂಬ ಉದ್ದೇಶವು ನನಗೆ ಹುಟ್ಟಿದಪಕ್ಷದಲ್ಲಿ, ಅವರನ್ನು ಮೊದಲು ಆ ಐಶ್ವರ್ಯದಿಂದ ತಪ್ಪಿಸುವೆನು! ಆದುದರಿಂದ ಓ ಶಕ್ರಾ! ಇನ್ನು ನೀನು ಹೋಗು! ನಿನಗೆ ಮಂಗಳವಾಗಲಿ! ಇನ್ನು ಮೇಲೆ ನೀನು ಈ ವಿಧವಾದ ಗರ್ವವನ್ನು ಬಿಟ್ಟು, ಎಚ್ಚರಿಕೆಯಿಂದ ನಿನ್ನ ಅಧಿಕಾರವನ್ನು ನಡೆಸುತ್ತಿರು! ಒಂದೊಂದುವಿಷಯದಲ್ಲಿಯೂ, ನನ್ನ ಆಜ್ಞಾಧೀನನಾಗಿ ನಡೆಯುತ್ತಿರಬೇಕಾದುದೇ ನಿನ್ನ ಕಾರ್ಯವು!" ಎಂದನು.

ಆಮೇಲೆ ಕಾಮಧೇನುವು ತನ್ನ ಪರಿವಾರಗಳಾದ ಗೋಸಮೂಹದೊಡನೆ ಮುಂದೆ ಬಂದು, ಗೋಪಾಲರೂಪದಿಂದಿದ್ದ ಸರ್ವೇಶ್ವರನಾದ ಕೃಷ್ಣನಿಗೆ ನಮಸ್ಕರಿಸಿ, ವಿಜ್ಞಾಪಿಸುವಳು. "ಕೃಷ್ಣಾ! ಕೃಷ್ಣಾ! ಓ ಮಹಾಯೋಗೀ! ವಿಶ್ವಾತ್ಮಾ! ವಿಶ್ವಕಾರಣಾ! ಸರ್ವಲೋಕಪಾಲಕನಾದ ನಿನ್ನಿಂದ

ಲ್ಲವೇ ಈಗ ನಮ್ಮ ಗೋಕುಲವೆಲ್ಲವೂ ಸನಾಥವಾಯಿತು! ನೀನೇ ನಮಗೆ ಪರದೈವವು! ಗೋಬ್ರಾಹ್ಮಣರಿಗೂ, ದೇವತೆಗಳಿಗೂ, ಸಾಧುಗಳಿಗೂ ಉತ್ತರೋತ್ತರಕ್ಷೇಮವನ್ನುಂಟುಮಾಡುವುದಕ್ಕಾಗಿ, ನೀನೇ ಈ ಭೂಲೋಕಕ್ಕೆ ಇಂದ್ರನಾಗಿರು! ಓ ಜಗತ್ಪತೀ! ನೀನು ರೂಪದಲ್ಲಿ ಗೊಲ್ಲನಾಗಿದ್ದರೂ, ಭೂಭಾರಪರಿಹಾರಾರ್ಥವಾಗಿ ಅವತರಿಸಿದ ವಿಶ್ವಾತ್ಮನೇ ನೀನಲ್ಲದೆ ಬೇರೆಯಲ್ಲ! ಈಗ ನಿನ್ನನ್ನು ಇಂದ್ರಪದವಿಯಲ್ಲಿ ಅಭಿಷೇಕಮಾಡುವುದಕ್ಕಾಗಿಯೇ ನಾವು ಬ್ರಹ್ಮನಿಂದ ಪ್ರೇರಿತರಾಗಿ ಬಂದಿರುವೆವು" ಎಂದಳು.

ಹೀಗೆ ಕಾಮಧೇನುವು ಕೃಷ್ಣನನ್ನು ಪ್ರಾರ್ಥಿಸಿ, ಅವನ ಅನುಜ್ಞೆಯನ್ನು ಪಡೆದು, ತನ್ನ ಕ್ಷೀರದಿಂದ ಆತನಿಗೆ ಅಭಿಷೇಕವನ್ನು ಮಾಡಿತು. ಆಮೇಲೆ ಇಂದ್ರನು ಅದಿತಿ ಮೊದಲಾದ ದೇವಮಾತೆಯರಿಂದ ಪ್ರೇರಿತನಾಗಿ, ದೇವರ್ಷಿಗಳೊಡಗೂಡಿ ಬಂದು, ಐರಾವತಹಸ್ತದಿಂದ ತರಿಸಲ್ಪಟ್ಟ ದೇವಗಂಗಾತೀರ್ಥದಿಂದ ಆ ಕೃಷ್ಣನಿಗೆ ಅಭಿಷೇಕವನ್ನು ಮಾಡುತ್ತ, ಅವನಿಗೆ ಗೋವಿಂದನೆಂಬ ಹೆಸರನ್ನು ಕೊಟ್ಟನು ಈ ಗೋವಿಂದಪಟ್ಟಾಭಿಷೇಕಕಾಲದಲ್ಲಿ, ತುಂಬುರುನಾರದರೊಡನೆ ಸಿದ್ಧ ಗಂಧರ್ವ ಚಾರಣ ವಿದ್ಯಾಧರರೆಲ್ಲರೂ ಬಂದು, ಲೋಕಪಾವನವಾದ ಕೃಷ್ಣನ ಕೀರ್ತಿಯನ್ನು ಗಾನಮಾಡುತಿದ್ದರು. ಅಪ್ಸರಸ್ಸುಗಳು ಸಂತೋಷದಿಂದ ನರ್ತಿಸಿದರು. ದೇವಶ್ರೇಷ್ಠರು ಕೃಷ್ಣನನ್ನು ಸ್ತುತಿಸುತ್ತ ಪುಷ್ಪವರ್ಷವನ್ನು ಕರೆದರು. ಆಕಾಲದಲ್ಲಿ ತ್ರೈಲೋಕ್ಯವೂ ಸಂತೋಷವನ್ನು ಹೊಂದಿತು! ಗೋವುಗಳೆಲ್ಲವೂ ತಮಗೆ ತಾವೇ ಹಾಲನ್ನು ತೊರೆಯಿಸುತ್ತ, ಭೂಮಿಯನ್ನು ಕ್ಷೀರಪ್ರವಾಹದಲ್ಲಿ ತೇಲಾಡಿಸುತಿದ್ದುವು. ನದಿಗಳು ಹಾಲು ಮುಂತಾದ ನಾನಾರಸಗಳೊಡನೆ ಪ್ರವಹಿಸುತಿದ್ದುವು. ಸಮಸ್ತ ವೃಕ್ಷಗಳೂ ಜೇನನ್ನು ತೊಟ್ಟಿಕ್ಕುತಿದ್ದುವು. ಉತ್ತುಬಿತ್ತದೆ ಭೂಮಿಯು ಫಲವನ್ನು ಬಿಡುತಿದ್ದಿತು. ಪರ್ವತಗಳು ತಮ್ಮೊಳಗಿನ ರತ್ನರಾಶಿಗಳನ್ನೆಲ್ಲಾ ಹೊರಕ್ಕೆ ಕಕ್ಕಿದುವು, ಈ ಕೃಷ್ಣಾಭಿಷೇಕಕಾಲದಲ್ಲಿ, ಸಹಜವಾಗಿ ಕ್ರೂರಸ್ವಭಾವವುಳ್ಳ ಮೃಗಗಳೂ ವೈರಬುದ್ಧಿಯನ್ನು ಬಿಟ್ಟಿದ್ದುವು. ಹೀಗೆ ದೇವೇಂದ್ರನು ಗೋಕುಲಪತಿಯಾದ ಕೃಷ್ಣನಿಗೆ ಪಟ್ಟಾಭಿಷೇಕವನ್ನು ಮಾಡಿದಮೇಲೆ, ಅವನ ಅನುಜ್ಞೆಯನ್ನು ಪಡೆದು, ದೇವ

ತಾಸಮೂಹಗಳೊಡನೆ ತನ್ನ ಲೋಕಕ್ಕೆ ಹಿಂತಿರುಗಿದನು ಇದು ಇಪ್ಪತ್ತೇಳನೆಯ ಅಧ್ಯಾಯವು,

---

{ಶ್ರೀಕೃಷ್ಣನು ವರುಣಲೋಕಕ್ಕೆ ಹೋಗಿ ತಂದೆಯನ್ನು ಕರೆತಂದುದು.}

ಪರೀಕ್ಷಿದ್ರಾಜಾ! ಅದರಂತಾಚೆಗೆ ಒಮ್ಮೆ ನಂದನು, ಏಕಾದಶಿಯಲ್ಲಿ ಉಪವಾಸವಿದ್ದು, ಭಗವದಾರಾಧನವನ್ನು ಮಾಡಿ, ದ್ವಾದಶೀದಿನದಲ್ಲಿ ಬೆಳಗಿನ ಜಾವಕ್ಕೆ ಮೊದಲೇ ಎದ್ದು, ಕಾಳಿಂದಿಯಲ್ಲಿ ಸ್ನಾನಾರ್ಥವಾಗಿ ಇಳಿದನು ಹೀಗೆ ನಂದನು ರಾಕ್ಷಸಸಂಚಾರಯೋಗ್ಯವಾದ ರಾತ್ರಿಕಾಲದಲ್ಲಿ ನೀರಿಗಿಳಿದುದನ್ನು ನೋಡಿ, ವರುಣದೂತನಾದ ರಾಕ್ಷಸನೊಬ್ಬನು, ಅವನನ್ನು ಹಿಡಿದು ಹಾಗೆಯೇ ಜಲಮಾರ್ಗವಾಗಿ ವರುಣನಬಳಿಗೆ ಕರೆತಂದುಬಿಟ್ಟನು. ಬೆಳಗಿನಜಾವಕ್ಕೆಮೊದಲೇ ಸ್ನಾನಾರ್ಥವಾಗಿ ನದಿಗೆ ಹೋದ ನಂದನು, ಮಧ್ಯಾಹ್ನದವರೆಗೂ ಹಿಂತಿರುಗಿ ಬಾರದುದನ್ನು ನೋಡಿ, ಇತ್ತಲಾಗಿ ಗೋಪಾಲಕರಿಗೆ ಭೀತಿ ಹುಟ್ಟಿತು ಅವರೆಲ್ಲರೂ ಬಲರಾಮಕೃಷ್ಣರಬಳಿಗೆ ಬಂದು. "ರಾಮಾ! ಕೃಷ್ಣಾ! ಇನ್ನೇನು ಗತಿ." ಎಂದು ಗೋಳಿಡುತ್ತಿದ್ದರು. ಆಗ ಸರ್ವಜ್ಞನಾದ ಕೃಷ್ಣನು, ತನ್ನ ತಂದೆಯು ವರುಣಲೋಕದಲ್ಲಿರುವುದನ್ನು ತಿಳಿದು, "ಎಲೈ ಗೋಪಾಲಕರೆ! ಭಯಪಡಬೇಡಿರಿ! ನಮ್ಮ ತಂದೆಯಿರುವ ಸ್ಥಳವನ್ನು ನಾನು ಬಲ್ಲೆನು! ಇನ್ನು ಸ್ವಲ್ಪಕಾಲದಲ್ಲಿಯೇ ಕರೆತರುವೆನು" ಎಂದು ಹೇಳಿ, ವರುಣಲೋಕಕ್ಕೆ ಹೋದನು. ಕೃಷ್ಣನನ್ನು ಕಂಡೊಡನೆ ವರುಣನು, ಮಹೋತ್ಸಾಹಯುಕ್ತನಾಗಿ, ಷೋಡಶೋಪಚಾರಗಳಿಂದ ಸತ್ಕರಿಸಿ "ಓ ಪ್ರಭೂ! ಕೃಷ್ಣಾ! ಈಗ ನಿನ್ನ ಸೇವೆಯಿಂದ ನನ್ನ ದೇಹವು ಸಫಲವಾಯಿತು. ನಾನು ಕೃತಾರ್ಥನಾದೆನು. ನಿನ್ನ ದರ್ಶನದಿಂದ ನನ್ನ ಕಣ್ಣುಗಳು ಸಾರ್ಥಕವಾದುವು." ಎಂದು ಹೇಳಿ ಕೈಮುಗಿದು. "ಓ ಭಗವಂತಾ! ನಿನಗೆ ನಮಸ್ಕಾರವು! ಪರಬ್ರಹ್ಮರೂಪಿಯಾದ ಓ ಕೃಷ್ಣಾ! ನಿನಗೆ ನಮಸ್ಕಾರವು. ಓ ಪರಮಾತ್ಮಾ! ನಿನಗೆ ನಮಸ್ಕಾರವು! ದೇವಾ! ಪ್ರಪಂಚದ ವಿವಿಧಸೃಷ್ಟಿಗೆ ಹೇತುವಾದ ಮಾಯೆ

ಯೆಂಬುದು, ಹೆಸರಿಗೆಮಾತ್ರವೂ ನಿನ್ನಲ್ಲಿ ಸಂಬಂಧಿಸಲಾರದು. ಹಾಗಿದ್ದ ರೂ ನೀನಾಗಿ ಸ್ವೇಚ್ಛೆಯಿಂದ ಇಂತಹ ಶರೀರಗಳನ್ನು ಪರಿಗ್ರಹಿಸಿ, ಲೋಕರಕ್ಷಣಕಾರ್ಯವನ್ನು ನಿರ್ವಹಿಸುವೆ. ಕೃಷ್ಣಾ! ವಿವೇಕಜ್ಞಾನವಿಲ್ಲದ ನನ್ನ ಭೃತ್ಯನು, ನಿನ್ನ ವಿಷಯದಲ್ಲಿ ಹೇಗೆ ನಡೆಯಬೇಕೆಂಬುದನ್ನು ತಿಳಿಯದೆ, ನಿನ್ನ ತಂದೆಯನ್ನು ಇಲ್ಲಿಗೆ ಹಿಡಿದುತಂದನು. ಆ ಅಪರಾಧವನ್ನು ನೀನು ಮನ್ನಿಸಬೇಕು! ಆದರೇನು! ಈ ನನ್ನ ಭೃತ್ಯನು ಮಾಡಿದ ಅಪರಾಧದಿಂದಲ್ಲವೇ, ನನಗೆ ನಿನ್ನ ಸಾಕ್ಷಾದ್ದರ್ಶನವು ಲಭಿಸಿತು. ಈತನ ಅಪರಾಧವೇ ನನಗೆ ಉತ್ತಮಫಲವನ್ನು ಕೈಗೂಡಿಸಿತು' ಕೃಷ್ಣಾ! ಇನ್ನು ನೀನು ನಿನ್ನ ತಂದೆಯನ್ನು ಕರೆದುಕೊಂಡು ಹೋಗಬಹುದು. ನನಗೆ ಈ ನಿನ್ನ ತಂದೆಯಲ್ಲಿರುವಂತೆಯೇ, ನಿನ್ನ ಪ್ರಜೆಗಳಾದ ನಮ್ಮಲ್ಲಿಯೂ ಪ್ರೀತಿಯಿರಬೇಕಾದುದರಿಂದ, ನಮ್ಮ ಅಪರಾಧವನ್ನೆಣಿಸದೆ ಅನುಗ್ರಹಿಸಬೇಕು!" ಎಂದನು. ಆಗ ಲೋಕೇಶ್ವರನಾದ ಕೃಷ್ಣನು, ವರುಣನ ಪ್ರಿಯವಾಕ್ಯಗಳಿಗೆ ಪ್ರಸನ್ನನಾಗಿ, ಆವನನ್ನನುಗ್ರಹಿಸಿ, ತನ್ನ ತಂದೆಯನ್ನು ಗೋಕುಲಕ್ಕೆ ಕರೆತಂದು, ತನ್ನ ಬಂಧುಗಳೆಲ್ಲರಿಗೂ ಸಂತೋಷವನ್ನುಂಟುಮಾಡಿದನು ನಂದನು ಅತ್ತಲಾಗಿ ತಾನು ನೋಡಿದ ವರುಣಲೋಕದ ಸೌಭಾಗ್ಯವಿಶೇಷವನ್ನೂ, ವರುಣನ ವೈಭವವನ್ನೂ, ಅಂತಹ ಲೋಕಪಾಲನಾದ ವರುಣನೂಕೂಡ ತನ್ನ ಮಗನಾದ ಕೃಷ್ಣನಲ್ಲಿ ತೋರಿಸಿದ ವಿನಯವನ್ನೂ ನೋಡಿದುದುಮೊದಲು, ಆಶ್ಚರ್ಯಪರವಶನಾಗಿ, ತನ್ನ ಬಂಧುಗಳೆಲ್ಲರಿಗೂ ಆ ವಿಚಾರವನ್ನು ಹೇಳಿಹೇಳಿ ಕೊಂಡಾಡುತಿದ್ದನು. ಹಾಗೆಯೇ ಇದನ್ನು ಕೇಳಿದ ಗೋಪಾಲಕರೂ ಆಶ್ಚರ್ಯದಿಂದ ಕೃಷ್ಣನೇ ಸಾಕ್ಷಾತ್ಪರಮಪುರುಷನೆಂದು ತಿಳಿದು, ತಮ್ಮಲ್ಲಿ ತಾವು "ಈ ಬಾಲಕನೇ ಸರ್ವೇಶ್ವರನೆಂಬುದರಲ್ಲಿ ಸಂದೇಹವಿಲ್ಲ! ಇಂದ್ರಿಯಾತೀತವಾದ ಈತನ ವಿಭೂತಿಗಳನ್ನೂ, ಇವನ ಪರಸ್ವರೂಪವನ್ನೂ ನಾವು ನೋಡುವಬಗೆಯೇನು?" ಎಂದು ಕುತೂಹಲಪಡುತಿದ್ದರು. ಸರ್ವದರ್ಶಿಯಾದ ಕೃಷ್ಣನು, ಅವರ ಅಭಿಪ್ರಾಯವನ್ನು ತಿಳಿದು, ಕೃಪಾಬುದ್ಧಿಯಿಂದ ಹೀಗೆಂದು ಚಿಂತಿಸುವನು. "ಈ ಲೋಕದಲ್ಲಿ ಹುಟ್ಟಿದವರೆಲ್ಲರೂ, ಅಜ್ಞಾನದಿಂದಲೂ, ವಿಷಯಾಭಿಲಾಷೆಯಿಂದಲೂ, ಕರ್ಮವಾಸನೆಯಿಂದಲೂ ಉ

ತ್ತಮಾಥಮಜನ್ಮಗಳೆನಿಸಿಕೊಂಡ ದೇವತಿರ್ಯಙ್ಮನುಷ್ಯಾದಿಶರೀರಗಳಲ್ಲಿ ಪ್ರವೇಶಿಸಿ, ನಾನಾಗತಿಗಳಲ್ಲಿ ತೊಳಲುತ್ತಿರುವುದರಿಂದ, ನನ್ನ ಅಸಾಧಾರಣಗತಿಯನ್ನು ತಿಳಿಯದೆ ಕಳವಳಿಸುವುದು ಸಹಜವೇ! ಆದರೆ ಈ ಗೋಪಾಲಕರಿಗೆಮಾತ್ರ ತಮೋಮಂಡಲಕ್ಕೂ ಮೀರಿದ ನನ್ನ ನಿತ್ಯವಿಭೂತಿಸ್ಥಾನವನ್ನೂ, ನಿರ್ವಿಕಾರವಾಗಿಯೂ, ಜ್ಞಾನಾತ್ಮಕವಾಗಿಯೂ, ದೇಶಕಾಲವಸ್ತುಪರಿಚ್ಛೇದವಿಲ್ಲದೆ ಅನಂತವಾಗಿಯೂ, ಸ್ವರೂಪದಿಂದಲೂ ಗುಣಗಳಿಂದಲೂ, ಬೃಹತ್ತೆನಿಸಿ ಬ್ರಹ್ಮಶಬ್ದವಾಚ್ಯವಾಗಿಯೂ, ಸ್ವಯಂಪ್ರಕಾಶವುಳ್ಳದಾಗಿಯೂ, ಆದ್ಯಂತರಹಿತವಾಗಿಯೂ, ಪ್ರಕೃತಿಸಂಬಂಧವನ್ನು ನೀಗಿದ ಯೋಗಿಗಳಿಗೆಮಾತ್ರವೇ ಗೋಚರಿಸತಕ್ಕ ನನ್ನ ಪರಸ್ವರೂಪವನ್ನೂ, ಈಗಲೇ ತೋರಿಸಬೇಕು" ಎಂದೆಣಿಸಿ, ಅವರೆಲ್ಲರನ್ನೂ ಯಮುನಾತೀರಕ್ಕೆ ಕರೆತಂದನು. ಓ ಪರೀಕ್ಷಿದ್ರಾಜಾ! ಆ ಯಮುನಾನದಿಯಲ್ಲಿ ಬ್ರಹ್ಮಹ್ರದವೆಂಬ ಒಂದಾನೊಂದು ಪ್ರಸಿದ್ಧವಾದ ಮಡುವಿರುವುದು. ಭಗವದ್ಭಕ್ತಶಿಖಾಮಣಿಯೆನಿಸಿಕೊಂಡ ಅಕ್ರೂರನಿಗೂ ಇದೇಸ್ಥಳದಲ್ಲಿ ಬ್ರಹ್ಮಲೋಕವು ಪ್ರತ್ಯಕ್ಷವಾಗಿ ಗೋಚರಿಸಿತು. ಕೃಷ್ಣನು ಗೋಪಾಲಕರನ್ನೂ ಅದೇಮಡುವಿಗೆ ಕರೆತಂದು, ಆ ನೀರಿನಲ್ಲಿ ಮುಳುಗಿ ಮೇಲೆ ಬರುವಂತೆ ಹೇಳಿದನು. ಅದರಂತೆ ಎಲ್ಲರೂ ಅದರಲ್ಲಿ ಮುಳುಗಿ ಮೇಲೆ ಬಂದಕೂಡಲೆ, ಅವರೆಲ್ಲರಿಗೂ ಬ್ರಹ್ಮಲೋಕವು ಕಣ್ಣೆದಿರಿಗೆ ಕಾಣಿಸಿತು. ನಂದಾದಿಗಳೆಲ್ಲರೂ ಅದನ್ನುನೋಡಿ, ಆಶ್ಚರ್ಯಭರಿತರಾಗಿ, ಸಂತೋಷದಿಂದ ಕೃಷ್ಣನ ಮಹಿಮೆಯನ್ನು ಕೊಂಡಾಡುತ್ತ, ಆತನೇ ಪರದೈವವೆಂಬ ನಿಶ್ಚಯಬುದ್ಧಿಯಿಂದ ಕಾಣುತಿದ್ದರು. ಇದು ಇಪ್ಪತ್ತೆಂಟನೆಯ ಅಧ್ಯಾಯವು.

---

### ರಾಸಕ್ರೀಡಾರಂಭವು.

ರಾಜಾ! ಕೇಳು! ಅದರಿಂದಾಚೆಗೆ ಮತ್ತೊಮ್ಮೆ ಶರತ್ಕಾಲವು ತಲೆದೋರಿತು. ಅರಳಿದ ಮಲ್ಲಿಗೆಗಳಿಂದ ದಿಕ್ಕುಗಳೆಲ್ಲವೂ ಶೋಭಿಸುತಿದ್ದುವು. ಕೃಷ್ಣನು ಹಿಂದೊಮ್ಮೆ ಇದೇವಿಧವಾದ ಶರತ್ಕಾಲದಲ್ಲಿ, ತನ್ನೊಡನೆ ರಮಿಸಬೇಕೆಂದು ಬಂದ ಗೋಪಸ್ತ್ರೀಯರಿಗೆ, ಮತ್ತೊಂದು ಶರತ್ಕಾಲವು ಬಂ

ದಾಗ ತಾನು ಅವರ ಇಷ್ಟವನ್ನು ಕೈಗೂಡಿಸುವುದಾಗಿ ವಾಗ್ದಾನವನ್ನು ಮಾಡಿದ್ದನಲ್ಲವೆ ? ಆದರಂತೆಯೇ ಈಗ ಲೋಕಮನೋಹರವಾದ ಶರತ್ಕಾಲವು ಪ್ರಾಪ್ತವಾಗಿರುವುದನ್ನು ನೋಡಿ, ಸತ್ಯಸಂಕಲ್ಪನಾದ ಆ ಭಗವಂತನು, ಇತರ ಪ್ರಾಕೃತಜನರಂತೆ ವಿಷಯೇಚ್ಛೆಯಿಂದಲ್ಲದೆ, ಯೋಗಮಾಯೆಯಿಂದ ಆ ಗೋಪಸ್ತ್ರೀಯರ ಕೋರಿಕೆಯನ್ನೀಡೇರಿಸಬೇಕೆಂದು ಉದ್ದೇಶಿಸಿದನು. ಕೃಷ್ಣನ ಮನಸ್ಸಿನಲ್ಲಿ ಈ ಸಂಕಲ್ಪವು ಹುಟ್ಟಿದೊಡನೆ, ಆವನ ಮನಃಪ್ರೀತಿಗಾಗಿ ಚಂದ್ರನು, ಆ ರಾತ್ರಿಯಲ್ಲಿ 'ತನ್ನ ಪೂರ್ಣಕಳೆಗಳಿಂದ ಅಪೂರ್ವಶೋಭೆಯನ್ನು ಬೀರುತ್ತ ಉದಿಸಿಬಂದನು. ಮತ್ತು ಬಹುಕಾಲದಿಂದ ಕಾಣದಿದ್ದ ಪ್ರಿಯೆಯನ್ನು ನೋಡಿದಾಗ, ನಾಯಕನು ಅವಳ ಮುಖಕ್ಕೆ ತನ್ನ ಕೈಯಿಂದ ಕುಂಕುಮತಿಲಕವನ್ನು ತಿದ್ದಿ ಅಲಂಕರಿಸುವಂತೆ,ಆಗ ಚಂದ್ರನು, ಸಂಧ್ಯಾರಾಗಮಿಶ್ರಿತವಾದ ತನ್ನ ಕರಗಳಿಂದ ಪೂರ್ವದಿಕ್ಕಾಂತೆಯನ್ನು ಅಲಂಕರಿಸುತಿದ್ದನು ಸಮಸ್ತಪ್ರಾಣಿವರ್ಗಗಳಿಗೂ, ಓಷಧಿವರ್ಗಗಳಿಗೂ,ಸಂತಾಪಹಾರಕವಾದ ಚಂದ್ರಿಕೆಯುಸುತ್ತಲೂ ಪ್ರಸರಿಸಿತು.

ಕುಂಕುಮತಿಲಕದಿಂದಲಂಕೃತವಾದ ಸ್ತ್ರೀಮುಖದಂತೆ, ಸಂಧ್ಯಾರಾಗದಿಂದ ಶೋಭಿತವಾಗಿ ಆಕಾಶದಲ್ಲಿ ಬೆಳಗುತ್ತಿರುವ ಪೂರ್ಣಚಂದ್ರನನ್ನೂ, ಚಂದ್ರಿಕಾರುಚಿಯಿಂದ ಮನೋಹರವಾದ ಆ ಬೃಂದಾವನಪ್ರದೇಶವನ್ನೂ ನೋಡಿ ಕೃಷ್ಣನ ಮನಸ್ಸಿಗೂ ಉತ್ಸಾಹವು ಹುಟ್ಟಿತು. ಆ ರಾತ್ರಿಯಲ್ಲಿ ಕೃಷ್ಣನು, ತನ್ನ ಕೊಳಲನ್ನು ಕೈಗೆ ತೆಗೆದುಕೊಂಡು, ಗೋಪಾಂಗನೆಯರ ಮನಸ್ಸನ್ನು ಸೂರೆಗೊಳ್ಳುವಂತೆ ಮಧುರಧ್ವನಿಯಿಂದ ವೇಣುಗಾನಮಾಡುತ್ತ ಬೀದಿಯಲ್ಲಿ ಹೊರಟನು. ಆ ಕೃಷ್ಣನ ವೇಣುಗಾನವಾದರೋ ಸಹಜವಾಗಿಯೇ ಎಂತವರಿಗೂ ಕಾಮೋದ್ದೀಪಕವಾದುದು. ಈ ವೇಣುಗಾನವನ್ನು ಕೇಳಿದಾಗ, ಮೊದಲೇ ಕೃಷ್ಣನವಿಷಯವಾಗಿ ಕಾಮವಿಕಾರದಿಂದ ಕಳವಳಿಸುತಿದ್ದ ಗೋಪಾಂಗನೆಯರ ಸಡಗರವನ್ನು ಕೇಳಬೇಕೆ? ತಮ್ಮತಮ್ಮ ಮನೆಯಲ್ಲಿ ಗೃಹಕಾರ್ಯಗಳನ್ನು ನೋಡುತಿದ್ದ ಆ ಗೋಪಾಂಗನೆಯರೆಲ್ಲರೂ, ವೇಣುಧ್ವನಿಯನ್ನು ಕೇಳಿದೊಡನೆ, ತಮ್ಮತಮ್ಮ ಕಾರ್ಯಗಳನ್ನು ಅಷ್ಟಕ್ಕೇ ನಿಲ್ಲಿಸಿ, ಕೃಷ್ಣನನ್ನು ನೋಡುವ ಕುತೂಹಲದಿಂದ, ಒಬ್ಬರ ಪ್ರಯತ್ನ

ವು ಮತ್ತೊಬ್ಬರಿಗೆ ತಿಳಿಯದಂತೆ, ಅವರವರ ಮನೆಯಿಂದ ಹೊರಟು, ಗಮನವೇಗದಿಂದ ಕಿವಿಯೋಲೆಗಳು ಕುಲುಕಾಡುತ್ತಿರಲು, ಎಲ್ಲರೂ ಕೃಷ್ಣನಬಳಿಗೆ ಹೊರಟರು. ಹಾಲುಕರೆಯುತ್ತಿದ್ದವರು ಆ ಕಾರ್ಯವನ್ನು ಅರ್ಧದಲ್ಲಿಯೇ ಬಿಟ್ಟು ಹೊರಟುಬಂದರು. ಕೆಲವರು ಒಲೆಯಮೇಲೆ ಉಕ್ಕಿಬರುತಿದ್ದ ಹಾಲನ್ನೂ ಕೆಳಕ್ಕಿಳಿಸದೆ ಹಾಗೆಯೇ ಓಡಿಬಂದರು. ಇದರಂತೆಯೇ, ಆಗ ಮಕ್ಕಳಿಗೆ ಎಲೆಹಾಕಿ ಅನ್ನವನ್ನು ಬಡಿಸುತಿದ್ದವರು, ಶಿಶುಗಳಿಗೆ ಮೊಲೆ ಕೊಡುತಿದ್ದವರು, ಪತಿ ಶುಶ್ರೂಷೆಯಲ್ಲಿದ್ದವರು, ಆಗಲೇ ಊಟಕ್ಕೆ ಕುಳಿತವರು, ಮೈತೊಳೆಯುತಿದ್ದವರು ಗಂಧಾನುಲೇಪನವನ್ನು ಮಾಡಿಕೊಳ್ಳುತಿದ್ದವರು, ಕಣ್ಣಿಗೆ ಕಪ್ಪಿಡುತಿದ್ದವರು, ಇವರೆಲ್ಲರೂ ತಮ್ಮತಮ್ಮ ಕಾರ್ಯಗಳನ್ನು ಅರ್ಧದಲ್ಲಿಯೇ ನಿಲ್ಲಿಸಿ, ತಮ್ಮ ವಸ್ತ್ರಾಭರಣಗಳು ಕದಲಿದುದನ್ನೂ ತಿಳಿಯದೆ, ತಮ್ಮ ಗಂಡಂದಿರೂ, ಮಕ್ಕಳೂ, ಬಂಧುಗಳೂ, ಸಹೋದರರೂ, ತಮ್ಮನ್ನು ನಿವಾರಿಸಿದರೂ ಹಿಂತಿರುಗದೆ, ಆ ಕೃಷ್ಣನಲ್ಲಿ ನಟ್ಟ ಮನಸ್ಸುಳ್ಳವರಾಗಿ ಅವನ ಸಮೀಪಕ್ಕೆ ಬಂದು ಸೇರಿದರು. ಮನೆಬಿಟ್ಟು ಹೊರಡುವುದಕ್ಕವಕಾಶವಿಲ್ಲದೆ, ನಿರ್ಬಂಧದಲ್ಲಿಡಲ್ಪಟ್ಟ ಬೇರೆ ಕೆಲವು ಸ್ತ್ರೀಯರು, ಆ ಒಳಮನೆಯಲ್ಲಿಯೇ ಕಣ್ಣುಮುಚ್ಚಿ ಕುಳಿತು, ಕೃಷ್ಣನನ್ನು ತದೇಕಧ್ಯಾನದಿಂದ ಭಾವಿಸುತಿದ್ದರು ಅವರಿಗೆ ಆ ವಿಧದಿಂದಲೇ ಕರ್ಮಶೇಷವು ಕಳೆದು, ಮುಕ್ತಿಪ್ರಾಪ್ತಿಗೆ ಸಾಧನವಾಯಿತು. ತಮ್ಮ ಪ್ರಿಯತಮನಾದ ಕೃಷ್ಣನನ್ನು ಕಾಣದುದರಿಂದುಂಟಾದ ವಿರಹಾಗ್ನಿಯಿಂದ ಬೆಂದುಬೆಂದು, ದುಃಖಾನುಭವದಲ್ಲಿದ್ದುದರಿಂದ, ಅವರ ಪಾಪಕರ್ಮವು ಕಳೆದುಹೋಯಿತು ಆಗಾಗ ಅವರು ತಮ್ಮ ಮನಸ್ಸಿನಲ್ಲಿಯೇ ಶ್ರೀಕೃಷ್ಣನ ರೂಪವನ್ನು ನೋಡಿ, ಆತನ ದೇಹಾಲಿಂಗನವನ್ನನುಭವಿಸುತಿದ್ದುದರಿಂದ, ಆ ಸುಖಾನುಭವದಿಂದಲೇ ಅವರ ಪುಣ್ಯಕರ್ಮವೂ ಕಳೆದುಹೋಯಿತು. ಹೀಗೆ ಆ ಗೋಪಸ್ತ್ರೀಯರು, ಪರಮಾತ್ಮನಾದ ಆ ಕೃಷ್ಣನಲ್ಲಿ ಜಾರಬುದ್ಧಿಯನ್ನಿಟ್ಟಿದ್ದರೂ, ಆತನವಿಷಯವಾದ ಅನವರತಭಾವನಾವಿಶೇಷದಿಂದ, ಸಂಸಾರಬಂಧಕ್ಕೆ ಕಾರಣವಾದ ಕರ್ಮಶೇಷವನ್ನು ಕಳೆದು, ಹಾಗೆಯೇ ದೇಹತ್ಯಾಗವನ್ನು ಮಾಡಿ ಮುಕ್ತಿಯನ್ನು ಹೊಂದಿದರು." ಎಂದನು.

ಆಗ ಪರೀಕ್ಷಿದ್ರಾಜನು ಶುಕಮಹರ್ಷಿಯನ್ನು ಕುರಿತು “ಮುನೀಂದ್ರಾ! ಏನಾಶ್ಚರ್ಯವಿದು! ಆ ಗೋಪಸ್ತ್ರೀಯರು ಕೃಷ್ಣನನ್ನು ಜಾರನೆಂದು ತಿಳಿದಿದ್ದರೇಹೊರತು ಪರಬ್ರಹ್ಮವೆಂದು ತಿಳಿದಿರಲಿಲ್ಲ! ಈ ವಿಧವಾದ ವಿಷಯಾಸಕ್ತಿಯು ಮೇಲೆಮೇಲೆ ಸಂಸಾರಬಂಧಕ್ಕೆ ಕಾರಣವೆನಿಸಬೇಕೇಹೊರತು ಮುಕ್ತಿಗೆ ಸಾಧನವಾಗಲಾರದು. ಆ ಗೋಪಸ್ತ್ರೀಯರಿಗೆಮಾತ್ರ ಅದು ಮುಕ್ತಿಗೆ ಕಾರಣವಾದುದು ಹೇಗೆ? ಇದರ ರಹಸ್ಯವನ್ನು ನನಗೆ ತಿಳಿಸಬೇಕು” ಎಂದನು. ಅದಕ್ಕಾ ಶುಕಮುನಿಯು “ಓ ಪರೀಕ್ಷಿದ್ರಾಜಾ! ಈ ವಿಚಾರವನ್ನು ನಿನಗೆ ನಾನು ಮೊದಲೇ ತಿಳಿಸಿರುವೆನಲ್ಲವೆ? ಶಿಶುಪಾಲನು ಕೃಷ್ಣನಲ್ಲಿ ಜನ್ಮದ್ವೇಷವನ್ನಿಟ್ಟಿದ್ದರೂ ಅವನಿಗೆ ಮುಕ್ತಿಯುಂಟಾಗಲಿಲ್ಲವೆ? ಹೀಗಿರುವಾಗ ಆ ಕೃಷ್ಣನನ್ನು ಪ್ರೀತಿಯಿಂದ ಭಾವಿಸುತಿದ್ದ ಗೋಪಿಯರಿಗೆ, ಮುಕ್ತಿಯುಂಟಾಗುವುದೇನಾಶ್ಚರ್ಯವು? ಮನೋವಾಕ್ಕುಗಳಿಗೆ ಅಗೋಚರನಾಗಿಯೂ, ಪ್ರಾಕೃತಗುಣರಹಿತನಾಗಿಯೂ, ಅನಂತಕಲ್ಯಾಣಗುಣವಿಶಿಷ್ಟನಾಗಿಯೂ ಇರುವ ಆ ಭಗವಂತನು, ಅವ್ಯಕ್ತನೆನಿಸಿದ್ದರೂ, ದೇವತಿರ್ಯಙ್ಮನುಷ್ಯಾದಿರೂಪಗಳಿಂದ ಜನಗಳಿಗೆ ವ್ಯಕ್ತವಾಗಿ ಕಾಣಿಸಿಕೊಳ್ಳುವುದು ಮನುಷ್ಯರ ಶ್ರೇಯಸ್ಸಿಗಾಗಿಯೇಹೊರತು ಬೇರೆಯಲ್ಲ! ಆದುದರಿಂದ ಮನುಷ್ಯರಿಗೆ ಅವನಲ್ಲಿ ಭಕ್ತಿಯೊಂದೇ ಮುಕ್ತಿಸಾಧನವೆಂದು ತಿಳಿಯಬಾರದು! ಕಾಮದಿಂದಾಗಲಿ, ಕ್ರೋಧದಿಂದಾಗಲಿ, ಭಯದಿಂದಾಗಲಿ, ಸ್ನೇಹದಿಂದಾಗಲಿ, ಬಂಧುತ್ವದಿಂದಾಗಲಿ, ಪ್ರೀತಿಯಿಂದಾಗಲಿ, ಯಾವವಿಧದಿಂದಲಾದರೂ, ಅವನನ್ನು ಅನವರತವೂ ಭಾವಿಸುತ್ತಿರುವವರು, ಆ ಭಾವನಾವಿಶೇಷದಿಂದಲೇ ತನ್ಮಯತ್ವವನ್ನು ಹೊಂದುವರು. ಅದೇ ಮುಕ್ತಿಗೆ ಕಾರಣವಾಗುವುದೆಂದು ತಿಳಿ! ಆದುದರಿಂದ ಯೋಗೀಶ್ವರನಾದ ಆ ಭಗವಂತನವಿಷಯದಲ್ಲಿ ಇದೊಂದಾಶ್ಚರ್ಯವಲ್ಲ! ಅವನು ಇಂದ್ರಿಯಗಳ ದುಷ್ಪ್ರವೃತ್ತಿಗಳನ್ನಡಗಿಸಿ, ತನ್ನಲ್ಲಿ ಐಕ್ಯಹೊಂದಿಸಿ, ಯಾವುದಾದರೂ ವಿಧದಿಂದ ತನ್ನನ್ನು ಒಂದಾವರ್ತಿ ಧ್ಯಾನಿಸತಕ್ಕವರಿಗೆ, ಸ್ಥಾವರಜನ್ಮವನ್ನೂ ನೀಗಿಸಬಲ್ಲವನು. ಅದು ಹಾಗಿರಲಿ! ಮುಂದಿನ ವೃತ್ತಾಂತವನ್ನು ಕೇಳು! ಕಪಟನಾಟಕಸೂತ್ರಧಾರಿಯಾಗಿ ಮಾತುಬಲ್ಲವರಲ್ಲಿ ಮೇಲೆನಿಸಿ

ಕೊಂಡ ಆ ಕೃಷ್ಣನು, ತನ್ನ ಮುಂದೆ ಗುಂಪುಕಟ್ಟಿ ನಿಂತಿದ್ದ ಗೋಪಾಂಗನೆಯರನ್ನು ನೋಡಿ, ಅವರ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ, ತನ್ನ ವಾಕ್ಚಾತುರ್ಯದಿಂದ ಅವರನ್ನು ಮರುಳುಮಾಡುತ್ತ ಹೀಗೆಂದು ಹೇಳುವನು. ‘‘ಓ ಭಾಗ್ಯವತಿಯರೆ? ನಿಮಗೆ ಸುಖಾಗಮನವೆ! ನೀವು ಇಷ್ಟುಹೊತ್ತಿನಲ್ಲಿ ಇಲ್ಲಿಗೆ ಬಂದ ಕಾರಣವೇನು? ನಿಮ್ಮ ಮಂದೆಯೆಲ್ಲಕ್ಕೂ ಕ್ಷೇಮವಷ್ಟೆ? ಏನಾದರೂ ವಿಶೇಷವಿದ್ದರೆ ಬೇಗ ತಿಳಿಸಿರಿ! ಇದೇನು? ನೀವು ಲಜ್ಜೆಯಿಂದ ನಗುತ್ತಿರುವುದನ್ನು ನೋಡಿದರೆ, ನಿಮ್ಮ ಕಷ್ಟವನ್ನು ಹೇಳಿಕೊಳ್ಳುವುದಕ್ಕಾಗಿ ಬಂದಂತೆ ತೋರಲಿಲ್ಲ! ಹೇಗಾದರೂ ಇರಲಿ! ಇದಾದರೋ ಭಯಂಕರವಾದ ಕಾಳರಾತ್ರಿ! ಕ್ರೂರಜಂತುಗಳು ಸಂಚರಿಸತಕ್ಕ ವೇಳೆ! ಅಬಲೆಯರಾದ ನೀವು, ಈ ಹೊತ್ತಿನಲ್ಲಿ ಹೀಗೆ ಹೊರಗೆ ಬರುವುದೆಂದರೇನು? ನಿಮ್ಮ ನಿಮ್ಮ ಮನೆಗೆ ಹೋಗಿರಿ! ನಿಮ್ಮನಿಮ್ಮ ತಂದೆತಾಯಿಗಳೂ,ಸಹೋದರರೂ ಗಂಡಂದಿರೂ, ಮಕ್ಕಳೂ ನಿಮ್ಮನ್ನು ಕಾಣದೆ ಹುಡುಕುತ್ತಿರಬಹುದು! ನಿಮ್ಮ ಬಂಧುಗಳು ನಿಮಗಾಗಿ ಹೆದರುವಂತೆ ಮಾಡಬಾರದು! ಒಂದುವೇಳೆ ನೀವೂ ಈ ಚಂದ್ರಿಕೆಯಲ್ಲಿ, ಈ ಯಮುನಾತೀರದ ಸನ್ನಿವೇಶವನ್ನು ನೋಡಿ ಆನಂದಿಸಬೇಕೆಂದು ಬಂದಿರೇನು? ಹಾಗಿದ್ದರೆ ಇದುವರೆಗೆ ನೋಡಿದುದಾಯಿತಲ್ಲವೆ? ಪುಷ್ಪಸಮೃದ್ಧವಾಗಿ, ಯಮುನಾನದಿಯ ಗಾಳಿಯಿಂದ ತೂಗಾಡುತ್ತಿರುವ ಮರದ ಚಿಗುರುಗಳಿಂದ ಶೋಭಿತವಾಗಿ, ಚಂದ್ರಕಿರಣದಿಂದ ರಂಜಿತವಾಗಿಯೂ ಇರುವ ಈ ವನಸನ್ನಿವೇಶಗಳನ್ನೆಲ್ಲಾ ನೋಡಿದುದಾಯಿತಷ್ಟೆ?ಇನ್ನು ಹೊರಡಿರಿ! ಬಹಳಹೊತ್ತು ಇಲ್ಲಿರಬಾರದು. ನಿಮ್ಮ ಪತಿಗಳಿಗೆ ಕಾಲೋಚಿತವಾದ ಉಪಚಾರಗಳನ್ನು ಮಾಡಿರಿ! ನಿಮ್ಮ ಮಕ್ಕಳು ಅಳುತ್ತಿರಬಹುದು! ಅವುಗಳಿಗೆ ಹಾಲು ಕುಡಿಸಿರಿ! ನಿಮ್ಮ ಕರುಗಳು ಅರಚುತ್ತಿರುವುವು! ಅವುಗಳನ್ನು ತಾಯಿಯ ಸಮೀಪಕ್ಕೆ ಬಿಡಿರಿ! ಒಂದುವೇಳೆ ನನ್ನಲ್ಲಿ ನಿಮಗಿರುವ ಪ್ರೀತಿವಿಶೇಷದಿಂದ ನನ್ನನ್ನು ನೋಡಿ ಹೋಗುವುದಕ್ಕಾಗಿ ಬಂದಿರೇನು? ಅದೇನೋ ಯುಕ್ತವೆ? ನನ್ನಲ್ಲಿ ಸಮಸ್ತಪ್ರಾಣಿಗಳಿಗೂ ಒಂದು ಬಗೆಯ ಅಪೂರ್ವಪ್ರೀತಿಯುಂಟು. ನನ್ನನ್ನು ನೋಡಿದುದಾಯಿತಷ್ಟೆ?ಇನ್ನು ಹೊರಡಿರಿ!ನಿಮ್ಮನಿಮ್ಮ ಮನೆಗೆ ಹೋಗಿ,ನಿಮ್ಮ ಪತಿಗಳನ್ನು ಪಚರಿ.

ಸಿರಿ! ಪತಿಗೂ, ಪತಿಯಬಂಧುಗಳಿಗೂ, ನಿಷ್ಕಾಪಟ್ಯದಿಂದ ಶುಶ್ರೂಷೆಮಾಡು ವುದು, ಮಕ್ಕಳನ್ನು ಪೋಷಿಸುವುದು, ಇದೇ ಗೃಹಿಣಿಯರಿಗೆ ಉತ್ತಮವಾದ ವ್ರತವು! ಕೆಟ್ಟನಡತೆಯುಳ್ಳವನಾಗಿದ್ದರೂ, ಕುರೂಪಿಯಾಗಿದ್ದರೂ, ವೃದ್ಧನಾಗಿದ್ದರೂ, ಜಡನಾಗಿದ್ದರೂ, ರೋಗಿಯಾಗಿದ್ದರೂ, ದರಿದ್ರನಾಗಿದ್ದರೂ, ಉತ್ತಮಗತಿಯನ್ನಪೇಕ್ಷಿಸತಕ್ಕ ಸ್ತ್ರೀಯರು, ತನ್ನ ಪತಿಯನ್ನು ಅಲಕ್ಷ್ಯವಾಗಿ ನೋಡಬಾರದು! ಪತಿಯು ಮಹಾಪಾತಕಿಯಾಗಿದ್ದಪಕ್ಷದಲ್ಲಿಮಾತ್ರ ಅಂತವನನ್ನುಬಿಟ್ಟು ಬೇರೆಯಾಗಿರಬಹುದು! ಕುಲಸ್ತ್ರೀಯರಿಗೆ ಪತಿಯು ಜೀವಿಸಿದ್ದರೂ, ಇಲ್ಲದಿದ್ದರೂ, ಉಪಪತಿಯೊಡನೆ ಸೇರುವುದು ಎಂದಿಗೂ ಯಶಸ್ಕರವಲ್ಲ! ಅಂತವರಿಗೆ ಯಾವವಿಧದಲ್ಲಿಯೂ ಸದ್ಗತಿಯಿಲ್ಲ! ಅವರ ಜನ್ಮವು ಕೇವಲತುಚ್ಛವೆನಿಸುವುದು! ಅವರ ಸ್ಥಿತಿಯು ಯಾವಾಗಲೂ ಭಯಕ್ಕೂ, ದುಃಖಕ್ಕೂ ನೆಲೆಯೆನಿಸುವುದು. ಅವರು ಎಲ್ಲರ ಜುಗುಪ್ಸೆಗೂ ಹಾಸ್ಯಕ್ಕೂ ಈಡಾಗುವರು. ಒಂದುವೇಳೆ ನೀವು ನಿಮ್ಮನಿಮ್ಮ ಪತಿಯಲ್ಲಿ ಸಹಜವಾದ ಪ್ರೇಮವುಳ್ಳವರಾಗಿದ್ದು, ನನ್ನಲ್ಲಿ ಪರಮಾತ್ಮಬುದ್ಧಿಯಿಂದ, ನನ್ನನ್ನೇ ಸರ್ವವಿಧಬಂಧುವನ್ನಾಗಿ ತಿಳಿದಿದ್ದರೂ ಇರಬಹುದು! ಆ ಬುದ್ಧಿಯು ನಿಮಗೆ ಹುಟ್ಟಿದ್ದರೂ, ನನ್ನನ್ನು ಉಪಾಸಿಸುವ ಕ್ರಮವು ಇದಲ್ಲ! ಪರೋಕ್ಷದಲ್ಲಿದ್ದು ನನ್ನ ಗುಣಗಳನ್ನು ಕೇಳುವುದು, ಮನಸ್ಸಿನಲ್ಲಿ ನನ್ನನ್ನು ಸಾಕ್ಷಾತ್ಕರಿಸುವುದು, ನನ್ನನ್ನೇ ಯಾವಾಗಲೂ ಧ್ಯಾನಿಸುತ್ತಿರುವುದು, ನನ್ನ ಗುಣಗಳನ್ನು ಕೊಂಡಾಡುತ್ತಿರುವುದು, ಈ ವಿಧವಾದ ಉಪಾಯಗಳಿಂದ ನನ್ನಲ್ಲಿ ಯಾವವಿಧವಾದ ಭಕ್ತಿಭಾವವು ಹುಟ್ಟುವುದೋ, ಅದು ನನ್ನೊಡನೆ ಕಲೆತಿದ್ದಾಗ (ನನ್ನ ದೇಹಸಂಬಂಧದಿಂದ) ಹುಟ್ಟಲಾರದು, ಆದುದರಿಂದ ನೀವು ನಿಮ್ಮನಿಮ್ಮ ಗೃಹದಲ್ಲಿದ್ದುಕೊಂಡೇ ಮನಸ್ಸಿನಲ್ಲಿ ನನ್ನನ್ನು ಧ್ಯಾನಿಸುತ್ತಿರಬಹುದು." ಎಂದನು.

ಕೃಷ್ಣನು ಹೇಳಿದ ಈ ವಾಕ್ಯಗಳು ಗೋಪಿಯರಿಗೆ ಬಹಳ ಅಪ್ರಿಯವಾಗಿ ತೋರಿತು. ಅತನೊಡನೆ ರಮಿಸಬೇಕೆಂದು ಬಂದ ಆ ಗೋಪಿಯರೆಲ್ಲರೂ, ಆಶಾಭಂಗದಿಂದ ದುಃಖಿತರಾಗಿ, ನಿಟ್ಟುಸಿರನ್ನು ಬಿಡುತ್ತ, ಸುಮ್ಮನೆ ನಿಂತುಬಿಟ್ಟರು! ಅವರ ತುಟಿಯು ಒಣಗಿತು! ಅವರ ಕಣ್ಣುಗಳಿಂದ ಪ

ಳಪಳನೆ ದುಃಖಬಾಷ್ಪವು ಹೊರಟಿತು! ಅಂಜನಮಿಶ್ರವಾದ ಆ ಕಣ್ಣೀರು ಅವರ ಸ್ತನಾಗ್ರದಮೇಲೆ ಬಿದ್ದು, ಅಲ್ಲಿನ ಕುಂಕುಮಾಲೇಪನವನ್ನು ಕದಲಿಸುತಿದ್ದಿತು. ಮುಂದೆ ಬಾಯೆತ್ತುವುದಕ್ಕೇ ಅವಕಾಶವಿಲ್ಲದೆ, ನಾಚಿಕೆಯಿಂದಲೂ, ದುಃಖದಿಂದಲೂ,ತಲೆಯನ್ನು ತಗ್ಗಿಸಿ. ಅಂಗುಷ್ಠದಿಂದ ನೆಲವನ್ನು ಗೀರುತ್ತ ಸುಮ್ಮನೆ ನಿಂತಿದ್ದರು. ಆ ಕೃಷ್ಣನಲ್ಲಿಯೇ ತಮ್ಮ ಮನಸ್ಸನ್ನು ನೆಲೆಗೊಳಿಸಿ, ಆ ಕೃಷ್ಣನೇ ತಮಗೆ ಪ್ರಿಯತಮನೆಂದು ನಂಬಿ,ಅವನೊಬ್ಬನಿಗಾಗಿ ತಮ್ಮ ಪತಿಪುತ್ರಾದಿಗಳೆಲ್ಲರನ್ನೂ ತೊರೆದು ಬಂದು ಗೋಪಿಯರು, ಆ ಕೃಷ್ಣನು ವಿರೋಧಿಯಂತೆ ಹೀಗೆ ಅಪ್ರಿಯವಾಕ್ಯದಿಂದ ತಮ್ಮನ್ನು ನಿರಾಕರಿಸಿದಾಗ, ಹಿಂದುಮುಂದುತೋರದೆ, ದುಃಖದಿಂದ ಪರವಶರಾಗಿದ್ದು, ಕೊನೆಗೆ ಮೆಲ್ಲಗೆ ಚೇತರಿಸಿಕೊಂಡು, ಕಣ್ಣುಗಳನ್ನೊರಸಿಕೊಳ್ಳುತ್ತ, ದುಃಖದಿಂದ ಚೆನ್ನಾಗಿ ಮಾತಾಡಲಾರದೆ, ಗದ್ಗದವಾಕ್ಯದಿಂದ ಹೀಗೆಂದು ಹೇಳುವರು! “ಕೃಷ್ಣಾ! ಮನೆಮಂದಿಮಕ್ಕಳೆಲ್ಲರನ್ನೂ ಬಿಟ್ಟು, ನಿನ್ನ ಪಾದಮೂಲವನ್ನಾಶ್ರಯಿಸುವುದಕ್ಕಾಗಿ ಬಂದ ನಮ್ಮನ್ನು ನೀನು ಈ ವಿಧವಾದ ಕ್ರೂರವಾಕ್ಯಗಳಿಂದ ನಿರಾಕರಿಸಬಹುದೆ? ಸರ್ವಸ್ವತಂತ್ರನಾದುದರಿಂದ ಹೇಗೆ ಮಾಡಿದರೂ, ಯಾರೂ ನಿನ್ನನ್ನು ತಡೆಯುವವರಲ್ಲವೆಂಬ ಹೆಮ್ಮೆಯಿಂದ ಹೀಗೆ ಮಾಡುವಂತಿದೆ! ಪ್ರಭೂ! ನಂಬಿಬಂದ ನಮ್ಮನ್ನು ಕೈಬಿಡದೆ, ನಮ್ಮ ಕೋರಿಕೆಯನ್ನೀಡೇರಿಸು! ಮೋಕ್ಷಾರ್ಥಿಗಳಾಗಿ ಭಜಿಸತಕ್ಕವರನ್ನು ಪರಮಪುರುಷನು ಕೈಕೊಳ್ಳುವಂತೆ, ಶರಣಾಗತರಾದ ನಮ್ಮನ್ನು ನೀನು ಕೃಪೆಯಿಂದ ಸ್ವೀಕರಿಸಬೇಕು? ಕೃಷ್ಣಾ! ಪತಿಪುತ್ರಾದಿಗಳನ್ನು ಅನುವರ್ತಿಸಬೇಕಾದುದೇ ಸ್ತ್ರೀಯರಿಗೆ ಧರ್ಮವೆಂದು ಹೇಳಿದೆಯಲ್ಲವೆ? ನೀನು ಸಮಸ್ತಧರ್ಮಗಳನ್ನೂ ಬಲ್ಲವನೆಂಬುದೇನೋ ನಿಜವೇ! ಆದರೆ ಈಗ ನಾವು ನಿನ್ನಲ್ಲಿ ಧರ್ಮೋಪದೇಶವನ್ನು ಪಡೆಯುವುದಕ್ಕಾಗಿ ಬಂದವರಲ್ಲ! ನಾವು ಆ ಉದ್ದೇಶದಿಂದ ನಿನ್ನಲ್ಲಿಗೆ ಬಂದಾಗ,ನೀನು ಬೇಕಾದ ಧರ್ಮಗಳನ್ನು ಹೇಳಬಹುದು! ನಾವು, ನಿನ್ನ ಸಮಾಗಮವನ್ನುದ್ದೇಶಿಸಿಯೇ ಅವರೆಲ್ಲರನ್ನೂ ಬಿಟ್ಟು ಬಂದಿರುವಾಗ, ಈ ನಿನ್ನ ಉಪದೇಶಗಳು ನಮ್ಮ ಕಿವಿಗೇರುವುವೆ? ಓ ಕೃಷ್ಣಾ! ಈಗ ನಮಗೆ ನೀನೇ ಎಲ್ಲರಿಗಿಂತಲೂ ಪ್ರಿಯತಮನು. ನಮಗೆ

ಮಾತ್ರವೇನು? ದೇಹಧಾರಿಗಳೆಲ್ಲರಿಗೂ ನೀನು ಆತ್ಮಭೂತನಾಗಿರುವಾಗ, ನಿನಗಿಂತಲೂ ಪ್ರಿಯವಾದುದಾವುದು? ನೀನೇ ನಮ್ಮೆಲ್ಲರಿಗೂ ನಿರುಪಾಧಿಕ ಬಂಧುವೆನಿಸಿರುವೆ? ನಾವಾದರೋ ಅಜ್ಞರಾದ ಹೆಂಗಸರು! ಸಹಜವಾಗಿ ಚಪಲಬುದ್ಧಿಯುಳ್ಳವರು! ನಮ್ಮ ಮಾತು ಹಾಗಿರಲಿ! ಶಾಸ್ತ್ರನಿಪುಣರಾದವರೂಕೂಡ, ನೀನೇ ತಮಗೆ ಆತ್ಮಭೂತನೆಂಬುದನ್ನು ತಿಳಿದು, ನಿತ್ಯನಿರುಪಾಧಿಕಪ್ರಿಯನಾದ ನಿನ್ನಲ್ಲಿಯೇ ಅನುರಕ್ತರಾಗಿರುವರಲ್ಲವೆ? ಆದುದರಿಂದ ಕೃಷ್ಣಾ! ಕ್ಷಣಕಾಲಪ್ರೀತಿಗೆ ಪಾತ್ರರಾಗಿದ್ದು, ಕೊನೆಗೆ ದುಃಖಹೇತುಗಳಾಗುವ ಪತಿಪುತ್ರಾದಿಗಳಿಂದ ನಮಗೇನು? ನಮ್ಮಲ್ಲಿ ಅನುಗ್ರಹವನ್ನು ತೋರಿಸಿ ಸ್ವೀಕರಿಸು! ದೇವಾ! ನೀನು ವರಪ್ರದನಲ್ಲವೆ? ಓ ಪುಂಡರೀಕಾಕ್ಷಾ! ನಾವು ಬಹುಕಾಲದಿಂದ ನಿನ್ನಲ್ಲಿಟ್ಟಿರುವ ಆಶೆಯನ್ನು ಮುರಿಯಬೇಡ! ನಮ್ಮನ್ನು ಈಗಲೇ ಮನೆಗೆ ಹೋಗಬೇಕೆಂದು ಹೇಳಿದೆಯಲ್ಲವೆ? ನಮ್ಮ ಮನಸ್ಸನ್ನು ನೀನು ಸೂರೆಗೊಂಡಮೇಲೆ.ನಾವು ಮನೆಗೆ ಹೋಗಿ ಮಾಡುವುದೇನು? ನಮ್ಮ ಮನಸ್ಸೆಲ್ಲವೂ ನಿನ್ನಲ್ಲಿ ಸೇರಿರುವಾಗ, ಮೃತಪ್ರಾಯವಾದ ಈ ದೇಹವು ಯಾವ ಕೆಲಸವನ್ನು ಮಾಡಬಲ್ಲುದು! ಗೃಹಕಾರ್ಯಗಳಲ್ಲಿ ನಮ್ಮ ಕೈನಡೆಯುವುವೆ?ಮೊದಲು ಈ ನಿನ್ನ ಪಾದಮೂಲವನ್ನು ಬಿಟ್ಟು ಹೊರಡುವುದಕ್ಕೇ ನಮಗೆ ಕಾಲುಗಳು ಬಾರವು? ಹೀಗೆ ನಮಗೆ ಕೈಕಾಲುಗಳೇ ಆಡದಿರುವಾಗ ನಾವು ಹೋಗುವುದು ಹೇಗೆ? ಕೆಲಸಮಾಡುವುದು ಹೇಗೆ? ನಾಥಾ! ನಿನ್ನ ಪ್ರಸನ್ನದೃಷ್ಟಿಯನ್ನು ನೋಡಿಯೂ, ನಿನ್ನ ವೇಣುಗಾನವನ್ನು ಕೇಳಿಯೂ ನಮ್ಮ ಹೃದಯದಲ್ಲಿ ಉರಿಯುತ್ತಿರುವ ಮನ್ಮಥಾಗ್ನಿಯನ್ನು ನಿನ್ನ ಅಧರಾಮೃತಸೇಚನದಿಂದಲೇ ನಂದಿಸಬೇಕು. ಈಗ ನೀನು ಮಾಡತಕ್ಕ ಕಾರ್ಯವಿಷ್ಟೇ! ಹಾಗೆ ಮಾಡದಪಕ್ಷದಲ್ಲಿ ಅದೇ ಮನ್ಮಥಾಗ್ನಿಯಿಂದ ನಮ್ಮ ದೇಹವು ಈಗಲೇ ದಗ್ಧವಾಗಿಹೋಗುವುದು? "ನೀವು ಸತ್ತರೇನು? ನನಗೆ ಈ ತೊಂದರೆಯೇ ತಪ್ಪಿತಲ್ಲವೆ?"ಎಂದು ನೀನು ಹೇಳಬಹುದು? ನಾವು ಸತ್ತರೂ ನಿನ್ನನ್ನು ಬಿಡುವುದಿಲ್ಲವೆಂದು ತಿಳಿ! ಸಾಯುವಾಗಲೂ ನಿನ್ನ ಧ್ಯಾನದಿಂದ ನಿನ್ನ ಸಾನ್ನಿಧ್ಯವನ್ನೇ ಸೇರುವೆವು! ನಾಥಾ! ಯಾವಾಗಲೂ ನೀನು ಅರಣ್ಯವಾಸಿಗಳಾದ ಯೋಗಿಗಳಲ್ಲಿಯೇ ನಿತ್ಯವಾಸವನ್ನು

ಮಾಡತಕ್ಕವನಾದುದರಿಂದ, ಸಾಕ್ಷಾಲ್ಲಕ್ಷ್ಮೀದೇವಿಗೂಕೂಡ ನಿನ್ನ ಪಾದ ಸಂಬಂಧವು ಯಾವಾಗಲೋ ಒಮ್ಮೊಮ್ಮೆ ಲಭಿಸುವುದು. ಅಂತಹ ನಿನ್ನ ಪಾದಮೂಲವನ್ನು ಸೇರಿ, ಈಗ ನಾವು ಅದರ ರುಚಿಯನ್ನು ತಿಳಿದಿರುವಾಗ, ಇಲ್ಲಿಂದ ಹೋಗಿ ನಮ್ಮ ಪತಿಪುತ್ರಾದಿಗಳ ಮುಂದೆ ನಿಲ್ಲುವುದಕ್ಕಾದರೂ ನಮಗೆ ಮನಸ್ಸು ಬರುವುದೆ ? ಎಂದಿಗೂ ಇಲ್ಲ! ಯಾವಳ ಕಟಾಕ್ಷವೀಕ್ಷಣಕ್ಕಾಗಿ ಬ್ರಹ್ಮಾದಿದೇವತೆಗಳೆಲ್ಲರೂ ಕಷ್ಟಪಡುತ್ತಿರುವರೋ, ಅಂತಹ ಮಹಾಲಕ್ಷ್ಮಿಯು, ಯಾವಾಗಲೂ ನಿನ್ನ ಎದೆಯಲ್ಲಿ ಸುಖವಾಗಿ ನೆಲಸಿರತಕ್ಕವಳಾದರೂ,ಭಕ್ತರಿಗೆ ಲಭ್ಯವಾದ ನಿನ್ನ ಪಾದರಜಸ್ಸಿಗಾಗಿ ಆಸೆಪಟ್ಟು, ನಿನ್ನ ಪಾದತುಲಸಿಯೊಡನೆ ಸವತಿತನದಿಂದ ಹೋರಾಡುವಳು. ಆ ನಿನ್ನ ಪಾದಾರವಿಂದರೇಣುವಿನ ಮಹಿಮೆಯಲ್ಲವೇ ಮಹಿಮೆ? ಈಗ ನಾವು ಬಯಸುವುದೂ ಅದೇ! ಓ ಭಕ್ತಾರ್ತಿಹರಣಾ! ನಮ್ಮಲ್ಲಿ ಪ್ರಸನ್ನನಾಗು! ನಾವು, ನಿನ್ನನ್ನು ಉಪಾಸನೆಮಾಡಬೇಕೆಂಬ ಒಂದೇ ಆಸೆಯಿಂದ ಎಲ್ಲರನ್ನೂ ತೊರೆದು ಬಂದಿರುವೆವು! ನಿನ್ನ ಮಂದಸ್ಮಿತಸುಂದರವಾದ ಮುಖವನ್ನು ನೋಡುವುದರಿಂದುಂಟಾದ ಕಾಮಾಗ್ನಿಯಿಂದ ತಪಿಸುತ್ತಿರುವ ನಮಗ, ನಿನ್ನ ದಾಸ್ಯವನ್ನು ಕರುಣಿಸಬೇಕು! ಕೃಷ್ಣಾ! ಮುಂಗುರುಳುಗಳಿಂದ ಶೋಭಿತವಾದ ಈ ನಿನ್ನ ಮುಖಾರವಿಂದದ ಸೊಬಗು! ಕುಂಡಲಾಲಂಕೃತಗಳಾದ ನಿನ್ನ ಕಪೋಲಗಳು! ಅಮೃತವನ್ನು ತೊಟ್ಟಿಕ್ಕುವಂತಿರುವ ನಿನ್ನ ತುಟಿಗಳು! ನಿನ್ನ ಪ್ರಸನ್ನದೃಷ್ಟಿ! ಆಶ್ರಿತರಿಗೆ ಅಭಯಪ್ರದಗಳಾದ ನಿನ್ನ ಭುಜದಂಡಗಳು! ಮಹಾಲಕ್ಷ್ಮಿಗೆ ನಿವಾಸಸ್ಥಾನವಾದ ನಿನ್ನ ಎದೆ! ಇವೆಲ್ಲವನ್ನೂ ನೋಡಿ ನಾವು ನಿನ್ನಲ್ಲಿ ದಾಸ್ಯವನ್ನು ಮಾಡಬೇಕೆಂದೇ ಬಂದಿರುವೆವು. "ನನ್ನಂತಹ ಪರಪುರುಷರನ್ನು ನೋಡಿ ನೀವು ಮೋಹಿಸುವುದು ದೋಷಾಸ್ಪದವಲ್ಲವೆ" ಎಂದು ಕೇಳುವೆಯಾ? ಅದೇನೋ ವಾಸ್ತವವೇ! ಆದರೇನು ? ಅವ್ಯಕ್ತಮಧುರವಾದ ಸ್ವರಮೂರ್ಛನೆಗಳೊಡಗೂಡಿದ ನಿನ್ನ ವೇಣುಗಾನವನ್ನು ಕಿವಿಯಾರ ಕೇಳಿ, ನಿನ್ನ ಸುಂದರಾಕಾರವನ್ನು ಕಣ್ಣಾರೆ ನೋಡಿದಮೇಲೆ, ಈ ತ್ರೈಲೋಕ್ಯದಲ್ಲಿ, ಯಾವಳು ತಾನೇ ತನ್ನ ಸದಾಚಾರವನ್ನು ಮೀರದಿರುವಳು? ಎಷ್ಟೋ ಸದಾಚಾರಪರರಾದಸ್ತ್ರೀಯರೂ ನಿನ್ನ ವಿಷಯ

ದಲ್ಲಿಮೋಹಪರವಶರಾಗುವರು. ಸ್ತ್ರೀಯರ ಮಾತೂ ಹಾಗಿರಲಿ! ಕೃಷ್ಣಾ! ನಿನ್ನ ಗಾನಕ್ಕೂ, ನಿನ್ನರೂಪಕ್ಕೂ ಪಶುಪಕ್ಷಿಮೃಗಾದಿಜಂತುಗಳೂ, ಅಚೇತನಗಳಾದ ವೃಕ್ಷಗಳೂ ಮೋಹಿಸಿ ಪುಳಕಿತವಾದಂತೆ ಉಲ್ಲಾಸಗೊಂಡಿರುವುದನ್ನು ಕಾಣೆಯಾ? ಹೆಚ್ಚು ಮಾತಿನಿಂದೇನು? ಆದಿಪುರುಷನು ದೇವತೆಗಳನ್ನು ರಕ್ಷಿಸುವುದಕ್ಕಾಗಿ ಉಪೇಂದ್ರಾದ್ಯವತಾರಗಳನ್ನೆತ್ತಿದಂತೆ, ಈಗ ನೀನೂ, ಗೋಕುಲವಾಸಿಗಳಾದ ನಮ್ಮೆಲ್ಲರ ದುಃಖಶಮನಾರ್ಥವಾಗಿಯೇ ಈ ರೂಪವನ್ನು ಕೈಕೊಂಡಿರುವೆ. ಆದುದರಿಂದ ನಿನ್ನ ಕಿಂಕರಿಯರಾದ ನಮ್ಮಲ್ಲಿ ಕರುಣೆಯಿಟ್ಟು, ಕಾಮತಾಪದಿಂದ ಕುದಿಯುತ್ತಿರುವ ನಮ್ಮ ಎದೆಯಲ್ಲಿಯೂ, ನಮ್ಮ ಶಿರಸ್ಸುಗಳಲ್ಲಿಯೂ, ನಿನ್ನ ಮೃದುವಾದ ಕೈಯನ್ನಿಟ್ಟು, ನಮ್ಮ ತಾಪವನ್ನು ನೀಗಿಸಬೇಕು" ಎಂದರು

ಓ ಪರೀಕ್ಷಿದ್ರಾಜಾ ! ಶ್ರೀಕೃಷ್ಣನು ಸಮಸ್ತಯೋಗಗಳಿಗೂ ತಾನೇ ಪ್ರಭುವಾಗಿ, ಆತ್ಮಾರಾಮನೆನಿಸಿಕೊಂಡಿರುವುದರಿಂದ, ಇಂತಹ ವಿಷಯಾಭಿಲಾಷೆಗಳಲ್ಲಿ ವಿಮುಖನಾಗಿದ್ದರೂ, ಆ ಗೋಪಾಂಗನೆಯರ ದೈನ್ಯೋಕ್ತಿಯನ್ನು ಕೇಳಿ ಕನಿಕರಗೊಂಡು, ನಗುತ್ತ, ಆಶ್ರಿತರ ದುಃಖವನ್ನು ನೀಗಿಸುವುದೇ ತನಗೆ ಸ್ವಭಾವವಾದುದರಿಂದ, ಅವರ ಕೋರಿಕೆಯಂತೆ, ಅವರೊಡಗೂಡಿ ಲೀಲೆಯಿಂದ ಆಟವಾಡುತಿದ್ದನು. ಪ್ರಸನ್ನದೃಷ್ಟಿಯಿಂದಲೂ, ಉಲ್ಲಾಸಗೊಂಡ ಮುಖದಿಂದಲೂ, ಮೊಲ್ಲೆಯ ಮೊಗ್ಗುಗಳಂತೆ ಮನೋಹರವಾದ ದಂತಕಾಂತಿಯೊಡಗೂಡಿದ ಮಂದಹಾಸದಿಂದಲೂ ಶೋಭಿತವಾದ ಆ ಸ್ತ್ರೀಯರ ಗುಂಪಿನಲ್ಲಿ ನಿಂತಿದ್ದ ಕೃಷ್ಣನು, ನಕ್ಷತ್ರಗಳ ನಡುವೆ ಪ್ರಕಾಶಿಸುವ ಚಂದ್ರನಂತೆ ತೋರುತಿದ್ದನು. ಆ ಗೋಪಿಯರು, ಸುತ್ತಲೂ ನಿಂತು ತನ್ನ ವಿಷಯವಾದ ಕೀರ್ತನಗಳನ್ನು ಹಾಡುತ್ತಿರುವಾಗ, ಅದಕ್ಕೆ ಸರಿಯಾಗಿ ತಾನೂ ವೇಣುಗಾನಮಾಡುತಿದ್ದನು. ಕೊರಲಲ್ಲಿ ವೈಜಯಂತೀಮಾಲಿಕೆಯು ತೂಗಾಡುತ್ತಿರಲು, ಹೆಣ್ಣಾನೆಗಳಿಂದ ಪರಿವೃತವಾದ ಗಜಯೂಥಪನಂತೆ ಆ ವನಕ್ಕೆ ಅಪೂರ್ವಶೋಭೆಯನ್ನು ಬೀರುತ್ತ, ಅಲ್ಲಲ್ಲಿ ವಿನೋದದಿಂದ ಸುತ್ತಾಡುತಿದ್ದನು. ಹಾಗೆಯೇ ಆ ಗೋಪಿಯರೆಲ್ಲರನ್ನೂ ಯಮುನಾತೀರಕ್ಕೆ ಕರೆತಂದು, ಅಲ್ಲಿ ಯಾವಾಗಲೂ ನೈದಿಲೆಹೂ

ಗಳ ಸುವಾಸನೆಯನ್ನು ತಂದು ಹರಡುತ್ತಿರುವ ಮಂದಮಾರುತದಿಂದ ಮನೋಹರವಾಗಿಯೂ, ಸುವರ್ಣಛಾಯೆಯುಳ್ಳುದಾಗಿಯೂ ಇದ್ದ ಒಂದಾನೊಂದು ಮಳಲುದಿಣ್ಣೆಯಬಳಿಗೆ ಸೇರಿಸಿದನು. ಅಲ್ಲಿ ಆ ಸ್ತ್ರೀಯರೆಲ್ಲರನ್ನೂ ಸುತ್ತಲೂ ನಿಲ್ಲಿಸಿಕೊಂಡು, ಒಬ್ಬಳ ಭುಜದಮೇಲೆ ಕೈಹಾಕುವುದು! ಮತ್ತೊಬ್ಬಳನ್ನು ಕೈಸೀಡಿ ಅಪ್ಪಿಕೊಳ್ಳುವುದು! ಒಬ್ಬಳ ಕೈಗೆ ತನ್ನ ಕೈಯನ್ನು ಪೋಣಿಸುವುದು! ಮತ್ತೊಬ್ಬಳಿಗೆ ಮುಂಗುರಳನ್ನು ತನ್ನ ಕೈಯಿಂದ ತಿದ್ದುವುದು! ಮತ್ತೊಬ್ಬಳ ಕಾಲನ್ನು ಹಿಡಿಯುವುದು! ಇನ್ನೊಬ್ಬಳ ಸೆರಗನ್ನೆಳೆಯುವುದು ! ಮತ್ತೊಬ್ಬಳ ಎದೆಯಮೇಲೆ ಕೈಯಿಕ್ಕುವುದು! ಇನ್ನೊಬ್ಬಳೊಡನೆ ಹಾಸ್ಯದ ಮಾತುಗಳನ್ನಾಡುವುದು! ಇನ್ನೊಬ್ಬಳಿಗೆ ನಖಕ್ಷತವನ್ನು ಮಾಡುವುದು ! ಬೇರೊಬ್ಬಳೊಡನೆ ಆಟವಾಡುವುದು! ಮತ್ತೊಬ್ಬಳನ್ನು ಅನುರಾಗಸೂಚಕವಾದ ದೃಷ್ಟಿಯಿಂದ ನೋಡುವುದು! ಇನ್ನೊಬ್ಬಳನ್ನು ನೋಡಿ ನಗುವುದು! ಈ ವಿಧವಾದ ಚೇಷ್ಟೆಗಳಿಂದ, ಆ ಗೋಪಸ್ತ್ರೀಯರಿಗೆ ಮತ್ತಷ್ಟು ಕಾಮವನ್ನು ಹೆಚ್ಚಿಸಿಬಿಟ್ಟನು. ಹೀಗೆ ಕೃಷ್ಣನು ತಮ್ಮಲ್ಲಿ ವಿಶೇಷವಾದ ಸಲಿಗೆಯನ್ನು ತೋರಿಸುತ್ತಿರಲು, ಅವರಿಗೆ ಲೋಕದಲ್ಲಿ ತಮಗಿಂತಲೂ ಮೇಲಾದ ಸುಂದರಸ್ತ್ರೀಯರೇ ಇಲ್ಲವೆಂಬ ಗರ್ವವು ಹುಟ್ಟಿತು. ಹೀಗೆ ಸೌಂದರ್ಯಮದದಿಂದ ಅವರು ಹೆಮ್ಮೆಗೊಂಡಿರುವುದನ್ನು ತಿಳಿದು, ಕೃಷ್ಣನು, ಆ ಗರ್ವವನ್ನು ಮುರಿಯಬೇಕೆಂಬ ಉದ್ದೇಶದಿಂದ, ಕ್ಷಣಮಾತ್ರದಲ್ಲಿ ಅವರೊಬ್ಬರಿಗೂ ತಿಳಿಯದಂತೆ ಅಂತರ್ಧಾನಹೊಂದಿ ಕಣ್ಮರೆಯಾದನು. ಇದು ಇಪ್ಪತ್ತೊಂಬತ್ತನೆಯ ಅಧ್ಯಾಯವು.

---

## { ಗೋಪಸ್ತ್ರೀಯರು ಕಣ್ಮರೆಯಾದ ಕೃಷ್ಣನನ್ನು ಹುಡುಕುತಿದ್ದುದು. }

ತಮ್ಮನಡುವೆ ನಿಂತಿದ್ದ ಕೃಷ್ಣನು, ಇದ್ದಕ್ಕಿದ್ದಹಾಗೆ ಕಣ್ಮರೆಯಾಗಲು, ಗೋಪಸ್ತ್ರೀಯರೆಲ್ಲರೂ, ಯೂಥಪತಿಯನ್ನಗಲಿದ ಹೆಣ್ಣಾನೆಗಳಂತೆ, ಆ ಕೃಷ್ಣನನ್ನು ಕಾಣದೆ ಪರಿತಪಿಸುತಿದ್ದರು. ಆ ಕೃಷ್ಣನ ನಡೆನುಡಿಗಳಿಂದಲೂ, ಅವನು ತಮ್ಮಲ್ಲಿ ತೋರಿಸುತಿದ್ದ ಅನುರಾಗಸೂಚಕವಾದ ಮಂ

ದಹಾಸದಿಂದಲೂ, ಅವನ ಒಯ್ಯಾರದ ನೋಟಗಳಿಂದಲೂ, ಅವನ ಮೃದುಮಧುರವಾಕ್ಯಗಳಿಂದಲೂ, ಅವನ ಆಟಪಾಟಗಳಿಂದಲೂ, ಪರವಶಹೃದಯರಾಗಿ, ಅವನನ್ನೇ ಧ್ಯಾನಿಸುತ್ತ, ಆ ಭಾವನಾವಿಶೇಷದಿಂದ ತನ್ಮಯತ್ವವನ್ನು ಹೊಂದಿ, ತಾವೂ ಆ ಕೃಷ್ಣನ ಚೇಷ್ಟೆಗಳನ್ನೇ ಅನುಕರಿಸತೊಡಗಿದರು. ಅವನಂತೆಯೇ ನಡೆ! ಅವನಂತೆಯೇ ಮಾತು! ಅವನಂತೆಯೇ ಮುಗುಳ್ನಗೆಯಿಂದ ನಗುವುದು! ಅವನಂತೆಯೇ ಅನುರಾಗವೀಕ್ಷಣದಿಂದ ಒಬ್ಬರಿಗೊಬ್ಬರು ನೋಡುವುದು' ತಾನೇ ಕೃಷ್ಣನೆಂದು ಒಬ್ಬರಿಗೊಬ್ಬರು ಹೇಳಿಕೊಳ್ಳುವುದು! ಈರೀತಿಯಾಗಿ ಸರ್ವವಿಧದಿಂದಲೂ ಆತನನ್ನು ಅನುಕರಿಸುತ್ತ, ಆ ಕೃಷ್ಣನ ತಾದಾತ್ಮ್ಯವನ್ನೇ ತಮ್ಮಲ್ಲಿ ತೋರಿಸುತಿದ್ದರು. ಮತ್ತು ಅವರೆಲ್ಲರೂ ಅಲ್ಲಲ್ಲಿ ಗುಂಪುಗೂಡಿ,ಕೃಷ್ಣನ ವಿಷಯವಾದ ಹಾಡುಗಳನ್ನು ಹಾಡುತ್ತ ಕಾಡಿಂದ ಕಾಡಿಗೆ ಸುತ್ತುವುದು, ಕೃಷ್ಣಾ! ಎಂದು ಕೂಗಿಕೊಳ್ಳುವುದು, ಇಲ್ಲದ ಕಡೆಯಲ್ಲಿ ಹುಡುಕುವುದು, ಈ ರೀತಿಯಾಗಿ ಹುಚ್ಚರಂತೆ ನಡೆಯುತಿದ್ದರು. ಆಕಾಶದಂತೆ ಸಮಸ್ತಭೂತಗಳ ಒಳಗೂ, ಹೊರಗೂ ವ್ಯಾಪಿಸಿ, ಎಲ್ಲೆಲ್ಲಿಯೂ, ಯಾವಾಗಲೂ ನೆಲೆಗೊಂಡಿರುವ ಆ ಪರಮಪುರುಷನನ್ನು, ಪ್ರಾಕೃತಮನುಷ್ಯರನ್ನು ಹುಡುಕುವಂತೆ, ಅಲ್ಲಲ್ಲಿ ಹುಡುಕುತ್ತ. ತಮ್ಮ ಕಣ್ಣಿಗೆ ಬಿದ್ದ ಗಿಡಮರಗಳನ್ನೂ,ಮೃಗಪಕ್ಷಿಗಳನ್ನೂ ಪ್ರಶ್ನೆಮಾಡತೊಡಗಿದರು. ಕೆಲವರು ಆ ಕಾಡಿನಲ್ಲಿದ್ದ ಕೆಲವು ವೃಕ್ಷಗಳನ್ನು ನೋಡಿ "ಓ ಅಶ್ವತ್ಥವೃಕ್ಷವೆ? ನಮ್ಮ ಕೃಷ್ಣನನ್ನು ಕಂಡೆಯಾ? ಓ ಪ್ಲಕ್ಷಾ' ಓ ನ್ಯಗ್ರೋಧಾ' ನೀವೇನಾದರೂ ಆ ಕೃಷ್ಣನನ್ನು ಕಂಡಿರಾ? ಆ ನಂದಕುಮಾರನು ತನ್ನ ಪ್ರೇಮಸೂಚಕವಾದ ಮಂದಹಾಸದಿಂದಲೂ, ತನ್ನ ನೋಟದಿಂದಲೂ ನಮ್ಮೆಲ್ಲರ ಮನಸ್ಸನ್ನೂ ಕದ್ದುಯ್ದಿರುವನು ಓ ಕುರವಕಾ! ಅಶೋಕಾ! ಓ ನೀಪಾ! ಎಲೈ ಅತ್ತಿಯಮರವೆ! ಓ ಚಂದನಾ ! ಅವನು ತನ್ನ ಮಂದಸ್ಮಿತದಿಂದ, ಮಾನಿನಿಯರಾದ ನಮ್ಮ ದರ್ಪವನ್ನು ಕೊಳ್ಳೆಹೊಡೆದುಕೊಂಡು ಹೋಗಿರುವನು. ಎಲೆ ತುಲಸಿ! ಮಂಗಳಸ್ವರೂಪಿಣಿ! ನೀನು ಯಾವಾಗಲೂ ಆ ಗೋವಿಂದನ ಪಾದದಲ್ಲಿಯೇ ನೆಲೆಗೊಂಡಿರತಕ್ಕವಳು! ಅವನೂಕೂಡ, ಭ್ರಮರಪರಿವಾರಗಳೊಡಗೂಡಿದ ನಿನ್ನನ್ನು

ಪ್ರೀತಿಸಿ ತನ್ನಲ್ಲಿ ಧರಿಸಿರುವನು. ನೀನು ಅವನೆಲ್ಲಿರುವನೆಂಬುದನ್ನು ಕಂಡಿರ ಬಹುದಲ್ಲವೆ? ಓ ಮಲ್ಲಿಗೆ! ಮಾಲತಿ! ಓ ಜಾಜೀ! ಯೂಥಿಕೆ? ಕರಸ್ಪರ್ಶಮಾತ್ರದಿಂದ ನಮಗೆ ಆಸೆಯನ್ನು ತೋರಿಸಿ ಹೊರಟುಹೋದ ಕೃಷ್ಣನನ್ನು ನೀವೆಲ್ಲಿಯಾದರೂ ಕಂಡಿರಾ? ಓ ಚೂತವೃಕ್ಷವೆ? ಓ ಪ್ರಿಯಂಗೂ! ಪನಸಾ! ಕೋವಿದಾರಾ! ಎಲೆ ನೇರಳೆಮರವೆ? ಬಿಲ್ವ, ವಕುಳ, ಆಮ್ರ, ಪಾರಿಜಾತಾದಿವೃಕ್ಷಗಳಿರಾ? ನಿಮ್ಮ ಜನ್ಮವೇ ಪರೋಪಕಾರಾರ್ಥವಾದುದು! ನೀವೆಲ್ಲರೂ ಯಮುನಾತೀರವೆಂಬ ಪುಣ್ಯಕ್ಷೇತ್ರದಲ್ಲಿ ಬೆಳೆದವರು. ಕೃಷ್ಣ ನನ್ನು ಕಾಣದೆ ಶೂನ್ಯಮನಸ್ಕರಾದ ನಮಗೆ ಆ ಕೃಷ್ಣನೆಲ್ಲಿರುವನೆಂಬುದನ್ನು ಕೃಪೆಯಿಟ್ಟು ತಿಳಿಸಬೇಕು! ಎಲೆ ಭೂದೇವಿ! ನೀನಲ್ಲವೇ ಭಾಗ್ಯವತಿ! ನಿನ್ನ ಮೇಲೆ ಬೆಳೆದಿರುವ ಈ ಎಳಗರಿಕೆಗಳನ್ನು ನೋಡಿದರೆ, ಆ ಕೃಷ್ಣನ ಪಾದಸ್ಪರ್ಶದಿಂದುಂಟಾದ ಸಂತೋಷದಿಂದ ನಿನ್ನ ದೇಹವು ಪುಳಕಿತವಾದಂತೆ ತೋರುತ್ತಿರುವುದು! ಈಭಾಗ್ಯವು ನಿನಗೆ ಯಾವ ತಪಃಫಲದಿಂದ ಲಭಿಸಿತು? ಹಿಂದೆ ನಿನಗುಂಟಾದ ತ್ರಿವಿಕ್ರಮನ ಪಾದಸಂಬಂಧದಿಂದ ಈ ಭಾಗ್ಯವು ಲಭಿಸಿತೆ ? ಅಥವಾ ವರಾಹರೂಪಿಯಾದ ಭಗವಂತನ ದೇಹಾಲಿಂಗನಫಲದಿಂದ ಲಭಿಸಿತೆ ? ಎಲೆ ಹೆಣ್ಣುಜಿಂಕೆಯೆ! ನಿನ ನೇತ್ರವಿಕಾಸವನ್ನು ನೋಡಿದರೆ, ನೀನು ಈಗಲೇ ಆ ಕೃಷ್ಣನ ದೇಹಸೌಂದರ್ಯವನ್ನು ಕಣ್ಣಾರೆ ನೋಡಿ ಆನಂದಿಸಿದಂತಿದೆ! ಆಹಾ! ಇಲ್ಲಿನ ಗಾಳಿಯಲ್ಲಿ, ಆ ಕೃಷ್ಣನು ಧರಿಸಿದ್ದ ಕುಂದಪುಷ್ಪಹಾರದ ಪರಿಮಳವು ಕುಂಕುಮಗಂಧಮಿಶ್ರವಾಗಿ ಬರುತ್ತಿರುವುದು. ಇದನ್ನು ನೋಡಿದರೆ ಆ ಕೃಷ್ಣನು ಯಾವಳೋ ಒಬ್ಬನಾಯಿಕೆಯನ್ನಾಲಿಂಗಿಸಿದಾಗ, ಅವಳ ಸ್ತನಕುಂಕುಮವು ಆ ಮಾಲಿಕೆಯಲ್ಲಿ ಅಂಟಿರಬೇಕೆಂದು ತೋರುವುದು. ಆ ಕೃಷ್ಣನು ನಾಯಿಕೆಯೊಡನೆ ಇಲ್ಲಿಗೆ ಬಂದುದನ್ನು ನೀನು ಕಂಡೆಯೇನು? ಸಖಿ! ಮುಚ್ಚುಮರೆಯಿಲ್ಲದೆ ನನಗೆ ನಿಜಸ್ಥಿತಿಯನ್ನು ತಿಳಿಸು ! ಎಲೈ ವೃಕ್ಷಗಳೆ! ಪುಷ್ಪಫಲಭಾರದಿಂದ ಬಗ್ಗಿದ ನಿಮ್ಮ ಕೊಂಬೆಗಳನ್ನು ನೋಡಿದರೆ, ನೀವು ಈಗಲೇ ಆ ಕೃಷ್ಣನನ್ನು ಕಂಡು ನಮಸ್ಕರಿಸಿದಂತೆ ತೋರುವುದು. ತನ್ನ ಪ್ರಿಯೆಯ ಭುಜದಮೇಲೆ ಒಂದುಕೈಯಿಟ್ಟು, ಮತ್ತೊಂದು ಕೈಯಿಂದ ಲೀಲಾರ್ಥವಾಗಿ ಹಿಡಿದ ಕಮಲವನ್ನಾಡಿಸುತ್ತ,

ತುಳಸೀಗಂಧಕ್ಕಾಗಿ ಹಿಂಬಾಲಿಸಿ ಬರುವ ಭ್ರಮರಗಳಿಂದ ಪರಿವೃತನಾಗಿ, ಈ ಕಾಡಿನಲ್ಲಿ ಸುತ್ತುತ್ತಿರುವ ಕೃಷ್ಣನನ್ನು ನೀವೆಲ್ಲಿ ಕಂಡಿರಿ! ಅವನು ನಿಮ್ಮ ನಮಸ್ಕಾರಗಳನ್ನು ತನ್ನ ಪ್ರಣಯಕಟಾಕ್ಷದಿಂದ ಅಭಿನಂದಿಸಿರಬಹುದಲ್ಲವೆ? ಎಲೈ ಸಖಿಯರೆ! ಮೊದಲು ನಾವು ಕೃಷ್ಣನನ್ನು ಕಾಮಿಸಿಬಂದಾಗ, ಪತಿಯುಳ್ಳ ಸ್ತ್ರೀಯರನ್ನು ಪರಪುರುಷರು ಮುಟ್ಟಬಾರದೆಂದು ಹೇಳಿ, ಅವನು ನಮ್ಮನ್ನು ನಿರಾಕರಿಸಿದನಲ್ಲವೆ? ಇದೋ! ಈ ಲತೆಗಳನ್ನು ನೋಡಿರಿ! ಇವು ಇತ್ತಲಾಗಿ ತಮ್ಮ ಪ್ರಿಯವೃಕ್ಷಗಳನ್ನಾಲಿಂಗಿಸಿ ನಿಂತಿರುವಾಗಲೇ, ಅತ್ತಲಾಗಿ ಕೃಷ್ಣನ ಕರಸ್ಪರ್ಶದಿಂದ ಪುಳಕಿತವಾಗಿರುವುವು ನೋಡಿರಿ! ಇವುಗಳನ್ನು ತನ್ನ ಕರಸ್ಪರ್ಶದಿಂದ ಸಂತೋಷಗೊಳಿಸಿದ ಕೃಷ್ಣನು, ನಮ್ಮನ್ನೇಕೆ ಮುಟ್ಟಬಾರದು" ಎಂದು ಆ ಗೋಪಿಯರು ಹುಚ್ಚುಹಿಡಿದಂತೆ ಮಾತನಾಡುತ್ತ ಅಲ್ಲಲ್ಲಿ ಹುಡುಕುತಿದ್ದರು. ಮತ್ತು ಯಾವಾಗಲೂ ಆ ಕೃಷ್ಣವಿರಹದಿಂದ ಅವನಲ್ಲಿಯೇ ನಟ್ಟಮನಸ್ಸುಳ್ಳವರಾಗಿ, ಅವನು ಬಾಲ್ಯದಿಂದ ನಡೆಸಿದ ಕಾರ್ಯಗಳನ್ನು ತಾವೇ ಅನುಕರಿಸುತ್ತಿದ್ದರು. ಒಬ್ಬಳು ಪೂತನೆಯಂತೆ ಬರುವುದು! ಮತ್ತೊಬ್ಬಳು ಕೃಷ್ಣನಂತೆ ಬಂದು ಅವಳ ಮೊಲೆಕುಡಿಯುತ್ತ ಅವಳನ್ನು ಕೆಳಕ್ಕೆ ನೂಕುವುದು! ಮತ್ತೊಬ್ಬಳು ಬಂಡಿಯಂತೆ ಹರಿದುಬರುವುದು! ಮತ್ತೊಬ್ಬಳು ಕೃಷ್ಣನಂತೆ ಕಾಲಾಡಿಸಿ, ಅವಳನ್ನು ತಳ್ಳುವುದು! ಮತ್ತೊಬ್ಬಳು ತೃಣಾವರ್ತನೆಂಬ ಅಸುರನಾಗಿ ಬಂದು, ಕೃಷ್ಣನಾಗಿದ್ದ ಮತ್ತೊಬ್ಬಳನ್ನು ಹಾರಿಸಿಕೊಂಡು ಓಡುವುದು! ಮತ್ತೊಬ್ಬಳು ಬಾಲಕೃಷ್ಣನಂತೆ ಅಂಬೆಗಾಲಿಡುತ್ತ, ಕಾಲಂದುಗೆಯ ಘುಲಘುಲಧ್ವನಿಯೊಡನೆ ಓಡುವುದು, ಇಬ್ಬರು ರಾಮಕೃಷ್ಣರಾಗಿ ನಿಲ್ಲುವುದು! ಅವರಸುತ್ತಲೂ ಕೆಲವರು ಕರುಗಳಂತೆ ನಿಲ್ಲುವುದು. ಈ ಗುಂಪಿನ ನಡುವೆ ವತ್ಸಾಸುರನಂತೆ ಬಂದ ಬೇರೊಬ್ಬಳನ್ನು ಕೃಷ್ಣನಾಗಿದ್ದವಳು, ಮೇಲಕ್ಕೆತ್ತಿ ತಿರುಗಿಸಿ, ಕೆಳಗೆ ಬಿಸುಡುವುದು! ಬೇರೊಬ್ಬಳು ಕೃಷ್ಣನಾಗಿ ನಿಂತು, ಬಕಾಸುರನಂತೆ ಬಂದವಳನ್ನು ಕೊಂದಹಾಗೆ ನಟಿಸುವುದು. ಒಬ್ಬಳು ದೂರದಲ್ಲಿ ನಿಂತು ಕೊಳಲೂದುತ್ತ, ಕೃಷ್ಣನಂತೆ ಕರೆಯುವುದು, ಬೇರೆ ಕೆಲವರು ಗೋವುಗಳಂತೆ ಬಂದು ಆ ಗಾನಮಾಧುರ್ಯವನ್ನು ಕೇಳಿ ಆನಂದಿಸುತ್ತಿರು

ವುದು! ಮತ್ತೆ ಕೆಲವರು. ‘‘ಕೃಷ್ಣಾ! ಭಲೆ! ಶಹಬಾಸ್” ಎಂದು ಕೊಂಡಾಡುವುದು. ಮತ್ತೊಬ್ಬಳು ಇನ್ನೊಬ್ಬ ಸಖಿಯ ಕಂಠವನ್ನಪ್ಪಿ ನಡೆಯುತ್ತ ‘‘ನಾನು ಕೃಷ್ಣನು!ನನ್ನ ನಡೆಯ ಸೊಗಸನ್ನು ನೋಡಿರಿ!”ಎಂದು ಇತರರಿಗೆ ತಿಳಿಸುವುದು.ಬೇರೊಬ್ಬಳು.‘‘ಓ ಗೋಪಾಲಕರೆ!ಈ ಮಳೆಗಾಳಿಗಾಗಿ ಭಯಪಡಬೇಡಿರಿ! ಅವುಗಳಿಂದ ನಿಮ್ಮನ್ನು ನಾನು ರಕ್ಷಿಸುವೆನು.” ಎಂದು ಹೇಳಿ ಒಂದು ಕೈಯಿಂದ ತನ್ನ ಸೀರೆಯ ಸೆರಗನ್ನು ಬಿಚ್ಚಿ, ತಲೆಯಮೇಲೆ ಕೊಡೆಯಹಾಗೆ ಹೊದೆದು ನಿಲ್ಲುವುದು. ಒಬ್ಬಳು ಮತ್ತೊಬ್ಬಳ ತಲೆಯಮೇಲೆ ಕಾಲೂರಿ ನಿಂತು. ‘‘ಎಲೆ ದುಷ್ಟಸರ್ಪವೆ! ಇಲ್ಲಿ ನಿಲ್ಲಬೇಡ ಹೊರಡು! ನಾನು ನಿಮ್ಮಂತಹ ದುಷ್ಟರನ್ನು ದಂಡಿಸುವುದಕ್ಕಾಗಿಯೇ ಹುಟ್ಟಿದವನು.” ಎಂದು ಹೇಳುತ್ತ ಕಾಳಿಯಮರ್ದನವನ್ನು ನಟಿಸುವುದು. ಇನ್ನೊಬ್ಬಳು ದಾವಾಗ್ನಿಪಾನವನ್ನು ನಟಿಸುತ್ತ ‘‘ಓ ಗೋಪಾಲಕರೆ! ಅದೋ! ಅಲ್ಲಿ ದೊಡ್ಡ ಕಾಡುಗಿಚ್ಚು ತಲೆದೋರಿರುವುದು ನೋಡಿರಿ! ನೀವು ಸ್ವಲ್ಪಹೊತ್ತಿನವರೆಗೆ ಕಣ್ಣುಮುಚ್ಚಿಕೊಂಡು ನಿಲ್ಲಿರಿ! ನಾನು ಅದನ್ನಡಗಿಸಿ ನಿಮಗೆ ಅಪಾಯವಿಲ್ಲದಂತೆ ಮಾಡುವೆನು” ಎಂದು ಹೇಳುವುದು. ಬೇರೊಬ್ಬಳು ಕೃಷ್ಣನಾಗಿದ್ದ ಮತ್ತೊಬ್ಬಳನ್ನು ಪುಷ್ಪಮಾಲಿಕೆಯಿಂದ ಬಿಗಿದು, ‘‘ತುಂಟ ಕೃಷ್ಣಾ! ಮನೆಯಲ್ಲಿದ್ದ ಹಾಲು ಮೊಸರು ಬೆಣ್ಣೆಗಳೆಲ್ಲವನ್ನೂ ಕದ್ದುತಿಂದು, ಪಾತ್ರೆಗಳನ್ನೊಡೆದು ಹಾಕಿಬಂದೆಯಾ! ಇದೋ! ಒರಳುಕಲ್ಲಿಗೆ ನಿನ್ನನ್ನು ಕಟ್ಟಿಹಾಕುವೆನು ಬಾ” ಎಂದು ಎಳೆದುಕೊಂಡು ಹೋಗುವುದು. ಆಗ ಕೃಷ್ಣನಾಗಿದ್ದವಳು, ಕೈಗಳಿಂದ ಕಣ್ಣುಗಳನ್ನುಜ್ಜುತ್ತ, ಮಹಾ ಭಯವನ್ನು ನಟಿಸುವುದು! ಹೀಗೆ ಗೋಪಾಂಗನೆಯರೆಲ್ಲರೂ ಕೃಷ್ಣನು ಹಿಂದೆ ನಡೆಸಿದ ಕಾರ್ಯಗಳನ್ನೇ ತಾವೂ ಅನುಕರಿಸುತ್ತ, ಆ ವನದಲ್ಲಿ ಕಂಡಕಂಡ ಗಿಡುಬಳ್ಳಿಗಳೆಲ್ಲವನ್ನೂ ಪ್ರಶ್ನೆ ಮಾಡುತ್ತ ಬರುವಾಗ, ಅಲ್ಲಲ್ಲಿ ನೆಲದಮೇಲೆ ಕೃಷ್ಣನ ಹಜ್ಜೆಯ ಗುರುತುಗಳು ಕಣ್ಣಿಗೆ ಗೋಚರಿಸಿದುವು. ಅದನ್ನು ನೋಡಿ ಕೆಲವರು ಸಂತೋಷದಿಂದ ‘‘ಆಹಾ! ಎಲೈ ಸಖಿಯರೆ! ಇದೋ! ಈ ಹಜ್ಜೆಯ ಗುರುತುಗಳನ್ನು ನೋಡಿದಿರಾ! ಇದು ಮಹಾತ್ಮನಾದ ಆ ನಂದಕುಮಾರನ ಪಾದಚಿಹ್ನಗಳೆಂಬುದರಲ್ಲಿ ಸಂದೇಹವೇ ಇಲ್ಲ! ಧ್ವಜ, ವಜ್ರ, ಕಮಲ,

ಅಂಕುಶ, ಮುಂತಾದ ರೇಖೆಗಳೆಲ್ಲವೂ ಇದರಲ್ಲಿ ಕಾಣುತ್ತಿರುವುವು." ಎಂದು ಹೇಳುತ್ತ, ಆ ಹಜ್ಜೆಯ ಗುರುತುಗಳನ್ನೇ ನೋಡಿಕೊಂಡು ಮುಂದೆ ಮುಂದೆ ಹೋದರು. ಆದರೆ ಆ ಕೃಷ್ಣನ ಹೆಜ್ಜೆಗಳ ನಡುನಡುವೆ ಯಾವಳೋ ಒಬ್ಬಸ್ತ್ರೀಯ ಪಾದಚಿಹ್ನಗಳೂ ಅಲ್ಲಲ್ಲಿ ತೋರುತಿದ್ದುವು. ಅದನ್ನು ನೋಡಿ ಅವರೆಲ್ಲರಿಗೂ ಮಹಾದುಃಖವುಂಟಾಯಿತು. ಆಗ ಒಬ್ಬರಿಗೊಬ್ಬರು "ಅಹಾ! ನಮ್ಮ ಕೃಷ್ಣನು ಯಾವಳೋ ಬೇರೊಬ್ಬನಾಯಿಕೆಯನ್ನು ಸಂಗಡಕರೆದುಕೊಂಡು ಹೋಗಿರಬಹುದು. ಇದೋ! ಇಲ್ಲಿ ನಡುನಡುವೆ ಆ ಸ್ತ್ರೀಯ ಹಜ್ಜೆಯ ಗುರುತುಗಳೂ ಕಾಣುತ್ತಿರುವುವು ನೋಡಿರಿ! ಮದಪಾನೆಯು ಹೆಣ್ಣಾನೆಯಸಂಗಡ ಹೋಗುವಂತೆ, ಕೃಷ್ಣನು ಅವಳ ಭುಜದಮೇಲೆ ತೋಳುಹಾಕಿಕೊಂಡೇ ಹೋದಂತಿದೆ! ಕೃಷ್ಣನು ನಮ್ಮೆಲ್ಲರನ್ನೂ ಬಿಟ್ಟು, ಅವಳೊಬ್ಬಳನ್ನುಮಾತ್ರ ಪ್ರೀತಿಸಿ, ತನ್ನೊಡನೆ ರಹಸ್ಯವಾಗಿ ಅವಳನ್ನು ಕರೆದುಕೊಂಡು ಹೋಗಬೇಕಾದರೆ, ಅವಳ ಭಾಗ್ಯವಲ್ಲವೇ ಭಾಗ್ಯವು. ಅವಳು ಪೂರ್ವಜನ್ಮದಲ್ಲಿ ಸರ್ವೇಶ್ವರನಾದ ಹರಿಯನ್ನು ಪೂಜಿಸಿ, ಆ ಭಗವಂತನ ಪೂರ್ಣಾನುಗ್ರಹವನ್ನು ಪಡೆದಿರಬೇಕು. ಓ ಸಖಿಯರೆ! ಆ ಗೋವಿಂದನ ಪಾದಚಿಹ್ನವುಳ್ಳ ಈ ನೆಲದ ಧೂಳಿಯು ಏನುಧನ್ಯವೆ? ಬ್ರಹ್ಮರುದ್ರಾದಿದೇವತೆಗಳೂ ಇದನ್ನು ತಮ್ಮ ಪಾಪನಿವಾರಣಾರ್ಥವಾಗಿ ತಲೆಯಲ್ಲಿ ಧರಿಸುವರಲ್ಲವೆ? ಆಹಾ! ಕೃಷ್ಣನಸಂಗಡ ಹೋದವಳ ಈ ಪಾದಚಿಹ್ನಗಳನ್ನು ನೋಡಿದರೆ, ನಮ್ಮ ಮನಸ್ಸಿಗೆ ಬಹಳವ್ಯಾಕುಲತೆಯುಂಟಾಗುವುದು. ನಮ್ಮೆಲ್ಲರನ್ನೂ ವಂಚಿಸಿ ತಾನೊಬ್ಬಳೇ ಆ ಕೃಷ್ಣನ ಅಧರಾಮೃತವೆಂಬ ಮಹಾಭಾಗ್ಯವನ್ನನುಭವಿಸುತ್ತಿರುವಳಲ್ಲಾ! ಆದರೆ, ಇತ್ತಲಾಗಿ ಒಂದೊಂದುಕಡೆಯಲ್ಲಿ ಆ ಸ್ತ್ರೀಯ ಪಾದರೇಖೆಗಳು ಕಾಣುವುದಿಲ್ಲ! ಈ ಹುಲ್ಲುಕಡ್ಡಿಗಳಮೇಲೆ ಕಾಲಿಡಲಾರದೆ ಅವಳು ಕಷ್ಟಪಡುತ್ತಿರುವುದನ್ನು ನೋಡಿ, ಇಲ್ಲಿ, ಕೃಷ್ಣನು ತಾನೇ ಅವಳನ್ನೆತ್ತಿಕೊಂಡು ನಡೆದಿರಬೇಕು. ಇದರಲ್ಲಿ ಸಂದೇಹವಿಲ್ಲ! ಏಕೆಂದರೆ, ಇಲ್ಲಿ ಕೃಷ್ಣನ ಪಾದರೇಖೆಗಳು ನೆಲದಲ್ಲಿ ಚೆನ್ನಾಗಿ ಒತ್ತಿರುವುವು ನೋಡಿರಿ! ಕೃಷ್ಣನು ಅವಳನ್ನೆತ್ತಿಕೊಂಡು ನಡೆಯುವಾಗ, ಅವಳ ಭಾರದಿಂದ ಹೆಜ್ಜೆಯನ್ನು ದೃಢವಾಗಿ ಊ

ರಿದಂತಿದೆ! ಇದೋ! ಇಲ್ಲಿ ಅವಳನ್ನು ಕೆಳಕ್ಕಿಳಿಸಿರಬೇಕು! ಇದೋ ಈಗಿಡ ದಲ್ಲಿ ಕೃಷ್ಣನು ಅವಳಿಗಾಗಿ ಹೂಗಳನ್ನು ಕುಯ್ದಂತಿದೆ! ಏಕೆಂದರೆ, ಈ ಗಿಡದಲ್ಲಿ ಮೇಲಿರುವ ಹೂಗಳನ್ನು ಕುಯ್ಯುವುದಕ್ಕಾಗಿ, ಕೃಷ್ಣನು ಪಾದಾ ಗ್ರವನ್ನುಮಾತ್ರ ನೆಲದಮೇಲೆ ಊರಿ, ಮೆಟ್ಟುಗಾಲಿನಿಂದ ನಿಂತಿರಬೇಕು. ಅದರಿಂದಲೇ ಅವನ ಹಜ್ಜೆಗಳ ಅರ್ಧಭಾಗದ ಗುರುತುಮಾತ್ರ ಕಾಣುತ್ತಿರು ವುದು. ಇದೋ! ಇತ್ತಲಾಗಿ ಕೃಷ್ಣನು ತನ್ನ ಮೊಳಕಾಲುಗಳನ್ನೂರಿ ಕುಳಿ ತಂತೆ ತೋರುತ್ತಿರುವುದು ನೋಡಿರಿ! ಇಲ್ಲಿ ಅವನು ತಾನು ಕುಯ್ದ ಹೂ ಗಳನ್ನು ಅವಳ ತಲೆಗೆ ಮುಡಿಸುವುದಕ್ಕಾಗಿ ಹಾಗೆ ಕುಳಿತಿರಬಹುದು." ಹೀಗೆಂ ದು ಮಾತನಾಡುತ್ತ ಆ ಗೋಪಿಯರು ಇನ್ನೂ ಮುಂದೆಮುಂದೆ ಹುಡುಕು ತ್ತ ಹೋದರು. ರಾಜಾ! ಕೃಷ್ಣನು ಅವಾಪ್ತಸಮಸ್ತಕಾಮನಾಗಿ, ಆ ತ್ಮಾನುಭವದಿಂದಲೇ ಆನಂದಿಸತಕ್ಕವನಾಗಿ, ಈ ವಿಧವಾದ ಸ್ತ್ರೀ ಮೋ ಹಾದಿಗಳಿಗೆ ಈಡಾಗತಕ್ಕವನಲ್ಲವಾದರೂ, ಲೋಕದಲ್ಲಿ ಕಾಮುಕರು ಸ್ತ್ರೀ ಯರಿಗೆ ವಶರಾಗಿ ತೋರಿಸುವ ದೀನಸ್ವಭಾವವನ್ನೂ, ಸ್ತ್ರೀಯರು ಅವ ರಲ್ಲಿ ಕಾಣಿಸತಕ್ಕ ದೌರ್ಜನ್ಯವನ್ನೂ ತೋರಿಸುವುದಕ್ಕಾಗಿಯೇ, ಬೇರೆ ಗೋಪಿಯರೆಲ್ಲರನ್ನೂ ಉದಾಸೀನಮಾಡಿ, ಯಾವಳೋ ಒಬ್ಬಳನ್ನುಮಾತ್ರ ತಾನು ಮೋಹಿಸಿದಂತೆ ತೋರಿಸುತ್ತ, ನಿಜವಾಗಿ ಆಕೆಯೊಬ್ಬಳೊಡನೆ ಆ ವನದಲ್ಲಿ ಕಣ್ಮರೆಯಾಗಿ ಸಂಚರಿಸುತಿದ್ದನು. ಇದು ಹೀಗಾಯಿತಷ್ಟೆ? ಅ ತ್ತಲಾಗಿ ಕೃಷ್ಣನು ಯಾವಳನ್ನುಮಾತ್ರ ತನ್ನೊಡನೆ ಕರೆದುಕೊಂಡು ಹೋದನೋ, ಅವಳಿಗೆ ಮನಸ್ಸಿನಲ್ಲಿ ಗರ್ವವು ಹುಟ್ಟಿತು! ತನ್ನ ಸೌಂದರ್ಯ ದಿಂದ ತಾನು ಕೃಷ್ಣನನ್ನೂ ಮೋಹಗೊಳಿಸಿದೆನೆಂದೂ, ಲೋಕದಲ್ಲಿ ತನಗೆ ಮೇಲೆ ಸುಂದರಿಯರೇ ಇಲ್ಲವೆಂದೂ ತಿಳಿದು, ಹೆಮ್ಮೆಯಿಂದ ಬೀಗಿ ಬೆರೆಯು ತಿದ್ದಳು. ಆಕೆಯು ಕೃಷ್ಣನೊಡನೆ ಸ್ವಲ್ಪದೂರ ನಡೆಯುವಷ್ಟರಲ್ಲಿ, ಗ ರ್ವೋದ್ರೇಕದಿಂದ ವಿವೇಕಹೀನೆಯಾಗಿ, ಸರ್ವೇಶ್ವರನಾದ ಕೃಷ್ಣನನ್ನು ಕು ರಿತು "ಕೃಷ್ಣಾ! ಇನ್ನುಮೇಲೆ ನಾನು ನಡೆಯಲಾರೆನು! ನನ್ನನ್ನು ಎತ್ತಿ ಕೊಂಡು ಹೋದರೆಮಾತ್ರ ನಾನು ಬರುವೆನು" ಎಂದಳು ಕೃಷ್ಣನು ಅ ವಳ ಗರ್ವವನ್ನು ನೋಡಿ ಮನಸ್ಸಿನಲ್ಲಿ ನಗುತ್ತ. "ಪ್ರಿಯೇ! ಹಾಗಿದ್ದರೆ ನನ್ನ

ಭುಜದಮೇಲೆ ಕುಳ್ಳಿರು"ಎಂದು ಹೇಳಿ ಬಗ್ಗಿ ನಿಂತನು ಅವಳು ತನ್ನಭುಜ ವನ್ನೇರಿ ಕುಳಿತುಕೊಳ್ಳುವಷ್ಟರಲ್ಲಿ, ಮಾಯಯಿಂದ ಕಣ್ಮರೆಯಾದನು. ಆಗ ಆ ಸ್ತ್ರೀಯ ಪರಿತಾಪವನ್ನು ಕೇಳಬೇಕೆ? ಕಾಡಿನಲ್ಲಿ ಒಂಟಿಯಾಗಿ ಸಿಕ್ಕಿ ಬಿದ್ದ ಆ ಗೋಪಿಯು, ಅತಿಶೋಕದಿಂದ "ಅಯ್ಯೋ! ಇನ್ನೇನುಗತಿ! ನಾಥಾ! ಹಾ ರಮಣಾ! ನಾನು ನಿನ್ನನ್ನೇ ಎಲ್ಲಕ್ಕಿಂತಲೂ ಪ್ರಿಯತಮನೆಂದು ನಂಬಿ ಬಂ ದೆನಲ್ಲಾ! ಓ ಮಹಾಭುಜಾ!ಎಲ್ಲಿರುವೆ? ನಾನು ನಿನ್ನ ದಾಸಿಯಲ್ಲವೆ? ದೀನ ಳಾದ ನನಗೆ ದರ್ಶನವನ್ನು ಕೊಡು!" ಎಂದು ಗಟ್ಟಿಯಾಗಿ ಕೂಗಿ ಮೊರೆ ಯಿಡುತಿದ್ದಳು. ಇಷ್ಟರಲ್ಲಿ ಇತ್ತಲಾಗಿ ಕೃಷ್ಣನನ್ನು ಹುಡುಕುತ್ತ ಬರುತಿ ದ್ದ ಇತರಗೋಪಿಯರೂ ಅಲ್ಲಿಗೆ ಬಂದು, ಅಲ್ಲಿ ಪ್ರಿಯವಿರಹದಿಂದ ದುಃಖಿ ಸುತ್ತಿರುವ ಆ ಸ್ತ್ರೀಯನ್ನು ಕಂಡರು. ಅವರೆಲ್ಲರೂ ಆಕೆಯ ದುಃಖಕಾರಣ ವೇನೆಂದು ವಿಚಾರಿಸಿದಾಗ, ಅವಳು ಮೊದಲು ತನ್ನಲ್ಲಿ ಕೃಷ್ಣನು ತೋರಿಸಿ ದ ಅಸಾಧಾರಣಪ್ರೀತಿಯನ್ನೂ, ಅದರಿಂದ ತನಗೆ ಗರ್ವವುಂಟಾದುದನ್ನೂ, ಕೃಷ್ಣನು ಅದನ್ನು ತಿಳಿದು,ಒಡನೆಯೇ ತನ್ನನ್ನು ವಂಚಿಸಿ ಹೋದ ಸಂಗತಿ ಯನ್ನೂ ತಿಳಿಸಿದಳು. ಇದನ್ನು ಕೇಳಿ ಅವರೆಲ್ಲರಿಗೂ ಆಶ್ಚರ್ಯವುಂಟಾಯಿತು.

ಆಮೇಲೆ ಆ ಗೋಪಸ್ತ್ರೀಯರೆಲ್ಲರೂ, ಅವಳನ್ನೂ ತಮ್ಮೊಡನೆ ಕರೆ ದುಕೊಂಡು, ಆ ವನವನ್ನೆಲ್ಲಾ ಹುಡುಕುತಿದ್ದರು ಇಷ್ಟರಲ್ಲಿ ಚಂದ್ರಾಸ್ತ ಮಯಕಾಲವಾಗಿ, ಕ್ರಮಕ್ರಮವಾಗಿ ಬೆಳದಿಂಗಳು ತಗ್ಗುತ್ತಬಂದಿತು. ಕತ್ತ ಲೆಯಲ್ಲಿ ಕಣ್ಣು ಕಾಣದಂತಾಯಿತು. ಮುಂದೆ ಹೋಗಲು ಸಾಧ್ಯವಿಲ್ಲದೆ, ಆ ಗೋಪಿಯರೆಲ್ಲರೂ ನಿರಾಶರಾಗಿ ಹಿಂತಿರುಗಿಬಿಟ್ಟರು. ಆದರೇನು? ಆಗಲೂ ಅ ವರು ಕೃಷ್ಣನಲ್ಲಿಯೇ ನಟ್ಟ ಮನಸ್ಸುಳ್ಳವರಾಗಿ, ತನ್ಮಯತ್ವವನ್ನುಹೊಂದಿ, ದಂತೆ ಅವನ ನಡೆನುಡಿಗಳನ್ನೂ,ಅವನ ಚೇಷ್ಟೆಗಳನ್ನೂ ಅಭಿನಯಿಸುತ್ತ,ಅವ ನ ಗುಣಗಳನ್ನೇ ಹಾಡುತ್ತ,ಮೈಮರೆತು, ತಮ್ಮ ಮನೆಮಂದಿಗಳ ಸ್ಮರಣೆಯೇ ಇಲ್ಲದೆ,ತಿರುಗಿ ತಾವು ಮೊದಲು ಕೃಷ್ಣನೊಡನೆ ಸೇರಿದ್ದ ಯಮುನಾತೀರದ ಪುಳಿನಪ್ರದೇಶಕ್ಕೇ ಬಂದು ಸೇರಿದರು.ಅಲ್ಲಿ ಎಲ್ಲರೂ ಕಲೆತು,ಕೃಷ್ಣನು ಯಾ ವಾಗ ಹಿಂತಿರುಗಿಬ ರುವನೋ ಎಂಬ ಆಕಾಂಕ್ಷೆಯಿಂದ ನಿರೀಕ್ಷಿಸುತ್ತ,ಅವನ ಗುಣಗಳನ್ನು ಗಾನಮಾಡತೊಡಗಿದರು. ಇದುಮೂವತ್ತನೆಯಅಧ್ಯಾಯವು.




(ರಾಗ - ಕಾಂಭೋಜಿ - ಅಥವಾ ತೋಡಿ).

ಜಯತಿ ತೇಽಧಿಕಂ(ಕೃಷ್ಣ) ಜನ್ಮನಾ ವ್ರಜಃ ।
ಶ್ರಯತ ಇಂದಿರಾ ,, ಶಶ್ವದತ್ರ ಹಿ
ದಯಿತ ದೃಶ್ಯತಾಂ ,, ದಿಕ್ಷು ತಾವಕಾಃ
ತ್ವಯಿ ಧೃತಾಸವಃ ,, ತ್ವಾಂ ವಿಚಿನ್ವತೇ ॥ ೧ ॥

ಕೃಷ್ಣಾ! ನೀನು ಇಲ್ಲಿ ಜನಿಸಿದುದರಿಂದ, ಈ ನಮ್ಮ ಗೋಕುಲವು ಸರ್ವೋತ್ಕೃಷ್ಟವೆನಿಸಿತು. ಇಲ್ಲಿ ಲಕ್ಷ್ಮಿಯು ನಿತ್ಯವಾಸವನ್ನುಮಾಡುವಂತಾಯಿತು! ನಾಥಾ! ಹೀಗೆ ಇದು ಸರ್ವಸೌಭಾಗ್ಯದಿಂದ ಕೂಡಿರುವಾಗ, ಇಲ್ಲಿ ನಿನ್ನ ಕಡೆಯವರಾಗಿ, ನಿನ್ನಲ್ಲಿಯೇ ಪ್ರಾಣವನ್ನಿರಿಸಿರತಕ್ಕ ನಾವುಮಾತ್ರ, ನಿನ್ನನ್ನು ಕಾಣದೆ ಸಂಕಟಪಟ್ಟು ಹುಡುಕುವಂತೆ ಮಾಡಿದೆಯಲ್ಲಾ! ನಮ್ಮನ್ನು ಕಣ್ಣುಬಿಟ್ಟು ನೋಡು!

ಶರದುದಾಶಯೇ (ಕೃಷ್ಣ) ಸಾಧುಜಾತಸತ್
ಸರಸಿಜೋದರ ,, ಶ್ರೀಮುಷಾ ದೃಶಾ ॥
ಸುರತನಾಥ!ತೇ ,, ಶುಲ್ಕದಾಸಿಕಾಃ
ವರದ! ನಿಘ್ನತೋ ,, ನೇಹ ಕಿಂ ವಧಃ ॥ ೨ ॥

ಕೃಷ್ಣಾ! ಈ ಶರತ್ಕಾಲಸಂಬಂಧದಿಂದ ಸೊಂಪೇರಿ ಬೆಳೆದ ಕಮಲದ ಸೊಬಗನ್ನೂ ತಿರಸ್ಕರಿಸುತ್ತಿರುವ ನಿನ್ನ ನೇತ್ರಸೌಂದರ್ಯದಿಂದಲೇ ನಮ್ಮನ್ನು ಹೀಗೆ ಕೊಲ್ಲುತ್ತಿರುವೆಯಲ್ಲಾ! ನಾಥಾ! ನಾವು ನಿನಗೆ ಬೆಲೆಯಿಲ್ಲದೆ ಬಂದ ದಾಸಿಯರು! ತಾವಾಗಿ ಆಶೆಪಟ್ಟು ಬಂದ ನಮ್ಮನ್ನು ನಿರಾಕರಿಸುವುದು ಅಶಸ್ತ್ರವಧವಲ್ಲವೆ?

ವಿಷಜಲಾಪ್ಯಯಾತ್ (ಕೃಷ್ಣ) ವ್ಯಾಳರಾಕ್ಷಸಾತ್
ವರ್ಷಮಾರುತಾತ್ ,, ವೈದ್ಯುತಾನಲಾತ್
ವೃಷಮಯಾತ್ಮಜಾತ್ ,, ವಿಶ್ವತೋ ಭಯಾತ್
ವೃಷಭ! ತೇ ವಯಂ ,, ರಕ್ಷಿತಾ ಮುಹುಃ ॥ ೩ ॥

ನೀನೇ ! ಹಿಂದೆ ನಮ್ಮನ್ನು ಕಾಳಿಯಹ್ರದದ ವಿಷಜಲದಿಂದ ಬದುಕಿಸಿದೆ.! ಮತ್ತು ಸರ್ಪರೂಪನಾದ ಅಘಾಸುರನಿಂದಲೂ, ಮಳೆಗಾಳಿಸಿಡಿಲುಗಳಿಂದಲೂ, ಗೂಳಿಯಾಗಿ ಬಂದ ಅರಿಷ್ಟನೆಂಬ ರಾಕ್ಷಸನಿಂದಲೂ, ವ್ಯೋಮಾಸುರನಿಂದಲೂ, ಇನ್ನೂ ಬೇರೆ ಅನೇಕವಿಧವಾದ ಭಯದಿಂದಲೂ ನಮ್ಮನ್ನು ತಪ್ಪಿಸಿ ಕಾಪಾಡಿದ ನೀನು, ಈಗಮಾತ್ರ ನಮ್ಮನ್ನು ಕೈಬಿಡುವುದೇಕೆ ?

ನಖಲು ಗೋಪಿಕಾ (ಕೃಷ್ಣ) ನಂದನೋ ಭವಾ೯
ಅಖಿಲದೇಹಿನಾಂ ,, ಅನ್ತರಾತ್ಮದೃಕ್
ವಿಖನಸಾರ್ಥಿತೋ ,, ವಿಶ್ವಗುಪ್ತಯೇ
ಸಖ ಉದೇಯಿವಾ೯ ,, ಸಾತ್ವತಾಂ ಕುಲೇ ॥ ೪ ॥

ಕೃಷ್ಣಾ! ನೀನು ನಿಜವಾಗಿ ಯಶೋದೆಯ ಮಗನಲ್ಲ ! ಸಮಸ್ತದೇಹಿಗಳಿಗೂ ಅಂತರಾತ್ಮನಾಗಿ, ಅವರ ಶುಭಾಶುಭಗಳಿಗೆ ಸಾಕ್ಷಿಯಾದ ಪರಮಾತ್ಮನೇ ನೀನು! ಈ ಶರೀರವು ನಿನಗೆ ಕರ್ಮಮೂಲಕವಾಗಿ ಬಂದುದಲ್ಲ! ಬ್ರಹ್ಮನ ಪ್ರಾರ್ಥನೆಯಿಂದ, ಲೋಕರಕ್ಷಣಾರ್ಥವಾಗಿ ನೀನು ಹೀಗೆ ಯದುಕುಲತಿಲಕನಾಗಿ ಅವತರಿಸಿರುವೆ ? ಹೀಗೆ ಸಕಲಜಗದ್ರಕ್ಷಣಾರ್ಥವಾಗಿಯೇ ಅವತರಿಸಿದ ನೀನು, ನಮ್ಮನ್ನುಮಾತ್ರ ಸಂಕಟಪಡಿಸಬಹುದೆ ?

ವಿರಚಿತಾಭಯಂ (ಕೃಷ್ಣ) ವೃಷ್ಣಿಧುರ್ಯ!ತೇ
ಚರಣಮೀಯುಷಾಂ ,, ಸಂಸೃತೇರ್ಭಯಾತ್
ಕರಸರೋರುಹಂ ,, ಕಾಂತಕಾಮದಂ
ಶಿರಸಿ ಧೇಹಿ! ನ: ,, ಶ್ರೀಕರಗ್ರಹಮ್ ॥ ೫ ॥

ಕೃಷ್ಣಾ! ನಿನ್ನನ್ನೇ ನಂಬಿಬಂದ ನಮ್ಮಲ್ಲಿ ಕರುಣೆಯಿಟ್ಟು, ನಮ್ಮ ಕೋರಿಕೆಯನ್ನೀಡೇರಿಸು! ನಾವು ನಿನ್ನಲ್ಲಿ ಬೇರೆ ಯಾವುದನ್ನೂ ಯಾಚಿಸುವುದಿಲ್ಲ! ನಮ್ಮ ಕೋರಿಕೆಯೆಲ್ಲವೂ ನಿನ್ನ ದೇಹಸ್ಪರ್ಶವೊಂದೇ! ಆದುದರಿಂದ ನಾಥಾ ! ಸಂಸಾರಸಾಗರದಿಂದ ಭಯಪಟ್ಟು ಬಂದವರಿಗೆ ಅಭಯಪ್ರದವಾಗಿಯೂ, ಆಶ್ರಿತರಿಗೆ ವರಪ್ರದವಾಗಿಯೂ, ಸಾಕ್ಷಾಲ್ಲಕ್ಷ್ಮೀದೇವಿಯ ಕರಸಂಬಂಧವುಳ್ಳುದಾಗಿಯೂ ಇರುವ ನಿನ್ನ ಹಸ್ತಕಮಲವನ್ನು ನಮ್ಮ ಶಿರಸ್ಸಿನಲ್ಲಿಡು !

ವ್ರಜಜನಾರ್ತಿಹರ್ (ಕೃಷ್ಣ) ವೀರ! ಯೋಷಿತಾಂ ।
ನಿಜಜನಸ್ಮಯ ,, ಧ್ವಂಸನಸ್ಮಿತ॥
ಭಜ!ಸಖೇ!ಭವತ್ ,, ಕಿಂಕರೀ ಸ್ಮ ನೋ
ಜಲರುಹಾನನಂ ,, ಚಾರು ದರ್ಶಯ ॥ ೬ ॥

ವೀರಾ! ನೀನು ಗೋಕುಲವಾಸಿಗಳ ಕಷ್ಟವನ್ನು ನೀಗಿಸತಕ್ಕವನಲ್ಲವೆ? ನಮ್ಮನ್ನುಮಾತ್ರ ನಿರಾಕರಿಸುವುದೇಕೆ? ನಿನ್ನ ಮಂದಹಾಸಮಾತ್ರದಿಂದಲೇ ನಮ್ಮಂತಹ ಸ್ತ್ರೀಯರ ಹೆಮ್ಮೆಯೆಲ್ಲವೂ ಅಡಗಿಹೋಗುವುದು. ಆ ನಿನ್ನ ಮಂದಹಾಸಮಾತ್ರಕ್ಕೆ ಮರುಳಾಗಿ,ನಾವು ನಿನಗೆ ದಾಸಿಯರಾಗಿರುವೆವು. ನಿನ್ನ ಮುಖಾರವಿಂದವನ್ನು ಒಂದಾವರ್ತಿ ಚೆನ್ನಾಗಿ ನಮಗೆ ತೋರಿಸಬಾರದೆ?

ಪ್ರಣತದೇಹಿನಾಂ (ಕೃಷ್ಣ) ಪಾಪಕರ್ಶನಂ
ತೃಣಚರಾನುಗಂ ,, ಶ್ರೀನಿಕೇತನಂ
ಫಣಿಫಣಾರ್ಪಿತಂ ,, ತೇ ಪದಾಮ್ಬುಜಂ
ಕೃಣು!ಕುಚೇಷು ನಃ ,, ಕೃನ್ಧಿ ಹೃಚ್ಛಯಮ್॥ ೭॥

ಕೃಷ್ಣಾ! ಆಶ್ರಿತರ ಪಾಪವನ್ನು ನೀಗಿಸತಕ್ಕುದಾಗಿಯೂ, ಮಂದೆಯ ಹಸುಗಳನ್ನು ಹಿಂಬಾಲಿಸತಕ್ಕುದಾಗಿಯೂ, ಸೌಭಾಗ್ಯಲಕ್ಷ್ಮಿಗೆ ನೆಲೆಯಾಗಿಯೂ, ಕಾಳಿಯನ ತಲೆಯನ್ನು ಮೆಟ್ಟಿದುದಾಗಿಯೂ ಇರುವ ನಿನ್ನಪಾದಕಮಲದಿಂದ ನಮ್ಮ ಎದೆಯನ್ನೊತ್ತಿ, ನಮ್ಮ ಹೃದಯ ಸಂತಾಪವನ್ನು ನೀಗಿಸು!

ಮಧುರಯಾ ಗಿರಾ (ಕೃಷ್ಣ) ವಲ್ಗುವಾಕ್ಯಯಾ
ಬುಧಮನೋಜ್ಞಯಾ ,, ಪುಷ್ಕರೇಕ್ಷಣ
ವಿಧಿಕರೀರಿಮಾಃ ,, ವೀರ! ಮುಹ್ಯತೀಃ
ಅಧರಸೀಧುನಾ ,, ಪಾಯಯಸ್ವ ನಃ ॥ ೮ ॥

ಓ ಪುಂಡರೀಕಾಕ್ಷಾ! ವಿದ್ವಾಂಸರ ಮನಸ್ಸನ್ನು ರಂಜಿಸತಕ್ಕುದಾಗಿಯೂ, ಮನೋಹರವಾದ ವಾಕ್ಯಸರಣಿಯುಳ್ಳುದಾಗಿಯೂ, ಕಿವಿಗಿಂಪಾಗಿಯೂ ಇರುವ ನಿನ್ನ ಮುದ್ದುಮಾತುಗಳಿಗೆ ನಾವು ಮೋಹಿತರಾಗಿರುವೆವು! ನಾವು ನಿನ್ನ ದಾಸಿಯರು! ನಿನ್ನ ಅಧರಾಮೃತವನ್ನು ನಮಗೆ ಪಾನಮಾಡಿಸಿ, ನಮ್ಮನ್ನು ಬದುಕಿಸು!

ತವ ಕಥಾಮೃತಂ(ಕೃಷ್ಣ) ತಪ್ತಜೀವನಂ
. ಕವಿಭಿರೀಡಿತಂ ,, ಕಲ್ಮಷಾಪಹಂ
ಶ್ರವಣಮಙ್ಗಳಂ ,, ಶ್ರೀಮದಾತತಂ
ಭುವಿ ಗೃಣನ್ತಿ ಯೇ ,, ಭೂರಿದಾ ಜನಾಃ ॥ ೯ ॥

ಕೃಷ್ಣಾ ! ನಿನ್ನ ಕಥಾಮೃತವು ತಾಪತ್ರಯದಿಂದ ತಪ್ತರಾದವರಿಗೆ ಜೀವನಹೇತುವೆನಿಸಿರುವುದು. ಬ್ರಹ್ಮಾದಿಗಳಿಗೂ ಆದರಣೀಯವಾದುದು. ಸಮಸ್ತಕಲ್ಮಷಗಳನ್ನೂ ನೀಗಿಸತಕ್ಕದು! ಕಿವಿಯಿಂದ ಕೇಳಿದಮಾತ್ರಕ್ಕೆ ಉತ್ತಮಶ್ರೇಯಸ್ಸನ್ನು ಕೈಗೂಡಿಸತಕ್ಕದು! ಶಾಂತ್ಯಾದಿಗುಣಗಳನ್ನುಂಟು ಮಾಡುವುದು. ಹೀಗೆ ದೇವಲೋಕದಲ್ಲಿ ಪ್ರಸಿದ್ಧವಾದ ಅಮೃತಕ್ಕಿಂತಲೂ ವಿಶೇಷಗುಣವುಳ್ಳ ನಿನ್ನ .ಕಥಾಮೃತವನ್ನು ಯಾರು ಸೇವಿಸುವರೋ, ಅಂತವರು, ಪೂರ್ವಜನ್ಮದಲ್ಲಿ ಅನೇಕದಾನಧರ್ಮಗಳನ್ನು ಮಾಡಿದ ಸುಕೃತಿ ಗಳಾಗಿರಬೇಕು. ಅಂತಹ ಪುಣ್ಯವಿಶೇಷದಿಂದಲ್ಲದೆ ಈ ಭಾಗ್ಯವು ಲಭಿಸ ಲಾರದು.

ಪ್ರಹಸಿತಂ ಪ್ರಿಯ (ಕೃಷ್ಣ) ಪ್ರೇಮವೀಕ್ಷಿತಂ
ವಿಹರಣಂ ಚ ತೇ ,, ಧ್ಯಾನಮಙ್ಗಳಂ
ರಹಸಿ ಸಂವಿದೋ ,, ಯಾ ಹೃದಿಸ್ಪೃಶಃ
ಕುಹಕ!ನೋ ಮನಃ ,, ಕ್ಷೋಭಯನ್ತಿ ಹಿ ॥ ೧೦ ॥

"ಹಾಗಿದ್ದರೆ ಆ ನನ್ನ ಕಥಾಶ್ರವಣಮಾತ್ರದಿಂದಲೇ ನೀವೂ ತೃಪ್ತ ರಾಗಬಾರದೆ?" ಎಂದು ಕೇಳುವೆಯಾ? ಕೃಷ್ಣಾ ! ಅದು ನಮಗೆ ಸಾಧ್ಯವಲ್ಲ! ಮೊದಲೇ ನೀನು ನಮ್ಮನ್ನು ಅನೇಕವಿಧದಿಂದ ವಂಚಿಸಿಬಿಟ್ಟಿರುವೆ! ನಿನ್ನ ಮುಗುಳ್ನಗೆ! ನಿನ್ನ ಅನುರಾಗವಿಶಿಷ್ಟವಾದ ನೋಟಗಳು ! ಸ್ಮರಣಮಾ ತ್ರದಲ್ಲಿ ಮನಸ್ಸಿಗೆ ಆನಂದವನ್ನುಂಟುಮಾಡತಕ್ಕ ನಿನ್ನ ಆಟಪಾಟಗಳು! ಮ ನಸ್ಸನ್ನು ಮೋಹಗೊಳಿಸುವಂತೆ ನೀನು ನಮ್ಮೊಡನೆ ಏಕಾಂತದಲ್ಲಿ ನಡೆಸಿದ ಲೀಲೆಗಳು ! ಇವೆಲ್ಲವೂ ನಮ್ಮ ಮನಸ್ಸನ್ನು ಕಲಗಿಸಿಬಿಟ್ಟಿರುವಾಗ, ನಿನ್ನ. ಗುಣಶ್ರವಣಮಾತ್ರದಿಂದ ನಾವು ತೃಪ್ತರಾಗುವುದು ಹೇಗೆ ?

ಚಲಸಿ ಯದ್ವ್ರಜಾತ್ (ಕೃಷ್ಣ) ಚಾರಯನ್ಪಶೂನ್
ನಳಿನಸುನ್ದರಂ ,, ನಾಥ! ತೇ ಪದಂ

ಶಿಲತೃಣಾಙ್ಕುರೈ: ,, ಸೀದತೀತಿ ನ:
ಕಲಿಲತಾಂ ಮನ: ,, ಕಾಂತ! ಗಚ್ಛತಿ ॥ ೧೧ ॥

ಕಾಂತಾ ! ನೀನು ಹಸುಗಳನ್ನಟ್ಟಿಕೊಂಡು ಮಂದೆಯಿಂದ ಹೊರಡುವಾಗ, ಕಮಲದಂತೆ ಮೃದುವಾದ ನಿನ್ನ ಪಾದಕ್ಕೆ, ಕಾಡಿನಲ್ಲಿ ಹುಲ್ಲು ಕಡ್ಡಿಗಳು ಚುಚ್ಚುವುದರಿಂದ ಎಷ್ಟು ನೋವಾಗುವುದೋ ಎಂದು ನಾವು ಕಳವಳಿಸಿದುದನ್ನು ನೀನು ಕಾಣೆಯಾ ? ಹೀಗೆ ನಿನ್ನಲ್ಲಿ ಎಣೆಯಿಲ್ಲದ ಪ್ರೇಮದಿಂದ ಮರುಗುತ್ತಿರುವ ನಮ್ಮನ್ನು ನೀನು ಹೇಗೆ ವಂಚಿಸಿ ಹೋಗಬಹುದೆ?

ದಿನಪರಿಕ್ಷಯೇ (ಕೃಷ್ಣ) ನೀಲಕುನ್ತಲೈ:
ವನರುಹಾನನಂ ,, ಬಿಭ್ರದಾವೃತಮ್
ವನರಜಸ್ವಲಂ ,, ದರ್ಶಯನ್ಮುಹು:
ಮನಸಿ ನಸ್ಸ್ಮರಂ ,, ವೀರ! ಯಚ್ಛತಿ ॥ ೧೨ ॥

ಕೃಷ್ಣಾ ! ಸಂಧ್ಯಾಕಾಲದಲ್ಲಿ ನೀನು ಹಸುಗಳನ್ನಟ್ಟಿಕೊಂಡು ಕಾಡಿನಿಂದ ಹಿಂತಿರುಗಿ ಬರುವಾಗ,ಕಪ್ಪಾದ ಮುಂಗುರುಳುಗಳಿಂದಲೂ, ಹಸುಗಳ ಪಾದಧೂಳಿಯಿಂದಲೂ ಕೂಡಿದ ನಿನ್ನ ಮುಖವು. ಭ್ರಮರಪಙ್ಕ್ತಿಯಿಂದಲೂ, ಪುಷ್ಪರಜಸ್ಸಿನಿಂದಲೂ ಕೂಡಿದ ಕಮಲದಂತೆ ನಮ್ಮ ಮನಸ್ಸಿಗೆ ಆನಂದವನ್ನು ಬೀರುತಿದ್ದಿತು. ಇಂತಹ ಮುಖಸೌಂದರ್ಯದಿಂದ ನಮ್ಮ ಮನಸ್ಸನ್ನಾಕರ್ಷಿಸಿ, ಈಗ ನಮ್ಮನ್ನು ವಂಚಿಸಿಹೋದೆಯಲ್ಲಾ !

ಪ್ರಣತಕಾಮದಂ (ಕೃಷ್ಣ) ಪದ್ಮಜಾರ್ಚಿತಂ
ಧರಣಿಮಣ್ಡನಂ ,, ಧ್ಯೇಯಮಾಪದಿ
ಚರಣಪಙ್ಕಜಂ ,, ಶನ್ತಮಂಚ ತೇ
ರಮಣ! ನಸ್ತನೇ ,, ಷ್ವರ್ಪಯಾಧಿಹನ್ ॥ ೧೩ ॥

ಕೃಷ್ಣಾ ! ಮರೆಹೊಕ್ಕವರ ಕೋರಿಕೆಯನ್ನೀಡೇರಿಸತಕ್ಕುದಾಗಿಯೂ ಬ್ರಹ್ಮಾದಿದೇವತೆಗಳಿಗೂ ಪೂಜ್ಯವಾಗಿಯೂ, ಭೂಮಿಗೆ ಅಲಂಕಾರಭೂತವಾಗಿಯೂ, ಆಪತ್ಕಾಲದಲ್ಲಿ ಧ್ಯಾನಿಸಲ್ಪಡತಕ್ಕುದಾಗಿಯೂ, ಸರ್ವಸುಖಪ್ರದವಾಗಿಯೂ;ಇರುವ ನಿನ್ನಪಾದಕಮಲದಿಂದ ನಮ್ಮ ಎದೆಯನ್ನೊತ್ತಿ, ನಮ್ಮ ಹೃದಯಸಂತಾಪವನ್ನು ನೀಗಿಸು !

ಸುರತವರ್ಧನಂ (ಕೃಷ್ಣ) ಶೋಕನಾಶನಂ
ಸ್ವರಿತವೇಣುನಾ ,, ಸುಷ್ಠು ಚುಮ್ಬಿತಮ್
ಇತರರಾಗವಿ ,, ಸ್ಮಾರಣಂ ನೃಣಾಂ
ವಿತರ ವೀರ! ನಃ ,, ತೇಽಧರಾಮೃತಮ್ ॥ ೧೪ ॥

ವೀರಾ! ಮನುಷ್ಯರಿಗೆ ಸಾರ್ವಭೌಮಾದಿಸುಖಗಳಲ್ಲಿರುವ ಆಸೆಯನ್ನು ಬಿಡಿಸತಕ್ಕುದಾಗಿ, ನಮ್ಮಂತಹ ಸ್ತ್ರೀಯರಿಗೆ ರತಿಯನ್ನು ಹೆಚ್ಚಿಸತಕ್ಕುದಾಗಿ, ಆಶ್ರಿತರ ದುಃಖವನ್ನು ನಿವಾರಿಸತಕ್ಕುದಾಗಿ, ಮಧುರಸ್ವರವುಳ್ಳ ವೇಣುವನ್ನು ಆಗಾಗ ಚುಂಬಿಸತಕ್ಕ ನಿನ್ನ ಅಧರಾಮೃತವನ್ನು ನಮಗಿಷ್ಟು ಕೊಡಬಾರದೆ ?

ಅಟತಿ ಯದ್ಭವಾನ್(ಕೃಷ್ಣ) ಅಹ್ನಿ ಕಾನನಂ
ತ್ರುಟಿರ್ಯುಗಾಯತೇ ,, ತ್ವಾಮಪಶ್ಯತಾಮ್
ಕುಟಿಲಕುನ್ತಲಂ ,, ಶ್ರೀಮುಖಂಚ ತೇ
ಜಡ ಉದೀಕ್ಷತಾಂ ,, ಪಕ್ಷ್ಮಕೃದ್ದೃಶಾಮ್ ॥ ೧೫ ॥

ಕೃಷ್ಣಾ! ನೀನು ಹಗಲಲ್ಲಿ ಮಂದೆಯನ್ನಟ್ಟಿಕೊಂಡು ಕಾಡಿಗೆ ಹೋದಾಗ, ನಿನ್ನನ್ನು ಕಾಣದ ನಮಗೆ, ಒಂದು ತ್ರುಟಿಕಾಲವೂಕೂಡ ಒಂದು ಯುಗದಂತೆ ತೋರುವುದು. ನೀನು ಮನೆಗೆ ಬಂದಮೇಲೆ, ಕುಟಿಲಕುಂತಲಗಳಿಂದ ಶೋಭಿತವಾದ ನಿನ್ನ ಮುದ್ದುಮುಖವನ್ನು ನೋಡಿ, ಅದರ ಆನಂದಾನುಭವದಲ್ಲಿರತಕ್ಕವರಿಗೆ, ತಮಗೆ ಸ್ವಾಭಾವಿಕವಾದ ಎವೆಯಾಟಗಳೂ ಅಸಹ್ಯವಾಗಿ ತೋರುವುವು. ಆ ನಿನ್ನ ದರ್ಶನಾನಂದಕ್ಕೆ ನಿಮಿಷಮಾತ್ರವಿಘಾತಿಗಳಾದ ರೆಪ್ಪೆಗಳನ್ನು ಸೃಷ್ಟಿಸಿದ ಬ್ರಹ್ಮನೂ ಅವರಿಗೆ ಜಡನೆಂದು ತೋರುವುದು.

ಪತಿಸುತಾನ್ವಯ (ಕೃಷ್ಣ) ಭ್ರಾತೃಬಾನ್ಧವಾನ್
ಅತಿವಿಲಂಘ್ಯ ತೇಽ ,, ನ್ತ್ಯಚ್ಯುತಾಗತಾಃ
ಗತಿವಿದಸ್ತವೋ ,, ದ್ಗೀತಮೋಹಿತಾಃ
ಕಿತವ! ಯೋಷಿತಃ ,, ಕಸ್ತ್ಯಜೇನ್ನಿಶಿ ॥ ೧೬ ॥

ಓ ಅಚ್ಯುತಾ! ನಾವು ಆ ನಿನ್ನ ಸೌಂದರ್ಯಾನುಭವಕ್ಕಾಗಿಯೇ, ನಮ್ಮ ಪತಿಗಳನ್ನೂ, ಪುತ್ರರನ್ನೂ, ಬಂಧುಗಳನ್ನೂ, ಸಹೋದರರನ್ನೂ

ಅತಿಕ್ರಮಿಸಿ, ನಿನ್ನ ವೇಣುಗಾನದಿಂದ ಮೋಹಿತರಾಗಿ ಬಂದಿರುವೆವು. ನಾವು ಎಷ್ಟೋ ಪ್ರಯತ್ನದಿಂದ ನೀನು ಹೋದ ದಾರಿಯನ್ನೂ ಕಂಡುಕೊಂಡೆವು. ಹೀಗೆ ಈ ರಾತ್ರಿ ಕಾಲದಲ್ಲಿ ತಾವಾಗಿ ಒಲಿದುಬಂದ ಕಾಮಿನಿಯರನ್ನು, ನೀನೊಬ್ಬನುಹೊರತು ಬೇರೆ ಯಾವನು ತಾನೇ ಆದರಿಸದೆ ವನು?

ರಹಸಿ ಸಂವಿದಂ (ಕೃಷ್ಣ) ಹೃಚ್ಛಯೋದಯಂ
ಪ್ರಹಸಿತಾನನಂ ,, ಪ್ರೇಮವೀಕ್ಷಣಮ್
ಬೃಹದುರಶ್ಶ್ರಿಯೋ ,, ಧಾಮ ವೀಕ್ಷ್ಯ ತೇ
ಮುಹುರತಿಸ್ಪೃಹಾ ,, ಮುಹ್ಯತೇ ಮನಃ ॥ ೧೭ ॥

ಕೃಷ್ಣಾ ! ನೀನು ನಮ್ಮೊಡನೆ ರಹಸ್ಯವಾಗಿ ನಡೆಸಿಹೋದ ಕಾಮೋದ್ದೀಪಕಗಳಾದ ಕಾರ್ಯಗಳೂ, ನಿನ್ನ ಮಂದಹಾಸವಿಶಿಷ್ಟವಾದ ಮುಖವೂ, ಪ್ರೀತಿಪೂರ್ವಕವಾದ ನಿನ್ನ ನೋಟವೂ, ಲಕ್ಷ್ಮಿಗೆ ನಿವಾಸಭೂತವಾದ ನಿನ್ನ ಎದೆಯ ಸೌಂದರ್ಯವೂ, ನಮ್ಮ ಮನಸ್ಸನ್ನು ಮೋಹಗೊಳಿಸಿಬಿಟ್ಟಿರುವುದಲ್ಲಾ !

ವ್ರಜವನೌಕಸಾಂ (ಕೃಷ್ಣ) ವ್ಯಕ್ತಿರಙ್ಗ! ತೇ
ವೃಜಿನಹನ್ತ್ರ್ಯಲಂ ,, ವಿಶ್ವಮಙ್ಗಳಮ್
ತ್ಯಜ ಮನಾಕ್ಚ ನಃ ,, ತತ್ಸ್ಪೃಹಾತ್ಮನಾಮ್
ಸ್ವಜನಹೃದ್ರುಜಾಂ ,, ಯನ್ನಿಷೂದನಮ್ ॥ ೧೮ ॥

ಕೃಷ್ಣಾ! ನಿನ್ನ ಈ ಅವತಾರವು, ವ್ರಜವಾಸಿಗಳಾದ ಗೋಪಾಲಕರಿಗೂ, ವನವಾಸಿಗಳಾದ ತಾಪಸರಿಗೂ ಪಾಪನಿವಾರಕವಾದುದಲ್ಲದೆ, ಸರ್ವಲೋಕಕ್ಕೂ ಮಂಗಳಾಸ್ಪದವಾಗಿರುವುದು! ಹೀಗಿರುವಾಗ ನಿನ್ನಲ್ಲಿಯೇ ನಟ್ಟ ಮನಸ್ಸುಳ್ಳ ನಮಗೆಮಾತ್ರ ಅದು ಕೇವಲದುಃಖಕಾರಣವಾಗುವಂತೆ ಮಾಡಬಹುದೆ! ನಮ್ಮ ಹೃದಯತಾಪವನ್ನು ನೀಗಿಸಬಾರದೆ ?

ಯತ್ತೇ! ಸುಜಾತ ಚರಣಾಂಬುರುಹಂ ಸ್ತನೇಷು
ಭೀತಾಶ್ಶನೈಃ ಪ್ರಿಯ ದಧೀಮಹಿ ಕರ್ಕಶೇಷು
ತೇನಾಟವೀಮಟಸಿ ತದ್ವ್ಯಥತೇ ನ ಕಿಂಸ್ವಿತ್
ಕೂರ್ಪಾದಿಭಿ ರ್ಭ್ರಮತಿ ಧೀರ್ಭವದಾಯುಷಾಂ ನಃ

ಪ್ರಿಯಾ! ಓ ಕೃಷ್ಣಾ! ನಮ್ಮ ಸ್ಥಿತಿಗೂ ನಾವು ಅಷ್ಟಾಗಿ ದುಃಖಿಸುವುದಿಲ್ಲ. ಅತಿಕೋಮಲವಾದ ನಿನ್ನ ಪಾದಾರವಿಂದಗಳನ್ನು, ನಮ್ಮ ಕಠಿನಸ್ತನಗಳಮೇಲಿಡುವಾಗಲೂ,ಅದಕ್ಕೆ ಎಲ್ಲಿ ನೋವಾಗುವುದೋ ಎಂದು ನಾವು ಎಷ್ಟೋ ಭಯಪಟ್ಟು ಮೆಲ್ಲಗೆ ಒತ್ತುತಿದ್ದೆವಲ್ಲಾ!ಅಂತಹ ಸುಕುಮಾರವಾದ ಪಾದಗಳನ್ನು ನೀನು, ಅರಣ್ಯಸಂಚಾರದಿಂದ ಕಲ್ಲುಮುಳ್ಳುಗಳಲ್ಲಿಟ್ಟು ನೋಯಿಸಿದರೆ, ನಮಗೆ ಎಷ್ಟು ಸಂಕಟವಾಗಬೇಕು ನೀನೇ ಯೋಚಿಸಿ ನೋಡು! ಕೃಷ್ಣಾ! ನಮ್ಮ ಪ್ರಾಣವನ್ನೇ ನಿನ್ನ ಅಧೀನವನ್ನಾಗಿ ಮಾಡಿರುವೆವು. ನಮಗೆ ದರ್ಶನವನ್ನು ಕೊಟ್ಟು ಕಾಪಾಡಬಾರದೆ"ಎಂದರು. ಇದು ಮೂವತ್ತೊಂದನೆಯ ಅಧ್ಯಾಯವು.

---

(ಗೋಪಸ್ತ್ರೀಯರ ದೈನ್ಯವಿಲಾಪಗಳನ್ನು ನೋಡಿ ಕೃಷ್ಣನು, ಅವರನಡುವೆ ಗೋಚರಿಸಿದುದು. ಕೃಷ್ಣ ಗೋಪಿಯರ ಪ್ರಣಯಸಲ್ಲಾಪಗಳು.)

ಹೀಗೆ ಗೋಪಿಯರು ಗಾನಮಾಡಿ, ನಾನಾವಿಧದಿಂದ ಮೊರೆಯಿಡುತ್ತಿದ್ದು, ಕೊನೆಗೆ ಹೃದಯತಾಪವನ್ನು ತಡೆಯಲಾರದೆ, ಸುಸ್ವರದಿಂದ ಅಳುವುದಕ್ಕೂ ಆರಂಭಿಸಿದರು. ಆಗ ಕೃಷ್ಣನು ಅವರ ದೈನ್ಯವನ್ನು ನೋಡಿ ಕನಿಕರಗೊಂಡು, ಪೀತಾಂಬರವನಮಾಲಿಕೆಗಳೊಡನೆ ಸಾಕ್ಷಾನ್ಮನ್ಮಥನಿಗೂ ಮನ್ಮಥನಂತೆ ಮೋಹನಾಕಾರವುಳ್ಳವನಾಗಿ, ಮುಖದಲ್ಲಿ ಮುಗುಳ್ನಗೆಯನ್ನು ಬೀರುತ್ತ, ಆ ಸ್ತ್ರೀಯರ ನಡುವೆ ಗೋಚರಿಸಿದನು. ತಮಗೆ ಪ್ರಿಯತಮನಾದ ಕೃಷ್ಣನನ್ನು ನೋಡಿದೊಡನೆ, ಆ ಸ್ತ್ರೀಯರಿಗೆ ಹೋಗಿದ್ದ ಪ್ರಾಣವು ತಿರುಗಿ ಬಂದಂತಾಯಿತು. ಸಂತೋಷದಿಂದರಳಿದ ಕಣ್ಣುಳ್ಳವರಾಗಿ, ಎಲ್ಲರೂ ಒಮ್ಮೆಯೇ ತಟ್ಟನೆ ಮೇಲೆದ್ದುನಿಂತರು. ಭಕ್ತಿಪರಿಪಾಕವುಳ್ಳ ಸತ್ಪುರುಷರು,ಭಗವಂತನ ಪಾದದರ್ಶನದಿಂದ ತೃಪ್ತರಾಗದಿರುವಂತೆ, ಆ ಸ್ತ್ರೀಯರು ಕೃಷ್ಣನ ಮುಖಲಾವಣ್ಯಸುಧಾರಸವನ್ನು, ತಮ್ಮ ಕಣ್ಣುಗಳಿಂದ ಎಷ್ಟೆಷ್ಟು ಪಾನಮಾಡಿದರೂ ತೃಪ್ತರಾಗದೆ ನೋಡುತಿದ್ದರು.

ಆಗ ಅವರ ಸಂತೋಷಸಂಭ್ರಮಗಳನ್ನು ಕೇಳಬೇಕೆ? ಒಬ್ಬಳು ಬಂದು ತನ್ನ ಎರಡು ಕೈಗಳಿಂದಲೂ ಕೃಷ್ಣನ ಹಸ್ತಕಮಲವನ್ನು

ಹಿಡಿದುಕೊಂಡಳು ! ಮತ್ತೊಬ್ಬಳು ಚಂದನಾನುಲಿಪ್ತವಾದ ಕೃಷ್ಣನ ತೋಳನ್ನು ತೆಗೆದು ತನ್ನ ಭುಜದಮೇಲಿಟ್ಟುಕೊಂಡಳು! ಮತ್ತೊಬ್ಬಳು ಆ ಕೃಷ್ಣನು ಬಾಯಿಂದಗಿದುಗುಳಿದ ತಾಂಬೂಲವನ್ನು, ಎರಡು ಕೈಗಳಿಂದಾ ತುಕೊಂಡಳು. ಮತ್ತೊಬ್ಬಳು ಆ ಕೃಷ್ಣನ ಎರಡುಪಾದಗಳನ್ನೂ ತನ್ನ ಎದೆಗೆ ಒತ್ತಿಕೊಂಡಳು. ಮತ್ತೊಬ್ಬಳು ಆ ಕೃಷ್ಣನಲ್ಲಿರುವ ಮಿತಿಮೀರಿದ ಪ್ರೇಮದಿಂದ, ಅವನು ತನ್ನನ್ನು ವಂಚಿಸಿಹೋದುದಕ್ಕಾಗಿ ಪ್ರಣಯಕೋ ಪವನ್ನು ತೋರಿಸುತ್ತ, ಹುಬ್ಬುಗಂಟನ್ನು ಹಾಕಿ, ತುಟಿಗಳನ್ನು ಕಚ್ಚಿಕೊಂ ಡು, ತನ್ನ ಕಟಾಕ್ಷಕಾಂತಿಯಿಂದ ಅವನನ್ನು ಪ್ರಹರಿಸುವಂತೆ ದುರದುರನೆ ನೋಡುತ್ತ ನಿಂತಳು. ಮತ್ತೊಬ್ಬಳು ಆ ಕೃಷ್ಣನ ಮುಖಲಾವಣ್ಯವೆಂಬ ಅಮೃತರಸವನ್ನು ಎವೆಮುಚ್ಚದೆ ತನ್ನ ದೃಷ್ಟಿಗಳಿಂದ ಪಾನಮಾಡುತ್ತ, ಎಷ್ಟು ಹೊತ್ತಾದರೂ ತೃಪ್ತಿಯಿಲ್ಲದೆ ಸ್ತಬ್ಧಳಾಗಿ ನಿಂತುಬಿಟ್ಟಳು. ಬೇ ರೊಬ್ಬಳು ತನ್ನ ನೇತ್ರರಂಧ್ರಗಳ ಮೂಲಕವಾಗಿ ಆ ಕೃಷ್ಣನನ್ನು ಹೃದ ಯದಲ್ಲಿ ಸೇರಿಸಿ, ಹೊರಕ್ಕೆ ಬಿಡಲಾರದವಳಂತೆ ಕಣ್ಣುಗಳನ್ನು ಮುಚ್ಚಿ ಕೊಂಡು, ಮನಸ್ಸಿನಲ್ಲಿಯೇ ಆ ಕೃಷ್ಣನ ದೇಹಾಲಿಂಗನಸೌಖ್ಯವನ್ನನುಭವಿ ಸುತ್ತ, ಆತ್ಮಾನುಭವದಲ್ಲಿರುವ ಯೋಗಿಯಂತೆ ಆನಂದಪರವಶಳಾಗಿದ್ದಳು. ಹೀಗೆ ಗೋಪಿಯರೆಲ್ಲರೂ, ಕೃಷ್ಣದರ್ಶನವೆಂಬ ಮಹೋತ್ಸವಾನಂದದಲ್ಲಿ ಮಗ್ನರಾಗಿ, ಯೋಗಿಗಳು ಪರಮಾತ್ಮಸಾಕ್ಷಾತ್ಕಾರದಿಂದ ತಾಪತ್ರಯ ದುಃಖವನ್ನು ಮರೆತುಬಿಡುವಂತೆ, ತಮ್ಮ ಮನಸ್ಸಿನಲ್ಲಿದ್ದ ವಿರಹತಾಪವ ನ್ನು ಮರೆತುಬಿಟ್ಟರು. ಹೀಗೆ . ಸಂತುಷ್ಟಚಿತ್ತರಾದ ಆ ಗೋಪಸ್ತ್ರೀಯ ರಿಂದ ಪರಿವೃತನಾದ ಕೃಷ್ಣನು, ವಿಮಲಾದಿ ಶಕ್ತಿಗಳೊಡಗೂಡಿದ ಪರಮ ಪುರುಷನಂತೆ ಶೋಭಿಸುತಿದ್ದನು. ಆಮೇಲೆ ಕೃಷ್ಣನು ಅವರೆಲ್ಲರನ್ನೂ, ಆ ಕಾಳಿಂದೀನದಿಯ ತೀರದಲ್ಲಿ ಮನೋಹರವಾದ ಒಂದಾನೊಂದು ಪುಳಿನಪ್ರ ದೇಶಕ್ಕೆ ಕರೆತಂದನು, ಆ ಸನ್ನಿವೇಶದ ಸೊಗಸನ್ನು ಕೇಳಬೇಕೆ? ಕುಂದಮಂ ದಾರಾದಿಪುಷ್ಪಗಳ ಸುವಾಸನೆಯನ್ನು ಹರಡುತ್ತಿರುವ ಮಂದಮಾರುತವು. ನಾನಾಕಡೆಗಳಿಂದಲೂ ಬೀಸುತ್ತಿರುವುದು. ಆ ವಾಸನೆಗಾಗಿ ಭ್ರಮರಗಳು ಬಂದು ಮುತ್ತಿ, ಕಿವಿಗಿಂಪಾಗಿ ಝುಂಕರಿಸುತ್ತಿರುವುವು. ರಾತ್ರಿಯ ಅಂಧಕಾ



೧೯೩೩. ರಾಸಕ್ರೀಡೆ.

ರವೇ ತಿಳಿಯದದಂತೆ ಶಾರದಚಂದ್ರಿಕೆಯು ಬೆಳಗುತ್ತಿರುವುದು. ಯಮುನಾನ ದಿಯು, ಅಲೆಗಳೆಂಬ ತನ್ನ ಕೈಗಳಿಂದೊತ್ತರಿಸಿದ ಸಣ್ಣಮರಳುಗಳಿಂದ, ಆ ಪ್ರದೇಶವೆಲ್ಲವೂ ಸುಪ್ಪತಿಗೆಯನ್ನು ಹಾಸಿದಂತೆ ಸುಖಸ್ಪರ್ಶವಾಗಿರುವುದು. ಇಂತಹ ಶುಭಕರವಾದ ಪ್ರದೇಶದಲ್ಲಿ, ಗೋಪಿಯರು, ಆ ಕೃಷ್ಣನ ಸೌಂದ ರ್ಯಾನುಭವಸುಖದಿಂದ ತಮ್ಮ ವಿರಹತಾಪವನ್ನು ನೀಗಿ, ಶ್ರುತಿಗಳು ಪರಮಾ ತ್ಮಗುಣವರ್ಣನದಿಂದ ಹೇಗೋ ಹಾಗೆ,ಆ ಕೃಷ್ಣನ ದರ್ಶನದಿಂದ ತಾವು ಪೂ ರ್ಣಮನೋರಥರಾದುದಾಗಿ ತಿಳಿದು ಸಂತೋಷಗೊಂಡಿದ್ದರು. ಒಡನೆಯೇ ಕೆಲವು ಗೋಪಿಯರು, ಅಲ್ಲಲ್ಲಿ ತಮ್ಮ ಸ್ತನಕುಂಕುಮದ ಗುರುತುಳ್ಳ, ವಸ್ತ್ರದ ಸೆರಗನ್ನೆಳೆದು, ಕೃಷ್ಣನು ಕುಳ್ಳಿರುವುದಕ್ಕಾಗಿ ಆಸನವನ್ನು ಕಲ್ಪಿಸಿದರು. ಯೋಗಿಗಳ ಹೃದಯಪುಂಡರೀಕವನ್ನೇ ತನಗೆ ಆಸನವಾಗಿ ಉಳ್ಳ ಸರ್ವೇಶ್ವರನಾದ ಕೃಷ್ಣನು, ಆ ಗೊಲ್ಲತಿಯರು ತನಗಾಗಿ ಪ್ರೀತಿ ಯಿಂದ ಹಾಸಿದ ಸೀರೆಯ ಸೆರಗಿನಮೇಲೆಯೇ ಕುಳಿತನು. ಮೂರುಲೋಕ ದ ಸೌಂದರ್ಯಲಕ್ಷ್ಮಿಯೂ ಒಂದಾಗಿ ಸೇರಿ ಮೂರ್ತೀಭವಿಸಿದಂತೆ, ದಿವ್ಯ ಸೌಂದರ್ಯದಿಂದೊಪ್ಪುತ್ತಿರುವ ಆ ಕೃಷ್ಣನು, ಸುತ್ತಲೂ ಗೋಪಸ್ತ್ರೀಯ ರಿಂದ ಪರಿವೃತನಾಗಿ ಅಪೂರ್ವಶೋಭೆಯಿಂದ ಪ್ರಕಾಶಿಸುತಿದ್ದನು. ಆಗ ಗೋಪಿಯರೆಲ್ಲರೂ, ಮಂದಹಾಸಪಿಶಿಷ್ಟವಾದ ತಮ್ಮ ನೋಟದಿಂದಲೂ ತಮ್ಮ ಹುಬ್ಬಿನಾಟದಿಂದಲೂ, ಆ ಕೃಷ್ಣನ ಮನಸ್ಸನ್ನು ರಂಜಿಸುತ್ತ, ಒ ಬ್ಬೊಬ್ಬರೂ ಮೇಲೆ ಬಿದ್ದು ಬಂದು, ಅವನ ಕಾಲುಗಳನ್ನೆಳೆದು ತಮ್ಮ ತೊಡೆಯಮೇಲಿಟ್ಟುಕೊಂಡು ಒತ್ತುತ್ತಿದ್ದರು. ಮತ್ತು ತಮ್ಮ ಕಾಮೋ ದ್ರೇಕಕ್ಕೆ ಕಾರಣವಾದ ಆ ಕೃಷ್ಣನಲ್ಲಿ ಪ್ರಣಯಕೋಪವನ್ನು ತೋರಿ ಸುತ್ತ ಹೀಗೆಂದು ಪ್ರಶ್ನಮಾಡುವರು. "ಓ ಕೃಷ್ಣಾ! ಲೋಕದಲ್ಲಿ ತನ್ನನ್ನು ಭಜಿಸತಕ್ಕವರಿಗೆ ಅನುಕೂಲರಾಗಿರತಕ್ಕವರು ಕೆಲವರುಂಟು. ಉದಾರ ಬುದ್ಧಿಯುಳ್ಳವರಾದ ಬೇರೆ ಕೆಲವರು, ತನ್ನನ್ನು ಭಜಿಸದಿದ್ದವರಿಗೂ ಅನು ಕೂಲರಾಗಿ ನಡೆಯುವುದುಂಟು. ಬೇರೆ ಕೆಲವರಾದರೋ ಮನಃಪೂರ್ವಕ ವಾಗಿ ತಮ್ಮನ್ನು ಭಜಿಸಿದವರಲ್ಲಿಯೂ, ಭಜಿಸದಿದ್ದವರಲ್ಲಿಯೂ, ಸ್ವಲ್ಪ ಮಾತ್ರವೂ ತಾರತಮ್ಯವನ್ನಿಡದೆ, ಆ ಇಬ್ಬರಲ್ಲಿಯೂ ಉದಾಸೀನರಾಗಿಯೇ

ಇದ್ದು ಬಿಡುವರು. ಇಂತವರಿಗೆ ಸಿನ್ನಸ್ನೇ ನಿದರ್ಶನವೆಂದು ಹೇಳಬಹುದು. ಮೇಲೆಹೇಳಿದ ಈ ಮೂರುಬಗೆಯವರಲ್ಲಿರುವ ಗುಣದೋಷತಾರತಮ್ಯ ವನ್ನು ನಮಗೆ ಚೆನ್ನಾಗಿ ವಿವರಿಸಿತಿಳಿಸಬೇಕು" ಎಂದರು. ಆಗ ಕೃಷ್ಣನು ತನ್ನನ್ನು ಹಂಗಿಸುವುಸುವುದಕ್ಕಾಗಿಯೇ ಅವರು ಈ ಪ್ರಶ್ನೆಯನ್ನು ಮಾಡು ತ್ತಿರುವರೆಂದು ತಿಳಿದು, ಅವರನ್ನು ಕುರಿತು "ಓ ಸಖಿಯರ? ಈ ವಿಷಯ ದಲ್ಲಿ ನಾನು ಹೇಳಬೇಕಾದುದೇನು? ಇದು ನಿಮಗೂ ತಿಳಿದ ವಿಷಯವೇ! ತ ನ್ನನ್ನು ಭಜಿಸಿದವರಿಗೆಮಾತ್ರ ಅನುಕೂಲರಾಗಿ ನಡೆಯತಕ್ಕವರನ್ನು ಸ್ವ ಪ್ರಯೋಜನಪರರೆಂಡೇ ಹೇಳಬೇಕು ! ಅದರಲ್ಲಿ ತಾವು ಮತ್ತೊಬ್ಬರಿಂದ ಪಡೆದ ಪ್ರಯೋಜನಕ್ಕೆ ಪ್ರತಿಪ್ರಯೋಜನವನ್ನು ಮಾಡಿದಂತಾಗುವುದೇ ಹೊರತು, ಅದನ್ನು ಸ್ನೇಹವೆಂದಾಗಲಿ, ಧರ್ಮಬುದ್ಧಿಯೆಂದಾಗಲಿ ಹೇಳು ವುದಕ್ಕಿಲ್ಲ ! ಈ ವಿಧವಾದ ಪರಸ್ಪರಾನುಕೂಲ್ಯವು, ಅವರವರ ಪ್ರಯೋ ಜನಾರ್ಥವಾಗಿಯೇ ಹೊರತು ಬೇರೆಯಲ್ಲ! ತಂದೆಯು ಮಕ್ಕಳಲ್ಲಿ ಹೇಗೋ ಹಾಗೆ, ಯಾರು ಸಹಜವಾದ ದಯಾಗುಣವುಳ್ಳವರಾಗಿ, ತಮ್ಮನ್ನು ಭಜಿಸ ದಿದ್ದವರಿಗೂ ಕ್ಷೇಮಚಿಂತಕರಾಗಿ ವರ್ತಿಸುವರೋ, ಅಂತವರೇ ಉತ್ತಮರು! ಅದನ್ನು ನಿರ್ದುಷ್ಟವಾದ ಧರ್ಮವೆಂದೂ. ಭೂತದಯೆಯೆಂದೂ ಹೇಳಬಹು ದು. ಬೇರೆಕೆಲವರು ತಮ್ಮನ್ನು ಅನುವರ್ತಿಸಿದವರಿಗೂ ತಾವು ಅನು ಕೂಲರಾಗಿರಲಾರರು. ಇಂತವರಿಂದ ಇತರರಿಗೆ ಉಪಕಾರವಿಲ್ಲವೆಂದು ಹೇ ಳಬೇಕಾದುದೇನು ? ಇಂತವರನ್ನು ಕೇವಲ ಆತ್ಮಪೋಷಣಪರರೆಂದೂ, ವಿಷಯಾಸಕ್ತಿಯಲ್ಲಿ ಮುಳುಗಿದವರೆಂದೂ, ಕೃತಘ್ನರೆಂದೂ, ಗುರುದ್ರೋ ಹಿಗಳೆಂದೂ ಹೇಳುವುದರಲ್ಲಿ ಸಂದೇಹವೇನೂ ಇಲ್ಲ ! ಆದರೆ ಓ ಸಖಿಯರೆ! ನೀವು ನನ್ನನ್ನೂ ಆ ಕೋಟೆಗೆ ಸೇರಿಸಿದಿರಲ್ಲವೆ ? ನೀವು ಹೇಳಿದಂತೆ ನ ನ್ನನ್ನು ಭಜಿಸಿದವರಿಗೂ ನಾನು ಅನುಕೂಲನಲ್ಲದಂತೆ ಔದಾಸೀನ್ಯವನ್ನು ತೋರಿಸುವುದೇನೋ ವಾಸ್ತವವೇ! ಆದರೆ ಅದು ನನ್ನಲ್ಲಿ ಕೃತಜ್ಞತೆಯಿಲ್ಲ ದುದರಿಂದಲ್ಲ! ಅವರಿಗೆ ಉಪಕಾರಮಾಡಬೇಕೆಂಬ ಬುದ್ಧಿಯಿಂದಲೇ ನಾ ನು ಹಾಗೆ ಮಾಡುವೆನು. ಹೇಗೆಂದು ಕೇಳುವಿರಾ ! ನನ್ನನ್ನು ಭಜಿಸತಕ್ಕ ಪ್ರಾಣಿಗಳಿಗೂ ನಾನು ಗೋಚರಿಸದಿದ್ದರೆ, ಹಣವನ್ನು ಕಳೆದುಕೊಂಡ ಪು

ರುಷನು, ಅನವರತವೂ ಆ ಹಣದ ಚಿಂತೆಯಿಂದಲೇ ಕಳವಳಿಸುತ್ತ, ಬೇರೊಂದನ್ನೂ ತಿಳಿಯದಿರುವಂತೆ, ಅವರು ನನ್ನನ್ನೇ ಎಡೆಬಿಡದೆ ಧ್ಯಾನಿಸುತ್ತಿರುವಂತಾಗುವುದು. ಹೀಗೆ ನನ್ನ ವಿಷಯವಾಗಿ ಅವರಿಗೆ ಅವಿಚ್ಛಿನ್ನವಾದ ಭಾವನೆಯುಂಟಾಗಬೇಕೆಂಬುದಕ್ಕಾಗಿಯೇ, ನಾನು ಅವರಿಗೆ ಗೋಚರಿಸದಿರುವೆನು. ಇದಕ್ಕೆ ಈಗ ನೀವೇ ನಿದರ್ಶನವೆಂದು ತಿಳಿಯಿರಿ! ಈಗ ನೀವು ನನ್ನ ವಿಷಯವಾದ ಚಿಂತೆಯಿಂದ ಲೋಕಮರ್ಯಾದೆಯನ್ನು ಮರೆತಿರಿ! ವೇದವಿಹಿತಗಳಾದ ಧರ್ಮಾಧರ್ಮಗಳನ್ನೂ ಉಪೇಕ್ಷಿಸಿದಿರಿ! ನಿಮ್ಮ ಪತಿಪುತ್ರಾದಿಬಂಧುಗಳನ್ನೂ ಅಲಕ್ಷ್ಯಮಾಡಿ ಬಂದಿರಿ! ಇದರಿಂದಲ್ಲವೇ ನೀವು ನನ್ನನ್ನು ಎಡೆಬಿಡದೆ ಧ್ಯಾನಿಸುತ್ತಿರುವಂತಾಯಿತು. ಹೀಗೆ ಪರೋಕ್ಷದಲ್ಲಿ ನನ್ನನ್ನು ಸ್ಮರಿಸುತ್ತಿರುವವರಿಗೆ, ನಾನೂ ಪರೋಕ್ಷದಲ್ಲಿದ್ದೇ ಉತ್ತಮಫಲವನ್ನು ಕೊಡುವೆನು. ನಿಮಗೆ ನನ್ನ ಧ್ಯಾನವು ನಿಶ್ಚಲವಾಗಿರಬೇಕೆಂದೇ ನಾನು ಇದುವರೆಗೆ ನಿಮಗೆ ಕಣ್ಮರೆಯಾಗಿದ್ದೆನು. ಆದುದರಿಂದ ನಿಮ್ಮ ಶ್ರೇಯಸ್ಸಿಗಾಗಿಯೇ ಕಣ್ಮರೆಯಾಗಿದ್ದ ನನ್ನ ವಿಷಯದಲ್ಲಿ ನೀವು ಕೋಪಿಸಬಾರದು! ಓ ಪ್ರಿಯಸಖಿಯರೆ! ನಿಷ್ಕಪಟವಾಗಿ ನನ್ನನ್ನು ಇದುವರೆಗೆ ಭಜಿಸುತಿದ್ದ ನಿಮಗೆ, ನಿಮ್ಮ ಭಕ್ತಿಗೆ ತಕ್ಕಂತೆ ಪ್ರತ್ಯುಪಕಾರವನ್ನು ಮಾಡುತ್ತಿರಬೇಕೆಂದರೆ, ಬ್ರಹ್ಮನ ಆಯುಃಕಾಲದವರೆಗೆ ಮಾಡಿದರೂ ತೀರಲಾರದು. ಇನ್ನು ಈ ಮನುಷ್ಯಾಯುಸ್ಸಿನಿಂದ ತೀರಿಸಬಲ್ಲೆನೆ? ಇದೋ! ನಿಮಗೆ ಈಗ ನಾನು ಅನುಗ್ರಹಿಸುವುದೇನೆಂದರೆ, ನೀವು ಗೃಹಾದಿಗಳೆಂಬ ಸಂಸಾರದ ತೊಡಕುಗಳನ್ನು ಕಿತ್ತುಹಾಕಿ, ಒಂದೇ ಮನಸ್ಸಿನಿಂದ ನನ್ನನ್ನು ಭಜಿಸಿದಿರಲ್ಲವೆ? ಆ ಸಂಸಾರಪಾಶವು ತಿರುಗಿ ನಿಮ್ಮನ್ನು ಬಂಧಿಸದಂತೆ ಎಂದೆಂದಿಗೂ ಬಿಟ್ಟು ಹೋಗಲಿ!" ಎಂದನು. ಇದು ಮೂವತ್ತೆರಡನೆಯ ಅಧ್ಯಾಯವು.

---

### { ಪುಳಿನಕ್ರೀಡೆ, ಜಲಕ್ರೀಡೆ, ವನಕ್ರೀಡೆ ಮುಂತಾದ ವಿನೋದಗಳು. }

ರಾಜಾ! ಕೇಳು! ಭಗವಂತನಾದ ಕೃಷ್ಣನು ಹೇಳಿದ ಈ ಮಧುರವಾಕ್ಯಗಳನ್ನು ಕೇಳಿ, ಗೋಪಿಯರು, ಅವನ ದೇಹಸ್ಪರ್ಶಮಾತ್ರದಿಂದ, ತ

ನ್ಮ ಮನಸ್ಸಿನಲ್ಲಿದ್ದ ವಿರಹತಾಪವನ್ನು ನೀಗಿದರು ! ಆಮೇಲೆ ಕೃಷ್ಣನು ಬಹುಕಾಲದಿಂದ ತನ್ನನ್ನೇ ಅನುವರ್ತಿಸುತ್ತಿದ್ದು, ಈಗ ತನ್ನ ದರ್ಶನದಿಂದ ಸಂತುಷ್ಟರಾದ ಆ ಗೋಪಕನ್ಯೆಯರೊಡನೆ * ರಾಸಕ್ರೀಡೆಯೆಂಬ ಒಂದು ಬಗೆಯ ನರ್ತನವನ್ನಾರಂಭಿಸಿದನು. ಆ ಸ್ತ್ರೀಯರೆಲ್ಲರೂ ಒಬ್ಬರಿಗೊಬ್ಬರಿಗೆ ಕೈಗಳನ್ನು ಪೋಣಿಸಿಕೊಂಡು ಮಂಡಲಾಕಾರವಾಗಿ ನಿಂತರು. ಆ ಭಗವಂತನು ವಿಚಿತ್ರಶಕ್ತಿಯುಳ್ಳವನಾದುದರಿಂದ, ತಾನೂ ಅನೇಕಾಕೃತಿಗಳನ್ನು ತಾಳಿ,ಇಬ್ಬಿಬ್ಬರು ಗೋಪಿಯರನಡುವೆ, ಒಬ್ಬೊಬ್ಬ ಕೃಷ್ಣನಾಗಿ, ತನ್ನ ಎರಡು ತೋಳುಗಳಿಂದಲೂ, ತನ್ನ ಎರಡು ಪಕ್ಕಗಳಲ್ಲಿರುವ ಗೋಪಿಯರ ಕಂಠವನ್ನಪ್ಪಿ ನಿಂತನು. ಆಗ ಆ ಗೋಪಸ್ತ್ರೀಯರಲ್ಲಿ ಒಬ್ಬೊಬ್ಬಳಿಗೂ, "ಕೃಷ್ಣನಿಗೆ ತನ್ನೊಬ್ಬಳಲ್ಲಿಯೇ ವಿಶೇಷಪ್ರೀತಿಯಿರುವುದರಿಂದ, ಪಕ್ಕದಲ್ಲಿದ್ದು, ತನ್ನನ್ನೇ ಎಡೆಬಿಡದೆ ಆಲಿಂಗಿಸಿಕೊಂಡಿರುವ"ನೆಂಬ ಭಾವವು ಹುಟ್ಟಿತು. ಇಷ್ಟರಲ್ಲಿ ಈ ವಿನೋದವನ್ನು ನೋಡುವುದಕ್ಕಾಗಿ, ಆಕಾಶದಲ್ಲಿ ಅನೇಕದೇವದಂಪತಿಗಳು ವಿಮಾನಾರೂಢರಾಗಿ ಬಂದು ನೆರೆದರು. ಎಲ್ಲರೂ ಕೃಷ್ಣನ ಈ ವಿಚಿತ್ರಲೀಲೆಯನ್ನು ಆಶ್ಚರ್ಯದಿಂದ ಸ್ತಬ್ಧರಾಗಿ ನೋಡುತ್ತಿದ್ದರು. ದೇವದುಂದುಭಿಗಳು ಮೊಳಗಿದುವು. ಕೃಷ್ಣನ ಮೈಮೇಲೆ ಪುಷ್ಪವೃಷ್ಟಿಗಳು ಬಿದ್ದುವು. ಗಂಧರ್ವದಂಪತಿಗಳು ಆ ಕೃಷ್ಣನ ನಿರ್ಮಲವಾದ ಕೀರ್ತಿಯನ್ನು ಗಾನಮಾಡುತಿದ್ದರು. ಇತ್ತಲಾಗಿ ಕೃಷ್ಣನ ಕೊರಲನ್ನಪ್ಪಿಕೊಂಡು ಮಂಡಲಾಕಾರವಾಗಿ ನಿಂತಿದ್ದ ಗೋಪಿಯರೆಲ್ಲರೂ, ಸಂತೋಷದಿಂದ ಕೈಬಳೆ, ಕಾಲಂದುಗೆ, ನಡುಗೆಜ್ಜೆ ಮುಂತಾದ ಆಭರಣಗಳ ಘುಲ್ಘುಲಧ್ವನಿಯೊಡನೆ ನರ್ತಿಸಲಾರಂಭಿಸಿದರು. ಆ ಗೋಪಿಯರ ನಡುನಡುವೆ ಕೃಷ್ಣನೂ ನಿಂತು ನರ್ತಿಸುತ್ತಿರುವಾಗ, ಆ ರಾಸಗೋಷ್ಠಿಯು, ಬಂಗಾರದ ಕಿರುಗೆಜ್ಜೆಗಳ ನಡುನಡುವೆ ನೀಲರತ್ನವನ್ನು ಪೋಣಿಸಿ ಮಾಡಿದ ರತ್ನಹಾರದಂತೆ ಕಾಣುತಿತ್ತು. ಆಗ ಗೋಪಸ್ತ್ರೀಯರು ಕಾಲುಗಳನ್ನು ಜೆಗ್ಗುಹಾಕುವುದು,ಕೈಗಳನ್ನಾಡಿಸುವುದು, ಮುಗುಳ್ನಗೆಯೊಡನೆ ಹುಬ್ಬನ್ನು ಕುಣಿಸುವುದು, ಸಣ್ಣ

---

* ರಾಸಕ್ರೀಡೆಯೆಂದರೆ ಅನೇಕನರ್ತಕನರ್ತಕಿಯರು ಒಟ್ಟಾಗಿ ಸೇರಿ ನಡೆಸತಕ್ಕ ಒಂದುಬಗೆಯ ನರ್ತನವು.

ನಡುವು ಮುರಿದುಬಿಳುವಂತೆ ಬಗ್ಗುವುದು, ಈ ವಿಧವಾದ ಹಾವ ಭಾವ ವಿಲಾಸಗಳನ್ನು ತೋರಿಸುತ್ತ ನರ್ತಿಸುತ್ತಿರುವಾಗ, ಅವರ ಜಗ್ಗುವ ಸ್ತನಗಳೂ, ಕೆನ್ನೆಯಲ್ಲಿ ತೂಗಾಡುವ ಕಿವಿಯೋಲೆಗಳೂ, ಮುಖದಲ್ಲಿ ಬೆವರೂ, ಬಿಚ್ಚಿದ ತುರುಬೂ, ಸಡಿಲಿದ ಡಾಬೂ, ಇವೆಲ್ಲವೂ ಅವರಿಗೆ ಒಂದುಬಗೆಯ ಅಪೂರ್ವಶೋಭೆಯನ್ನು ಬೀರುತಿದ್ದುವು. ಅವರೆಲ್ಲರೂ ಕೃಷ್ಣನೊಡನೆ ಕಲೆತು ಮಂಡಲಾಕಾರವಾಗಿ ಕುಣಿಯುವಾಗ, ಮೇಘಮಂಡಲದಲ್ಲಿ ಕಾಣುವ ಬಳ್ಳಿಮಿಂಚುಗಳನ್ನು ಹೋಲುತಿದ್ದರು. ಮತ್ತು ಅವರು ಕೃಷ್ಣನ ದೇಹಸ್ಪರ್ಶದಿಂದ ಆನಂದಪರವಶರಾಗಿ ನಾನಾರಾಗಗಳಿಂದ ಆತನ ಗುಣಗಳನ್ನು ಹಾಡುತ್ತಿರುವಾಗ, ಅವರ ಗಾನಧ್ವನಿಯು ಸಮಸ್ತವಿಶ್ವವನ್ನೂ ವ್ಯಾಪಿಸುವಂತೆ ಕೇಳಿಸುತಿತ್ತು. ಆಗ ಆಸ್ತ್ರೀಯರಲ್ಲಿ ಒಬ್ಬಸುಂದರಿಯು, ಕೃಷ್ಣನೊಡನೆ ಸಮಾನವಾಗಿ ಹಾಡುವುದಕ್ಕೆ ತೊಡಗಿ, ಅಸಂಕೀರ್ಣವಾದ ಶುದ್ಧಸ್ವರಜಾತಿಗಳನ್ನು ಹಿಡಿದು, ಧ್ರುವತಾಳದೊಡನೆ ಹಾಡುತಿದ್ದಳು. ಇದನ್ನು ಕೇಳಿ ಕೃಷ್ಣನು ಸಂತೋಷದಿಂದ “ಭಲೆ! ಶಹಬಾಸ್” ಎಂದು ಅವಳನ್ನು ಕೊಂಡಾಡಿ ಪ್ರೋತ್ಸಾಹಿಸಿದಾಗ, ಅವಳಿಗೆ ಮತ್ತಷ್ಟು ಉತ್ಸಾಹವು ಹುಟ್ಟಿ, ಇನ್ನೂ ಉಚ್ಚಸ್ಥಾಯಿಯನ್ನು ಹಿಡಿದು ಹಾಡುವುದಕ್ಕೆ ತೊಡಗಿದಳು. ಆಗ ಕೃಷ್ಣನು, ಅವಳ ಮನಸ್ಸಂತೋಷಾರ್ಥವಾಗಿ, ಆಕೆಯ ಸ್ವರಗತಿಯನ್ನೇ ತಾನೂ ಹಿಡಿದು. ಉಚ್ಚಸ್ಥಾಯಿಯಿಂದ ಹಾಡತೊಡಗಿ, ಆ ವಿಧವಾಗಿಯೇ ಅವಳನ್ನು ಗೌರವಿಸಿದನು. ಮತ್ತೊಬ್ಬಳು ತನ್ನ ನರ್ತನಸಂಭ್ರಮದಲ್ಲಿ, ಕಡಲಿದ ಪುಷ್ಪಾಭರಣಗಳುಳ್ಳವಳಾಗಿ, ಬಹಳ ಆಯಾಸಪಟ್ಟಂತೆ ನಟಿಸುತ್ತ, ಸಮೀಪದಲ್ಲಿದ್ದ ಕೃಷ್ಣನಭುಜದಮೇಲೆ ಕೈಯೂರಿನಿಂತು, ಅದೇ ನೆವದಿಂದ ಅವನ ದೇಹಾಲಿಂಗನ ಸೌಖ್ಯವನ್ನನುಭವಿಸಿದಳು. ಮತ್ತೊಬ್ಬಳು, ತನ್ನ ಹೆಗಲಮೇಲೆ ಕೃಷ್ಣನು ಕೈಯಿಟ್ಟು ನಿಂತಿದ್ದಾಗ, ಉತ್ಪಲಮಾಲಿಕೆಯಿಂದಲೂ, ಚಂದನಾನುಲೇಪನದಿಂದಲೂ ಸುವಾಸಿತವಾದ ಆ ಕೃಷ್ಣನ ತೋಳನ್ನು ಪ್ರೀತಿಯಿಂದಾಘ್ರಾಣಿಸಿ, ಸಂತೋಷದಿಂದ ಪುಳಕಿತಗಾತ್ರಳಾಗಿ, ಆಗಾಗ ಅದನ್ನು ಮುತ್ತಿಕ್ಕುತಿದ್ದಳು. ಮತ್ತೊಬ್ಬಳು ಆ ನರ್ತನಕಾಲದಲ್ಲಿ ತೂಗಾಡುವ

ಕಿವಿಯೋಲೆಗಳ ಕಾಂತಿಯಿಂದ ಥಳಥಳಿಸುತ್ತಿರುವ ತನ್ನ ಕೆನ್ನೆಯನ್ನು ಕೃಷ್ಣನ ಕೆನ್ನೆಗೆ ಸೋಕಿಸಿ ನಿಲ್ಲಲು, ಕೃಷ್ಣನು, ತನ್ನ ಬಾಯ್ದಂಬುಲವನ್ನು ಅವಳ ಬಾಯಿಗೆ ಕೊಟ್ಟು, ಅವಳನ್ನು ಮನ್ನಿಸಿದನು. ಬೇರೊಬ್ಬಳು ಕಾಲಂದುಗೆ, ಕಾಂಚೀದಾಮ, ಮೊದಲಾದ ಆಭರಣಗಳ ಘುಲ್ಘುಲಧ್ವನಿಯೊಡನೆ ಗಾನನರ್ತನಗಳನ್ನು ಮಾಡುತ್ತ, ಬಹಳವಾಗಿ ಬಳಲಿ, ಪಕ್ಕದಲ್ಲಿದ್ದ ಕೃಷ್ಣನ ಕೈಯನ್ನು ತೆಗೆದು ತನ್ನ ಸ್ತನದಮೇಲಿಟ್ಟುಕೊಂಡಳು. ಇವರಂತೆಯೇ ಇತರಗೋಪಿಯರೆಲ್ಲರೂ ಸಾಕ್ಷಾಲ್ಲಕ್ಷ್ಮೀದೇವಿಯೊಬ್ಬಳಿಗೇ ಏಕಾಂತವಲ್ಲಭನಾದ ಆ ಶ್ರೀಕೃಷ್ಣನು ತಮ್ಮ ಕಂಠವನ್ನಪ್ಪಿ ನಿಂತಿದ್ದಾಗ, ಗಾನನರ್ತನಗಳಿಂದ ಅವನನ್ನು ಸಂತೋಷಗೊಳಿಸುತ್ತ, ತಮ್ಮತಮ್ಮ ಮನಸ್ಸಂತೋಷವಿದ್ದಂತೆ ಅವನೊಡನೆ ಆಟವಾಡುತಿದ್ದರು. ಆಗ ಗೋಪಸ್ತ್ರೀಯರ ಸಂಭ್ರಮವನ್ನು ಕೇಳಬೇಕೆ ? ಕಿವಿಯಮೇಲಿನ ನೈದಿಲೆಹೂಗಳು ಅಲುಗುತ್ತಿರುವುವು ! ಕೆನ್ನೆಯಮೇಲೆ ಮುಂಗುರುಳು ತೂಗಾಡುತ್ತಿರುವುವು ! ಮುಖದಲ್ಲಿ! ಬೆವರು ತೊಟ್ಟಿಕ್ಕುತ್ತಿರುವುದು ! ತಲೆಯಲ್ಲಿ ಮುಡಿದ ಹೂಗಳು ಉದುರಿಬೀಳುತ್ತಿರುವುವು ! ಇದೊಂದನ್ನೂ ತಿಳಿಯದೆ, ಆ ಗೋಪಿಯರು, ಸಂತೋಷಪರವಶರಾಗಿ ಕೃಷ್ಣನೊಡನೆ ನರ್ತಿಸುತ್ತಿದ್ದರು ! ಅವರ ದೇಹಗಂಧಕ್ಕಾಗಿ ಬಂದು ಮುತ್ತಿದ ಭ್ರಮರಝುಂಕಾರಗಳೂ, ಅವರ ಆಭರಣಗಳ ಘುಲ್ಘುಲಧ್ವನಿಯೂ, ಅವರ ನರ್ತನಕ್ಕೆ ಹಿಮ್ಮೇಳದ ಗಾನವಾದ್ಯಗಳಾದುವು. ಆ ಗೋಪಸ್ತ್ರೀಯರ ಉಲ್ಲಾಸಕ್ಕೆ ತಕ್ಕಂತೆ ಕೃಷ್ಣನೂಕೂಡ, ಆಗಾಗ ಅವರನ್ನು ಆಲಿಂಗಿಸುವುದು, ಕೈಯಿಂದ ಸ್ಪರ್ಶಿಸುವುದು, ಅನುರಾಗಪೂರ್ವಕವಾಗಿ ನೋಡುವುದು, ಪ್ರೇಮಸೂಚಕವಾದ ಲೀಲೆಗಳನ್ನು ನಟಿಸುವುದು, ಮಂದಹಾಸದಿಂದ ನಗುವುದು, ಈ ವಿಧವಾದ ವಿನೋದಗಳಿಂದ ಅವರ ಮನಸ್ಸನ್ನು ಸಂತೋಷಗೊಳಿಸುತ್ತ, ಸಣ್ಣಮಕ್ಕಳು ಕನ್ನಡಿಯಲ್ಲಿ ಕಾಣುವ ತಮ್ಮ ಪ್ರತಿಬಿಂಬಗಳೊಡನೆ ಆಟವಾಡುವಂತೆ, ತನಗೆ ಆತ್ಮಭೂತರಾದ ಆ ಗೊಲ್ಲಿತಿಯರೊಡನೆ ಆಟವಾಡುತಿದ್ದನು. ಆಗ ಆ ಸ್ತ್ರೀಯರ ಆನಂದವನ್ನು ಕೇಳಬೇಕೆ ?, ಭಗವಂತನ ಶರೀರಸ್ಪರ್ಶದಿಂದುಂಟಾದ ಸಂತೋಷವು, ಅವರನ್ನು ಮೈಮರೆಯುವಂತೆ ಮಾಡಿತು! ಅವರ

ಇಂದ್ರಿಯಗಳು ಪರವಶವಾದುವು. ಬಿಚ್ಚಿಹೋದ ತಲೆಯನ್ನೂ, ಕದಲಿದ ವಸ್ತ್ರಾಭರಣಗಳನ್ನೂ ತಿಳಿಯದೆ, ಪ್ರಜ್ಞೆಯಿಲ್ಲದವರಂತೆ ಕುಣಿಯುತಿದ್ದರು. ಈ ವಿಧವಾದ ಕೃಷ್ಣನ ಕ್ರೀಡಾವಿಲಾಸಗಳನ್ನು ನೋಡಿ, ಆಕಾಶದಲ್ಲಿ ನೆರೆದಿದ್ದ ದೇವಸ್ತ್ರೀಯರೂಕೂಡ,ಕಾಮವಿಕಾರದಿಂದ ಮೈತಿಳಿಯದಂತಾದರು. ಆ ಶರತ್ಕಾಲದ ರಾತ್ರಿಯಲ್ಲಿ ಗ್ರಹನಕ್ಷತ್ರಗಳೊಡಗೂಡಿದ ಚಂದ್ರನೂ ಇದನ್ನು ನೋಡಿ ಆಶ್ಚರ್ಯಪರವಶನಾದನು. ಭಗವಂತನು ಆತ್ಮಾರಾಮನಾದುದರಿಂದ ಈ ವಿಧವಾದ ವಿನೋದಗಳನ್ನು ಅಪೇಕ್ಷಿಸದವನಾಗಿದ್ದರೂ, ಕೇವಲಲೀಲಾರ್ಥವಾಗಿ, ಅಲ್ಲಿ ಎಷ್ಟುಮಂದಿ ಗೋಪಿಯರಿದ್ದರೋ ಅಷ್ಟೇ ಆಕಾರಗಳನ್ನು ತಾಳಿ ಅವರೊಡನೆ ರಮಿಸುತಿದ್ದನು. ಆ ಸ್ತ್ರೀಯರು ರತಿಕ್ರೀಡೆಗಳಿಂದ ಬಹಳವಾಗಿ ಬಳಲಿದುದನ್ನು ಕಂಡಾಗ, ತಾನಾಗಿಯೇ ಮುಂದೆ ಬಂದು, ಸಮಸ್ತಲೋಕಕ್ಕೂ ಅಭಯಪ್ರದವಾದ ತನ್ನ ಕೈಯಿಂದ ಅವರ ಮುಖದಲ್ಲಿರುವ ಬೆವರನ್ನೊರಸುತಿದ್ದನು. ಹೀಗೆ ಕೃಷ್ಣನ ಕರಸ್ಪರ್ಶದಿಂದ ಪರಮಾನಂದಭರಿತರಾದ ಆ ಗೋಪಿಯರೆಲ್ಲರೂ, ಸುವರ್ಣಕುಂಡಲಗಳ ಮತ್ತು ಮುಂಗುರುಳುಗಳ ಕಾಂತಿಯಿಂದ ಶೋಭಾವಿಶಿಷ್ಟವಾಗಿ, ಅಮೃತಸಮಾನವೆನಿಸಿದ ಮಂದಹಾಸದಿಂದಲೂ, ಅನುರಾಗ ವೀಕ್ಷಣದಿಂದಲೂ, ಆ ಕೃಷ್ಣನನ್ನು ಉಲ್ಲಾಸಗೊಳಿಸುತ್ತ, ಆತನ ಪುಣ್ಯಚರಿತ್ರಗಳನ್ನೇ ಬಾರಿಬಾರಿಗೂ ಗಾನಮಾಡುತಿದ್ದರು. ಓ ರಾಜೇಂದ್ರಾ! ಹೀಗೆ ಬಹಳಹೊತ್ತಿನವರೆಗೆ ಕೃಷ್ಣನೊಡನೆ ಗೋಪಿಯರೆಲ್ಲರೂ ವಿನೋದಿಸಿದಮೇಲೆ, ಅವರಿಗೆ ಕ್ರಮಕ್ರಮವಾಗಿ ದೇಹದಲ್ಲಿ ಬಳಲಿಕೆಯುಂಟಾಯಿತು. ಅದನ್ನು ತಿಳಿದು, ಕೃಷ್ಣನು ಜಲಕ್ರೀಡೆಯಿಂದ ಅವರಿಗೆ ಶ್ರಮಪರಿಹಾರವಾಗುವಂತೆ ಮಾಡಬೇಕೆಂದೆಣಿಸಿ, ಅವರೆಲ್ಲರೊಡನೆ ಯಮುನಾನದಿಯ ಮಡುವಿನಲ್ಲಿಳಿದನು. ಆಗ ಗೋಪಸ್ತ್ರೀಯರ ಸ್ತನಕುಂಕುಮಪರಾಗದಿಂದ ಮಿಶ್ರಿತವಾದ ತನ್ನ ಪುಷ್ಪಮಾಲಿಕೆಯ ವಾಸನೆಗಾಗಿ, ಗಂಧರ್ವರಂತೆ ಭ್ರಮರಗಳು ತನ್ನನ್ನು ಸುತ್ತಿ ಹಿಂಬಾಲಿಸಿಬರುತ್ತಿರಲು, ವಪ್ರಕ್ರೀಡೆಯನ್ನು ಮಾಡಿದಮೇಲೆ ಆಯಾಸಪರಿಹಾರಾರ್ಥವಾಗಿ ತನ್ನ ಹೆಣ್ಣಾನೆಗಳೊಡನೆ ನೀರಿಗಿಳಿಯುವ ಗಜರಾಜನಂತೆ, ಆ ಸ್ತ್ರೀಯರೊಡನೆ ಜಲಕ್ರೀಡೆಗಾಗಿ ನೀರಿ

ನಲ್ಲಿಳಿದನು. ಆತ್ಮಾನುಭವದಿಂದಲೇ ಆನಂದಿಸತಕ್ಕ ಆ ಪರಮಪುರುಷನು,ಜಲಕ್ರೀಡೆಗಾಗಿ ಆಶೆಪಟ್ಟವನಂತೆ ನಟಿಸುತ್ತ, ಗಜರಾಜಲೀಲೆಯಿಂದ ನೀರಿನಲ್ಲಿಳಿದು, ಅಲ್ಲಿ ಆಯಾ ಗೋಪಸ್ತ್ರೀಯರ ಉತ್ಸಾಹಕ್ಕೆ ತಕ್ಕಂತೆ, ನೀರೆರಚಿಡವರಮೇಲೆ ನೀರೆರಚುವುದು! ನಗುವವರೊಡನೆ ನಗುವುದು ! ಹಾಸ್ಯಮಾಡುವವರೊಡನೆ ಹಾಸ್ಯಮಾಡುವುದು? ಹೀಗೆ ಅವರವರ ಚೇಷ್ಟೆಗೆ ತಕ್ಕಂತೆ ತಾನೂ ನಟಿಸುತ್ತ, ಆ ಸ್ತ್ರೀಯರ ಮನಸ್ಸನ್ನು ಸಂತೋಷಗೊಳಿಸುತಿದ್ದನು. ಈ ಭಗವಂತನ ಲೀಲೆಯನ್ನು ನೋಡಿ ವಿಮಾನಚಾರಿಗಳಾದ ದೇವತೆಗಳು ಪುಷ್ಪವರ್ಷವನ್ನು ಕರೆದರು. ಈ ವಿನೋದಗಳಿಂದ ಕೃಷ್ಣನು ಜಲಕ್ರೀಡೆಯನ್ನೂ ಮುಗಿಸಿಕೊಂಡು, ಆಮೇಲೆ ಆ ಗೋಪಿಯರೆಲ್ಲರನ್ನೂ ಯಮುನಾತೀರದಲ್ಲಿ ಮನೋಹರವಾದ ಒಂದಾನೊಂದು ಉಪವನಕ್ಕೆ ಕರೆತಂದನು. ಸ್ಥಲ ಜಲ ಪುಷ್ಪಗಳ ಸುವಾಸನೆಯನ್ನು ನಾನಾಕಡೆಯಿಂದ ತಂದು ಹರಡುತ್ತಿರುವ ತಂಗಾಳಿಯಿಂದ ಆ ವನಪ್ರದೇಶವೆಲ್ಲವೂ ಘುಮುಘುಮಿಸುತ್ತಿರಲು, ಹೆಣ್ಣಾನೆಗಳೊಡಗೂಡಿದ ಮದಬಾನೆಯಂತೆ ಕೃಷ್ಣನು, ಗೋಪಸ್ತ್ರೀಯರೊಡನೆ ಅಲ್ಲಲ್ಲಿ ಸಂಚರಿಸುತಿದ್ದನು. ಅಲ್ಲಿ ಕೃಷ್ಣನು ಚಂದ್ರಿಕೆಯಿಂದ ಮನೋಹರವಾದ ಆ ಶಾರದರಾತ್ರಿಗಳೆಲ್ಲವನ್ನೂ, ಗೋಪಸ್ತ್ರೀಯರಿಂದ ಪರಿವೃತನಾಗಿ ವಿನೋದದಿಂದ ಕಳೆದನು. ಕಾವ್ಯಗಳಲ್ಲಿ ವರ್ಣಿಸಲ್ಪಡುವ ಸಮಸ್ತರಸಗಳಿಗೂ ತಾನೇ ಆಶ್ರಯಸ್ಥಾನವೆನಿಸಿಕೊಂಡ ಆ ಕೃಷ್ಣನು, ಅಷ್ಟುಮಂದಿ ಸ್ತ್ರೀಯರೊಡನೆ ವಿನೋದದಿಂದ ವಿಹರಿಸುತಿದ್ದರೂ, ಸತ್ಯಸಂಕಲ್ಪನಾದುದರಿಂದ, ತನ್ನ ವೀರ್ಯಚ್ಯುತಿಗೆ ಅವಕಾಶಕೊಡದೆ, ತನ್ನಲ್ಲಿಯೇ ಅಡಗಿಸಿಟ್ಟುಕೊಂಡು, ಆ ರಾತ್ರಿಗಳನ್ನು ಕಳೆದನು."ಎಂದನು. ಆಗ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು "ಓ ಮುನೀಂದ್ರಾ! ನೀನು ಇದುವರೆಗೆ ಹೇಳಿದ ವಿಷಯಗಳನ್ನು ಕೇಳಿ ನನ್ನ ಮನಸ್ಸಿಗೆ ಒಂದು ದೊಡ್ಡಶಂಕೆಯುಂಟಾಗಿರುವುದು. ಭಗವಂತನು ಲೋಕದಲ್ಲಿ ಅಧರ್ಮವನ್ನಡಗಿಸಿ, ಧರ್ಮಸಂಸ್ಥಾಪನವನ್ನು ಮಾಡುವುದಕ್ಕಾಗಿಯೇ ತನ್ನ ಅಂಶಭೂತನಾದ ಬಲರಾಮನೊಡನೆ ಕೃಷ್ಣರೂಪದಿಂದವತರಿಸಿದನಲ್ಲವೆ? ಹೀಗೆ ಧರ್ಮಮರ್ಯಾದೆಗಳನ್ನು ತಾನಾಗಿ ನಡೆಸಿತೋರಿ

ಸುವುದಕ್ಕೂ, ಇತರರಿಗೆ ಉಪದೇಶಿಸುವುದಕ್ಕೂ, ಧರ್ಮವಿರೋಧಿಗಳನ್ನು ನಿಗ್ರಹಿಸಿ; ಅದನ್ನು ರಕ್ಷಿಸುವುದಕ್ಕೂ ಅವತಾರವನ್ನೆತ್ತಿದ ಆ ಕೃಷ್ಣನು, ತಾನೇ ಹೀಗೆ ಪರಸ್ತ್ರೀಸ್ಪರ್ಶವೆಂಬ ಶಾಸ್ತ್ರವಿರುದ್ಧವಾದ ಕಾರ್ಯವನ್ನು ಮಾಡುವುದುಚಿತವೆ? ಆತನು ಅವಾಪ್ತಸಮಸ್ತಕಾಮನೆನಿಸಿಕೊಂಡಿದ್ದೂ, ಹೀಗೆ ಅಲ್ಪಸುಖಕ್ಕಾಸೆಪಟ್ಟು, ನಿಂದಿತವಾದ ಕಾರ್ಯವನ್ನೇಕೆ ಮಾಡಿದನು? ಅದನ್ನು ನನಗೆ ತಿಳಿಸಿ, ನನ್ನ ಸಂದೇಹವನ್ನು ಪರಿಹರಿಸಬೇಕು" ಎಂದನು. ಅದಕ್ಕಾ ಶುಕಮುನಿಯು "ರಾಜೇಂದ್ರಾ! ಕೇಳು! ಲೋಕದಲ್ಲಿ* ಯಾರು ಕರ್ಮವಶ್ಯರಾಗಿ ಹುಟ್ಟುವರೋ, ಅವರು ಶಾಸ್ತ್ರವಿಧಿಗಳಿಗೆ ಕಟ್ಟುಬಿದ್ದು ನಡೆಯಬೇಕಾದುದೇ ಉಚಿತವು. ಅಂತವರು ಶಾಸ್ತ್ರವಿರುದ್ಧವಾಗಿ ನಡೆಯುವುದರಿಂದ, ಅವರಿಗೆ ಹಾನಿಯೂ ಉಂಟು. ಕರ್ಮವಶ್ಯರಲ್ಲದವರು, ಶಾಸ್ತ್ರಧರ್ಮವನ್ನತಿಕ್ರಮಿಸಿ ಯಥೇಚ್ಛವಾಗಿ ಪ್ರವರ್ತಿಸಿದುದಕ್ಕೆ ಅನೇಕನಿದರ್ಶನಗಳು ಕಂಡುಬಂದಿವೆ? ಆದರೇನು? ಅಗ್ನಿಯು ಸರ್ವಭಕ್ಷಿಯಾಗಿದ್ದರೂ, ದೋಷಿಯೆನಿಸಿಕೊಳ್ಳನೆ, ಯಾವಾಗಲೂ ಪವಿತ್ರನಾಗಿರುವಂತೆ, ತೇಜಸ್ವಿಗಳಿಗೆ ಅದರಿಂದ ದೋಷವುಂಟಾಗದು. ಕರ್ಮವಶ್ಯರಲ್ಲದವರು ಹೀಗೆ ಮಾಡುವರೆಂದು, ಕರ್ಮಬದ್ಧರಾದವರೂ ಅಂತಹ ಅಕಾರ್ಯಗಳಲ್ಲಿ ಪ್ರವರ್ತಿಸಬಾರದು. ಅಂತಹ ಕಾರ್ಯಗಳನ್ನು ಮನಸ್ಸಿನಿಂದಲೂ ಸ್ಮರಿಸಬಾರದು. ರುದ್ರನು ಹಾಲಾಹಲವೆಂಬ ವಿಷವನ್ನು ಭಕ್ಷಿಸಿ ಜೀರ್ಣಿಸಿಕೊಂಡನೆಂಬ ಧೈರ್ಯದಿಂದ, ಮತ್ತೊಬ್ಬನು ಅವಿವೇಕದಿಂದ ವಿಷವನ್ನು ತಿಂದರೆ, ಆಕ್ಷಣವೇ ಸಾಯುವನಲ್ಲದೆ ಬದುಕುವನೆ? ಪ್ರಭುಗಳು ಬಾಯಿಂದಾಡಿದ ಮಾತು ನಮಗೆ ಪ್ರಮಾಣವೆನಿಸುವುದೇಹೊರತು, ಅವರ ನಡತೆಯು ಪ್ರಮಾಣವಲ್ಲ! . ಅವರ ನಡತೆಗಳಲ್ಲಿ ಅವರ ಮಾತಿಗೆ ಯಾವುದು ವಿರುದ್ಧವಲ್ಲವೋ, ಅದನ್ನೇ ನಾವು ಪ್ರಮಾಣವಾಗಿ ತೆಗೆದುಕೊಳ್ಳಬೇಕು. ಆದುದರಿಂದ ಲೋ

---

* ದೇಹಾಭಿಮಾನವೆಂಬುದು, ಪೂರ್ವಪೂರ್ವಕರ್ಮದಿಂದುಂಟಾಗಿ, ಉತ್ತರೋತ್ತರಕರ್ಮಕ್ಕೆ ಮೂಲವಾಗುವುದು. ಅದಿಲ್ಲದಿದ್ದವರಿಗೆ ಕರ್ಮವಶ್ಯತ್ವವಿಲ್ಲ, ಕರ್ಮವಶ್ಯತ್ವವಿಲ್ಲದವರಿಗೆ ಶಾಸ್ತ್ರವಶ್ಯತ್ವವಿಲ್ಲ. ಶಾಸ್ತ್ರವಶ್ಯತ್ವವಿಲ್ಲದವರಿಗೆ ಪುಣ್ಯ ಪಾಪ ಮೂಲಕವಾದ ಸುಖದುಃಖಗಳೂ ಇಲ್ಲವೆಂದು ಭಾವವು.

ಕದಲ್ಲಿ ಎಷ್ಟೇ ಬುದ್ಧಿವಂತನಾಗಿದ್ದರೂ, ಹಿರಿಯರ ನಡತೆಯಲ್ಲಿ ಅವರ ಮಾತಿಗೆ ವಿರುದ್ಧವಲ್ಲದುದನ್ನು ಮಾತ್ರ ನಡೆಸಬಹುದು. ಅವರ ಮಾತಿಗೆ ವಿರುದ್ಧವಾದ ಆಚರಣೆಯನ್ನು ನಡೆಸಬಾರದು. ತೇಜಸ್ವಿಗಳಾದವರಿಗೆ, ಇಹಲೋಕದಲ್ಲಿ ಸತ್ಕಾರ್ಯವನ್ನು ನಡೆಸುವುದರಿಂದ ಯಾವ ಪುರುಷಾರ್ಥವಾಗಲಿ, ಅಸತ್ಕಾರ್ಯವನ್ನು ನಡೆಸುವುದರಿಂದ ಯಾವ ಹಾನಿಯಾಗಲಿ ಉಂಟಾಗಲಾರದು. ಈ ಶುಭಾಶುಭಗಳೆಲ್ಲವೂ ದೇಹಾಭಿಮಾನಿಗಳಿಗೇಹೊರತು, ಅಹಂಕಾರಮಮಕಾರಗಳನ್ನು ಬಿಟ್ಟವರಿಗೆ, ಅದೊಂದೂ ಇರಲಾರದು. ರಾಜೇಂದ್ರಾ! ಕರ್ಮವಶ್ಯರಲ್ಲದ ಜೀವರಿಗೇ ಹೀಗಿರುವಾಗ, ಸಮಸ್ತಚರಾಚರಗಳಿಗೂ ನಿಯಾಮಕನಾಗಿ, ಸರ್ವೇಶ್ವರನೆನಿಸಿಕೊಂಡ ಆ ಕೃಷ್ಣನಿಗೆ, ಶುಭಾಶುಭಕರ್ಮಗಳಿಂದುಂಟಾಗತಕ್ಕ ಸುಖದುಃಖಸಂಬಂಧವೆಲ್ಲಿಯದು? ಆತನ ಪಾದಾರವಿಂದರೇಣುವನ್ನು ಸೇವಿಸುವುದರಿಂದಲೇ ತೃಪ್ತರಾಗಿ, ಆ ಪಾದಧ್ಯಾನವೆಂಬ ಯೋಗಬಲದಿಂದಲೇ ಕರ್ಮಬಂಧಗಳೆಲ್ಲವನ್ನೂ ನೀಗಿದ ಸನಕಾದಿಮಹರ್ಷಿಗಳುಕೂಡ, ಶಾಸ್ತ್ರವಿಧಿಗಳಿಗೆ ಕಟ್ಟುಬೀಳದೆ ಸ್ವೇಚ್ಛೆಯಿಂದ ನಡೆಯುವುದಕ್ಕೆ ಅಧಿಕಾರವುಳ್ಳವರಾಗಿರುವಾಗ, ಕರ್ಮಸಂಬಂಧವಿಲ್ಲದೆ ಸ್ವೇಚ್ಛೆಯಿಂದಲೇ ಲೀಲಾಮಾನುಷವಿಗ್ರಹವನ್ನು ಧರಿಸಿ ಅವತರಿಸಿರುವ ಆ ಸಾಕ್ಷಾತ್ಪರಮಾತ್ಮನು, ಯಾವ ಕಾರ್ಯವನ್ನು ಮಾಡಿದರೆತಾನೇ ದೋಷವೇನಿರುವುದು? ಪೂರ್ಣಕಾಮನಾದವನಿಗೆ ಈ ಗ್ರಾಮ್ಯಚೇಷ್ಟೆಗಳೇಕೆಂದು ಕೇಳಿದೆಯಲ್ಲವೆ? ಆ ಗೋಪಿಯರಿಗೂ, ಅವರ ಪತಿಗಳಿಗೂ, ಲೋಕದಲ್ಲಿರುವ ಬೇರೆ ಎಲ್ಲಾ ಜೀವವರ್ಗಗಳಿಗೂ, ಯಾವನು ಅಂತರಾತ್ಮನೆನಿಸಿಕೊಂಡು, ಯಾವಾಗಲೂ ಅವರವರ ಹೃದಯದಲ್ಲಿಯೇ ಇರುವನೋ, ಅವನು, ಈಗ ಆ ಗೋಪಿಯರನ್ನು ಮುಟ್ಟಿದನೆಂದರೆ ಅದರಲ್ಲಿ ಹೊಸದೇನಿದೆ? ಸಮಸ್ತಜೀವಿಗಳಿಗೂ ಅಂತರಾತ್ಮನಾಗಿ, ಅವರವರನ್ನು ಆಯಾಕಾರ್ಯದಲ್ಲಿ ನಿಯಮಿಸತಕ್ಕವನೂ ಅವನೇ! ಆಯಾಕಾರ್ಯಗಳಿಗೆ ತಕ್ಕ ಫಲವನ್ನು ಕೊಡತಕ್ಕ ಅಧ್ಯಕ್ಷನೂ ಅವನೇ! ಅದಕ್ಕೆ ಸಾಕ್ಷಿಯಾಗಿದ್ದು ನೋಡತಕ್ಕವನೂ ಅವನೇ! ಹೀಗಿರುವಾಗ ಆ ಪರಮಪುರುಷನು, ಈ ಮನುಷ್ಯದೇಹವನ್ನು ಕೈಕೊಂಡಿರುವುದೂ. ಕೇ

ವಲಲೀಲಾರ್ಥವಾಗಿಯೇಹೊರತು, ಇತರಜೀವರಂತೆ ಸುಖದುಃಖಾದಿ ಭೋಗಗಳನ್ನನುಭವಿಸುವುದಕ್ಕಲ್ಲ! ಕರ್ಮಾಧೀನವಾಗಿ ಬಂದ ದೇಹವುಳ್ಳ ವರಿಗೇ ಸುಖದುಃಖಾನುಭವಗಳೆಲ್ಲವೂ ಸಂಭವಿಸುವುವು. ಭಗವಂತನು ಪೂರ್ಣಕಾಮನಾದುದರಿಂದ, ಅವನು ನಡೆಸಿದ ಈ ಕಾರ್ಯವು ಕಾಮತೃಪ್ತಿಗಾಗಿ ಮಾಡಿದುದಲ್ಲ! ಸುಖಾಪೇಕ್ಷೆಯಿಂದ ನಡೆಸಿದಾಗಲೇ ಇವು ದೋಷಹೇತುವಾಗುವುವು. ಆ ಭಗವಂತನು ಭಕ್ತರನ್ನು ಅನುಗ್ರಹಿಸುವುದಕ್ಕಾಗಿಯೇ ಈ ಮನುಷ್ಯದೇಹವನ್ನು ಧರಿಸಿರುವುದರಿಂದ, ತನ್ನ ಭಕ್ತರಲ್ಲಿ ಯಾರುಯಾರನ್ನು, ಯಾವಯಾವ ವಿಧದಿಂದ ಸಂತೋಷಪಡಿಸಿದರೆ, ಅವರಿಗೆ ತನ್ನಲ್ಲಿ ಮನಸ್ಸು ನಾಟುವುದೋ ಅದಕ್ಕೆ ತಕ್ಕಂತೆಯೇ ಅವರವರ ಮನಸ್ಸನ್ನಾಕರ್ಷಿಸುವನು. ರಾಜೇಂದ್ರಾ! ಮತ್ತೊಂದಾಶ್ಚರ್ಯವನ್ನು ಹೇಳುವೆನು ಕೇಳು! ರಾತ್ರಿಯಲ್ಲಿ ಕೃಷ್ಣನ ವೇಣುಗಾನವನ್ನು ಕೇಳಿದೊಡನೆ, ತಮ್ಮ ಪತಿಪುತ್ರಾದಿಗಳು ತಡೆದರೂ ಕೇಳದೆ, ಮನೆಯನ್ನು ಬಿಟ್ಟು ಹೊರಟುಬಂದ ಆ ಗೋಪಿಯರು, ಬೆಳಗಾಗುವುದಕ್ಕೆ ಸ್ವಲ್ಪಮೊದಲು ಮನೆಗೆ ಬಂದರೂ, ಮನೆಯಲ್ಲಿದ್ದ ಅವರವರ ಪತಿಗಳಿಗೆ ಕೃಷ್ಣನ ಮೇಲಾಗಲಿ, ತಮ್ಮ ಪತ್ನಿಯರಮೇಲಾಗಲಿ ಎಳ್ಳಷ್ಟಾದರೂ ಕೋಪವು ಹುಟ್ಟಲಿಲ್ಲ! ಇದರಕಾರಣವೇನೆಂದು ಬಲ್ಲೆಯಾ? ಆ ಗೋಪಾಲಕರು ಕೃಷ್ಣನ ಮಾಯೆಯಿಂದ ಮೋಹಿತರಾಗಿ, ರಾತ್ರಿಯಲ್ಲವೂ ತಮ್ಮತಮ್ಮ ಪತ್ನಿಯರು ತಮ್ಮ ಪಕ್ಕದಲ್ಲಿಯೇ ಇದ್ದಂತೆ ತಿಳಿಯುತಿದ್ದರು. (ಕೃಷ್ಣನೇ ಅನೇಕಸ್ತ್ರೀರೂಪದಿಂದ ಆ ಗೋಪಾಲಕರ ಪಕ್ಕದಲ್ಲಿದ್ದು, ಅವರಿಗೆ ಕೋಪವು ಹುಟ್ಟದಹಾಗೆ ಮಾಡಿದನೆಂದು ತಿಳಿ!) ಇತ್ತಲಾಗಿ ಗೋಪಿಯರೆಲ್ಲರೂ ಬ್ರಾಹ್ಮಮುಹೂರ್ತವು ಬಂದೊಡನೆ, ಕೃಷ್ಣನು ಮನೆಗೆ ಹೋಗುವಂತೆ ಪ್ರೇರಿಸಿದರೂ, ಅಲ್ಲಿಂದ ಬಿಟ್ಟು ಬರುವುದಕ್ಕೆ ಇಷ್ಟವಿಲ್ಲದೆ, ಕೊನೆಗೆ ನಿರ್ಬಂಧದಿಂದ ತಮ್ಮತಮ್ಮ ಮನೆಗಳಿಗೆ ಬಂದು ಸೇರಿದರು. ರಾಜೇಂದ್ರಾ! ಹೀಗೆ ಕೃಷ್ಣನು ಗೋಪಾಂಗನೆಯರೊಡನೆ ವಿಹರಿಸಿದ ಈ ಚರಿತ್ರವನ್ನು ಯಾವನು ಶ್ರದ್ಧೆಯಿಂದ ಕೇಳುವನೋ, ಅಥವಾ ಮತ್ತೊಬ್ಬರಿಗೆ ಹೇಳುವನೋ, ಅವನು ಆ ಭಗವಂ

ತನಲ್ಲಿ ಸ್ಥಿರಭಕ್ತಿಯನ್ನು ಹೊಂದಿ, ಅಜ್ಞಾನವನ್ನು ನೀಗಿ, ಉತ್ತಮಗತಿಯ ನ್ನೂ ಪಡೆಯುವನು. ಇದು ಮೂವತ್ತುಮೂರನೆಯ ಅಧ್ಯಾಯವು.

---

{ ಸರ್ಪರೂಪದಿಂದಿದ್ದ ಸುದರ್ಶನನೆಂಬ ಗಂಧರ್ವನಿಗೆ ಶಾಪವಿಮೋಚನವಾದುದು. }

ರಾಜೇಂದ್ರಾ ಕೇಳು ! ಆದರಿಂದಾಚೆಗೆ ಒಮ್ಮೆ ನಂದಾದಿಗೋಪಾಲಕರೆಲ್ಲರೂ ಅಂಬಿಕಾವನವೆಂಬ ಶಿವಕ್ಷೇತ್ರಕ್ಕೆ ಯಾತ್ರೆಹೊರಡುವುದಾಗಿ ಉದ್ದೇಶಿಸಿ, ತಮ್ಮತಮ್ಮ ಬಂಡಿಗಳನ್ನು ಕಟ್ಟಿಕೊಂಡು ಪ್ರಯಾಣಹೊರಟರು. ಎಲ್ಲರೂ ಆ ಪುಣ್ಯಸ್ಥಳಕ್ಕೆ ಬಂದು ಸೇರಿ, ಸಮೀಪದಲ್ಲಿದ್ದ ಸರಸ್ವತೀನದಿಯಲ್ಲಿ ಸ್ನಾನಮಾಡಿ, ಪೂಜಾದ್ರವ್ಯಗಳನ್ನು ಸಂಗ್ರಹಿಸಿ, ಪಶುಪತಿಯಾದ ರುದ್ರನನ್ನೂ, ಅಂಬಿಕಾದೇವಿಯನ್ನೂ ಭಕ್ತಿಯಿಂದ ಪೂಜಿಸುತಿದ್ದರು. ಆ ಪಾರ್ವತೀಪರಮೇಶ್ವರರ ಪ್ರೀತಿಗಾಗಿ, ಬ್ರಾಹ್ಮಣರಿಗೆ ಸಮೃದ್ಧವಾಗಿ, ಗೋದಾನ, ಹಿರಣ್ಯದಾನ, ವಸ್ತ್ರದಾನಾದಿಗಳನ್ನು ನಡೆಸಿದರು. ತುಪ್ಪ, ಜೇನು, ಮುಂತಾದ ಮಧುರದ್ರವ್ಯಗಳೊಡನೆ ಯಥೇಚ್ಛವಾಗಿ ಅನ್ನದಾನವನ್ನೂ ಮಾಡಿದರು: ತಾವೆಲ್ಲರೂ ಆ ರಾತ್ರಿಯಲ್ಲಿ ವ್ರತನಿಷ್ಠರಾಗಿ, ಜಲಪಾನವನ್ನುಮಾತ್ರ ಮಾಡಿ, ಆ ಸರಸ್ವತೀನದೀತೀರದಲ್ಲಿಯೇ ವಾಸಮಾಡುತಿದ್ದರು. ರಾಜೇಂದ್ರಾ ! ಆ ಅಂಬಿಕಾವನದಲ್ಲಿ ಒಂದಾನೊಂದು ಹೆಬ್ಬಾವು ಬಹಳಹಸಿವಿನಿಂದ ಬಾಧೆಪಡುತ್ತ, ಆಹಾರಾರ್ಥವಾಗಿ ಅಲ್ಲಲ್ಲಿ ಸಂಚರಿಸುತಿತ್ತು. ಆ ಸರ್ಪವು ದೈವಿಕವಾಗಿ ನಂದಾದಿಗೋಪಾಲಕರಿದ್ದಸ್ಥಳಕ್ಕೆ ಬಂದು, ಅಲ್ಲಿ ಮಲಗಿದ್ದ ನಂದನನ್ನು ಆತುರದಿಂದ ನುಂಗುವುದಕ್ಕೆ ಯತ್ನಿಸಿತು. ಆಗ ಆ ಹಾವಿನ ಬಾಯಿಗೆ ಸಿಕ್ಕಿ ಬಿದ್ದ ನಂದನು, ಭಯಾತುರನಾಗಿ “ಅಯ್ಯೋ! ಇನ್ನೇನುಗತಿ! ಕೃಷ್ಣಾ! ಕೃಷ್ಣಾ! ಇದೋ! ಈ ಮಹಾಸರ್ಪವು ನನ್ನನ್ನು ನುಂಗುತ್ತಿರುವುದಲ್ಲಾ! ನಿನ್ನಲ್ಲಿ ಮರೆಹೊಕ್ಕಿರುವೆನು! ನನ್ನನ್ನು ಬಿಡಿಸು” ಎಂದು ಗಟ್ಟಿಯಾಗಿ ಕೂಗಿಕೊಂಡನು. ಈ ಅಂಕ್ರಂದನಧ್ವನಿಯನ್ನು ಕೇಳಿ ಗೋಪಾಲಕರೆಲ್ಲರೂ ಓಡಿಬಂದರು ಆ ಸರ್ಪವನ್ನು ಕೊಳ್ಳಿಗಳಿಂದ ತಿವಿದು, ದೊಣ್ಣೆಗಳಿಂದ ಬಡಿದರೂ ಬಿಡದೆ, ಅದು



೧೯೭೫. ಸರ್ಪದಬಾಯಿಗೆ ಸಿಕ್ಕಿಬಿದ್ದ ನಂದನನ್ನು ಕೃಷ್ಣನು ಬಿಡಿಸಿದುದು.

ನಂದಗೋಪನನ್ನು ನುಂಗುತ್ತಲೇ ಬಂದಿತು. ಒಡನೆಯೇ ಭಕ್ತಪರಿಪಾಲಕನಾದ ಶ್ರೀಕೃಷ್ಣನು, ಮುಂದೆ ಬಂದು, ತನ್ನ ಪಾದಾಗ್ರದಿಂದ ಆ ಸರ್ಪವನ್ನು ಮುಟ್ಟಿದನು. ಶ್ರೀಕೃಷ್ಣನ ಪಾದಾರವಿಂದಸ್ಪರ್ಶವಾದೊಡನೆ, ಆ ಸರ್ಪಕ್ಕೆ ಮೊದಲಿದ್ದ ಸರ್ಪರೂಪವು ಹೋಗಿ, ದಿವ್ಯಸೌಂದರ್ಯ ವಿಶಿಷ್ಟವಾದ ಗಂಧರ್ವಾಕೃತಿಯುಂಟಾಯಿತು. ಆ ಗಂಧರ್ವನು ಕಂಠದಲ್ಲಿ ಸುವರ್ಣಮಾಲಿಕೆಯೊಡನೆ ದಿವ್ಯತೇಜೋವಿಶಿಷ್ಟವಾದ ಆಕಾರದಿಂದ, ಮುಂದೆ ಬಂದು, ಕೃಷ್ಣನ ಪಾದಗಳಿಗೆ ನಮಸ್ಕರಿಸಿ ಬದ್ಧಾಂಜಲಿಯಾಗಿ ನಿಂತನು ಆಗ ಕೃಷ್ಣನು ಅವನನ್ನು ಕುರಿತು “ ಎಲೈ! ದಿವ್ಯತೇಜಸ್ಸಿನಿಂದ ಬೆಳಗುತ್ತಿರುವ ನೀನುಯಾರು? ನಿನಗೆ ಕ್ರೂರವಾದ ಈ ಸರ್ಪಜನ್ಮವುಂಟಾಗಲು ಕಾರಣವೇನು? ನಿನಗೆ ಈ ಹೀನಜನ್ಮವುಂಟಾಗಬೇಕಾದರೆ, ಹಿಂದೆ ನೀನು ಪ್ರಮಾದವಶದಿಂದ ಯಾವ ಮಹಾತ್ಮರಲ್ಲಿಯೋ ದೊಡ್ಡ ಅಪರಾಧವನ್ನು ನಡೆಸಿರಬೇಕು” ಎಂದನು. ಆಗ ಆ ಗಂಧರ್ವನು. “ ದೇವಾ ! ನಾನೊಬ್ಬ ವಿದ್ಯಾಧರನು! ನನಗೆ ಸುದರ್ಶನನೆಂದು ಹೆಸರು. ನಾನು ಧನಮದದಿಂದಲೂ, ರೂಪಮದದಿಂದಲೂ ಬೀಗಿ,ಅಲ್ಲಲ್ಲಿ ಸಂಚರಿಸುತ್ತಿರುವಾಗ,ಮಹಾತಪಸ್ವಿಗಳಾದ ಆಂಗಿರಸರೆಂಬ ಮುನಿಗಳನ್ನು ಕಂಡೆನು. ನನ್ನ ರೂಪಕ್ಕೆ ನಾನು ಗರ್ವಪಟ್ಟು, ಆ ಋಷಿಗಳ ವೈದಿಕವೇಷವನ್ನೂ, ವಿರೂಪವನ್ನೂ ನೋಡಿ ಗಟ್ಟಿಯಾಗಿ ನಕ್ಕು ಹಾಸ್ಯಮಾಡಿದೆನು. ಹೀಗೆ ನಾನು ಮಂದಾಧನಾಗಿ ಅವರನ್ನು ಹಾಸ್ಯಮಾಡಲು, ಅವರ ಶಾಪದಿಂದ ನನಗೆ ಈ ಸರ್ಪಜನ್ಮವುಂಟಾಯಿತು. ಆದರೇನು? ಕರುಣಾಳುಗಳಾದ ಆ ಮಹರ್ಷಿಗಳು, ನನ್ನನ್ನು ಅನುಗ್ರಹಿಸುವುದಕ್ಕಾಗಿಯೇ ಆ ಶಾಪವನ್ನು ಕೊಟ್ಟರೆಂದು ಭಾವಿಸುವೆನು ಏಕೆಂದರೆ,ಅವರ ಶಾಪವೇ ನನಗೆ ಈಗ ನಿನ್ನ ಪಾದಸ್ಪರ್ಶವು ಲಭಿಸುವುದಕ್ಕೆ ಕಾರಣವಾಯಿತು. ಲೋಕಗುರುವಾದ ನಿನ್ನ ಪಾದಸಂಬಂಧದಿಂದ ಈಗ ನನಗೆ ಶಾಪವಿಮೋಚನವಾದುದು ಮಾತ್ರವಲ್ಲದೆ, ಜನ್ಮಾಂತರಾರ್ಜಿಕವಾದ ನನ್ನ ಪಾಪವೆಲ್ಲವೂ ಇದರಿಂದ ನೀಗಿಹೋಯಿತು. ಕೃಷ್ಣಾ! ಆಶ್ರಿತಾಭಯಪ್ರದನಾದ ನೀನು, ಇನ್ನು ನನಗೆ ಅನುಜ್ಞೆಯನ್ನು ಕೊಡು! ನಾನು ಹೊರಡುವೆನು. ಮಹಾಯೋಗೀ ! ಓ ಮಹಾಪುರುಷಾ!

ಓ ಸುಜನಪಾಲಕಾ! ನಿನ್ನನ್ನು ಮರೆಹೊಕ್ಕಿರುವೆನು. ಕೃಷ್ಣಾ ! ಲೋಕೇಶ್ವರಾ ! ನನಗೆ ಅನುಜ್ಞೆಯನ್ನು ಕೊಡು! ಅಚ್ಯುತಾ ! ನಿನ್ನ ದರ್ಶನಮಾತ್ರದಿಂದಲೇ ನಾನು ಬ್ರಾಹ್ಮಣಶಾಪದಿಂದ ಮುಕ್ತನಾದೆನು! ಅಥವಾ ನಿನ್ನ ಮಹಾಮಹಾಮಹಿಮೆಗೆ ಇದೊಂದು ವಿಶೇಷವಲ್ಲ! ನಿನ್ನ ನಾಮಾಕ್ಷರಗಳನ್ನುಚ್ಚರಿಸಿದಮಾತ್ರಕ್ಕೆ, ಪುರುಷನು ತನ್ನ ಸಮಸ್ತ ಪಾಪಗಳನ್ನೂ ನೀಗಿ ಪವಿತ್ರನಾಗುವುದಲ್ಲದೆ, ಅದನ್ನು ಕಿವಿಯಾರೆ ಕೇಳಿದವರನ್ನೂ ಪವಿತ್ರರನ್ನಾಗಿ ಮಾಡುವಾಗ, ಸಾಕ್ಷಾತ್ತಾಗಿ ನಿನ್ನ ಪಾದಸ್ಪರ್ಶವೇ ನನಗೆ ಲಭಿಸಿದಮೇಲೆ, ನನಗೆ ಶಾಪವಿಮೋಚನವಾಗುವುದೇನಾಶ್ಚರ್ಯವು ?" ಎಂದನು.

ಹೀಗೆ ಆ ಸುದರ್ಶನನು ಕೃಷ್ಣನನ್ನು ಸ್ತುತಿಸಿ, ಅವನ ಅನುಜ್ಞೆಯನ್ನು ಪಡೆದು, ಅವನಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ, ತನ್ನ ಲೋಕಕ್ಕೆ ಹಿಂತಿರುಗಿದನು. ಗೋಪಾಲಕರೆಲ್ಲರೂ ಕೃಷ್ಣನ ಮಹಾಮಹಿಮೆಯನ್ನು ನೋಡಿ ಆಶ್ಚರ್ಯಪಡುತ್ತ, ತಾವು ಆರಂಭಿಸಿದ್ದ ವ್ರತವನ್ನು ಸಾಂಗವಾಗಿ ಮುಗಿಸಿಕೊಂಡು ಆ ವನದಿಂದ ಹಿಂತಿರುಗಿದರು. ದಾರಿಯುದ್ದಕ್ಕೂ ಕೃಷ್ಣನ ಮಹಾಪ್ರಭಾವವನ್ನು ಕೊಂಡಾಡುತ್ತ, ಊರಿಗೆ ಬಂದು ಸೇರಿದರು.

### ಶಂಖಚೂಡವಧವು.

ರಾಜೇಂದ್ರಾ ! ಅದರಿಂದಾಚೆಗೆ ಮತ್ತೊಮ್ಮೆ ಬಲರಾಮಕೃಷ್ಣರಿಬ್ಬರೂ, ಚಂದ್ರಿಕೆಯಲ್ಲಿ ವನವಿಹಾರವನ್ನು ಮಾಡಬೇಕೆಂಬ ಉದ್ದೇಶದಿಂದ, ಗಂಧಪುಷ್ಪಗಳಿಂದಲೂ, ವಸ್ತ್ರಾಭರಣಗಳಿಂದಲೂ ದೇಹವನ್ನಲಂಕರಿಸಿಕೊಂಡು, ತಮ್ಮ ಗೋವುಗಳನ್ನೂ, ಗೋಪಸ್ತ್ರೀಯರನ್ನೂ ಸಂಗಡ ಕರೆದುಕೊಂಡು, ಯಮುನಾತೀರದ ಒಂದಾನೊಂದು ಉಪವನಕ್ಕೆ ಬಂದು, ಅಲ್ಲಿ ವಿನೋದದಿಂದ ಆಟವಾಡುತಿದ್ದರು. ಗೋಪಸ್ತ್ರೀಯರು ಅವರ ಸುತ್ತಲೂ ಸೇರಿ ಮಧುರಗಾನದಿಂದ ಅವರ ಗುಣಗಳನ್ನು ಹಾಡುತಿದ್ದರು. ಆಗಲೇ ಉದಿಸಿಬರುತ್ತಿರುವ ಚಂದ್ರಬಿಂಬದಿಂದಲೂ, ಗ್ರಹನಕ್ಷತ್ರಗಳ ಸಮೂಹದಿಂದಲೂ, ಅರಳಿದ ಮಲ್ಲಿಗೆಯ ಸುವಾಸನೆಗಾಗಿ ಸುತ್ತಲೂ ಬಂದು ಮುತ್ತುವ ಭ್ರಮರಗಳ ಝಂಕಾರದಿಂದಲೂ, ಕುಮುದಗಂಧವಿಶಿಷ್ಟ

ವಾದ ಮಂದಮಾರುತದಿಂದಲೂ, ಸರ್ವೇಂದ್ರಿಯಗಳಿಗೂ ಆನಂದಕರವಾದ ಆಗಿನ ಸಂಧ್ಯಾಕಾಲದ ಸೊಗಸನ್ನು ನೋಡಿ ಆನಂದಿಸುತಿದ್ದರು. ಅಲ್ಲಿ ರಾಮಕೃಷ್ಣರಿಬ್ಬರೂ, ಬೇರೊಬ್ಬರಿಗೆ ಸಾಧ್ಯವಲ್ಲದ ನಾನಾಬಗೆಯ ಸ್ವರಗತಿಗಳ ಸಮ್ಮೇಳನದೊಡನೆ ಕೇಳುವವರ ಕಿವಿಗೂ, ಮನಸ್ಸಿಗೂ ಅತ್ಯಾನಂದವಾಗುವಂತೆ ಮೂರ್ಛನಾಕ್ರಮದಿಂದ, ತಾವಾಗಿಯೇ ಹಾಡುವುದಕ್ಕೆ ತೊಡಗಿದರು. ಈ ಗಾನವನ್ನು ಕೇಳುತ್ತ ಅಲ್ಲಿದ್ದ ಗೋಪಿಯರೆಲ್ಲರೂ ಮೋಹಾಕುಲರಾಗಿ, ತಲೆಯು ಬಿಚ್ಚಿಹೋದುದನ್ನೂ, ಸೀರೆಯು ಸಡಿಲುವದನ್ನೂ ತಿಳಿಯದೆ ಮೈಮರೆತಿದ್ದರು. ಹೀಗೆ ರಾಮಕೃಷ್ಣರಿಬ್ಬರೂ ಗೋಪಿಯರೊಡಗೂಡಿ ಸಂತೋಷದಿಂದ ಮೈಮರೆತು ವಿಹರಿಸುತ್ತಿರುವಾಗ, ಶಂಖಚೂಡನೆಂಬ ಕುಬೇರನ ಅನುಚರನೊಬ್ಬನು ಅಲ್ಲಿಗೆ ಬಂದನು. ಆ ದುಷ್ಟನು, ರಾಮಕೃಷ್ಣರ ರಕ್ಷಣೆಯಲ್ಲಿದ್ದ ಆ ಗೋಪಸ್ತ್ರೀಯರೆಲ್ಲರೂ, ಸಂತೋಷದಿಂದ ಮೈಮರೆತಿರುವಸಮಯದಲ್ಲಿ, ನಿರ್ಭಯವಾಗಿ ಅವರ ಗುಂಪಿಗೆ ಪ್ರವೇಶಿಸಿ, ಅವರೆಲ್ಲರನ್ನೂ ಬಲಾತ್ಕಾರದಿಂದ ಉತ್ತರದಿಕ್ಕಿನ ಮಾರ್ಗವಾಗಿ, ಬಹುದೂರಕ್ಕೆ ಸಾಗಿಸಿಬಿಟ್ಟನು ಹುಲಿಯ ಕೈಗೆ ಸಿಕ್ಕಿ ಬಿದ್ದ ಗೋವುಗಳಂತೆ, ಆ ಸ್ತ್ರೀಯರೆಲ್ಲರೂ "ಕೃಷ್ಣಾ ! ರಾಮಾ ! ಇನ್ನೇನುಗತಿ! ನಮ್ಮನ್ನು ಕಾಪಾಡಿರಿ!" ಎಂದು ಆರ್ತಧ್ವನಿಯಿಂದ ಮೊರೆಯಿಟ್ಟರು. ಈ ಆರ್ತಧ್ವನಿಯು ಕಿವಿಗೆ ಬಿದ್ದೊಡನೆ, ರಾಮಕೃಷ್ಣರಿಬ್ಬರೂ,ಒಂದೊಂದು ದೊಡ್ಡಮರವನ್ನು ಕೈಗೆ ಕಿತ್ತುಕೊಂಡು, "ಎಲ್ಲೈ ಭಯಪಡಬೇಡಿರಿ !" ಎಂದು ಹೇಳುತ್ತ, ಆ ದುಷ್ಟಖೇಚರನನ್ನು ಬೆನ್ನಟ್ಟಿ ಹಿಡಿದರು. ಆಗ ಶಂಖಚೂಡನು, ಕಾಲಮೃತ್ಯುಗಳಂತೆ ಕೋಪಾವೇಶದಿಂದ ಬೆನ್ನಟ್ಟಿ ಬರುತಿದ್ದ ರಾಮಕೃಷ್ಣರನ್ನು ಕಂಡೊಡನೆ, ಭಯದಿಂದ ನಡುಗುತ್ತ, ತನ್ನ ಪ್ರಾಣವುಳಿದರೆ ಸಾಕೆಂದೆಣಿಸಿ, ಆ ಸ್ತ್ರೀಯರನ್ನು ಅಲ್ಲಿಯೇ ಬಿಟ್ಟು ಓಡಲಾರಂಭಿಸಿದನು. ಓ ಪರೀಕ್ಷಿದ್ರಾಜಾ! ಆ ಶಂಖಚೂಡನ ತಲೆಯಲ್ಲಿ ಅನರ್ಘ್ಯವಾದ ಒಂದಾನೊಂದು ರತ್ನವಿದ್ದಿತು ಆತನ ತಲೆಯನ್ನು ಭೇದಿಸಿ ಆ ರತ್ನವನ್ನು ಕಿತ್ತುಕೊಳ್ಳಬೇಕೆಂಬ ಉದ್ದೇಶದಿಂದ ಕೃಷ್ಣನು, ಅವನು ಓಡಿದ ಕಡೆಗೆಲ್ಲಾ ಬೆನ್ನಟ್ಟಿ ಓಡುತಿದ್ದನು. ಇತ್ತಲಾಗಿ ಬಲರಾಮನು ಗೋ

ಪಸ್ತ್ರೀಯರಿಗೆ ಕಾವಲಾಗಿದ್ದು, ಅವರನ್ನು ರಕ್ಷಿಸುತಿದ್ದನು. ಕೊನೆಗೆ ಕೃಷ್ಣನು, ಆ ಗುಹ್ಯಕಾಧಮನನ್ನು ಹಿಡಿದು, ಒಂದೇ ಮುಷ್ಟಿಘಾತದಿಂದ ಅವನ ತಲೆಯನ್ನು ಭೇದಿಸಿ, ಅದರಲ್ಲಿದ್ದ ರತ್ನವನ್ನು ಕಿತ್ತುತಂದು, ಗೋಪಸ್ತ್ರೀಯರೆಲ್ಲರೂ ನೋಡುತ್ತಿರುವಹಾಗೆಯೇ ತನ್ನಣ್ಣನ ಕೈಗೆ ಕೊಟ್ಟನು. ಇದು ಮೂವತ್ತನಾಲ್ಕನೆಯ ಅಧ್ಯಾಯವು.

---

## ಹಗಲಲ್ಲಿ ಗೋಪಿಯರು ಕೃಷ್ಣವಿರಹದಿಂದ ವಿಲಪಿಸಿದುದು. ವೇಣುಗೀತೆ.

ರಾಜೇಂದ್ರಾ! ಕೃಷ್ಣನು ಹಗಲುಹೊತ್ತಿನಲ್ಲಿ ಹಸುಗಳನ್ನು ಮೇಯಿಸುವುದಕ್ಕಾಗಿ ಕಾಡಿಗೆ ಹೋಗುತಿದ್ದನಷ್ಟೆ? ಕ್ಷಣಕಾಲವೂ ಅವನ ವಿಯೋಗವನ್ನು ಸಹಿಸಲಾರದಿದ್ದ ಗೋಪಿಯರು, ಆ ಹಗಲುಹೊತ್ತನ್ನೂ ಎಷ್ಟೋ ಕಷ್ಟದಿಂದ ಕಳೆಯುತ್ತ, ಅವನ ಲೀಲೆಗಳನ್ನು ವರ್ಣಿಸುವರು. “ಓ ಗೋಪಿಯರೆ! ಆ ಕೃಷ್ಣನನ್ನು ಕ್ಷಣಮಾತ್ರದವರೆಗೆ ಕಾಣದಿದ್ದರೂ ನಮ್ಮ ಮನಸ್ಸು ಹೀಗೆ ಕುದಿಯುತ್ತಿರುವುದಲ್ಲಾ! ಆಹಾ! ಆ ವೇಣುಗೋಪಾಲನ ಸೌಂದರ್ಯವನ್ನೇನೆಂದು ಹೇಳಬಹುದು? ಎಡದ ಭುಜಕ್ಕೆ ಕಪೋಲವು ಸೋಕುವಂತೆ ಬಗ್ಗಿದ ಕೊರಲು! ತುಟಿಯ ಮೇಲೆ ಕೊಳಲು! ಆ ಕೊಳಲಿನ ರಂಧ್ರಗಳಮೇಲೆ ಆಡುತ್ತಿರುವ ಕೋಮಲವಾದ ಬೆರಳುಗಳು! ಆ ಕೊಳಲಿನ ಸ್ವರಮೂರ್ಛನೆಗಳಿಗೆ ತಕ್ಕಂತೆ ಹುಬ್ಬಿನಾಟಗಳು! ಇಂತಹ ದಿವ್ಯಸೌಂದರ್ಯದಿಂದ ಕೊಳಲನ್ನು ನುಡಿಸುತ್ತಿರುವ ಆ ಕೃಷ್ಣನ ವೇಣುಗಾನವು ಕಿವಿಗೆ ಬಿದ್ದೊಡನೆ, ಆಕಾಶದಲ್ಲಿ ವಿಮಾನಚಾರಿಣಿಯರಾದ ಸಿದ್ಧಾಂಗನೆಯರೂ ಕೂಡ, ಪಕ್ಕದಲ್ಲಿರುವ ತಮ್ಮ ಪತಿಗಳನ್ನೂ ಮರೆತು, ಮನ್ಮಥಬಾಣದಿಂದ ಕಲಗಿದ ಮನಸ್ಸುಳ್ಳವರಾಗಿ, ಮೈಮೇಲಿನ ಬಟ್ಟೆಯು ಜಾರಿದುದನ್ನೂ ತಿಳಿಯದೆ ಮೋಹಪರವಶರಾಗುವರು. ಮೆಲ್ಲಗೆ ಚೇತರಿಸಿಕೊಂಡಮೇಲೆ, ತಮ್ಮ ಸ್ಥಿತಿಗೆ ತಾವೇ ಲಜ್ಜೆಪಡುವರು. ತಿರುಗಿ ಮೈಮರೆತು ಮೂರ್ಛೆಹೊಂದುವರು. ಅವರ ಸ್ಥಿತಿಯೇ ಹೀಗಿರುವಾಗ, ನಾವು ಆ ಕೃಷ್ಣನನ್ನು ಕಾಣದೆ ಹೇಗೆ ಸಹಿಸಬಲ್ಲೆವು? ಆಹಾ! ಸಖಿಯರೆ! ಇದಲ್ಲವೇ ಆ

ಶ್ಚರ್ಯವು! ಆ ನಂದಕುಮಾರನು, ತನ್ನ ಎದೆಯಲ್ಲಿ ಮಿಂಚಿನಂತೆ ಲಕ್ಷ್ಮಿಯು ಪ್ರಕಾಶಿಸುತ್ತಿರಲು, ತನ್ನ ಮಂದಹಾಸಕಾಂತಿಯಿಂದ, ಎದೆಯಲ್ಲಿ ತೂಗಾಡುತ್ತಿರುವ ಮುತ್ತಿನಹಾರಕ್ಕೆ ಮತ್ತಷ್ಟು ಕಳೆಯೇರಿಸುತ್ತ, ಕೊಳಲನ್ನು ನುಡಿಸುತ್ತಿರುವಾಗ, ಮೊದಲೇ ಆತನ ವಿಯೋಗದುಃಖದಿಂದ ಪೀಡಿತರಾದ ನಮಗೆ ಆ ವೇಣುಗಾನವು ಸಂಕಟವನ್ನು ಹೆಚ್ಚಿಸುವುದು ಹಾಗಿರಲಿ! ಮಂದೆಯಲ್ಲಿ ಮೇಯುತ್ತಿರುವ ದನಕರುಗಳು, ಎತ್ತುಗಳು, ಮುಂತಾದ ಮೃಗಗಳೂಕೂಡ, ಆ ವೇಣುಗಾನವನ್ನು ಕೇಳಿ ಮೋಹಿತಗಳಾಗಿ, ಆನಂದದಿಂದ ಕಿವಿಗಳನ್ನು ನಿಗುರಿಸಿ, ಬಾಯಲ್ಲಿ ಕಚ್ಚಿದ ಹುಲ್ಲನ್ನೂ ಅಗಿಯದೆ, ನಿದ್ರಿಸುವಂತೆಯೂ, ಚಿತ್ರದಲ್ಲಿ ಬರೆದಿಟ್ಟಂತೆಯೂ ಸ್ತಬ್ಧವಾಗಿ ನಿಂತಿರುವುವು ನೋಡಿರಿ. ಓ ಸಖೀ ! ಆ ಮೃಗಗಳಸಂಗತಿಯೂ ಹಾಗಿರಲಿ! ಅಚೇತನಗಳಾದ ಈ ನದಿಗಳ ಸ್ಥಿತಿಯನ್ನು ನೋಡಿದಿರಾ ? ನಮ್ಮ ಕೃಷ್ಣನು ಜಟ್ಟಿಗಳಂತೆ ನಡುಕಟ್ಟನ್ನು ಕಟ್ಟಿ,ನವಿಲುಗರಿ, ಅರಿದಳ,ಚಿಗುರೆಲೆ ಮುಂತಾದುವುಗಳಿಂದ ದೇಹವನ್ನಲಂಕರಿಸಿಕೊಂಡು, ಬಲರಾಮನೊಡಗೂಡಿ, ವೇಣುಗಾನದಿಂದ ತನ್ನ ಸಖರಾದ ಗೋಪಮಕ್ಕಳನ್ನೂ, ಗೋವುಗಳನ್ನೂ ಕರೆಯುತ್ತಿರುವಾಗ, ಗಾಳಿಯಿಂದ ತೂರಿಬರುತ್ತಿರುವ ಆ ಕೃಷ್ಣನ ಪಾದರೇಣುವಿಗೆ ತಲೆಯೊಡ್ಡುವುದಕ್ಕಾಗಿ ಆತುರಪಟ್ಟು ಮೈತಿಳಿಯದೆ ಓಡಿಬರುವಂತೆ, ಈ ನದಿಗಳು ಅಲೆಗಳೆಂಬ ಕೈಗಳನ್ನೊಡರುತ್ತ, ವಕ್ರಗತಿಯಿಂದೋಡುತ್ತಿರುವುವು ನೋಡಿರಿ ! ಒಂದೊಂದುಕಡೆಯಲ್ಲಿ ನಿಶ್ಚಲವಾದ ನೀರಿನಿಂದ ಶಾಂತವಾಗಿರುವುದನ್ನು ನೋಡಿದರೆ, ಈ ನದಿಗಳೂಕೂಡ, ಮಂದಭಾಗ್ಯೆಯರಾದ ನಮ್ಮಂತೆ, ಆ ಕೃಷ್ಣನ ಪಾದಸಂಬಂಧವನ್ನು ಬಯಸಿ. ದುಃಖದಿಂದ ಮೈಮರೆತು ನಿಂತಿರುವಂತೆ ತೋರುವುದು. ಓ ಸಖೀ! ತನ್ನ ಅನುಚರರಾದ ಗೋಪಾಲಕರೆಲ್ಲರೂ ತನ್ನ ವೀರ್ಯವನ್ನು ಕೊಂಡಾಡುತ್ತಬರಲು, ಆದಿಪುರುಷನಂತೆ ನಿತ್ಯಲಕ್ಷ್ಮೀವಿಶಿಷ್ಟನಾಗಿ, ಪರ್ವತದತಪ್ಪಲುಗಳಲ್ಲಿ ಸಂಚರಿಸುತ್ತಿರುವ ಕೃಷ್ಣನು, ಅಲ್ಲಲ್ಲಿರುವ ಗೋವುಗಳನ್ನು ತನ್ನ ವೇಣುಗಾನದಿಂದ ಕರೆಯುತ್ತಿರುವಾಗ, ಈ ವನದಲ್ಲಿರುವ ಗಿಡುಬಳ್ಳಿಗಳೆಲ್ಲವೂ ಆ ಕೃಷ್ಣನ ಸ್ಮರಣದಿಂದ ಪುಳಕಿತವಾದಂತೆ, ಪುಷ್ಪಗಳಿಂದ

ತುಂಬಿರುವುವು. ಆನಂದಬಾಷ್ಪವನ್ನು ಸುರಿಸುವಂತೆ ಮಕರಂದವನ್ನು ಸು ರಿಸುವುವು.. ಆ ಕೃಷ್ಣನಿಗೆ ತಲೆಬಗ್ಗಿ ನಮಸ್ಕರಿಸುವಂತೆ ಫಲಭಾರದಿಂದ ಬಗ್ಗಿರುವುವು ನೋಡಿದೆಯಾ? ಓ ಗೋಪಿಯರೆ! ಮುಖಕ್ಕೆ ಅಂದವಾದ ತಿಲಕವನ್ನು ತಿದ್ದಿ,ಕೊರಲಲ್ಲಿ ದಿವ್ಯಗಂಧವುಳ್ಳ ತುಲಸೀಮಾಲಿಕೆಯನ್ನುಧರಿ ಸಿ, ಆದರ ವಾಸನೆಗಾಗಿ ಮುತ್ತಿಬರುತ್ತಿರುವ ಭ್ರಮರಗಳ ಝುಂಕಾರಧ್ವ ನಿಯನ್ನು ಕಿವಿಯಿಂದ ಆದರಿಸಿ ಕೇಳುತ್ತ, ಕೃಷ್ಣನು ಕೊಳಲೂದುತ್ತ ಬರುವಾಗ, ಕೊಳದಲ್ಲಿ ವಿಹರಿಸುತ್ತಿರುವ ಹಂಸಸಾರಸಾದಿಪಕ್ಷಿಗಳೆಲ್ಲವೂ ಆ ವೇಣುಗಾನಕ್ಕೆ ಮರುಳಾಗಿ, ಕೃಷ್ಣನ ಬಳಿಗೆ ಬಂದು, ಹರಿಧ್ಯಾನ ಪರರಾದ ಯೋಗಿಗಳಂತೆ ಕಣ್ಣುಮುಚ್ಚಿ ಮೌನದಿಂದ ನಿಂತಿರುವುವು ನೋ ಡಿರಿ! ಆಹಾ ಇದಲ್ಲವೇ ಆಶ್ಚರ್ಯವು ಓ ಸಖಿಯರೆ! ಕೃಷ್ಣನು ಬಲರಾಮ ನೊಡಗೂಡಿ, ಈ ಬೆಟ್ಟದ ತಪ್ಪಲುಗಳಲ್ಲಿ ಮಂದೆಯನ್ನು ಮೇಯಿಸುತ್ತ, ಕಿವಿಯಮೇಲೆ ಹೂಗೊಂಚಲನ್ನೂ, ಕಂಠದಲ್ಲಿ ವನಮಾಲಿಕೆಯನ್ನೂ ಧರಿಸಿ ಸಂತೋಷದಿಂದ ಕೊಳಲನ್ನೂದುತ್ತ, ತನ್ನವೇಣು ಗಾನದಿಂದ ಲೋ ಕವನ್ನು ರಂಜಿಸುತ್ತಿರುವಾಗ, ಆಕಾಶದಲ್ಲಿರುವ ಮೇಘವೂಕೂಡ, ಆತನ ಮಹಿಮೆಗೆ ಹೆದರಿದಂತೆ ಮೆಲ್ಲಗೆ ಧ್ವನಿಮಾಡುತ್ತಿರುವುದು. ತನ್ನಂತೆ ಲೋಕಾರ್ತಿಹರನಾದ ಆತನ್ನಲ್ಲಿ ಸ್ನೇಹಭಾವವನ್ನು ತೋರಿಸುತ್ತಾ ಅವನ ಮೇಲೆ ಪುಷ್ಪವರ್ಷವನ್ನು ಕರೆಯುವುದು. ಕೊಡೆಯಹಾಗೆ ನಿಂತು ಅವನಿಗೆ ನೆರಳನ್ನುಂಟುಮಾಡುತ್ತಿರುವುದು. ಅಮ್ಮ ಯಶೋದೆ! ನಿನ್ನಮಗನು ತುಟಿ ಯಮೇಲೆ ಕೊಳಲನ್ನಿಟ್ಟು, ತನಗೆತಾನೇ ಅಭ್ಯಾಸಮಾಡಿದ. ಬಗೆಬಗೆಯ ಸ್ವ ರಜಾತಿಗಳನ್ನು ನುಡಿಸುತ್ತಿರುವಾಗ, ಬ್ರಹ್ಮೇಂದ್ರ ರುದ್ರಾದಿ ದೇವತೆಗಳೆಲ್ಲ ರೂ ಆ ಗಾನಕ್ಕೆ ಮರುಳಾಗಿ, ತಾವು ಸರ್ವಶಾಸ್ತ್ರವಿಶಾರದರಾಗಿದ್ದರೂ, ಆ ಸ್ವರಭೇದಗಳ ತತ್ವವನ್ನು ತಿಳಿಯಲಾರದೆ. ತಲೆಯನ್ನು ತಗ್ಗಿಸಿ ಮೈಮರೆತು ನಿಲ್ಲುವರು. ಮತ್ತು ನಿನ್ನ ಮಗನಾದ ಕೃಷ್ಣನು,ಧ್ವಜ, ವಜ್ರ ಅಂಕುಶ,ಕ ಮಲಗಳೇ ಮೊದಲಾದ ಶುಭಲಕ್ಷಣಗಳುಳ್ಳ ತನ್ನ ಪಾದಾರವಿಂದವಿನ್ಯಾಸ ಗಳಿಂದ,ಭೂಮಿಗೆ ಗೋವುಗಳ ಗೊರಸಲಿನಿಂದುಂಟಾದ ಬಾಧೆಯನ್ನು ತಪ್ಪಿ ಸುತ್ತ. ಮದದಾನೆಯಂತೆ ಗಂಭೀರವಾದ ನಡೆಯಿಂದ ಕೊಳಲನ್ನು ನುಡಿ

ಸುತ್ತ ಬರುವಾಗ. ಅವನ ನಡೆಯನ್ನೂ, ಅವನ ವಿಲಾಸಗಳನ್ನೂ,ಅವನ ದೃಷ್ಟಿಸೌಂದರ್ಯವನ್ನೂ ನೋಡಿದಹಾಗೆಲ್ಲಾ ನಮಗೆ ನಿಜವಾಗಿಯೂ ಕಾಮವಿಕಾರದಿಂದ ಮೈತಿಳಿಯದಂತಾಗುವುದು. ಮೋಹಪಾರವಶ್ಯದಿಂದ ತಲೆಬಿಚ್ಚಿದುದೂ, ಸೀರೆಯು ಸಡಲಿದುದೂ ತಿಳಿಯದೆ, ಅಚೇತನಗಳಾದ ವೃಕ್ಷಗಳಂತೆ ನಿಶ್ಚೇಷ್ಟರಾಗಿ ನಿಲ್ಲುವೆವು. ಮತ್ತು ಆ ಕೃಷ್ಣನು ಕೈಯ್ಯಲ್ಲಿ ಮಣಿಸರವನ್ನು ಹಿಡಿದು, ಆ ಮಣಿಗಳಿಂದ ತನ್ನ ಮಂದೆಯ ಗೋವುಗಳನ್ನೆಣಿಸುತ್ತಾ, ಸುಗಂಧವಿಶಿಷ್ಟವಾದ ತುಲಸೀಮಾಲಿಕೆಯನ್ನು ಕೊರಲಲ್ಲಿ ಧರಿಸಿ,ತನ್ನ ಸ್ನೇಹಿತನ ಭುಜದಮೇಲೆ ತೋಳೂರಿ ನಿಂತು ವೇಣುಗಾನವನ್ನು ಮಾಡುತ್ತಿರುವಾಗ, ಕಾಡಿನಲ್ಲಿರುವ ಹೆಣ್ಣುಜಿಂಕೆಗಳೆಲ್ಲವೂ. ಆ ವೇಣುಗಾನಕ್ಕೆ ಮರುಳಾಗಿ,ಗೋಪಿಯರಂತೆ ತಮ್ಮ ಮನೆಮಕ್ಕಳಲ್ಲಿಯೂ ಆಸೆಯನ್ನು ತೊರೆದು, ಆ ಕೃಷ್ಣನನ್ನೇ ಅನುಸರಿಸಿ ಹೋಗುತ್ತಿರುವುವು. ಅಮ್ಮ ಯಶೋದೆ! ನಿನ್ನ ಮಗನಾದ ಕೃಷ್ಣನು, ಮೊಲ್ಲೆಹೂವಿನ ಮಾಲಿಕೆಯಿಂದ ದೇಹವನ್ನಲಂಕರಿಸಿಕೊಂಡು, ಗೋವುಗಳಿಂದಲೂ ಗೋಪಾಲಕರಿಂದಲೂ ಪರಿವೃತನಾಗಿ, ಯಮುನಾತೀರದಲ್ಲಿ ವಿಹರಿಸುತ್ತಿರುವಾಗ,ಅವನ ವೇಣುಗಾನಕ್ಕೆ ಮರುಳಾಗಿ ವಾಯುವೂಕೂಡ ಸುಗಂಧಶೀತಲವಾಗಿ ಬೀಸುತ್ತಿರುವುದು. ಸಿದ್ಧವಿದ್ಯಾಧರರೇ ಮೊದಲಾದ ದೇವಗಣಗಳೂಕೂಡ ಗೀತವಾದ್ಯಗಳಿಂದಲೂ, ಪುಷ್ಪವರ್ಷಗಳಿಂದಲೂ ಅವನನ್ನು ಸೇವಿಸಿ ಸ್ತುತಿಸುತ್ತಿರುವರು. ಗೋವರ್ಧನಗಿರಿಯನ್ನೆತ್ತಿ, ಗೋಕುಲವಾಸಿಗಳೆಲ್ಲರನ್ನೂ ರಕ್ಷಿಸಿದ ಆ ಕೃಷ್ಣನು, ಸಾಯಂಕಾಲದಲ್ಲಿ ಮಂದೆಯನ್ನಟ್ಟಿಕೊಂಡು ಕಾಡಿನಿಂದ ಹಿಂತಿರುಗಿ ಬರುವಾಗ, ಅವನ ವೈಭವವನ್ನು ಕೇಳಬೇಕೆ? ಗೋಪಾದಧೂಳಿಯಿಂದ ಕೊಳೆಗಟ್ಟಿದ ಕಂಠಮಾಲಿಕೆಯೊಡನೆ, ಕೊಳಲನ್ನು ನುಡಿಸುತ್ತಾ, ತನ್ನ ಅನುಚರರೆಲ್ಲರೂ ಸುತ್ತಲೂ ನೆರೆದು ತನ್ನ ಕೀರ್ತಿಯನ್ನು ಕೊಂಡಾಡುತ್ತಿರಲು, ಬ್ರಹ್ಮಾದಿದೇವತೆಗಳಿಂದ ನಮಸ್ಕರಿಸಲ್ಪಡುತ್ತಾ ಬರುವ ಆ ಕೃಷ್ಣನ ಸೌಂದರ್ಯವು, ಮನ್ಮಥತಾಪದಿಂದ ಕಣ್ಣಾಣದ ನಮಗೆ ನೇತ್ರೋತ್ಸವದಂತಿರುವುದು. ನಮ್ಮ ಕೋರಿಕೆಯನ್ನೀಡೇರಿಸುವುದಕ್ಕಾಗಿ ದೇವಕೀದೇವಿಯ ಗರ್ಭದಿಂದವತರಿಸಿದ ಪೂರ್ಣಚಂದ್ರನೇ ಅವನು.

ಆ ಕೃಷ್ಣನು ಈಗ ನಮ್ಮ ಕಣ್ಣೆದಿರಾಗಿ ಬರುವಂತೆಯೇ ಇದೆ ! ಆಹಾ ಆ ಬಲರಾಮನ ಸೌಂದರ್ಯವನ್ನೇನೆಂದು ಹೇಳಬಹುದು! ಮದ್ಯಮದದಿಂದ ಸ್ವಲ್ಪವಾಗಿ ತೊಳಲುವ ಕಣ್ಣಾಲೆಗಳು ! ತನ್ನ ಸಹಚರರಮೇಲೆ ಸ್ನೇಹ ಪೂರ್ವಕವಾದ ದೃಷ್ಟಿ ! ಸ್ವಲ್ಪವಾಗಿ ಮಾಗಿದ ಎಲಚಿಹಣ್ಣಿನಂತೆ ಪಾಂಡು ವರ್ಣವುಳ್ಳ ಮುಖದ ಸೊಗಸು ! ಸುವರ್ಣಕುಂಡಲಕಾಂತಿಯಿಂದ ಥಳ ಥಳಿಸುವ ಕಪೋಲಗಳು ! ಇಂತಹ ಮೋಹನಾಕಾರವುಳ್ಳ ಬಲಭದ್ರನು, ಸಂಧ್ಯಾಕಾಲದಲ್ಲಿ ಉದಿಸಿ ಬರುವ ಚಂದ್ರನಂತೆ ಪ್ರಸನ್ನಮುಖದಿಂದ ಶೋ ಭಿಸುತ್ತ,ಗಜರಾಜಗಮನದಿಂದ ಸಾಯಂಕಾಲದಲ್ಲಿ ಹಿಂತಿರುಗಿ ಬರುವಾಗ,ಅ ವನ ಮುಖಚಂದ್ರನನ್ನು ಕಂಡೊಡನೆ,ನಮಗೆ ಹಗಲೆಲ್ಲವೂ ಆವನ ವಿರಹದಿಂ ದುಂಟಾದ ತಾಪವೆಲ್ಲವೂ ಕ್ಷಣಮಾತ್ರದಲ್ಲಿ ಆರಿಹೋಗುವುದು.” ಎಂದು ಗೋಪಿಯರೆಲ್ಲರೂ ಆ ರಾಮಕೃಷ್ಣರ ಲೀಲೆಗಳನ್ನು ಹಾಡುತ್ತ, ಹಗಲೆಲ್ಲವೂ ಆವನಲ್ಲಿಯೇ ತಮ್ಮ ಮನಸ್ಸನ್ನೂ,ಪ್ರಾಣವನ್ನೂ ನೆಲೆಗೊಳಿಸಿದ್ದರು.ಇಲ್ಲಿಗೆ ಮೂವತ್ತೈದನೆಯ ಅಧ್ಯಾಯವು

---

## ವೃಷಭಾಸುರ ವಧವು

ರಾಜೇಂದ್ರಾ ! ಕೇಳು ಹೀಗೆ ಶ್ರೀ ಕೃಷ್ಣನು, ತನ್ನ ಲೀಲೆಗಳಿಂದ ಗೋಕುಲವನ್ನು ರಂಜಿಸುತ್ತ, ಒಮ್ಮೆ ಸಂತೋಷದಿಂದ ತನ್ನ ಮಂದೆಯಲ್ಲಿರು ವಾಗ, ಅರಿಷ್ಟನೆಂಬ ಕ್ರೂರರಾಕ್ಷಸನೊಬ್ಬನು, ದೊಡ್ಡ ಗೂಳಿಯ ಆಕಾರ ದಿಂದ ಆ ಮಂದೆಯನಡುವೆ ಪ್ರವೇಶಿಸಿದನು. ಪರ್ವತಶಿಖರದಂತಿರುವ ಹಿರಳಿನಿಂದ ಭಯಂಕರವಾದ ದೊಡ್ಡದೇಹವುಳ್ಳ ಆ ರಾಕ್ಷಸನು, ಮಂದೆ ಯಲ್ಲಿ ಪ್ರವೇಶಿಸಿದಾಗ, ಅವನ ಆರ್ಭಟವನ್ನು ಕೇಳಬೇಕೆ ? ಆಗಾಗ ತನ್ನ ಗೊರಸಲಿನಿಂದ ನೆಲವನ್ನು ಭೇದಿಸುವುದು ! ಭಯಂಕರಧ್ವನಿಯಿಂದ ಗುಟು ರುಹಾಕುವುದು! ಕಾಲುಗಳಿಂದ ನೆಲವನ್ನು ಕೆರೆಯುವುದು ! ಬಾಲವನ್ನು ಮೇಲಕ್ಕೆತ್ತಿ ಕೊಂಬುಗಳಿಂದ ಕಂಡಕಂಡ ಕಲ್ಲುಮರಗಳನ್ನು ಮೀಟು ವುದು ! ಆಗಾಗ ಸ್ವಲ್ಪಸ್ವಲ್ಪವಾಗಿ ಮಲಮೂತ್ರಗಳನ್ನು ಬಿಡುವುದು ! ನಟ್ಟ ಕಣ್ಣಿಂದ ನೋಡುವುದು ! ಇಂತಹ ಕ್ರೂರಚೇಷ್ಟೆಗಳೊಡನೆ, ಆ



೧೯೮೩. ವೃಷಭಾಸುರವಧೆ.

ಮಂದೆಯನಡುವೆ ಆರ್ಭಟಿಸಿ ಸುತ್ತುತಿದ್ದನು. ಅವನ ಕ್ರೂರಗರ್ಜನೆ ಯನ್ನು ಕೇಳಿದಮಾತ್ರದಲ್ಲಿ ಗರ್ಭಿಣಿಯರಾದ ಸ್ತ್ರೀಯರಿಗೂ, ಗೋವುಗಳಿಗೂ ಅಕಾಲದಲ್ಲಿ*ಗರ್ಭಪಾತವೂ ಗರ್ಭಸ್ರಾವವೂ ಉಂಟಾಗುತಿತ್ತು. ಆಕಾಶದಲ್ಲಿ ರುವ ಮೇಘಗಳು ಪರ್ವತಶಿಖರವೆಂಬ ಭ್ರಾಂತಿಯಿಂದ ಆ ವೃಷಭಾಸುರ ನ ಹಿರಳಿನಮೇಲೆ ಬಂದು ಸೇರುತ್ತಿದ್ದುವು. ತೀಕ್ಷ್ಣವಾದ ಕೊಂಬುಗಳುಳ್ಳ ಆ ಗೂಳಿಯನ್ನು ನೋಡಿ ಗೋಪಗೋಪಿಯರೆಲ್ಲರೂ ನಡುಗುತ್ತಿದ್ದರು. ಗೋವುಗಳೆಲ್ಲವೂ ಭಯದಿಂದ ಮಂದೆಯನ್ನು ಬಿಟ್ಟು ನಾನಾದಿಕ್ಕಿಗೆ ಚದರಿ ದುವು. ಆಗ ಕೆಲವುಗೋಪಾಲಕರು ಕೃಷ್ಣನ ಬಳಿಗೆ ಬಂದು. "ಅಯ್ಯೋ ಕೃಷ್ಣಾ! ಇನ್ನೇನು ಗತಿ"ಎಂದು ಅವನಲ್ಲಿ ಮರೆಹೊಕ್ಕರು. ಹೀಗೆ ಗೋಕುಲ ವೆಲ್ಲವೂ ಭಯದಿಂದ ತತ್ತಳಿಸುವುದನ್ನು ಕಂಡು ಕೃಷ್ಣನು. "ಭಯ ಪಡಬೇಡಿರಿ"ಎಂದು ಅವರನ್ನು ಸಮಾಧಾನಪಡಿಸಿ, ಆ ಗೂಳಿಯನ್ನು ಕೈತಟ್ಟಿ ಕರೆಯುತ್ತ, "ಎಲೆ ಮೂಢಾ! ಈ ಗೋವುಗಳನ್ನೂ, ಈ ಗೋಪಬಾಲಕ ರನ್ನೂ ಹೆದರಿಸುವುದರಿಂದೇನು? ನಿಮ್ಮಂತಹ ದುರಾತ್ಮರ ಕೊಬ್ಬ ನ್ನಡಗಿಸುವುದಕ್ಕಾಗಿ ಹುಟ್ಟಿದ ನಾನು ಇದೋ! ಇಲ್ಲಿರುವೆನು! ಬಾ!" ಎಂದು ಬಾರಿಬಾರಿಗೂ ಭುಜವನ್ನು ತಟ್ಟಿ, ಆ ವೃಷಭವನ್ನು ಕೋಪಗೊಳಿ ಸಿ, ತನ್ನ ಸ್ನೇಹಿತನ ಭುಜದಮೇಲೆ ಕೈಯಿಟ್ಟು ನಿಂತಿದ್ದನು. ಹೀಗೆ ಕೃಷ್ಣ ನಿಂದ ರೇಗಿಸಲ್ಪಟ್ಟ ಅರಿಷ್ಟನು, ಅತ್ಯಾಕ್ರೋಶದಿಂದ ನೆಲವನ್ನು ಕೆರ ಯುತ್ತ, ಆಕಾಶದಲ್ಲಿರುವ ಮೇಘಗಳನ್ನು ಸುರುಳಿಸುತ್ತುವಂತೆ ಬಾಲವನ್ನು ಮೇಲಕ್ಕೆತ್ತಿಕೊಂಡು, ಕೊಂಬುಗಳನ್ನು ಮುಂದೆ ನೀಡಿ, ಕೆಂಡದಂತಿರುವ ಕಣ್ಣುಗಳಿಂದ ಕೃಷ್ಣನನ್ನು ದುರದುರನೆ ನೋಡುತ್ತ, ಇಂದ್ರನಿಂದ ಪ್ರಯೋಗಿಸಲ್ಪಟ್ಟ ವಜ್ರಾಯುಧದಂತೆ, ಅತಿ ಕ್ರೂರವೇಗದಿಂದ ಕೃಷ್ಣನ ನ್ನಿದಿರಿಸುವುದಕ್ಕೆ ಬಂದನು. ಒಡನೆಯೇ ಕೃಷ್ಣನು ಮುಂದೆ ಬಂದು, ಆ ಅರಿ ಷ್ಟನ ಕೊಂಬುಗಳೆರಡನ್ನೂ ಹಿಡಿದು, ಗಜಯುದ್ಧದಲ್ಲಿ ಆನೆಯು ಮತ್ತೊಂ ದಾನೆಯನ್ನು ಹಿಂದೆತಳ್ಳುವಂತೆ, ಹದಿನೆಂಟಡಿಗಳ ದೂರಕ್ಕೆ ಹಿಂದೆ ತಳ್ಳಿ

---

*ನಾಲ್ಕು ತಿಂಗಳೊಳಗಾದರೆ ಗರ್ಭಸ್ರಾವವು. ಅದಕ್ಕೆ ಮೇಲಾದರೆ ಗರ್ಭ ಪಾತವು.

ಬಿಟ್ಟನು. ಅರಿಷ್ಟನಿಗೆ ಮತ್ತಷ್ಟು ಕೋಪವುಂಟಾಯಿತು. ಅವನ ಅಂಗಾಂಗಗಳಲ್ಲಿಯೂ ಬೆವರು ಕಿತ್ತುಕೊಂಡಿತು. ತಿರುಗಿ ಮೇಲೆದ್ದು, ಕೋಪದಿಂದ ಬುಸುಗುಟ್ಟುತ್ತ ಕೃಷ್ಣನಿಗಿದಿರಾಗಿ ಬರುತಿದ್ದನು. ಮೊದಲಿನಂತೆಯೇ ಕೃಷ್ಣನು ಅವನ ಕೊಂಬುಗಳನ್ನು ಹಿಡಿದು, ಕೊರಲನ್ನು ತಿರುಚಿ, ಕೆಳಕ್ಕೆ ಕೆಡಹಿ, ಒದ್ದೆಯ ಬಟ್ಟೆಯನ್ನು ಹಿಂಡುವಂತೆ ಅವನನ್ನು ಕಾಲಿಂದ ಮೆಟ್ಟಿ ತುಳಿದು, ಅವನ ದೇಹವನ್ನು ನಜ್ಜುಗುಜ್ಜಾಗಿ ಮಾಡಿದನು. ಆಮೇಲೆ ಅವನ ಕೊಂಬುಗಳೆರಡನ್ನೂ ಕೈಯಿಂದ ಕಿತ್ತುಕೊಂಡು, ಅವುಗಳಿಂದಲೇ ಅವನನ್ನು ಪ್ರಹರಿಸಿದನು. ಆ ಒಂದೇ ಪ್ರಹಾರಕ್ಕೆ ಅರಿಷ್ಟನು, ಬಾಯಿಂದ ರಕ್ತವನ್ನು ಕಕ್ಕಿ, ಮಲಮೂತ್ರಗಳನ್ನು ಬಿಡುತ್ತ, ಕಾಲುಗಳನ್ನೊದರಿ. ಕೆಳಗೆ ಬಿದ್ದನು. ಅವನ ಕಣ್ಣಾಲೆಗಳು ಮೇಲೆನಾಟಿಕೊಂಡುವು. ಸ್ವಲ್ಪ ಹೊತ್ತಿನವರೆಗೆ ಮರಣಸಂಕಟದಿಂದ ತತ್ತಳಿಸುತಿದ್ದು, ಪ್ರಾಣವನ್ನು ಬಿಟ್ಟನು. ಈ ರಾಕ್ಷಸವಧವನ್ನು ನೋಡಿ ದೇವತೆಗಳು ಸಂತೋಷದಿಂದ ಕೃಷ್ಣನ ಮೇಲೆ ಪುಷ್ಪವರ್ಷವನ್ನು ಕರೆದು ಅವನನ್ನು ಸ್ತುತಿಸುತಿದ್ದರು.

## ನಾರದನ ಪ್ರೇರಣೆಯಿಂದ ಕಂಸನು ರಾಮಕೃಷ್ಣರನ್ನು ಕರೆತರುವುದಕ್ಕಾಗಿ ಅಕ್ರೂರನನ್ನು ಕಳಹಿಸಿದುದು.

ಹೀಗೆ ಕೃಷ್ಣನು ವೃಷಭಾಸುರನನ್ನು ಕೊಂದಮೇಲೆ, ತನ್ನ ಸಹಚರರಾದ ಗೋಪಾಲಕರಿಂದ ಸ್ತುತಿಸಲ್ಪಡುತ್ತ, ಗೋಪಿಯರಿಗೆ ನೇತ್ರೋತ್ಸವನ್ನು ಬೀರುವಂತೆ ಬಲರಾಮನೊಡಗೂಡಿ ಹಿಂತಿರುಗಿ ಬಂದನು. ಇತ್ತಲಾಗಿ ಅರಿಷ್ಟವಧವಾದಮೇಲೆ, ನಾರದನು ಕಂಸನಬಳಿಗೆ ಬಂದು “ಕಂಸಾ! ಹಿಂದೆ ನಾನು ದೇವಕಿಯ ಎಂಟನೆಯ ಗರ್ಭದಿಂದ ಹುಟ್ಟಿದ ಮಗನೇ ನಿನಗೆ ಮೃತ್ಯುವೆಂದು ತಿಳಿಸಿದ್ದೆನಲ್ಲವೆ ? ಅದರ ನಿಜಸ್ಥಿತಿಯು ಇದುವರೆಗೂ ನಿನಗೆ ತಿಳಿದಿರಲಾರದೆಂದು ತೋರುತ್ತಿದೆ! ದೇವಕಿಯ ಎಂಟನೆಯಗರ್ಭದಲ್ಲಿ ಹುಟ್ಟಿದುದಾಗಿ ಭ್ರಮಿಸಿ, ನೀನು ಯಾವ ಹೆಣ್ಣುಮಗುವನ್ನು ಕೊಲ್ಲುವುದಕ್ಕೆ ಯತ್ನಿಸಿದೆಯೋ, ಅದು ದೇವಕಿಯಲ್ಲಿ ಹುಟ್ಟಿದುದಲ್ಲ! ಅದು ನಂದಪತ್ನಿಯಾದ ಯಶೋದೆಯ ಗರ್ಭದಲ್ಲಿ ಹುಟ್ಟಿದ ಕೂಸು ! ಆಗ ದೇವ

ಕಿಯ ಗರ್ಭದಲ್ಲಿ ಹುಟ್ಟಿದವನೇ ಕೃಷ್ಣನು! ಬಲರಾಮನೆಂಬವನು ರೋಹಿಣೀದೇವಿಯ ಮಗನು. ವಸುದೇವನು ನಿನ್ನ ಭಯಕ್ಕಾಗಿ ಆ ಎರಡು ಮಕ್ಕಳನ್ನೂ ತನ್ನ ಮಿತ್ರನಾದ ನಂದನ ಮನೆಯಲ್ಲಿ ಬಚ್ಚಿಟ್ಟನು. ಆ ಬಲರಾಮ ಕೃಷ್ಣರೇ ಇದುವರೆಗೆ, ನೀನು ಕಳುಹಿಸಿದ ರಾಕ್ಷಸರೆಲ್ಲರನ್ನೂ ಕೊಂದವರು. ಇದ್ದ ಸಂಗತಿಯನ್ನು ತಿಳಿಸಿರುವೆನು. ಮುಂದೆ ನಿನ್ನ ಕ್ಷೇಮಕ್ಕೆ ದಾರಿಯನ್ನು ನೋಡು!" ಎಂದನು. ಈ ಮಾತನ್ನು ಕೇಳಿದೊಡನೆ ಕಂಸನಿಗೆ ಕೋಪದಿಂದ ಮೈತಿಳಿಯದಂತಾಯಿತು. ಆ ಕ್ಷಣವೇ ಕತ್ತಿಯನ್ನು ಕೈಗೆತ್ತಿಕೊಂಡು ಮೊದಲು ಕಪಟಿಯಾದ ವಸುದೇವನ್ನು ಕೊಂದು ಬಿಡಬೇಕೆಂಬ ಉದ್ದೇಶದಿಂದ ಮೇಲೆದ್ದನು. ಆಗ ನಾರದನು, ಉಪಾಯದಿಂದ ಅವನಿಗೆ ಸಮಾಧಾನವನ್ನು ಹೇಳಿ ತಡೆಯಲು, ಕಂಸನು ಆ ಉದ್ದೇಶವನ್ನು ಬಿಟ್ಟು ಸುಮ್ಮನಾದನು. ಆದರೇನು? ಆಗಲೇ ವಸುದೇವದೇವಕಿಯರನ್ನು ಹಿಡಿದುತರಿಸಿ, ಅವರ ಕೈಕಾಲುಗಳಿಗೆ ಉಕ್ಕಿನ ಸಂಕೋಲೆಗಳನ್ನು ಹಾಕಿಸಿ, ಸೆರೆಯಲ್ಲಿಟ್ಟು, ಅವರ ಮಕ್ಕಳಾದ ರಾಮಕೃಷ್ಣರನ್ನು ಕೊಲ್ಲುವುದಕ್ಕೆ ಉಪಾಯವನ್ನು ಯೋಚಿಸುತಿದ್ದನು. ಅತ್ತಲಾಗಿ ನಾರದನು ಹೊರಟುಹೋದಕೂಡಲೆ, ಕಂಸನು ತನ್ನ ಮಿತ್ರನಾದ ಕೇಶಿಯೆಂಬ ದಾನವನನ್ನು ಕರೆದು,ರಾಮಕೃಷ್ಣರನ್ನು ಕೊಲ್ಲುವಕಾರ್ಯಕ್ಕಾಗಿ ನಿಯಮಿಸಿ ಕಳುಹಿಸಿದನು. ಆಮೇಲೆ ಚಾಣೂರ ಮುಷ್ಟಿಕರೆಂಬ ತನ್ನ ಕಡೆಯಜಟ್ಟಿಗಳನ್ನೂ, ಛಲ, ತೋಲಕ ಮೊದಲಾದ ವೀರರನ್ನೂ, ಮಂತ್ರಿಗಳನ್ನೂ, ಕೆಲವು ಆನೆಯ ಮಾವಟಿಗರನ್ನೂ ಕರೆಸಿ "ಓ ಚಾಣೂರಾ! ಮುಷ್ಟಿಕಾ! ಓಮಹಾವೀರರುಗಳಿರಾ! ವಸುದೇವನ ಮಕ್ಕಳಿಬ್ಬರೂ ನಂದನ ಮನೆಯಲ್ಲಿರುವುದಾಗಿ ತಿಳಿದುಬಂದಿದೆ! ಅವರಿಬ್ಬರನ್ನೂ ದೈವವು ನನಗೆ ಮೃತ್ಯುರೂಪವಾಗಿ ನಿಲ್ಲಿಸಿರುವುದು. ಅವರನ್ನು ನಾನು ಉಪಾಯದಿಂದ ಇಲ್ಲಿಗೆ ಕರೆತರಿಸುವೆನು. ನೀವು ಅವರನ್ನು ಮಲ್ಲಯುದ್ಧದನೆವದಿಂದ ತೀರಿಸಬಿಡಬೇಕು! ಆದುದರಿಂದ ಈಗಲೇ ನಮ್ಮ ಜಟ್ಟಿಕಾಳಗದ ಮೈದಾನವನ್ನು ಕ್ರಮಪಡಿಸಿರಿ! ಅಲ್ಲಿ ಪುರಜನರೆಲ್ಲರೂ! ಬಂದು ಕುಳಿತುಕೊಳ್ಳುವುದಕ್ಕೆ ಅನುಕೂಲಿಸುವಂತೆ,ಸುತ್ತಲೂ ಮಂಚಗಳು ಸಿದ್ಧಪಡಿಸಲ್ಪಡಲಿ! ನಮ್ಮ ಪಟ್ಟಣದಲ್ಲಿಯೂ,ದೇಶದಲ್ಲಿಯೂ ಇರತಕ್ಕ ಜನರೆಲ್ಲರೂ ಬಂದು

ಸೇರಿ, ನಿಮ್ಮ ಪರಾಕ್ರಮವನ್ನು ನೋಡಿ ಸಂತೋಷಪಡಲಿ!" ಎಂದು ಹೇಳಿ ಆನೆಯ ಮಾವಟಿಗರಲ್ಲಿ ಪ್ರಧಾನನಾದವನೊಬ್ಬನನ್ನು ಕರೆದು "ಓ ಮಹಾ ಮಾತ್ರಾ! (ಮಾವಟಿಗಾ) ನೀನು ಆನೆಗಳನ್ನು ನಡೆಸುವುದರಲ್ಲಿ ಬಹಳ ಚತುರನಲ್ಲವೆ? ನಾನು ಹೇಳುವ ಉಪಾಯವನ್ನು ಚೆನ್ನಾಗಿ ಮನಸ್ಸಿನಲ್ಲಿಟ್ಟು ಕಾರ್ಯಸಾಧನೆಯನ್ನು ಮಾಡಬೇಕು! ಏನೆಂದು ಕೇಳುವೆಯಾ? ನಮ್ಮಲ್ಲಿ ಈಗಲೇ ಮದಹತ್ತಿರುವ ಕುವಲಯಾಪೀಡವೆಂಬ ಮಹಾಗಜವುಂಟಲ್ಲವೆ? ಅದರ ಕೈಗೆ ಒಂದು ದೊಡ್ಡ ಮುದ್ಗರವನ್ನು ಕೊಟ್ಟು, ಆ ಮಲ್ಲ ಯುದ್ಧವು ನಡೆಯತಕ್ಕ ಮೈದಾನದ ಹೊರಬಾಗಿಲಲ್ಲಿಯೇ ನಿಲ್ಲಿಸಿರಬೇಕು. ರಾಮಕೃಷ್ಣರು ಆ ಬಾಗಿಲನ್ನು ಪ್ರವೇಶಿಸುವಾಗಲೇ,ಆ ಆನೆಯ ಕೈಯಿಂದ ಅವರನ್ನು ಕೊಲ್ಲಿಸಬೇಕು. ಈ ವಿಷಯವು ಚೆನ್ನಾಗಿ ನೆನಪಿರಲಿ!" ಎಂದನು. ಆ ಮಾವಟಿಗನಾದರೋ ಕೇವಲಋಜುಬುದ್ಧಿಯುಳ್ಳವನು! ಅವನು ಕಂಸನ ಕ್ರೂರಸ್ವಭಾವವನ್ನಾಗಲಿ, ರಾಮಕೃಷ್ಣರ ಪೂರ್ವೋತ್ತರಗಳನ್ನಾಗಲಿ ಯಾವುದನ್ನೂ ತಿಳಿದವನಲ್ಲ! ಆದುದರಿಂದ, ಕಂಸನು ಹೇಳಿದ ಕ್ರೂರವಾಕ್ಯವನ್ನು ಕೇಳಿ ಭಯದಿಂದ ಬೆಜ್ಜರಬಿದ್ದು, ವಿಜ್ಞಾಪಿಸುವನು. "ಓ ಮಹಾಪ್ರಭೂ! ಇದೇನಿದು! ನಿಮ್ಮ ಆಶ್ರಯದಲ್ಲಿದ್ದು ನಿಮ್ಮ ಉಪ್ಪನ್ನು ತಿಂದು ಬದುಕುತ್ತಿರುವ ನಾನು, ನಿಮ್ಮ ತಂಗಿಯ ಮಕ್ಕಳನ್ನು ಕೊಲ್ಲಬೇಕೆ? ನನ್ನನ್ನು ಪರೀಕ್ಷಿಸುವುದಕ್ಕಾಗಿ ಹೀಗೆ ಹೇಳುವಿರೇನು? ನಿಮ್ಮ ಮನಸ್ಸಿಗೆ ಅಹಿತವಾದ ಕಾರ್ಯವನ್ನು ಸ್ವಪ್ನದಲ್ಲಿಯೂ ನಾನು ಎಣಿಸತಕ್ಕವನಲ್ಲ" ಎಂದನು. ಈ ವಾಕ್ಯವನ್ನು ಕೇಳಿ ದುಷ್ಟನಾದ ಕಂಸನು, ಅವನ ಸಂದೇಹ ವನ್ನು ಪರಿಹರಿಸುವುದಕ್ಕಾಗಿ, ಆ ಸಭೆಯಲ್ಲಿರುವವರೆಲ್ಲರೂ ಕೇಳುತ್ತಿರಲು, ಹೀಗೆಂದು ಹೇಳುವನು.

ಎಲೈಸಭ್ಯರೆ! ನಾನು ಹೇಳುವ ಮಾತನ್ನು ಸಾವಧಾನವಾಗಿ ಕೇಳಿರಿ! ಆ ರಾಮಕೃಷ್ಣರಿಬ್ಬರೂ ನನಗೆ ಕೇವಲಸಮೀಪಬಂಧುಗಳಾಗಿದ್ದರೂ, ಅವರಲ್ಲಿ ನನಗೆ ಆಜನ್ಮದ್ವೇಷವುಂಟಾಗಿರುವುದಕ್ಕೆ ಕಾರಣವನ್ನು ತಿಳಿಸುವೆನು. ಮಹಾಭಾಗ್ಯವತಿಯಾದ ನನ್ನ ತಾಯಿಯು, ಬಾಲ್ಯದಿಂದಲೂ ನಿರತಿಶಯ ಸೌಂದರ್ಯವುಳ್ಳವಳು! ಕಮಲದಂತೆ ಕಣ್ಣುಳ್ಳವಳು! ಆಕೆಯು ಆಗಾಗ ತನ್ನ

ಅರಮನೆಯ ಉದ್ಯಾನವನದಲ್ಲಿ ಸಂಚರಿಸುವುದುಂಟು. ಅಲ್ಲಿ ಯಾವಾಗಲೂ ಸುಗಂಧವಿಶಿಷ್ಟವಾದ ಮಂದಮಾರುತವು ಬೀಸುತ್ತಿರುವುದು. ಪುಷ್ಪಸಮೃದ್ಧಗಳಾದ ಅಶೋಕ, ವಕುಳ, ಪೂಗ, ಪುನ್ನಾಗ, ವೊದಲಾದ ಹೂಗಿಡಗಳು ಅಲ್ಲಿ ಸಮೃದ್ಧವಾಗಿ ಬೆಳೆದಿರುವುವು. ಮಕರಂದಪಾನದಿಂದ ಮದಿಸಿದ ಭ್ರಮರಗಳೂ, ಕೋಗಿಲೆಗಳೂ,ಯಾವಾಗಲೂ ಕಿವಿಗಿಂಪಾಗಿ ಕೂಗುತ್ತಿರುವುವು.ಎಲ್ಲಿ ನೋಡಿದರೂ ನವಿಲುಗಳು ನರ್ತಿಸುತ್ತಿರುವುವು! ನೋಡುವವರಿಗೆ ಆಸೆಹುಟ್ಟಿಸುವಂತೆ ಕಪಿಗಳು ಮರದಿಂದ ಮರಕ್ಕೆ ನೆಗೆದು ಆಟವಾಡುತ್ತಿರುವುವು. ನಾನಾಬಗೆಯ ವೃಕ್ಷಗಳ ಸಾಲಿನಿಂದ ಮನೋಹರವಾಗಿರುವುದು

ಒಮ್ಮೆ ಲೋಕಮನೋಹರವಾದ ವಸಂತಕಾಲದಲ್ಲಿ, ನನ್ನ ತಾಯಿಯು ಋತುಸ್ನಾನಮಾಡಿ, ದೇಹವನ್ನಲಂಕರಿಸಿಕೊಂಡು, ಆ ತೋಟದಲ್ಲಿ ಸುತ್ತುತ್ತಿರುವಾಗ, ಆ ಉದ್ಯಾನದ ಸನ್ನಿವೇಶವನ್ನು ನೋಡಿ ಅವಳ ಮನಸ್ಸಿನಲ್ಲಿ ಕಾಮವಿಕಾರವು ತಲೆದೋರಿತು. ಆ ಕಾಮತಾಪದಿಂದ ತನ್ನ ಪತಿಯನ್ನು ಮನಸ್ಸಿನಲ್ಲಿ ಸ್ಮರಿಸುತಿದ್ದಳು. ಇದೇಸಮಯಕ್ಕೆ ಸರಿಯಾಗಿ, ದ್ರುಮಿಳನೆಂಬ ಬಬ್ಬಾನೊಬ್ಬ ಗಂಧರ್ವನು, ಯಾರ ಕಣ್ಣಿಗೂ ಕಾಣದಂತೆ ಆ ಉದ್ಯಾನವನದಲ್ಲಿ ಸಂಚರಿಸುತ್ತಿದ್ದು, ನನ್ನ ತಾಯಿಯು ಅಲ್ಲಿ ಏಕಾಕಿನಿಯಾಗಿರುವುದನ್ನು ಕಂಡು, ಅವಳ ರೂಪಕ್ಕೆ ಮೋಹಿತನಾದನು. ಅವನಿಗೆ ಇತರರ ಮನಸ್ಸನ್ನು ಕಂಡುಕೊಳ್ಳತಕ್ಕ ಅಸಾಧಾರಣ ಶಕ್ತಿಯಿದ್ದುದರಿಂದ, ನನ್ನ ತಾಯಿಯ ಮನೋಭಿಲಾಷೆಯನ್ನು ತಿಳಿದುಕೊಂಡು, ನನ್ನ ತಂದೆಯಾದ ಉಗ್ರಸೇನನಂತೆಯೇ ವೇಷಧಾರಿಯಾಗಿ ಬಂದನು. ಸರಸಸಲ್ಲಾಪಗಳಿಂದಲೂ ಅನುರಾಗಪೂರ್ವಕವಾದ ದೃಷ್ಟಿಯಿಂದಲೂ, ನನ್ನ ತಂದೆಯನ್ನೇ ಅನುಕರಿಸುತ್ತ, ಪತಿವ್ರತೆಯಾದ ನನ್ನ ತಾಯಿಯನ್ನು ಮರುಳುಮಾಡಿದನು. ನನ್ನ ತಾಯಿಯು ಮೊದಲೇ ಕಾಮಾತುರೆಯಾಗಿದ್ದುದರಿಂದ, ನಿಜಸ್ಥಿತಿಯನ್ನು ತಿಳಿಯಲಾರದೆ, ಮೋಹದಿಂದ ಬಂದು ಅವನನ್ನಾಲಿಂಗಿಸಿ, ಅವನೊಡನೆ ಆ ವನದಲ್ಲಿಯೇ ರಮಿಸಿಬಿಟ್ಟಳು. ಕೊನೆಗೆ ಅವನು ತನ್ನ ನಿಜವಾದ ಪತಿಯಲ್ಲವೆಂದು ಅವಳಿಗೆ ತಿಳಿದುಹೋಯಿತು! ಅವಳ ಮನಸ್ಸಿಗೆ ಬಹಳ ಸಂಕಟ

ವಾಯಿತು. ಅವಳ ಕಣ್ಣುಗಳಲ್ಲಿ ದುಃಖಬಾಷ್ಪವು ತುಳುಕುತಿತ್ತು. ಮಹಾದುಃಖದಿಂದಲೂ, ಕೋಪದಿಂದಲೂ, ಭಯದಿಂದಲೂ ಕುದಿಯುತ್ತ, ವೇಷಧಾರಿಯಾದ ಆ ಗಂಧರ್ವನನ್ನು ನೋಡಿ “ಎಲ ವಂಚಕಾ! ದುರಾತ್ಮಾ! ನೀನು ಯಾರು ಹೇಳು! ನಿಜಸ್ಥಿತಿಯನ್ನು ತಿಳಿಸು! ನೀನು ಸಜ್ಜನ ನಿಂದಿತವಾದ ಈ ಅಕಾರ್ಯವನ್ನು ಮಾಡಬಹುದೆ?” ಎಂದಳು. ಆಗ ಆ ಗಂಧರ್ವನು, ನನ್ನ ತಾಯಿಗೆ ಕೋಪಸಮಾಧಾನವನ್ನು ಮಾಡುತ್ತ, “ಎಲೆ ಮಂಗಳಾಂಗಿ! ನೀನು ಬೇರವಿಧವಾಗಿ ಚಿಂತಿಸಬೇಡ! ನಾವು ಗಂಧರ್ವರು. ಬಲದಲ್ಲಿ ದೇವತೆಗಳಿಗೆ ಸಮಾನರು! ಸಾಕ್ಷಾದ್ದೇವೇಂದ್ರನ ಸಮೀಪದಲ್ಲಿದ್ದು ಸೇವೆಮಾಡತಕ್ಕವರು. ಸುಂದರೀ! ಕೇವಲಮನುಷ್ಯಜಾತಿಗೆ ಮಾತ್ರ ಉಪಭೋಗ್ಯವಾದ ನಿಮಗೆ, ನಮ್ಮಂತಹ ದೇವತೆಗಳೊಡನೆ ಸಮಾಗಮವು ಲಭಿಸುವುದೇ ದುರ್ಲಭವು! ಹುಟ್ಟು, ಸಾವು, ರೋಗ ಮೊದಲಾದ ತೊಂದರೆಗಳಿಗೆ ಸಿಕ್ಕಿ, ಯಾವಾಗಲೂ ಕಷ್ಟಪಡುತ್ತಿರುವ ನಿಮ್ಮ ಮನುಷ್ಯಜಾತಿಗೂ, ನಮ್ಮ ದೇವಜಾತಿಗೂ ಎಷ್ಟೋ ತಾರತಮ್ಯವುಂಟು! ಹಾಗಿರುವಾಗಲೂ ನಾನಾಗಿ ಬಂದು ನಿನ್ನನ್ನು ವರಿಸಿರುವಾಗ, ನೀನು ಕೋಪಿಸಬಹುದೆ?” ಎಂದನು. ಇದನ್ನು ಕೇಳಿ ನನ್ನ ತಾಯಿಯು ಮತ್ತಷ್ಟು ಕೋಪದಿಂದ ಕಲಗಿದ ಇಂದ್ರಿಯಗಳುಳ್ಳವಳಾಗಿ, ತಿರುಗಿ ಅವನನ್ನು ಕುರಿತು “ದುರಾತ್ಮಾ! ನೀನು ಮಾಡಬಾರದ ಕಾರ್ಯವನ್ನು ಮಾಡಿಯೂ ತಿರುಗಿ ಅದನ್ನೇ ಸಾಧಿಸುತ್ತ, ನನ್ನನ್ನು ಸಮಾಧಾನಪಡಿಸುವೆಯಾ? ಭೂಮಿ, ಜಲ, ಅಗ್ನಿ, ವಾಯು, ಆಕಾಶವೆಂಬ ಪಂಚಭೂತಗಳೂ, ಸೂರ್ಯಚಂದ್ರರೂ, ದಿಕ್ಕುಗಳೂ, ಕಾಲವೂ, ಧರ್ಮದೇವತೆಯೂ, ಉಭಯಸಂಧ್ಯೆಗಳೂ, ಇವೆಲ್ಲವೂ ಪ್ರಾಣಿಗಳ ಪುಣ್ಯಪಾಪಕರ್ಮಗಳಿಗೆ ಸಾಕ್ಷಿಗಳಾಗಿ ನೋಡುತ್ತಿರುವುವು! ದುರಾತ್ಮನಾದ ನೀನು ಅವುಗಳನ್ನೂ ಅತಿಕ್ರಮಿಸಿ, ನನ್ನ ಪಾತಿವ್ರತ್ಯವನ್ನು ಕೆಡಿಸಿದೆಯಲ್ಲಾ! ಮದಾಂಧವಾದ ಆನೆಯು, ಸ್ವಚ್ಛವಾದ ಸರೋವರವನ್ನು ಕಲಗಿಸುವಂತೆ, ನಿರ್ಮಲೆಯಾದ ನನ್ನ ನಡತೆಗೆ ನೀನು ಮಾಲಿನ್ಯವನ್ನುಂಟುಮಾಡಿದೆ! ಎಲೆ ಸುರಾಧಮಾ! ಪಾಪಕಾರ್ಯವನ್ನು ಮಾಡಿ ನನ್ನನ್ನು ಸಮಾಧಾನಮಾಡುವೆಯಾ?” ಎಂದಳು. ಆಗ ಆ ಗಂಧ

ರ್ವನು, ನನ್ನ ತಾಯಿಯ ಕೋಪವನ್ನು ನೋಡಿ,ಶಾಪಭಯದಿಂದ ನಡುಗುತ್ತ ವಿನಯಪೂರ್ವಕವಾಗಿ ಅವಳನ್ನು ಕುರಿತು. "ಎಲೆಭದ್ರೆ! ಉತ್ತಮಜಾತಿಯ ಪುರುಷರು. ಹೀನಜಾತಿಯ ಸ್ತ್ರೀಯರನ್ನು ಪರಿಗ್ರಹಿಸುವುದರಿಂದ ದೋಷವೇನೂ ಕಾಣಲಿಲ್ಲ! ಮನುಷ್ಯರು ದೇವಸ್ತ್ರೀಯರನ್ನು ಪರಿಗ್ರಹಿಸಿದಾಗ ಅದನ್ನು ನ್ಯಾಯವಿರುದ್ಧವೆಂದು ಹೇಳಬಹುದೇಹೊರತು, ದೇವತೆಗಳು ಮನುಷ್ಯ ಸ್ತ್ರೀಯರನ್ನು ಪರಿಗ್ರಹಿಸುವುದೇನೋ ದೋಷಾಸ್ಪದವಲ್ಲ! ಆದುದರಿಂದ ನನ್ನಲ್ಲಿ ನೀನು ದೋಷವನ್ನೆಣಿಸಬಾರದು. ಇದರಿಂದ ನಿನಗೆ ಶ್ರೇಯಸ್ಸುಂಟು!ನನ್ನ ವೀರ್ಯವು ವ್ಯರ್ಥವಾಗಲಾರದು! ಈ ನನ್ನ ವೀರ್ಯದಿಂದ ನಿನ್ನ ಗರ್ಭದಲ್ಲಿ ಜನಿಸತಕ್ಕ ಪುತ್ರನು, ಬುದ್ಧಿಯಲ್ಲಿಯೂ, ಸಂಪತ್ತಿನಲ್ಲಿಯೂ, ವೀರ್ಯದಲ್ಲಿಯೂ ಮೇಲೆನಿಸಿಕೊಳ್ಳುವನು. ನನ್ನ ಮಾತು ಎಂದಿಗೂ ಸುಳ್ಳಾಗಲಾರದು ಇನ್ನು ನೀನು ಚಿಂತಿಸಬೇಡ! ಹೋಗು!"ಎಂದನು. ಹೀಗೆ ಆ ಗಂಧರ್ವನು ಎಷ್ಟೆಷ್ಟು ವಿಧದಿಂದ ಸಮಾಧಾನಪಡಿಸಿದರೂ, ಸುಶೀಲೆಯಾದ ನನ್ನ ತಾಯಿಯು, ತನ್ನ ಪಾತಿವ್ರತ್ಯವು ಕೆಟ್ಟುಹೋಯಿತೆಂಬ ಸಂಕಟದಿಂದ ಪರಿತಪಿಸುತ್ತ, ಅವನನ್ನು ಕುರಿತು ಕೋಪದಿಂದ "ಎಲವಂಚಕಾ! ಸದಾಚಾರವನ್ನು ಮೀರಿ ದುರ್ಮಾರ್ಗದಲ್ಲಿ ಪ್ರವರ್ತಿಸಿದ ನಿನಗೆ ಹುಟ್ಟುವ ಪುತ್ರನನ್ನು ನೋಡಿ ನಾನು ಸಂತೋಷಪಡಬೇಕೆ? ಎಲಪಾಪೀ! ನಿನಗೆ ಹುಟ್ಟತಕ್ಕ ಪುತ್ರನೂ ನಿನ್ನಂತೆಯೇ ಪಾಪಿಯಾಗಿ,ಕ್ರೂರಾತ್ಮನಾಗಿ, ಲೇಶಮಾತ್ರವೂ ಸುಗುಣಗಳಿಲ್ಲದೆ, ದುರ್ಗುಣಗಳಿಂದಲೇ ಕೂಡಿರಲಿ! ಅವನು ದೇವಬ್ರಾಹ್ಮಣರ, ಮತ್ತು ತಪಸ್ವಿಗಳ ಕೋಪಕ್ಕೆ ಪಾತ್ರನಾಗುವನೇಹೊರತು, ಅವರ ಅನುಗ್ರಹಕ್ಕೆ ಪಾತ್ರನಾಗಲಾರನು"ಎಂದಳು! ಅವಳು ಹೀಗೆಹೇಳಿ, ಮೇಲೆಮೇಲೆ ಕೋಪದಿಂದ ಉಕ್ಕುತ್ತಿರುವುದನ್ನು ನೋಡಿ, ಗಂಧರ್ವನಿಗೆ ಮನಸ್ಸಿನಲ್ಲಿ ಭೀತಿ ಹುಟ್ಟಿತು. ತನಗೆ ಎಲ್ಲಿ ಶಾಪವನ್ನು ಕೊಡುವಳೋ ಎಂದು ಹೆದರಿ, ಆ ಗಂಧರ್ವನು ಅವಳನ್ನು ನೋಡಿ "ಹಾಗಿದ್ದರೆ ನಿನ್ನ ಗರ್ಭದಲ್ಲಿ ಜನಿಸತಕ್ಕ ಆ ಪುತ್ರನು ನಿನ್ನ ಬಂಧುವರ್ಗಕ್ಕೇ ದ್ವೇಷಿಯಾಗಲಿ" ಎಂದು ಹೇಳಿ ಆಕ್ಷಣವೇ ಕಣ್ಮರೆಯಾಗಿಬಿಟ್ಟನು. ಅತ್ತಲಾಗಿ ಆ ಗಂಧರ್ವನು ಅಂತರ್ಧಾನಹೊಂದಿದಮೇಲೆ, ಇತ್ತಲಾಗಿಯಶಸ್ವಿನಿಯಾದ ನನ್ನ ತಾ

ಯಿಯು, ತನ್ನ ವೃತ್ತಾಂತವನ್ನು ಯಾರಿಗೂ ತಿಳಿಸದೆ, ಮನಸ್ಸಿನಲ್ಲಿಯೇ ಇಟ್ಟುಕೊಂಡು ಮನೆಗೆ ಬಂದು ಸೇರಿದಳು. ಕೆಲವುದಿನಗಳಲ್ಲಿಯೇ ಅವಳು ಗರ್ಭಿಣಿಯಾಗಿ ನನ್ನನ್ನು ಹಡೆದಳು! ಓ ಅಮಾತ್ಯರೆ ! ಪೂಜ್ಯರಾದ ನಾರದ ರಿಂದ ನನಗೆ ಈ ವಿಚಾರಗಳೆಲ್ಲವೂ ತಿಳಿದುಬಂದಿತು. ಹೀಗೆ ನನಗೆ ನನ್ನ ಬಂಧುಗಳೊಡನೆ ದ್ವೇಷವು ಜನ್ಮಸಿದ್ಧವಾಗಿರುವುದರಿಂದ, ಇದನ್ನು ತಪ್ಪಿಸುವುದಕ್ಕೆ ಯಾರಿಂದಲೂ ಸಾಧ್ಯವಲ್ಲ. ನಮನಮಗಿರುವ ಪರಸ್ಪರವೈರವನ್ನು ನೀವೂ ಬಲ್ಲಿರಷ್ಟೆ? ದುರ್ಬುದ್ಧಿಯಾದ ನನ್ನ ತಂದೆ ಉಗ್ರಸೇನನನ್ನೂ, ದುರಾತ್ಮನಾದ ದೇವಕನನ್ನೂ, ಧೂರ್ತನಾದ ವಸುದೇವನನ್ನೂ, ಇವರ ಆಶ್ರಯದಲ್ಲಿರುವ ಇತರರೆಲ್ಲರನ್ನೂ ಕೊಂದಾಗಲೇ ನನ್ನ ಜನ್ಮವು ಸಾರ್ಥಕವು. ಇದರಿಂದ ನನಗೆ ಬಂಧುಹತ್ಯಾಪಾತಕವು ಬರುವುದೆಂದೆಣಿಸಬೇಡಿರಿ! ನಾನು ಗಂಧರ್ವನಿಗೆ ಹುಟ್ಟಿದವನೇಹೊರತು ಉಗ್ರಸೇನನಿಗೆ ಹುಟ್ಟಿದವನಲ್ಲ! ಆದರಿಂದಲೇ ಈಗ ನಾನು ಆ ರಾಮಕೃಷ್ಣರನ್ನು ಕೊಲ್ಲುವುದಕ್ಕಾಗಿ ನಿಮಗೆ ಕ್ರೂರಶಾಸನವನ್ನು ಮಾಡಿದೆನು. ನಮ್ಮ ಮದದಾನೆಯ ಕಾಲಿಂದ ಆ ಬಾಲಕರಿಬ್ಬರನ್ನೂ ಕೊಲಿಸಿದಮೇಲೆ, ಅವರ ಮೃತದೇಹವನ್ನೇ ಯಮನಿಗೆ ನರಬಲಿಯಾಗಿ ಒಪ್ಪಿಸುವೆನು. ವಸುದೇವಾದಿಗಳೂ ಯಮನ ಪಟ್ಟಣಕ್ಕೆ ಹೋಗುವಾಗ, ಆ ಮಕ್ಕಳನ್ನೇ ಕೈಕಾಣಿಕೆಯಾಗಿ ತೆಗೆದುಕೊಂಡು ಹೋಗಲಿ ! ಉಗ್ರಸೇನ, ದೇವಕ, ನಂದ, ವಸುದೇವರೆಂಬ ನಾಲ್ವರು ಪ್ರಧಾನಪುರುಷರೂ, ಅವರನ್ನಾಶ್ರಯಿಸಿದ ಇತರಯಾದವರೂ, ಗೋಕುಲದಲ್ಲಿರುವಗೊಲ್ಲರೂ,ತಮ್ಮ ಮಕ್ಕಳಾದ ರಾಮಕೃಷ್ಣರು ನನ್ನಿಂದ ಸಾಯುವುದನ್ನು ನೋಡಿ ಕಣ್ಣೀರುಬಿಟ್ಟಾಗಲೇ, ನನ್ನ ಮನಸ್ಸಿಗೆ ತೃಪ್ತಿಯಾಗುವುದು. ನಮ್ಮ ಪುರಜನರೆಲ್ಲರನ್ನೂ ಕರೆಯಿಸಿರಿ ! ಈಗ ನಡೆಯುವ ಜಟ್ಟಿಕಾಳಗವನ್ನು ನೋಡಿ ಅವರೆಲ್ಲರೂ ಸಂತೋಷಪಡಲಿ ! ಓ ಮಹಾಮಾತ್ರಾ ! ಓ ಭದ್ರಾ ! ನೀನು ಕುವಲಯಾಪೀಡವೆಂಬ ನಮ್ಮ ಮದದಾನೆಯನ್ನು ರಂಗದ್ವಾರದಲ್ಲಿ ನಿಲ್ಲಿಸಿಕೊಂಡು ಕಾದಿರು ! ಆ ನನ್ನ ಶತ್ರುಗಳಿಬ್ಬರನ್ನೂ ಆ ಆನೆಯಿಂದಲೇ ಕೊಲ್ಲಿಸಬೇಕು. ಓ ಮಂತ್ರಿಗಳೆ ! ಮುಂದಿನ ಚತುರ್ದಶೀದಿನವೇ ನಾವು ಯಥಾವಿಧಿಯಾಗಿ ಧನುರ್ಯಾಗವನ್ನಾರಂಭಿಸಿಬಿಡ

ಬೇಕು ! ಆಗ ನಾವು ಸರ್ವಾಭೀಷ್ಟಪ್ರದನಾದ ಭೂತಪತಿಗೆ(ರುದ್ರನಿಗೆ) ಅನೇಕಪಶುಗಳನ್ನು ಬಲಿಕೊಡಬೇಕು! ಅದಕ್ಕೆ ಬೇಕಾದ ಸನ್ನಾಹಗಳೆಲ್ಲವೂ ನಡೆಯಲಿ ! " ಎಂದು ಆಜ್ಞೆಮಾಡಿದನು.

ಹೀಗೆ ಅವರವರಿಗೆ ಆಯಾಆಜ್ಞೆಯನ್ನು ಮಾಡಿ, ಅಕ್ರೂರನೆಂಬ ಯಾದವನನ್ನು ಕರೆದು, ಅವನ ಕೈಹಿಡಿದು, ಮೃದುವಾಕ್ಯದಿಂದ ಹೀಗೆಂದು ಹೇಳುವನು. "ಓ ಅಕ್ರೂರಾ! ಸೌಮ್ಯಾ ! ನೀನು ಮಹೋದಾರಸ್ವಭಾವವುಳ್ಳವನು. ನೀನು ನನಗಾಗಿ ಒಂದು ಮಿತ್ರಕಾರ್ಯವನ್ನು ನಡೆಸಿಕೊಡಬೇಕು. ನನಗೆ ವೃಷ್ಣಿಗಳಲ್ಲಿಯಾಗಲಿ, ಭೋಜರಲ್ಲಿಯಾಗಲಿ. ನಿನಗಿಂತಲೂ ಹಿತೈಷಿಗಳು ಬೇರೊಬ್ಬರಿಲ್ಲ! ದೇವೇಂದ್ರನು ವಿಷ್ಣುವನ್ನಾಶ್ರಯಿಸಿ ತನ್ನ ಅಭೀಷ್ಟವನ್ನು ಸಾಧಿಸಿದಂತೆ, ಈಗ ನಾನೂ ನನ್ನ ಕಾರ್ಯಗೌರವಕ್ಕಾಗಿ ನಿನ್ನನ್ನು ನಂಬಿರುವೆನು. ಓ ಸೌಮ್ಯಾ ! ಈಗಲೇ ನೀನು ನಂದವ್ರಜಕ್ಕೆ ಹೋಗಬೇಕು. ವಸುದೇವನ ಮಕ್ಕಳಾದ ರಾಮಕೃಷ್ಣರಿಬ್ಬರೂ ಅಲ್ಲಿರುವರು. ಇದೋ ! ನಿನಗಾಗಿ ಆಗಲೇ ರಥವನ್ನೂ ತರಿಸಿಟ್ಟಿರುವೆನು. ಆದುದರಿಂದ ನೀನು ವಿಳಂಬಮಾಡದೆ ಈ ರಥವನ್ನೇರಿ ಹೋಗಿ, ಅವರಿಬ್ಬರನ್ನೂ ಇದೇ ರಥದಮೇಲೆ ಕುಳ್ಳಿರಿಸಿಕೊಂಡು,ಇಲ್ಲಿ ಕರೆತರಬೇಕು. ದೇವತೆಗಳು ವಿಷ್ಣುವನ್ನು ಪ್ರೋತ್ಸಾಹಿಸಿ,ಆ ರಾಮಕೃಷ್ಣರಿಬ್ಬರನ್ನೂ ನನಗೆ ಮೃತ್ಯುರೂಪವಾಗಿ ಏರ್ಪಡಿಸಿರುವರು.ಆದುದರಿಂದ ಈಗ ನನಗಾಗಿ ಕಾಣಿಕೆಯನ್ನೊಪ್ಪಿಸುವುದಕ್ಕೆ ಬರುವ ನಂದಾದಿಗೋಪಾಲಕರೊಡನೆ, ಆ ರಾಮಕೃಷ್ಣರನ್ನೂ ನೀನು ಉಪಾಯದಿಂದ ಇಲ್ಲಿಗೆ ತರಬೇಕು. ಅವರಿಬ್ಬರೂ ಇಲ್ಲಿಗೆ ಬಂದೊಡನೆ, ಮೃತ್ಯುಸಮಾನವಾದ ನಮ್ಮ ಆನೆಯಿಂದ ಅವರನ್ನು ಕೊಲ್ಲಿಸುವೆನು. ಒಂದುವೇಳೆ ಅವರು ಆ ಗಂಡವನ್ನು ತಪ್ಪಿಸಿಕೊಂಡರೆ, ಸಿಡಿಲಿನಂತೆ ಮಹಾವೇಗವುಳ್ಳ ನಮ್ಮ ಜಟ್ಟಿಗಳಿಂದ ಅವರನ್ನು ಕೊಲ್ಲಿಸುವೆನು! ಅವರಿಬ್ಬರನ್ನು ಕೊಲ್ಲಿಸಿದಕೂಡಲೆ, ವಸುದೇವಾದಿಗಳನ್ನೂ, ಅವರ ಬಂಧುಗಳನ್ನೂ,ವೃಷ್ಣಿ, ಭೋಜ, ದಾಶಾರ್ಹರೇ ಮೊದಲಾದ ಸಮಸ್ತಯಾದವಕುಲದವರನ್ನೂ, ರಾಜ್ಯದಾಸೆಯಿಂದ ಕುದಿಯುತ್ತಿರುವ ನನ್ನ ಮುದಿತಂದೆಯಾದ ಉಗ್ರಸೇನನನ್ನೂ, ಅವನ ತಮ್ಮನಾದ ದೇವಕನನ್ನೂ, ಇನ್ನೂ ನನಗೆ ಶತ್ರುಗಳಾದ

ಬೇರೆಯವರೆಲ್ಲರನ್ನೂ ಸುಲಭವಾಗಿ ತೀರಿಸಿಬಿಡುವೆನು. ಆಗ ಈ ಸಮಸ್ತ ಭೂಮಿಯೂ ನಿಷ್ಕಂಟಕವಾಗಿ, ನನ್ನ ಕೈಸೇರುವುದು. ಅಕ್ರೂರಾ! ಹೀಗೆ ನಾನು ನನ್ನ ಬಂಧುಗಳೆಲ್ಲರನ್ನೂ ಕೊಲ್ಲಿಸಿದರೆ, ನನಗೆ ಸಹಾಯಕರಾರೆಂದು ಶಂಕಿಸಬೇಡ! ಜರಾಸಂಧನು ನನಗೆ ಗುರುವು! ದ್ವಿವಿದನು ನನಗೆ ಪ್ರಿಯ ಮಿತ್ರನು! ಶಂಬರ, ನರಕ ಬಾಣರೆಂಬವರೆಲ್ಲರೂ ನನ್ನಲ್ಲಿ ಬಹಳ ವಿಶ್ವಾಸ ವುಳ್ಳವರು! ಇವರ ಸಹಾಯದಿಂದ ನಾನು ದೇವಪಕ್ಷಪಾತಿಗಳಾದ ಇತರ ಕ್ಷತ್ರಿಯರೆಲ್ಲರನ್ನೂ ಕೊಂದು, ಏಕಾಧಿಪತ್ಯದಿಂದ ಈ ಭೂಮಿಯನ್ನನುಭ ವಿಸುವೆನು. ಇನ್ನು ನೀನು ಹೊರಡು! ಆ ಬಾಲಕರಿಬ್ಬರನ್ನೂ ಶೀಘ್ರದಲ್ಲಿಯೇ ಇಲ್ಲಿಗೆ ಕರೆತರುವವನಾಗು! ಈ ವಿಚಾರವೆಲ್ಲವೂ ನಿನ್ನ ಮನಸ್ಸಿನಲ್ಲಿಯೇ ಇರಲಿ! ಈಗ ನಾವು ಆರಂಭಿಸುವ ಧನುರ್ಯಾಗವೆಂಬ ಮಹೋತ್ಸವವನ್ನೂ, ಈ ಮಧುರಾಪಟ್ಟಣದ ಸಂಪತ್ಸಮೃದ್ಧಿಯನ್ನೂ ನೋಡುವುದಕ್ಕಾಗಿ ನಾನು ಬರಹೇಳಿದೆನೆಂದು ತಿಳಿಸಿ, ಉಪಾಯದಿಂದ ಅವರನ್ನು ಇಲ್ಲಿಗೆ ಕರೆತರಬೇಕು" ಎಂದನು. ಈ ಕಂಸನ ಕ್ರೂರವಾಕ್ಯವನ್ನು ಕೇಳಿ, ಪರಮಸಾಧುವಾದ ಅಕ್ರೂರನು, ಮನಸ್ಸಿನಲ್ಲಿ ದುಃಖಿಸುತ್ತ ಕಂಸನನ್ನು ಕುರಿತು. "ರಾಜಾ! ನಿನ್ನ ಮೃತ್ಯುವನ್ನು ತಪ್ಪಿಸಿಕೊಳ್ಳುವುದಕ್ಕಾಗಿ, ಈಗ ನೀನು ಮಾಡಿರುವ ಆಲೋಚನೆಯೇನೋ ಯುಕ್ತವಾಗಿಯೇ ಇರುವುದು. ಆದರೇನು? ಪ್ರಯ ತ್ನವುಮಾತ್ರ ನಿನ್ನದೇಹೊರತು. ಫಲವು ದೈವಾಯತ್ತವಾದುದು! ಆದುದ ರಿಂದ ಮನುಷ್ಯನು ಯಾವಕಾರ್ಯಕ್ಕೆ ಕೈಯಿಕ್ಕಿದರೂ, ಆ ಕಾರ್ಯಸಿದ್ಧಿ ಯಲ್ಲಿಯೂ, ಕಾರ್ಯಭಂಗದಲ್ಲಿಯೂ, ನಿಶ್ಚಯಬುದ್ಧಿಯನ್ನಿಡದೆ, ಸಮಬುದ್ಧಿ ಯಿಂದ ಕಾರ್ಯವನ್ನು ನಡೆಸಬೇಕು! ದೈವಯೋಗದಿಂದ ತನ್ನ ಪ್ರಯತ್ನವು ವಿಫಲವಾಗುತ್ತ ಬಂದರೂ, ಮನುಷ್ಯನಿಗೆ ಮೇಲೆಮೇಲೆ ಮನೋರಥವು ಆಸೆಯನ್ನು ಹೆಚ್ಚಿಸುತ್ತಿರುವುದು. ಒಂದೊಂದುವೇಳೆ ತನ್ನ ಸುಖಕ್ಕಾಗಿ ಆ ರಂಭಿಸಿದ ಕಾರ್ಯವೇ ದುಃಖಕ್ಕೇ ಕಾರಣವಾಗುವುದುಂಟು! ದೈವಾನುಕೂಲ್ಯ ವಿದ್ದರೆ, ಅದರಿಂದ ಸುಖವೂ ಉಂಟಾಗಬಹುದು. ಹೇಗಾದರೂ ಆಗಲಿ! ನಿನ್ನ ಆಜ್ಞೆಯನ್ನು ನೆರವೇರಿಸಬೇಕಾದುದು ನನ್ನ ಕಾರ್ಯವು. ಇದೋ ಹೊರಡು ವೆನು" ಎಂದನು. ಓ ಪರೀಕ್ಷಿದ್ರಾಜಾ! ಆಮೇಲೆ ಕಂಸನು, ಅಕ್ರೂರನನ್ನೂ,

ಇತರಮಂತ್ರಿಗಳನ್ನೂ ಕಳುಹಿಸಿ, ತನ್ನ ಅರಮನೆಗೆ ಬಂದು ಸೇರಿದನು. ಅಕ್ರೂರನೂ ಇತ್ತಲಾಗಿ ತನ್ನ ಮನೆಗೆ ಬಂದುಸೇರಿದನು. ಇದು ಮೂವತ್ತಾರನೆಯ ಅಧ್ಯಾಯವು.

---

## ಕೇಶಿಸಂಹಾರವು.

ರಾಜೇಂದ್ರಾ ! ಹಿಂದೆ ನಾರದನು ಕಂಸನಬಳಿಗೆ ಬಂದು, ರಾಮಕೃಷ್ಣರು ನಂದಗೋಕುಲದಲ್ಲಿರುವುದಾಗಿ ಹೇಳಿ ಹೊರಟುಹೋದಕೂಡಲೆ, ಕಂಸನು ಕೇಶಿಯೆಂಬ ದಾನವನನ್ನು ಕರೆದು,ರಾಮಕೃಷ್ಣರನ್ನು ಕೊಲ್ಲುವುದಕ್ಕಾಗಿ ಕಳುಹಿಸಿದನೆಂದು ಹೇಳಿದ್ದೆನಲ್ಲವೆ ? ಹೀಗೆ ಕಂಸನಿಂದಾಜ್ಞಪ್ತನಾದ ಕೇಶಿಯು, ಭಯಂಕರವಾದ ದೊಡ್ಡಕುದುರೆಯ ಆಕಾರವನ್ನು ತಾಳಿ, ನಂದನ ನಿವಾಸಕ್ಕೆ ಹೊರಟನು. ಆಗ ಅವನ ಆರ್ಭಟವನ್ನು ಕೇಳಬೇಕೆ ? ಅವನ ವೇಗವು ಮನೋವೇಗವನ್ನೂ ಮೀರಿಸುವಂತಿದ್ದಿತು, ಅವನು ಹೆಜ್ಜೆಯಿಟ್ಟು ನಡೆಯುವಾಗ,ಅವನ ಖುರಘಾತಕ್ಕೆ ಭೂಮಿಯೆಲ್ಲವೂ ಭೇದಿಸಿ ಹೋಗುವಂತಾಯಿತು ! ಅವನ ಕಂಠದಮೇಲಿನ ಕೂದಲುಗಳಿಂದ ಆಕಾಶದಲ್ಲಿರುವ ಮೇಘಗಳೂ, ದೇವವಿಮಾನಗಳೂ ಕದಲಿ ಕೆಳಗೆಬೀಳುವಂತಿದ್ದುವು. ಭಯಂಕರವಾದ ಅವನ ಹೇಷಿತಧ್ವನಿಗೆ ಲೋಕವೆಲ್ಲವೂ ನಡುಗುತಿತ್ತು. ವಿಶಾಲವಾದ ಕಣ್ಣುಗಳು!ಪರ್ವತಗುಹೆಯಂತೆ ಭಯಂಕರವಾಗಿ ಬಿಚ್ಚಿದಬಾಯಿ! ಉದ್ಧವಾದ ಕೊರಲು! ಮಹಾಮೇಘದಂತೆ ಕಪ್ಪಾದ ದೊಡ್ಡ ಆಕೃತಿ !ಇಂತಹ ಭಯಂಕರಸ್ವರೂಪವುಳ್ಳ ಆ ರಾಕ್ಷಸನು,ಕಂಸನ ಹಿತಕ್ಕಾಗಿ ಕೃಷ್ಣನನ್ನು ಕೊಲ್ಲಬೇಕೆಂಬ ದುರುದ್ದೇಶದಿಂದ ಹೊರಟು, ಲೋಕವೆಲ್ಲವನ್ನೂ ನಡುಗಿಸುವಂತೆ ಮಹಾವೇಗದಿಂದ ನಂದವ್ರಜಕ್ಕೆ ಬಂದು ಸೇರಿದನು. ಹೀಗೆ ಆ ರಾಕ್ಷಸನು, ತನ್ನ ಕೂಗಾಟದಿಂದ ಗೋಕುಲವೆಲ್ಲವನ್ನೂ ನಡುಗಿಸುತ್ತ,ಆಕಾಶದಲ್ಲಿರುವ ಮೇಘಗಳನ್ನೊತ್ತರಿಸುವಂತೆ ಬಾಲವನ್ನು ಬೀಸುತ್ತ, ತನ್ನನ್ನು ಹುಡುಕುತ್ತಿರುವುದನ್ನು ತಿಳಿದು, ಕೃಷ್ಣನು ತಾನಾಗಿಯೇ ಮುಂದೆ ಬಂದು ನಿಂತು, ಕೈತಟ್ಟಿ ಅವನನ್ನು ಯುದ್ಧಕ್ಕಾಗಿ ಕರೆದನು. ಇದನ್ನುನೋಡಿ ಕೇಶಿಯು, ಮತ್ತಷ್ಟು ಕೋಪೋದ್ರಿಕ್ತನಾಗಿ, ಸಿಂಹದಂತೆ

ಗರ್ಜಿಸುತ್ತ, ತನ್ನನ್ನಿದಿರಿಸುವುದಕ್ಕೆ ಸಿದ್ಧವಾಗಿ ನಿಂತಿರುವ ಕೃಷ್ಣನನ್ನು ಕಂಡು, ಆಕಾಶವನ್ನೇ ನುಂಗಿಬಿಡುವಂತೆ ದೊಡ್ಡದಾಗಿ ಬಾಯನ್ನು ತೆರೆದು, ಕೃಷ್ಣನ ಸಮೀಪಕ್ಕೆ ವೇಗದಿಂದೋಡಿ ಬಂದು, ಪ್ರಚಂಡಧ್ವನಿಯಿಂದ ಗರ್ಜಿಸಿ. ಕೃಷ್ಣನನ್ನು ಅಪ್ಪಳಿಸುವುದಕ್ಕಾಗಿ ಕಾಲುಗಳನ್ನೆತ್ತಿ ಒದರಿದನು. ಇಷ್ಟರಲ್ಲಿ ಕೃಷ್ಣನು,ಆ ಪ್ರಹಾರವನ್ನು ಉಪಾಯದಿಂದ ತಪ್ಪಿಸಿಕೊಂಡು, ತನ್ನ ಎರಡುಕೈಗಳಿಂದ ಅವನ ಕಾಲುಗಳನ್ನು ಹಿಡಿದು ಮೇಲಕ್ಕೆತ್ತಿ, ಗಿರ ಗಿರನೆ ತಿರುಗಿಸಿ, ಗರುಡನು ಹಾವನ್ನು ಹಿಡಿದೆಸೆಯುವಂತೆ ಲೀಲಾಮಾತ್ರ ದಿಂದ ಅವನನ್ನು ನೂರುಬಿಲ್ಲಳತೆಗಳ ದೂರಕ್ಕೆ ಬಿಸಾಡಿದನು. ಕೆಳಗೆಬಿಳುವ ವೇಗದಲ್ಲಿ, ಆ ಕುದುರೆಯ ದೇಹವೆಲ್ಲವೂ ಜರ್ಝರಿತವಾಗಿ, ಅದಕ್ಕೆ ಪ್ರಜ್ಞೆ ತಪ್ಪಿತು. ಆದರೇನು?ಸ್ವಲ್ಪಕಾಲದೊಳಗಾಗಿಯೇ ತಿರುಗಿ ಚೇತರಿಸಿಕೊಂಡು ಮೇಲಕ್ಕೆದ್ದು, ಕೃಷ್ಣನನ್ನು ಕಚ್ಚುವುದಕ್ಕಾಗಿ ದೊಡ್ಡದಾಗಿ ಬಾಯನ್ನು ತೆರೆದು,ವೇಗದಿಂದ ಮುಂದೆಬಂದಿತು. ಇಷ್ಟರಲ್ಲಿಯೇ ಕೃಷ್ಣನು, ಬಿಲದಲ್ಲಿ ಹಾವನ್ನು ಹುಗಿಸುವಂತೆ,ತನ್ನ ಎಡದೋಳನ್ನು ಅದರ ಬಾಯೊಳಗೆ ಹುಗಿಸಿ ದನು.ಆಗ ಕೇಶಿಯು ಕೋಪದಿಂದ ಕೃಷ್ಣನ ಭುಜವನ್ನು ಕಡಿಯುವುದಕ್ಕಾಗಿ ಹಲ್ಲೂರಿದಾಗ, ಕಾಸಿದ ಕಬ್ಬಿಣದ ಗಡಾರಿಯನ್ನು ಕಡಿದಂತಾಗಿ, ಅವನ ಹಲ್ಲುಗಳೆಲ್ಲವೂ ಮುರಿದುಬಿದ್ದುವು. ತಕ್ಕ ಚಿಕಿತ್ಸೆಯಿಲ್ಲದೆ ಅಲಕ್ಷ್ಯವಾಗಿ ಬಿಟ್ಟ ಮಹೋದರವೆಂಬ ವ್ಯಾಧಿಯು, ದೇಹದಲ್ಲಿ ಪ್ರಬಲಿಸುವಂತೆ, ಆ ಕುದುರೆಯ ಕಂಠನಾಳದಲ್ಲಿ ಹುದುಗಿದ ಕೃಷ್ಣನ ತೋಳು, ಮೇಲೆಮೇಲೆ ದೊಡ್ಡದಾಗಿ ಉಬ್ಬುತ್ತಬಂದಿತು. ಆ ಕುದುರೆಗೆ ಉಸಿರಾಡುವುದಕ್ಕೂ ಅವಕಾಶವಿಲ್ಲದಂತಾ ಯಿತು. ಮೈಯಲ್ಲಿ ಬೆವರು ಕಿತ್ತುಕೊಂಡಿತು. ಕಣ್ಣಾಲೆಗಳು ಮೇಲೆ ನಾಟಿ ಕೊಂಡುವು. ಮರಣಬಾಧೆಯಿಂದ ಮಲಮೂತ್ರಗಳನ್ನು ವಿಸರ್ಜಿಸುತ್ತ, ಕೈ ಕಾಲುಗಳನ್ನೊದರಿ, ತಗಪ್ರಾಣವಾಗಿ ಕೆಳಗೆಬಿದ್ದಿತು. ಆಗ ಆ ದೇಹವು, ಚೆನ್ನಾಗಿ ಮಾಗಿ ಬಿರಿತ ಕರ್ಬೂಜದ ಹಣ್ಣಿನಂತೆ ಉದ್ದಕ್ಕೂ ಸೀಳಿ ಹೋಯಿತು. ಆಮೇಲೆ ಕೃಷ್ಣನು, ಆಸೀಳಿನ ಮಾರ್ಗವಾಗಿಯೇ ತನ್ನ ತೋಳನ್ನು ಹಿಂದಕ್ಕೆಳೆದುಕೊಂಡು, ತಾನು ಹೀಗೆ ನಿರಾಯಾಸವಾಗಿ ಶತ್ರು ವನ್ನು ಕೊಂದರೂ ಮನಸ್ಸಿನಲ್ಲಿ ಗರ್ವವಿಲ್ಲದೆ ಶಾಂತವಾಗಿದ್ದನು. ದೇವತೆ

ಗಳೆಲ್ಲರೂ ಕೃಷ್ಣನ ಈ ಅದ್ಭುತಕಾರ್ಯವನ್ನು ನೋಡಿ, ಅವನಮೇಲೆ ಪುಷ್ಪವರ್ಷವನ್ನು ಕರೆದುಸ್ತುತಿಸುತಿದ್ದರು.

ನಾರದಮಹರ್ಷಿಯು ಕೃಷ್ಣನಬಳಿಗೆ ಬಂದುದು

ಪರೀಕ್ಷಿದ್ರಾಜಾ! ಕೇಳು! ಈ ಕೇಶಿಸಂಹಾರವು ನಡೆದಮೇಲೆ, ಭಗವದ್ಭಕ್ತಶಿರೋಮಣಿಯಾದ ನಾರದನು, ಉದಾರಚರಿತ್ರನಾದ ಶ್ರೀಕೃಷ್ಣನ ಬಳಿಗೆ ರಹಸ್ಯವಾಗಿ ಬಂದು, ಹೀಗೆಂದು ವಿಜ್ಞಾಪಿಸುವನು. "ಕೃಷ್ಣಾ! ಕೃಷ್ಣಾ! ಓ ಅಪ್ರಮೇಯಪ್ರಭಾವಾ! ಯೋಗೀಶ್ವರಾ! ಜಗನ್ನಾಯಕಾ! ಓ ವಾಸುದೇವಾ! ಸಕಲಾಧಾರಾ! ಓ ಭಕ್ತಪಾಲಕಾ! ಪ್ರಭೂ! ನೀನು ಆ ಬ್ರಹ್ಮಸ್ತಂಬಪರ್ಯಂತವಾದ ಸಮಸ್ತಭೂತಗಳಲ್ಲಿಯೂ ಅಂತರಾತ್ಮನಾಗಿ ಸೇರಿರತಕ್ಕವನು. ಹಾಗಿದ್ದರೂ ಕಟ್ಟಿಗೆಯಲ್ಲಿರುವ ಬೆಂಕಿಯು, ಎಲ್ಲಾ ಕಟ್ಟಿಗೆಗಳಲ್ಲಿಯೂ ಒಂದೇವಿಧವಾದ ತೇಜಸ್ಸಿನಿಂದ ಬೆಳಗುವಂತೆ, ಆಯಾಶರೀರಗತವಾದ ದೋಷಗಳಿಗೆ ಈಡಾಗದೆ, ಒಂದೇ ವಿಧವಾಗಿರತಕ್ಕವನು. ಮತ್ತು ಅರಣಿಯಲ್ಲಿ ಅಗ್ನಿಯು ಗೂಢವಾಗಿರುವಂತೆ, ಎಲ್ಲಾಭೂತಗಳ ಹೃದಯಗುಹೆಯಲ್ಲಿಯೂ ಗೂಢವಾಗಿ, ಅವುಗಳ ವ್ಯಾಪಾರಗಳನ್ನು ಸಾಕ್ಷಾತ್ಕರಿಸತಕ್ಕವನು. ಮಹಾಪುರುಷನು! ಸರ್ವನಿಯಾಮಕನು! ನಿನಗೆ ನೀನೇ ಆಧಾರನು! ನಿಜಸಂಕಲ್ಪದಿಂದಲೇ ಪ್ರಕೃತಿಗುಣಕಾರ್ಯಗಳಾದ ಮಹದಾದಿತತ್ವಗಳನ್ನು ಸೃಷ್ಟಿಸತಕ್ಕವನು. ಆ ಗುಣಕಾರ್ಯಗಳಿಂದಲೇ ಈ ಪ್ರಪಂಚದ ಸೃಷ್ಟಿಸ್ಥಿತಿಸಂಹಾರಗಳನ್ನೂ ನಿರ್ವಹಿಸತಕ್ಕವನು. ಕೃಷ್ಣಾ! ಈಗ ನೀನು ಭೂಮಿಗೆ ಭಾರಭೂತರಾದ ದಾನವರಾಕ್ಷಸರ ನಾಶಕ್ಕಾಗಿಯೂ, ಸಾಧುಗಳನ್ನು ರಕ್ಷಿಸುವುದಕ್ಕಾಗಿಯೂ ಈ ಅವತಾರವನ್ನೆತ್ತಿರುವೆ?! ಯಾವನ ಹೇಷಿತಧ್ವನಿಯನ್ನು ಕೇಳಿದಮಾತ್ರಕ್ಕೆ ದೇವತೆಗಳೆಲ್ಲರೂ ಸ್ವರ್ಗವನ್ನು ಬಿಟ್ಟು ಭಯದಿಂದೋಡುತಿದ್ದರೋ, ಕುದುರೆಯ ಆಕಾರದಿಂದಿದ್ದ ಆ ಕೇಶಿದಾನವನನ್ನು ನೀನು ಲೀಲಾಮಾತ್ರದಿಂದ ಸಂಹರಿಸಿದೆ! ಇದು ನಮ್ಮ ಭಾಗ್ಯವಿಶೇಷವು! ಆದರೇನು? ಇನ್ನೂ ಲೋಕಕ್ಷೇಮಕ್ಕಾಗಿ ನಿನ್ನಿಂದ ನಡೆಯಬೇಕಾದ ಕಾರ್ಯಗಳನೇಕವಾಗಿರುವುವು. ಇನ್ನು ಒಂದೆರಡುಗಳಿಗೆಗಳೊಳಗಾಗಿ, ಅಕ್ರೂರನು ನಿನ್ನನ್ನು ಕರೆಯುವು

ದಕ್ಕಾಗಿ ಬರುವನು. ನಾಳೆ ನೀನು ಮಥುರೆಗೆ ಪ್ರಯಾಣಮಾಡಬೇಕು. ನಾಡಿದ್ದು ಚಾಣೂರಮುಷ್ಟಿಕರೇ ಮೊದಲಾದ ಕಂಸನ ಕಡೆಯ ಜಟ್ಟಿಗಳೂ, ಕುವಲಯಾಪೀಡವೆಂಬ ಮದದಾನೆಯೂ, ನೀಚನಾದ ಕಂಸನೂ, ನಿನ್ನಿಂದ ಹತರಾಗುವುದನ್ನು ನೋಡಿ ನಾನು ಸಂತೋಷಪಡಬೇಕಾಗಿರುವುದು. ಅದರಿಂದಾಚೆಗೆ ನಿನ್ನಿಂದ, ಶಂಖ, ಯವನ, ಮುರ, ನರಕರೆಂಬ ದಾನವರ ಸಂಹಾರವು ನಡೆಯಬೇಕು. ಅದರಿಂದಾಚೆಗೆ ರುಕ್ಮಿಣಿ ಮೊದಲಾದ ವೀರಕನ್ಯೆಯರನ್ನು ನಿನ್ನ ಪರಾಕ್ರಮವೆಂಬ ಶುಲ್ಕದಿಂದ ಸಾಧಿಸಿ ತಂದು ವಿವಾಹವಾಗಬೇಕು. ಆಮೇಲೆ ನೀನು ಇಂದ್ರನಿಗೆ ಗರ್ವಭಂಗವನ್ನು ಮಾಡಿ ದೇವಲೋಕದ ಪಾರಿಜಾತವನ್ನು ತರಬೇಕು. ಹಾಗೆಯೇ ನೃಗಚಕ್ರವರ್ತಿಗೆ ಶಾಪವಿಮೋಚನವನ್ನು ಮಾಡುವುದು, ದ್ವಾರಕೆಗೆ ಸ್ಯಮಂತಕಮಣಿಯನ್ನು ತರುವುದು, ಆ ಸಂದರ್ಭದಲ್ಲಿ ಜಾಂಬವತೀಸತ್ಯಭಾಮೆಯರನ್ನು ಮದಿವೆಯಾಗುವುದು, ಮೃತನಾದ ಬ್ರಾಹ್ಮಣಪುತ್ರನನ್ನು ಸಂಕರ್ಷಣಲೋಕದಿಂದ ತರಿಸಿಕೊಡುವುದು, ಪೌಂಡ್ರಕನನ್ನು ಕೊಲ್ಲುವುದು, ಕಾಶೀಪುರಿಯನ್ನು ದಹಿಸುವುದು, ದಂತವಕ್ತ್ರನನ್ನು ಕೊಲ್ಲುವುದು, ಧರ್ಮರಾಜನ ರಾಜಸೂಯಯಾಗದಲ್ಲಿ ಶಿಶುಪಾಲನನ್ನು ಸಂಹರಿಸುವುದು, ಇವು ಮೊದಲಾಗಿ ದ್ವಾರಕೆಯಲ್ಲಿ ಇನ್ನೂ ಅನೇಕವೀರಕಾರ್ಯಗಳು ನಿನ್ನಿಂದ ನಡೆಯಬೇಕಾಗಿರುವುದು. ಅನೇಕಕವಿಗಳಿಂದ ಕೀರ್ತಿಸಲ್ಪಡುವ ಈ ನಿನ್ನ ಅದ್ಭುತಕಾರ್ಯಗಳೆಲ್ಲವನ್ನೂ ಶೀಘ್ರದಲ್ಲಿಯೇ ನಾವು ಕಣ್ಣಾರೆ ನೋಡುವುದರಲ್ಲಿ ಸಂದೇಹವಿಲ್ಲ ! ಇಷ್ಟೇಅಲ್ಲದೆ,ಕಾಲರೂಪಿಯಾದ ನೀನು ಭೂಭಾರಪರಿಹಾರವೆಂಬ ದೊಡ್ಡಕಾರ್ಯಕ್ಕಾಗಿಯೇ ಈ ಅವತಾರವನ್ನೆತ್ತಿರುವುದರಿಂದ, ಅರ್ಜುನನಿಗೆ ಸಾರಥಿಯಾಗಿದ್ದು, ಅನೇಕಾಕ್ಷೌಹಿಣೀಸೈನ್ಯಗಳನ್ನು ನಾಶಮಾಡುವುದನ್ನೂ ನಾವು ನೋಡುವೆವು. ಕೃಷ್ಣಾ ! ನೀನು ಸಾಮಾನ್ಯನಾದವನಲ್ಲವೆಂಬುದನ್ನು ನಾನು ಬಲ್ಲೆನು. ನೀನು ಕೇವಲಜ್ಞಾನಾನಂದಸ್ವರೂಪನು. ಅವಾಪ್ತಸಮಸ್ತಕಾಮನಾದುದರಿಂದ, ಆತ್ಮಾನುಭವವೊಂದರಿಂದಲೇ ಆನಂದಿಸತಕ್ಕವನು. ನಿನ್ನ ಸಂಕಲ್ಪವು ಎಂದಿಗೂ ವಿಫಲವಾಗಲಾರದು. ನಿನ್ನ ತೇಜೋಬಲದಿಂದಲೇ ನೀನು ಸಮಸ್ತಮಾಯಾಗು

ಣಗಳನ್ನೂ ನಿಗ್ರಹಿಸಿರತಕ್ಕವನು. ಷಾಡ್ಗುಣ್ಯಪರಿಪೂರ್ಣನು. ಇಂತಹ ನಿನ್ನನ್ನು ಮರೆಹೊಕ್ಕಿರುವೆವು. ದೇವಾ! ನಿನಗೆ ನೀನೇ ಆಧಾರನಾಗಿ, ನಿಜಸಂಕಲ್ಪದಿಂದಲೇ ದೇವತಿರ್ಯಙ್ಮನುಷ್ಯಾದಿಸಕಲಪ್ರಪಂಚವ್ಯಾಪಾರವನ್ನೂ ನಿರ್ವಹಿಸುತ್ತಿರುವೆ. ಹೀಗೆ ನೀನು ಸರ್ವಸ್ವತಂತ್ರನಾಗಿ, ಸರ್ವನಿಯಾಮಕನಾಗಿದ್ದರೂ, ಲೀಲಾರ್ಥರಾಗಿ ಈ ಮನುಷ್ಯಶರೀರವನ್ನು ಕೈಕೊಂಡು, ಯಾದವರಿಗೂ, ವೃಷ್ಣಿಗಳಿಗೂ, ಸಾತ್ವತರಿಗೂ ಪ್ರಮುಖನೆನಿಸಿಕೊಂಡಿರುವೆ! ಹೀಗೆ ಮನುಷ್ಯಲೀಲೆಯಿಂದ ವಿಹರಿಸುತ್ತಿರುವ ನಿನಗೆ ವಂದನವು." ಎಂದು ನಾರದನು, ಶ್ರೀ ಕೃಷ್ಣನ ಪೂರ್ವೋತ್ತರಚರಿತ್ರಗಳನ್ನು ಸ್ತುತಿಸಿ, ಅವನ ಪಾದಗಳಿಗೆ ನಮಸ್ಕರಿಸಿ, ಅವನ ಅನುಜ್ಞೆಯನ್ನು ಪಡೆದು, ಆ ಶ್ರೀ ಕೃಷ್ಣನ ಸಂದರ್ಶನದಿಂದುಂಟಾದ ಮಹಾನಂದದಿಂದುಬ್ಬುತ್ತ, ತನ್ನ ದಾರಿಯನ್ನು ಹಿಡಿದು ಹೊರಟುಹೋದನು. ಭಗವಂತನಾದ ಶ್ರೀಕೃಷ್ಣನೂ ಕೂಡ, ಇತ್ತಲಾಗಿ ಕೇಶಿಸಂಹಾರವಾದಮೇಲೆ, ತನ್ನ ಸಹಚರರಾದ ಗೋಪಾಲಕರೊಡನೆ ಮಂದೆಯನ್ನು ಕಾಯುತ್ತ, ಗೋಕುಲಕ್ಕೆ ಕ್ಷೇಮವನ್ನುಂಟುಮಾಡುತಿದ್ದನು.

## ವ್ಯೋಮಾಸುರವಧವು.

ರಾಜೇಂದ್ರಾ! ಅದರಿಂದಾಚೆಗೆ ಒಮ್ಮೆ ಗೋಪಬಾಲಕರೆಲ್ಲರೂ ಒಂದಾನೊಂದು ಬೆಟ್ಟದ ಕಿಬ್ಬರಿಯಲ್ಲಿ ದನಗಳನ್ನು ಮೇಯಿಸುತ್ತ, ಕಳ್ಳರಂತೆಯೂ, ಕಾವಲಿನವರಂತೆಯೂ ಬೇರೆಬೇರೆ ಗುಂಪಾಗಿ, ಹಿಡಿದಾಟವನ್ನಾಡತೊಡಗಿದರು. ಕೆಲವರು ಮೇಕೆಗಳಾಗಿ ನಿಲ್ಲುವುದು, ಬೇರೆ ಕೆಲವರು ಕಳ್ಳರಂತೆ ಅವುಗಳನ್ನು ಕದ್ದುಕೊಂಡು ಓಡುವುದು, ಬೇರೆ ಕೆಲವರು ಆ ಕಳ್ಳರನ್ನು ಹಿಡಿಯುವುದು, ಈ ರೀತಿಯಿಂದ ನಿರ್ಭಯವಾಗಿ ಆಟವಾಡುತ್ತಿರುವಾಗ, ಮಾಯೆಯಲ್ಲಿ ನಿಪುಣನೆನಿಸಿದ ಮಯಪುತ್ರನಾದ ವ್ಯೋಮಾಸುರನೆಂಬವನು, ಗೊಲ್ಲರ ವೇಷದಿಂದ ಬಂದು, ಅವರೊಡನೆ ತಾನೂ ಆಟಕ್ಕೆ ಸೇರಿಕೊಂಡನು. ಅವನು ಕಪಟಬುದ್ಧಿಯಿಂದಲೇ ಬಂದವನಾದುದರಿಂದ, ಕಳ್ಳರಲ್ಲಿ ತಾನೂ ಒಬ್ಬನಾಗಿದ್ದು, ಮೇಕೆಗಳನ್ನು ಹಿಡಿಯುವಹಾಗೆ ನಟಿಸುತ್ತ, ಅನೇಕಬಾಲಕರನ್ನು ನಿಜವಾಗಿಯೇ ಸಾಗಿಸಿಬಿಟ್ಟನು. ಕೈಗೆ ಸಿಕ್ಕಿದವರನ್ನೆಲ್ಲಾ ಹಿಂದಾನೊಂದು

ಪರ್ವತಗುಹೆಯಲ್ಲಿ ಬಚ್ಚಿಟ್ಟು, ಆ ಗುಹೆಯ ಬಾಗಿಲನ್ನು ಕಲ್ಲಿಂದ ಮುಚ್ಚಿ ಬರುವುದು, ತಿರುಗಿಮತ್ತೊಬ್ಬನನ್ನು ಸಾಗಿಸುವುದು, ಹೀಗೆಯೇ ಬಹುಮಂದಿ ಬಾಲಕರನ್ನು ಸಾಗಿಸಿ ಗುಹೆಯಲ್ಲಿ ಬಚ್ಚಿಟ್ಟನು. ಕೊನೆಕೊನೆಗೆ ಮಂದೆಯನ್ನು ಕಾಯುತಿದ್ದ ಬಾಲಕರ ಸಂಖ್ಯೆಯು ಕಡಿಮೆಯಾಗುತ್ತ ಬಂದು, ನಾಲ್ಕೈದು ಮಂದಿ ಮಾತ್ರವೇ ಉಳಿದರು. ಸಾಧುರಕ್ಷಕನಾದ ಕೃಷ್ಣನು, ಈ ಕಪಟ ತಂತ್ರವನ್ನು ತಿಳಿದು, ಸಿಂಹವು ತೋಳವನ್ನು ಹಿಡಿಯುವಂತೆ ಹಿಂದಿನಿಂದ ಬಂದು, ಆ ಕ್ಷಣವೇ ಅವನನ್ನು ಬಲಾತ್ಕಾರದಿಂದಪ್ಪಿಹಿಡಿದು ಬಿಟ್ಟನು. ಆಗ ಆ ರಾಕ್ಷಸನು ಕೃಷ್ಣನ ಕೈಯಿಂದ ಬಿಡಿಸಿಕೊಳ್ಳಲಾರದೆ ಮಿಲಿಮಿಲಿಗುಟ್ಟುತ್ತ, ತನ್ನ ಆಕಾರವನ್ನು ಪರ್ವತದಂತೆ ದೊಡ್ಡದಾಗಿ ಬೆಳೆಸಿದನು. ಆಗಲೂ ಅವನಿಗೆ ಕೃಷ್ಣನ ಕೈಯಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಸಾಧ್ಯವಿಲ್ಲದೆಹೋಯಿತು. ಇಷ್ಟರಲ್ಲಿಯೇ ಕೃಷ್ಣನು ಆ ರಾಕ್ಷಸನನ್ನು ಕೆಳಕ್ಕೆ ಕೆಡಹಿ, ಆಕಾಶದಲ್ಲಿ ದೇವತೆಗಳೆಲ್ಲರೂ ಆಶ್ಚರ್ಯದಿಂದ ನೋಡುತ್ತಿರುವಹಾಗೆಯೇ, ಪಶುವನ್ನು ಕೊಲ್ಲುವಂತೆ ಅವನನ್ನು ಕೊಂದುಬಿಟ್ಟನು ಆಮೇಲೆ, ಆ ರಾಕ್ಷಸನು ಗೋಪಾಲಕರನ್ನು ಬಚ್ಚಿಟ್ಟಿದ್ದ ಗುಹೆಯಬಳಿಗೆ ಬಂದು, ಅದರ ಬಾಗಿಲಿಗೆ ಮುಚ್ಚಿದ್ದ ಕಲ್ಲನ್ನು ಕಿತ್ತು, ಅಲ್ಲಿದ್ದವರೆಲ್ಲರನ್ನೂ ಕರೆತಂದನು. ಈ ಕಷ್ಟದಿಂದ ತಪ್ಪಿಸಿದುದಕ್ಕಾಗಿ ಗೋಪಾಲಕರೆಲ್ಲರೂ ತನ್ನನ್ನು ಸ್ತುತಿಸುತ್ತಿರಲು, ಕೃಷ್ಣನು ಅವರೆಲ್ಲರೊಡನೆ ಹಿಂತಿರುಗಿ ಮಂದೆಯನ್ನಟ್ಟಿಕೊಂಡು ಗೋಕುಲಕ್ಕೆ ಬಂದನು. ಇದು ಮೂವತ್ತೇಳನೆಯ ಅಧ್ಯಾಯವು.

---

## ಅಕ್ರೂರನು ನಂದಗೋಕುಲಕ್ಕೆ ಹೊರಟುದು.

ಅತ್ತಲಾಗಿ ಕಂಸಾಜ್ಞೆಯಾದಮೇಲೆ ಅಕ್ರೂರನು, ಆರಾತ್ರಿ ಮಧುರಾಪುರಿಯಲ್ಲಿಯೇ ಮಲಗಿದ್ದು, ಬೆಳಗಾದಕೂಡಲೆ ರಥವನ್ನೇರಿ, ನಂದಗೋಕುಲಕ್ಕೆ ಪ್ರಯಾಣಹೊರಟನು. ಆತನು ಶ್ರೀ ವಿಷ್ಣುವಿನಲ್ಲಿ ಪರಮಭಕ್ತಿಯುಳ್ಳವನಾದುದರಿಂದ ದಾರಿಯಲ್ಲಿ ಬರುವಾಗ ತನ್ನಲ್ಲಿ ತಾನು. "ಆಹಾ ! ಏನು ಭಾಗ್ಯವು ! ನಾನು ಪೂರ್ವಜನ್ಮದಲ್ಲಿ ಎಂತಹ ಪುಣ್ಯವನ್ನು ಮಾಡಿ

ದ್ದೆನೋ! ಯಾವ ತಪಸ್ಸನ್ನು ನಡೆಸಿದ್ದೆನೋ! ಎಷ್ಟು ದಾನಧರ್ಮಗಳನ್ನು ಮಾಡಿದ್ದೆನೋ.! ಆ ಶ್ರೀಕೃಷ್ಣನನ್ನು ಕಣ್ಣಾರೆ ನೋಡುವ ಮಹಾಭಾಗ್ಯವು ನನಗೆ ಲಭಿಸುವಂತಾಯಿತಲ್ಲವೆ? ಆದರೆ ಶೂದ್ರರಿಗೆ ವೇದಪ್ರವಚನಾಧಿ ಕಾರವಿಲ್ಲದಂತೆ, ವಿಷಯಾಸಕ್ತರಾದ ನಮ್ಮಂತವರಿಗೆ, ಭಗವದ್ದರ್ಶನವು ದುರ್ಲಭವೆಂದು ಹೇಳುವರು. ಹಾಗಿದ್ದರೆ ಆ ಭಾಗ್ಯವು ನನಗೆಲ್ಲಿ ಲಭಿಸು ವುದು ? ಅಥವಾ ಹಾಗೂ ಹೇಳುವುದಕ್ಕಿಲ್ಲ! ಯಾರ ಅದೃಷ್ಟವನ್ನು ಯಾರು ಬಲ್ಲರು ! ನಾನು ಎಷ್ಟೇ ಅಧಮನಾಗಿದ್ದರೂ, ನನಗೆ ಆ ಶ್ರೀ ಕೃಷ್ಣನ ಸಾಕ್ಷಾದ್ದರ್ಶನವು ಲಭಿಸಿದರೂ ಲಭಿಸಬಹುದು. ನದಿಯಲ್ಲಿ ಕೊಚ್ಚಿಕೊಂಡು ನಾನಾಕಡೆಗೆ ಹೋಗುತ್ತಿರುವ ಹುಲ್ಲುಕಡ್ಡಿ ಮೊದಲಾದುವುಗಳಲ್ಲಿ,ಯಾವಾ ಗಲೋ ಒಮ್ಮೆ,ಯಾವುದಾದರೂ ಒಂದು ಕಡ್ಡಿಯು, ದೈವವಶದಿಂದ ತಡಿಗೆ ಬಂದು ಸೇರುವುದುಂಟಲ್ಲವೆ? ಅದರಂತೆಯೇ ಕರ್ಮವಶದಿಂದ ಕಾಲವೆಂಬ ಪ್ರವಾಹದಲ್ಲಿ ಕೊಚ್ಚಿಹೋಗುತ್ತಿರುವ ಜೀವರಾಶಿಗಳಲ್ಲಿ, ಯಾವನಾದರೂ ಒಬ್ಬ ಚೇತನನು, ದೈವಿಕವಾಗಿ ಆ ಸಂಸಾರಸಾಗರದಿಂದ ಉತ್ತೀರ್ಣನಾಗ ಬಹುದು. ಈಗ ನಾನೇ ಅದಕ್ಕೆ ನಿದರ್ಶನವಾಗಬಾರದೆ? ಆಹಾ! ಯೋಗಿ ಗಳ ಮನಸ್ಸಿಗೂ ಅಗೋಚರವಾದ ಆ ಶ್ರೀಕೃಷ್ಣನ ಪಾದಕಮಲವನ್ನು ಈಗ ನಾನು ಕಣ್ಣಾರೆ ನೋಡಿ, ಅದಕ್ಕೆ ತಲೆಯನ್ನು ಸೋಕಿಸಿ ನಮಸ್ಕರಿಸು ವಂತಾದರೆ, ನನ್ನ ಭಾಗ್ಯಕ್ಕಿಂತಲೂ ಭಾಗ್ಯವುಂಟೆ? ನನ್ನ ಪಾಪಶೇಷ ವೆಲ್ಲವೂ ಅಂದಿಗೆ ತೀರಿತು! ನನ್ನ ಜನ್ಮವು ಸಫಲವಾಯಿತು! ಪೂರ್ವದಲ್ಲಿ ಪ್ರಹ್ಲಾದಾದಿಗಳೂಕೂಡ, ಯಾವನ ಕಾಲುಗುರುಗಳ ಕಾಂತಿಯನ್ನು ಹೃದ ಯದಲ್ಲಿ ತಳೆದು, ದುರಂತವಾದ ಸಂಸಾರತಮಸ್ಸನ್ನು ದಾಟಿದರೋ, ಈಗ ಕೃಷ್ಣರೂಪದಿಂದವತರಿಸಿದ ಆ ಭಗವಂತನ ಪಾದಕಮಲವನ್ನು ನಾನು ಕಣ್ಣಾರೆ ಕಂಡು ಆನಂದಿಸುವಂತಾಯಿತಲ್ಲಾ! ಕಂಸನಿಂದಲ್ಲವೇ ನನಗೆ ಈ ಭಾಗ್ಯವು ಲಭಿಸುವಂತಾಯಿತು. ಕಂಸನು ನನ್ನಲ್ಲಿ ಪರಮಾನುಗ್ರಹವನ್ನೇ ತೋರಿಸಿದನು! ಆಹಾ! ಲೋಕಪ್ರವರ್ತಕರಾದ ಬ್ರಹ್ಮರುದ್ರಾದಿದೇವತೆ ಗಳು! ಆ ಬ್ರಹ್ಮಾದಿದೇವತೆಗಳಿಂದಲೂ ಪೂಜಿತಳಾದ ಮಹಾಲಕ್ಷ್ಮಿ! ಆ ಮಹಾಲಕ್ಷ್ಮಿಯೂ ಗೌರವಿಸತಕ್ಕ ಮಹರ್ಷಿಗಳು! ಆ ಮಹರ್ಷಿಗಳಿಗೂ

ಗೌರವಾರ್ಹರಾದ ಭಗವದ್ಭಕ್ತರು! ಇವರೆಲ್ಲರೂ ಯಾವನ ಪಾದಾರವಿಂದಗಳನ್ನು ತಮ್ಮ ಮನೋಭಾವನೆಯಿಂದರ್ಚಿಸುತ್ತಿರುವರೋ, ಆ ಭಗವಂತನ ಪಾದಗಳನ್ನು ನಾನು ನಾಳೆ ನೋಡುವೆನು. ಗೊಲ್ಲರ ಗುಂಪಿನಲ್ಲಿ ಸೇರಿ, ಮಂದೆಯ ಹಸುಗಳ ಹಿಂದೆ ಕಾಡಿನಲ್ಲಿ ತಿರುಗುತ್ತಿರುವ ಶ್ರೀ ಕೃಷ್ಣನ ಮುದ್ದು ಪಾದಗಳನ್ನು ನಾಳೆ ನಾನು ನೋಡುವೆನು! ಗೋಪಾಂಗನೆಯರ ಕುಚಕುಂಕುಮದಿಂದ ಲೇಪಿತವಾದ ಆ ಕೃಷ್ಣನ ಸುಂದರಪಾದಾರವಿಂದವನ್ನು ನಾಳೆ ನಾನು ನೋಡುವೆನು! ಸುಂದರವಾದ ಕಪೋಲಗಳಿಂದಲೂ, ಎಸಳಾದ ಮೂಗಿನಿಂದಲೂ, ಮಂದಹಾಸಸೂಚಕವಾದ ಪ್ರಸನ್ನದೃಷ್ಟಿಯಿಂದಲೂ, ರಕ್ತಾಂತನೇತ್ರಗಳಿಂದಲೂ, ಸುರುಳಿಗಟ್ಟಿದ ಮುಂಗುರುಳುಗಳಿಂದಲೂ ಮನೋಹರವಾದ ಆ ಶ್ರೀಕೃಷ್ಣನ ಮುಖಾರವಿಂದವನ್ನು ನಾನು ನಾಳೆ ನೋಡುವುದರಲ್ಲಿ ಸಂದೇಹವಿಲ್ಲ! ಅದೋ! ಈಗಾಗಲೇ ಶುಭಸೂಚನೆಗಳು ಕಾಣುತ್ತಿರುವುವು! ಈ ವನಮೃಗಗಳು ಪ್ರದಕ್ಷಿಣವಾಗಿ ಸಂಚರಿಸುತ್ತಿರುವುವು. ಭೂಭಾರಪರಿಹಾರಾರ್ಥವಾಗಿ, ತನ್ನ ನಿಜೇಚ್ಛೆಯಿಂದಲೇ ಮನುಷ್ಯಾವತಾರವನ್ನೆತ್ತಿ, ಲಾವಣ್ಯನಿಧಿಯೆನಿಸಿಕೊಂಡ ಆ ಶ್ರೀಕೃಷ್ಣನ ದರ್ಶನವು ನಾಳೆ ಲಭಿಸುವುದಾದರೆ, ನಾನು ಕಣ್ಣುಗಳನ್ನು ಪಡೆದುದಕ್ಕೆ ಆದಲ್ಲವೇ ಸಾರ್ಥಕ್ಯವು! ಕೃಷ್ಣನ ಮನುಷ್ಯತ್ವವು ನಟನಮಾತ್ರವಲ್ಲದೆ ಬೇರೆಯಲ್ಲ! ಅವನು ತನಗೆ ಶರೀರಭೂತಗಳಾದ ಚೇತನಾಚೇತನಗಳೆಲ್ಲವನ್ನೂ ಒಮ್ಮೆಯೇ ಸಾಕ್ಷಾತ್ಕರಿಸುತ್ತಿರುವನು. ಜೀವನಂತೆದೇಹವನ್ನು ನೋಡಿ ಆತ್ಮವೆಂದು ಭ್ರಮಿಸತಕ್ಕವನಲ್ಲ! ನಿಜತೇಜಸ್ಸಿನಿಂದ ದೇವಮನುಷ್ಯಾದಿ ಭೇದಭ್ರಾಂತಿಗಳಿಗೆ ಕಾರಣವಾದ ಅಜ್ಞಾನವನ್ನು ನಿರಸನಮಾಡಿದವನು. ತನಗೆ ಶರೀರವಾದ ಪ್ರಕೃತಿಯನ್ನೇ ಉಪಾದಾನಕಾರಣವನ್ನಾಗಿಯೂ, ತನ್ನ ಸಂಕಲ್ಪಜ್ಞಾನವನ್ನೇ ನಿಮಿತ್ತಕಾರಣವನ್ನಾಗಿಯೂ, ತನ್ನನ್ನೇ ಆಧಾರವನ್ನಾಗಿಯೂ ಮಾಡಿಕೊಂಡು, ಪ್ರಾಣೇಂದ್ರಿಯಬುದ್ಧಿರೂಪವಾದ ಕಾರ್ಯಗಳಿಂದ ಭೋಗಸ್ಥಾನವಾಗಿ ತನ್ನಿಂದ ರಚಿಸಲ್ಪಟ್ಟ ಶರೀರಗಳಲ್ಲಿ ತಾನೇ ಕಾರಣರೂಪವಾಗಿ ತಿಳಿಯಲ್ಪಡುವನು. ಮತ್ತು ಸಮಸ್ತಪಾಪನಿವಾರಕಗಳಾಗಿಯೂ, ಸಮಸ್ತಶ್ರೇಯಸ್ಸುಗಳನ್ನೂ ಕೈಗೂಡಿಸತಕ್ಕವುಗಳಾಗಿಯೂ

ಇರುವ ಆತನ ಗುಣಗಳನ್ನೂ, ಕರ್ಮಗಳನ್ನೂ, ನಾಮಗಳನ್ನೂ ಪ್ರತಿಪಾದಿಸ ತಕ್ಕ ವಾಕ್ಯಗಳು, ಸಮಸ್ತಲೋಕದ ಉಜ್ಜೀವನಕ್ಕೂ, ಅಭ್ಯುದಯ ಕ್ಕೂ, ಪವಿತ್ರತೆಗೂ ಕಾರಣಗಳಾಗಿರುವುವು. ಆತನ ಗುಣಗಳನ್ನು ಪ್ರ ತಿಪಾದಿಸದಿಸತಕ್ಕ ವಾಕ್ಯಗಳು, ಎಷ್ಟೇ ಶಬ್ದಾರ್ಥಲಾವಣ್ಯಗಳಿಂದ ತುಂ ಬಿದ್ದರೂ, ವಸ್ತ್ರಾಭರಣಗಳಿಂದಲಂಕರಿಸಲ್ಪಟ್ಟ ಶವಗಳಂತೆ ಅಮಂಗಳ ಕಾರಣಗಳಾಗಿರುವುವು. ಅಂತಹ ಪರಮಪುರುಷನೇ ಯಾದವಕುಲದಲ್ಲಿ ಕೃ ಷ್ಣನಾಗಿ ಹುಟ್ಟಿ, ಲೋಕದಲ್ಲಿ ಧರ್ಮಮರ್ಯಾದೆಯನ್ನು ಪಾಲಿಸುತ್ತ, ದೇವತೆಗಳಿಗೆ ಕ್ಷೇಮವನ್ನುಂಟುಮಾಡುತ್ತಿರುವನು. ಸಮಸ್ತಮಂಗಳಪ್ರ ದವಾಗಿ, ದೇವತೆಗಳಿಂದಲೂ ಕೀರ್ತಿಸಲ್ಪಡತಕ್ಕ ತನ್ನ ಯಶಸ್ಸನ್ನು ವಿಸ್ತರಿಸುತ್ತ, ಈಗ ನಂದಗೋಕುಲದಲ್ಲಿ ಗೊಲ್ಲರೊಡನೆ ತಾನೂ ಗೊ ಲ್ಲನಾಗಿರುವನು ಆಹಾ! ಈಗ ನನಗೆ ಈ ಪ್ರಭಾತಸಮಯವು ಮ ನಸ್ಸಿಗೆ ಎಷ್ಟೋ ಉಲ್ಲಾಸವನ್ನುಂಟುಮಾಡುತ್ತ, ಮುಂದಿನ ಶುಭ ವನ್ನು ಈಗಲೇ ಸೂಚಿಸುತ್ತಿರುವುದು. ಆದುದರಿಂದ, ಸಾಧುಗಳಿಗೆ ದಿಕ್ಕಾಗಿ, ಲೋಕಗುರುವಾಗಿ, ಸಮಸ್ತಪ್ರಾಣಿಗಳ ನೇತ್ರೋತ್ಸವ ದಂತೆ ತ್ರಿಲೋಕಸುಂದರನಾಗಿ, ಲಕ್ಷ್ಮೀದೇವಿಗೆ ಇಷ್ಟಾರ್ಥಸ್ವರೂಪನಾ ಗಿಯೂ, ವಾಸಸ್ಥಾನನಾಗಿಯೂ ಇರುವ ಆ ಕೃಷ್ಣನನ್ನು ನಾಳೆ ನಾನು ನೋಡುವುದರಲ್ಲಿ ಸಂದೇಹವಿಲ್ಲ! ನಾನು ಇಲ್ಲಿಂದ ಹೋದಕೂಡಲೆ ಮೊ ದಲು, ಲೋಕಮೋಹನವಾದ ಆ ಶ್ರೀಕೃಷ್ಣನ ರೂಪವನ್ನು ಕಣ್ಣಣಿಯು ವಂತೆ ನೋಡಿಬಿಡುವೆನು! ಆಮೇಲೆ ರಥದಿಂದಿಳಿದು, ಮಹಾಯೋಗಿಗಳೂ ಯಾವುದನ್ನು ತಮ್ಮ ಸ್ವರೂಪಸಿದ್ಧಿಗಾಗಿ ಮನಸ್ಸಿನಿಂದಮಾತ್ರ ಭಾವಿಸಿ ತಿಳಿಯುತ್ತಿರುವರೋ, ಅಂತಹ ಪಾದಕಮಲಗಳಿಗೆ ಸಾಕ್ಷಾತ್ತಾಗಿ ನನ್ನ ತಲೆ ಯನ್ನು ಸೋಕಿಸಿ ಪ್ರಣಾಮಮಾಡುವೆನು. ಆಮೇಲೆ ಆ ಪುರುಷೋತ್ತಮ ನಿಗೆ ಸಮಾನರಾಗಿ, ಅವನಸಂಗಡ ಸೇರಿರುವ ಇತರಗೋಪಾಲಕರಿಗೂ ನಮಸ್ಕರಿಸುವೆನು. ನಾನು ಪಾದಾಗ್ರದಲ್ಲಿ ಬಿದ್ದು ನಮಸ್ಕರಿಸಿದಾಗ, ಲೋಕವಿಭುವಾದ ಆ ಕೃಷ್ಣನು, ಕಾಲರೂಪವಾದ ಸರ್ಪಕ್ಕೆ (ಸಂಸಾರ ಕ್ಕೆ) ಭಯಪಟ್ಟು ಬಂದು ಮರೆಹೊಕ್ಕವರಿಗೆ ಅಭಯಪ್ರದವಾದ ತನ್ನ ಹ

ಸ್ತಕಮಲವನ್ನು ನನ್ನ ತಲೆಯಮೇಲೆ ಇಡದಿರುವನೇ! ದಯಾಸಮುದ್ರನಾದ ಆ ಕೃಷ್ಣನು ಎಂದಿಗೂ ಹಾಗೆ ನನ್ನಲ್ಲಿ ಔದಾಸೀನ್ಯವನ್ನು ತೋರಿಸಲಾರನು. ಹಿಂದೆ ಬಲಿಚಕ್ರವರ್ತಿಯು ಭೂದಾನವನ್ನು ಮಾಡುವಾಗ, ಯಾವ ಹಸ್ತಕ್ಕೆ ಅರ್ಘ್ಯಜಲವನ್ನು ಬಿಟ್ಟಮಾತ್ರಕ್ಕೆ, ತ್ರೈಲೋಕ್ಯಕ್ಕೂ ಇಂದ್ರತ್ವವನ್ನು ಹೊಂದಿದನೋ, ಯಾವ ಹಸ್ತಸಂಸ್ಪರ್ಶದಿಂದಲೇ ಇಂದ್ರನಿಗೂ ತನ್ನ ಪದವಿಯು ಸ್ಥಿರಪಟ್ಟಿತೋ, ಗೋಪಸ್ತ್ರೀಯರು ಆಟಪಾಟಗಳಿಂದ ಬಹಳವಾಗಿ ಬಳಲಿದ್ದಾಗ, ಯಾವ ಹಸ್ತಕಮಲದ ಸ್ಪರ್ಶಮಾತ್ರದಿಂದ ತಮ್ಮ ಶ್ರಮವನ್ನು ನೀಗುತಿದ್ದರೋ, ಆ ಹಸ್ತಸ್ಪರ್ಶವು ನಾಳೆ ನನಗೆ ಲಭಿಸದೆ ಹೋಗಲಾರದು! ಈಗ ನಾನು ಕಂಸನ ಕಡೆಯವನಾಗಿ ಹೋದರೂ, ಆ ಭಗವಂತನು ನನ್ನಲ್ಲಿ ಶತ್ರುಪಕ್ಷದವನೆಂಬ ಬುದ್ಧಿಯನ್ನಿಡಲಾರನು. ಏಕೆಂದರೆ, ಆತನು ಸರ್ವಸಾಕ್ಷಿಯಾಗಿ, ಸಮಸ್ತಪ್ರಾಣಿಗಳ ಬಾಹ್ಯಾಭ್ಯಂತರವ್ಯಾಪಾರಗಳೆಲ್ಲವನ್ನೂ ತನ್ನ ಧ್ಯಾನದಿಂದಲೇ ಸಾಕ್ಷಾತ್ಕರಿಸಬಲ್ಲವನು. ಆದುದರಿಂದ ಈಗ ನಾನು ಹೊರಕ್ಕೆಮಾತ್ರ ಕಂಸದೂತನಾಗಿ ಹೋದರೂ, ನನ್ನ ಮನಸ್ಸಿನ ಉದ್ದೇಶವೇನೆಂಬುದನ್ನು, ಅವನು ತನ್ನ ಜ್ಞಾನದೃಷ್ಟಿಯಿಂದಲೇ ತಿಳಿದುಕೊಳ್ಳುವುದರಲ್ಲಿ ಸಂದೇಹವಿಲ್ಲ! ನಾನು ಅವನ ಪಾದಮೂಲದಲ್ಲಿ ಕೈಜೋಡಿಸಿ ನಿಂತಮೇಲೆ, ಅವನು ಮಂದಹಾಸಪೂರ್ವಕವಾಗಿ ಕರುಣಾದೃಷ್ಟಿಯಿಂದ ನೋಡದಿರುವನೆ? ಎಂದಿಗೂ ಹಾಗಿರಲಾರನು! ಅವನ ಕಟಾಕ್ಷಮಾತ್ರದಿಂದ ನನ್ನ ಸಮಸ್ತಪಾಪಗಳೂ ನೀಗುವುವು. ಆಗ ನನ್ನ ಮನಸ್ಸಿನ ಕಳಂಕವು ಬಿಟ್ಟು, ನನಗೆ ಅಪಾರಸಂತೋಷವುಂಟಾಗುವುದು. ಸಹಜವಾಗಿಯೇ ಕೃಷ್ಣನಿಗೆ ನನ್ನಲ್ಲಿ ಸ್ನೇಹಭಾವವುಂಟು! ಇದರಮೇಲೆ ನಾನು ಆತನಿಗೆ ಬಂಧುವೆನಿಸಿರುವೆನು. ಅವನನ್ನು ಬಿಟ್ಟರೆ ಬೇರೆ ದೈವವೇ ಇಲ್ಲವೆಂದೂ ನಾನು ನಂಬಿರತಕ್ಕವನು. ಆದುದರಿಂದ ನಾನು ಕಣ್ಣಿಗೆ ಬಿದ್ದೊಡನೆ, ಅವನು ತನ್ನ ನೀಡಿದ ಭುಜಗಳಿಂದ ನನ್ನನ್ನು ಆಸಿಂಗಿಸದಿರಲಾರನು. ಆಗಲ್ಲವೇ ನನ್ನ ದೇಹವು ಪವಿತ್ರವೆನಿಸುವುದು! ಆಗಲ್ಲವೇ ನನ್ನ ಕರ್ಮಬಂಧವೆಲ್ಲವೂ ಬಿಟ್ಟುಹೋಗುವುದು! ಆ ಕೃಷ್ಣನು ನನ್ನನ್ನು ಪ್ರೀತಿಯಿಂದಾಲಿಂಗಿಸಿಕೊಂಡಮೇಲೆ, ಸಮೀಪದಲ್ಲಿ ಬದ್ಧಾಂಜಲಿಯಾಗಿ ನಿಂತಿರುವ ನನ್ನನು

ನೋಡಿ. “ಅಯ್ಯಾ ! ಅಕ್ರೂರಾ ! ಬಂದೆಯಾ ? ” ಎಂದು ಮಾತಾಡಿಸದಿರು ವನೆ ? ಆ ಮಾತನ್ನು ಕೇಳಿದಾಗಲ್ಲವೇ ನನ್ನ ಜನ್ಮವು ಸಫಲವಾಗುವುದು ! ಅಂತಹ ಮಹಾತ್ಮನಿಂದ ಆದರಿಸಲ್ಪಡದಿದ್ದಮೇಲೆ ಜನ್ಮವೆತ್ತಿ ಫಲವೇನು ? ಅಂತಹ ಜನ್ಮವನ್ನು ಸುಡಬೇಕು ! ಆತನು ಸರ್ವಸಮನಾದುದರಿಂದ, ಅವನಿಗೆ ಪ್ರಿಯನೆಂದೂ, ಅಪ್ರಿಯನೆಂದೂ, ದ್ವೇಷಿಯಂದೂ, ಉದಾಸೀನನೆಂದೂ, ಯಾರಲ್ಲಿಯೂ ಭೇದಬುದ್ಧಿಯೇ ಹುಟ್ಟಲಾರದು. ಹಾಗಿದ್ದರೂ, ಕಲ್ಪವೃಕ್ಷವು ತನ್ನಲ್ಲಿ ಬಂದು ಕೇಳಿದವರಿಗೆಮಾತ್ರವೇ ಕೋರಿದ ಫಲಗಳನ್ನು ಕೊಡುವಂತೆ, ಆತನೂ ತನ್ನನ್ನು ಭಜಿಸಿದವರನ್ನೇ ತಾನೂ ಭಜಿಸುವನು. ಇದನ್ನು ವೈಷಮ್ಯವೆಂದು ಹೇಳಬಹುದೆ ? ಈಗ ನನಗೆ ದೈವಾಧೀನವಾಗಿ ಅವನನ್ನಾಶ್ರಯಿಸತಕ್ಕ ಭಾಗ್ಯವು ಲಭಿಸಿತು ! ಅವನ ಅಣ್ಣನಾದ ಬಲರಾಮನೂ ಕೂಡ, ನಾನು ಹೋಗಿ ನಮಸ್ಕರಿಸಿದೊಡನೆ, ಹಸನ್ಮುಖನಾಗಿ ಬಂದು, ನನ್ನನ್ನಾಲಿಂಗಿಸಿ, ಮನೆಗೆ ಕರೆದುಕೊಂಡು ಹೋಗಿ, ನನ್ನನ್ನು ಸತ್ಕರಿಸಿ, ಆಮೇಲೆ ಕಂಸನು ತನ್ನ ಬಂಧುಗಳವಿಷಯದಲ್ಲಿ ನಡೆಸುವ ಕ್ರೂರಕೃತ್ಯಗಳನ್ನು ಕುರಿತು ತಾನಾಗಿಯೇ ಪ್ರಶ್ನಮಾಡುವನು.” ಎಂದು ತನ್ನಲ್ಲಿ ತಾನೇ ಆಲೋಚಿಸುತ್ತಿದ್ದನು.

ಹೀಗೆ ಅಕ್ರೂರನು ದಾರಿಯುದ್ದಕ್ಕೂ ಕೃಷ್ಣನನ್ನೇ ಚಿಂತಿಸುತ್ತ, ರಥಾರೂಢನಾಗಿ ಗೋಕುಲದ್ವಾರದ ಸಮೀಪಕ್ಕೆ ಬರವಷ್ಟರಲ್ಲಿ, ಸೂರ್ಯಾಸ್ತಮಯವಾಗುತ್ತ ಬಂದಿತು. ಯಾವನ ಪಾದರೇಣುವನ್ನು ಸಮಸ್ತಲೋಕಪಾಲಕರೂ ಅತ್ಯಾದರದಿಂದ ತಮ್ಮ ಕಿರೀಟದಲ್ಲಿ ಧರಿಸುವರೋ, ಆ ಕೃಷ್ಣನ ಹಜ್ಜೆಯ ಗುರುತುಗಳು ಅಲ್ಲಲ್ಲಿ ನೆಲದಮೇಲೆ ಗೋಚರಿಸುತಿದ್ದುವು. ಪದ್ಮರೇಖೆ, ಯವರೇಖೆ, ಅಂಕುಶರೇಖೆ, ಮುಂತಾದ ಶುಭಲಕ್ಷಣಗಳಿಂದ ಅಲ್ಲಿನ ಭೂಮಿಗೆ ಅಲಂಕಾರಭೂತವಾಗಿದ್ದ ಆ ಪಾದಚಿಹ್ನಗಳನ್ನು ಕಂಡಾಗ, ಅಕ್ರೂರನ ಸಂತೋಷಸಂಭ್ರಮಗಳನ್ನು ಕೇಳಬೇಕೆ ? ಅದನ್ನು ಕಂಡೊಡನೆ ಆನಂದದಿಂದ ಅವನ ದೇಹವೆಲ್ಲವೂ ಪುಳಕಿತವಾಯಿತು ! ಅವನ ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕುತಿತ್ತು ! ತಟ್ಟನೆ ರಥದಿಂದ ಕೆಳಕ್ಕೆ ಧುಮಿಕಿ. “ಅಹಾ ! ಇದೋ ! ಆ ನನ್ನ ಪ್ರಭುವಾದ ಕೃಷ್ಣನ ಪಾದ

ರಜಸ್ಸುಗಳು ! ಇವು ಬ್ರಹ್ಮಾದಿಗಳಿಗೂ ದುರ್ಲಭವಲ್ಲವೆ? " ಎಂದು ಅದ ರಮೇಲೆ ಬಿದ್ದು ಹೊರಳಾಡಿದನು. ಓ ಪರೀಕ್ಷಿದ್ರಾಜಾ ! ದೇಹ ಧಾರಿಗಳೆಲ್ಲರೂ ಹೀಗೆಯೇ ಆ ಭಗವಂತನ ಗುಣಕೀರ್ತನದಿಂದಾಗಲಿ, ಆತನ ಚರಿತ್ರಗಳನ್ನು ಕೇಳುವುದರಿಂದಾಗಲಿ, ಆ ಭಗವನ್ಮೂರ್ತಿಗಳನ್ನು ದರ್ಶನ ಮಾಡುವುದರಿಂದಾಗಲಿ, ಕೊನೆಗೆ ಆತನ ಪಾದಚಿಹ್ನಗಳನ್ನು ನೋಡುವು ದರಿಂದಾಗಲಿ, ಮನಸ್ಸಿನಲ್ಲಿರುವ ದಂಭ, ಶೋಕ, ಭಯ, ಮೊದಲಾದುವುಗ ಳೆಲ್ಲವನ್ನೂ ಬಿಟ್ಟು,ಆನಂದದಿಂದ ಮೈಮರೆತುಹೋಗುವರು. ಇದೇ ಭಕ್ತಿಯ ಪರಾಕಾಷ್ಠೆಯೆನಿಸುವುದು! ಇದೇ ದೇಹಿಗಳಿಗೆ ಉತ್ತಮಪುರುಷಾರ್ಥವು! ಇದೇ ಜನ್ಮಸಾಫಲ್ಯವು! ಈ ವಿಷಯವನ್ನೇ ಲೋಕಕ್ಕೆ ಬೋಧಿಸುವಂತೆ,ಅಕ್ರೂರನು, ಬಹಳಹೊತ್ತಿನವರೆಗೆ ನೆಲದಲ್ಲಿ ಬಿದ್ದು ಹೊರಳಾಡಿ, ಮೇಲಕ್ಕೆದ್ದು, ತಿರುಗಿ ತನ್ನ ರಥವನ್ನೇರಿ ಕುಳಿತನು. ಮುಂದೆಮುಂದೆ ವೇಗದಿಂದ ರಥವನ್ನು ನಡೆಸಿ ಕೊಂಡು ದಾರಿಯಲ್ಲಿ ಕಂಡಕಂಡವರನ್ನು ನೋಡಿ. "ಗೋಪತಿಯಾದ ಕೃಷ್ಣ ನಿರುವುದೆಲ್ಲಿ ? ರಾಮನೆಲ್ಲಿರುವನು?"ಎಂದು ಕೇಳುತ್ತ, ಊರೊಳಗೆ ಪ್ರವೇಶಿಸಿ, ಮಂದೆಯಬಳಿಗೆ ಬಂದನು ಆ ಕಾಲಕ್ಕೆ ಸರಿಯಾಗಿ ರಾಮಕೃಷ್ಣರಿಬ್ಬರೂ ಮಂದೆಯಲ್ಲಿ ಹಸುಗಳನ್ನು ಹಾಲುಕರೆಯುತಿದ್ದರು. ಅಲ್ಲಿ ಕೃಷ್ಣನ ದೇಹವು ಕಪ್ಪು! ರಾಮನ ದೇಹವು ಬಿಳುಪು! ಕೃಷ್ಣನು ಹಳದಿಯ ಬಟ್ಟೆಯನ್ನುಟ್ಟಿರು ವನು! ರಾಮನು ನೀಲವಸ್ತ್ರವನ್ನು ಧರಿಸಿರುವನು! ಇಬ್ಬರಿಗೂ ಶರತ್ಕಮಲ ದಂತೆ ಅರಳಿದ ಕಣ್ಣುಗಳು ! ಕೌಮಾರವಯಸ್ಸು ! ಲಕ್ಷ್ಮಿಗೆ ನಿತ್ಯನಿವಾಸ ದಂತಿರುವ ಸುಂದರಾಕೃತಿ! ಉಬ್ಬಿದ ಭುಜಗಳು! ನೀಡಿದ ತೋಳುಗಳು!ಅಂದ ವಾದ ಮುಖದ ಸೊಗಸು ! ಆನೆಯ ಮರಿಗಳಂತೆ ಗಂಭೀರವಾದ ನಡೆ! ಧ್ವಜ, ವಜ್ರ, ಕಮಲ, ಅಂಕುಶಾದಿಶುಭರೇಖೆಗಳಿಂದ ಗೋಕುಲದ ನೆಲವನ್ನಲಂಕ ರಿಸುತ್ತಿರುವ ಪಾದವಿನ್ಯಾಸಗಳು ! ಮುಖದಲ್ಲಿ ಮುಗುಳ್ನಗೆ ! ಕರುಣಾ ರಸವನ್ನು ಕಕ್ಕುವಂತಿರುವ ಪ್ರಸನ್ನದೃಷ್ಟಿ ! ಲೋಕರಂಜಕವಾದ ಮಹಾ ಮಹಿಮೆ ! ಗಂಭೀರವಾಗಿಯೂ, ಮನೋಹರವಾಗಿಯೂ ಇರುವ ವಿವಿಧ ಲೀಲೆಗಳು ! ಕಂಠದಲ್ಲಿ ವನಮಾಲಿಕೆಯೊಡಗೂಡಿದ ಪುಷ್ಪಹಾರಗಳು ! ಇಂತಹ ದಿವ್ಯಸೌಂದರ್ಯದಿಂದೊಪ್ಪುತ್ತಿರುವ ರಾಮಕೃಷ್ಣರಿಬ್ಬರೂ, ಆಗಲೇ



೨೦೦೫ ಅಕ್ರೂರನು ರಾಮಕೃಷ್ಣರನ್ನು ಮಥುರೆಗೆ ಒರುವಂತೆ ಪ್ರಾರ್ಥಿಸಿದುದು.

ಸ್ನಾನಮಾಡಿ, ಶುದ್ಧವಾದ ಮಡಿಬಟ್ಟೆಯನ್ನುಟ್ಟು, ದಿವ್ಯಚಂದನವನು ಮೈಗೆ ಲೇಪಿಸಿಕೊಂಡು,ಮಂದೆಯಲ್ಲಿ ಸಂಚರಿಸುತಿದ್ದರು. ಸೃಷ್ಟಿಗೆ ಮೊದಲೇ ಯಾವನು ಜಗತ್ಕಾರಣನಾದ ಪ್ರಧಾನಪುರುಷನೆನಿಸಿಕೊಂಡಿದ್ದನೋ, ಈ ಜಗತ್ತೆಲ್ಲವೂ ಯಾವನ ಶರೀರವೆನಿಸಿಕೊಂಡಿರುವುದೋ, ಆ ಪರಮಾತ್ಮನೇ ಲೋಕರಕ್ಷಣಾರ್ಥವಾಗಿ, ತನ್ನ ಸಂಕಲ್ಪದಿಂದ ಈ ರಾಮಕೇಶವರೆಂಬ ಎರಡುರೂಪಗಳಿಂದವತರಿಸಿರುವಾಗ, ಅವರ ದಿವ್ಯತೇಜಸ್ಸನ್ನು ಕೇಳಬೇಕೆ? ಅವರಿಬ್ಬರೂ ಸುವರ್ಣಮಿಶ್ರಿತಗಳಾದ ನೀಲರಜತಶೈಲಗಳಂತೆ ಶೋಭಿಸುತ್ತ, ತಮ್ಮ ದೆಹಕಾಂತಿಯಿಂದ ದಿಕ್ಕುಗಳೆಲ್ಲವನ್ನೂ ಬೆಳಗುತಿದ್ದರು. ಆ ರಾಮಕೃಷ್ಣರನ್ನು ಕಂಡೊಡನೆ, ಅಕ್ರೂರನು ತಟ್ಟನೆ ರಥದಿಂದಿಳಿದು ಅವರಮುಂದೆ ಸಾಷ್ಟಾಂಗಪ್ರಣಾಮವನ್ನು ಮಾಡಿದನು. ಆ ಮಹಾತ್ಮರ ದರ್ಶನದಿಂದುಂಟಾದ ಸುಖಾನಂದವು ಅವನಿಗೆ ಮೈಮರೆಯುವಂತೆ ಮಾಡಿತು. ಅವನ ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕುತಿತ್ತು. ಅವನ ದೇಹವು ಪುಳಕಿತವಾಯಿತು! ತನ್ನ ಹೆಸರನ್ನು ತಿಳಿಸುವುದಕ್ಕೂ ಧ್ವನಿಯು ಹೊರಡದಂತಾಯಿತು ಇದನ್ನು ನೋಡಿ ಆಶ್ರಿತವತ್ಸಲನಾದ ಕೃಷ್ಣನು, ತಾನಾಗಿಯೇ ಮುಂದೆ ಬಂದು,ಚಕ್ರಾಂಕಿತವಾದ ತನ್ನ ಕೈಯನ್ನು ನೀಡಿ, ಅವನನ್ನು ಸಮೀಪಕ್ಕೆ ಕರೆದು, ಪ್ರೇಮಪೂರ್ವಕವಾಗಿ ಅವನನ್ನಾಲಿಂಗಿಸಿಕೊಂಡನು. ಆಮೇಲೆ ಬಲರಾಮನೂಕೂಡ, ತನಗೆ ಪ್ರಣಾಮಮಾಡಿದ ಅಕ್ರೂರನನ್ನು ಕೈಹಿಡಿದು ಕರೆದುಕೊಂಡು, ಕೃಷ್ಣನೊಡನೆ ತನ್ನ ಮನೆಗೆ ಬಂದನು. ಅಲ್ಲಿ ಅಕ್ರೂರನಿಗೆ ಉಚಿತಾಸನವನ್ನು ಕೊಟ್ಟು, ಕುಶಲಪ್ರಶ್ನವನ್ನು ಮಾಡಿ, ಅವನ ಕಾಲನ್ನು ತೊಳೆದು, ಯಥಾವಿಧಿಯಾಗಿ ಅತಿಥಿಗಳಿಗೆ ಕೊಡತಕ್ಕ ಮಧುಪರ್ಕವನ್ನೂ, ಗೋರಸವನ್ನೂ ಕೊಟ್ಟು ಸತ್ಕರಿಸಿದನು. ಮಾರ್ಗಾಯಾಸಪರಿಹಾರವಾಗುವಂತೆ, ಅವನ ಕಾಲುಗಳನ್ನೊತ್ತುವುದಕ್ಕಾಗಿ ಸಮರ್ಥರಾದ ಸೇವಕರನ್ನು ನಿಯಮಿಸಿದನು. ಮೃಷ್ಟಾನ್ನವನ್ನಿಕ್ಕಿಸಿ ಭೋಜನಮಾಡಿಸಿದನು. ಭೋಜನವಾದಮೇಲೆ ಕರ್ಪೂರಾದಿಸುವಾಸನೆಗಳುಳ್ಳ ಗಂಧಪುಷ್ಪತಾಂಬೂಲಾದಿಗಳನ್ನು ಕೊಡಿಸಿ, ಅವನಿಗೆ ವಿಶೇಷಸಂತೋಷವನ್ನುಂಟುಮಾಡಿದನು. ಹೀಗೆ ಅತಿಥಿಸತ್ಕಾರಗಳೆಲ್ಲವೂ ಮುಗಿದ

ಮೇಲೆ, ನಂದನು ಅಕ್ರೂರನ ಕ್ಷೇಮಲಾಭಗಳನ್ನು ವಿಚಾರಿಸುವುದಕ್ಕಾಗಿ ಮುಂದೆ ಬಂದು. "ಓ ಭದ್ರಾ! ಅಕ್ರೂರಾ! ನಿಮ್ಮ ರಾಜನಾದ ಕಂಸನಾದರೋ ಪರಮನಿರ್ಘೃಣನು! ಅತಿಕ್ರೂರನು! ಅವನು ಬದುಕಿರುವವರೆಗೂ ಸಾಧುಗಳಿಗೆ ಸುಖವಿಲ್ಲ! ಕಟುಕನ ಕೈಗೆ ಸಿಕ್ಕಿದ ಕುರಿಗಳಂತೆ, ಅವನ ಕೈಕೆಳಗೆ ನೀವು ಹೇಗೆ ಜೀವಿಸುತ್ತಿರುವಿರೋ ಕಾಣೆನು! ಸಾಕ್ಷಾತ್ತಾಗಿ ತನ್ನ ಒಡಹುಟ್ಟಿದ ತಂಗಿಯು ದೈನ್ಯದಿಂದ ಮೊರೆಯಿಡುತ್ತಿರುವಾಗಲೂ ಕನಿಕರವಿಲ್ಲದೆ, ಅವಳ ಮಕ್ಕಳನ್ನೆಲ್ಲಾ ಕೊಂದ ಆ ಪಾಪಿಯು, ನಿಮ್ಮನ್ನು ಪೀಡಿಸದೆ ಬಿಡುವನೆ? ಪ್ರಾಣಿವಧದಿಂದಲೇ ತನ್ನ ಪ್ರಾಣಗಳನ್ನು ತೃಪ್ತಿಹೊಂದಿಸುತ್ತಿರುವ ಆ ಕಂಸನ ರಾಜ್ಯದಲ್ಲಿ, ಪ್ರಜೆಗಳು ಜೀವದಿಂದ ಬದುಕಿರುವುದೇ ಕಷ್ಟವಾಗಿರುವಾಗ, ನಿಮ್ಮ ಕ್ಷೇಮವನ್ನು ನಾನೇನೆಂದು ವಿಚಾರಿಸಲಿ!" ಎಂದನು. ಹೀಗೆ ನಂದನು ಪ್ರಿಯವಾಕ್ಯದಿಂದ ಕಷ್ಟಸುಖಗಳನ್ನು ವಿಚಾರಿಸುತ್ತಿರಲು, ಅಲ್ಲಿ ನಾನಾವಿಧವಾದ ಉಪಚಾರಗಳಿಂದ ಅಕ್ರೂರನು ತನ್ನ ಮಾರ್ಗಾಯಾಸವನ್ನು ನೀಗಿ ಸುಖದಿಂದಿದ್ದನು. ಇದು ಮೂವತ್ತೆಂಟನೆಯ ಅಧ್ಯಾಯವು.

---

## ರಾಮಕೃಷ್ಣರು ಅಕ್ರೂರನೊಡನೆ ಸಂಭಾಷಿಸಿದುದು.

### ಕೃಷ್ಣನು ಯಮುನಾನದಿಯಲ್ಲಿ ಅಕ್ರೂರನಿಗೆ ತನ್ನ ವಿಶ್ವರೂಪವನ್ನು ತೋರಿಸಿದುದು.

ಅಕ್ರೂರನು ಹೀಗೆ ರಾಮಕೃಷ್ಣರಿಂದ ಸತ್ಕರಿಸಲ್ಪಟ್ಟು, ದಾರಿಯಲ್ಲಿ ತಾನು ಮನಸ್ಸಿನಲ್ಲಿ ಏನೇನನ್ನು ಯೋಚಿಸುತಿದ್ದನೋ, ಆ ಮನೋರಥಗಳೆಲ್ಲವನ್ನೂ ಹಾಗೆಯೇ ಅನುಭವಿಸಿ, ಸುಖಾಸನದಮೇಲೆ ಕುಳಿತಿದ್ದನು. ಓ ಪರೀಕ್ಷಿದ್ರಾಜಾ! ಸಾಕ್ಷಾಲ್ಲಕ್ಷ್ಮೀನಿವಾಸಭೂತನಾದ ಭಗವಂತನು ಪ್ರಸನ್ನನಾದಮೇಲೆ,ಯಾವ ಪುರುಷಾರ್ಥವೂ ದುರ್ಲಭವಲ್ಲ! ಹಾಗಿದ್ದರೂ ಭಗವದ್ಭಕ್ತರು, ಆತನ ಗುಣಾನುಭವವೊಂದನ್ನುಹೊರತು ಬೇರೊಂದಕ್ಕೂ ಆಶೆಪಡುವುದಿಲ್ಲ. ಅದುಹಾಗಿರಲಿ! ಇತ್ತಲಾಗಿ ಕೃಷ್ಣನು ರಾತ್ರಿಭೋಜನ

ವನ್ನು ಮಾಡಿದಮೇಲೆ, ಅಕ್ರೂರನ ಪಕ್ಕದಲ್ಲಿ ಕುಳಿತು, ಕಂಸನು ತನ್ನ ಇಷ್ಟಮಿತ್ರರಲ್ಲಿ ನಡೆದುಕೊಳ್ಳುವ ರೀತಿಯನ್ನೂ, ಮುಂದೆ ಅವನು ನಡೆಸಬಹುದಾಗಿ ತೋರುವ ಕಾರ್ಯೋದ್ದೇಶಗಳನ್ನೂ ಕುರಿತು ಪ್ರಶ್ನೆಮಾಡುತ್ತ, "ಅಪ್ಪಾ! ಅಕ್ರೂರಾ! ನೀನು ಬಂದುದು ಬಹಳಸಂತೋಷವಾಯಿತು. ನಿನಗೆ ಸುಖಾಗಮನವೆ? ನಿನಗೆ ಸರ್ವವಿಧದಿಂದಲೂ ಶುಭವಾಗಲಿ! ನಮ್ಮ ಜ್ಞಾತಿಗಳಾದ ಯಾದವರಿಗೂ, ನಮ್ಮ ಬಂಧುಗಳಿಗೂ, ಅಶುಭಗಳೊಂದೂ ಇಲ್ಲದೆ, ಅವರೆಲ್ಲರೂ ಆರೋಗ್ಯದಿಂದಿರುವರಷ್ಟೆ? ಅಥವಾ ಹೆಸರುಮಾತ್ರಕ್ಕೆ ಮಾವನೆನಿಸಿಕೊಂಡು, ನಮ್ಮ ಕುಲಕ್ಕೇ ಕಂಟಕಪ್ರಾಯನಾದ ಆ ಕಂಸನು ಪ್ರಬಲಿಸುತ್ತಿರುವವರೆಗೆ, ನಮ್ಮ ಬಂಧುಗಳಿಗಾಗಲಿ, ಆದೇಶದ ಪ್ರಜೆಗಳಿಗಾಗಲಿ ಕ್ಷೇಮವೆಲ್ಲಿಯದು? ಈ ಸ್ಥಿತಿಯಲ್ಲಿ ನಾನು ನಿಮ್ಮವರ ಕುಶಲವನ್ನೇನೆಂದು ವಿಚಾರಿಸಲಿ! ಆಹಾ! ನಿರಪರಾಧಿಗಳಾದ ನಮ್ಮ ತಾಯಿತಂದೆಗಳು ನಮ್ಮ ದೆಸೆಯಿಂದಲ್ಲವೇ ಅಪಾರವಾದ ದುಃಖಕ್ಕೀಡಾದರು! ಹುಟ್ಟಿದ ಮಕ್ಕಳೆಲ್ಲವನ್ನೂ ಅವರು ನಮ್ಮದೆಸೆಯಿಂದ ಮೃತ್ಯುವಿನ ಬಾಯಿಗೆ ಬಲಿಕೊಡಬೇಕಾಯಿತು! ತಾವೂ ಕಂಸನ ಸೆರೆಯಲ್ಲಿರಬೇಕಾಯಿತು! ಅದು ಹೇಗಾದರೂ ಹೋಗಲಿ! ನಿನ್ನನ್ನು ನೋಡಬೇಕೆಂದು ನಾವು ಬಹುಕಾಲದಿಂದ ಆಸೆಪಡುತಿದ್ದೆವು. ನಮ್ಮ ಕೋರಿಕೆಯು ಈಗ ದೈವಾಧೀನದಿಂದ ಈಡೇರಿತು. ಈಗ ನೀನು ಅಕಸ್ಮಾತ್ತಾಗಿ ಬಂದ ಕಾರಣವೇನು ಹೇಳು!" ಎಂದನು. ಆಗ ಅಕ್ರೂರನು, ಕಂಸನಿಗೆ ಯಾದವರಲ್ಲಿರುವ ಬದ್ಧದ್ವೇಷವನ್ನೂ, ವಸುದೇವನನ್ನು ಕೊಲ್ಲುವುದಕ್ಕಾಗಿ ಅವನು ಯತ್ನಿಸಿದುದನ್ನೂ, ನಾರದನ ಬುದ್ಧಿವಾದದಿಂದ ಅವನು ತತ್ಕಾಲಕ್ಕೆ ಸುಮ್ಮನಾದುದನ್ನೂ, ಈಗ ಕಪಟತಂತ್ರದಿಂದ ತನ್ನನ್ನು ಈಕಡೆಗೆ ದೂತನನ್ನಾಗಿ ಕಳುಹಿಸಿದ ರಹಸ್ಯವನ್ನೂ, ರಾಮಕೃಷ್ಣರಿಬ್ಬರೂ ವಸುದೇವನ ಮಕ್ಕಳೆಂದು ನಾರದನು ಕಂಸನಿಗೆ ಹೇಳಿಹೋದ ಸಂಗತಿಯನ್ನೂ, ಇನ್ನೂ ಅಲ್ಲಿನ ವಿಶೇಷವೃತ್ತಾಂತಗಳೆಲ್ಲವನ್ನೂ ಕ್ರಮವಾಗಿ ಕೃಷ್ಣನಿಗೆ ತಿಳಿಸಿದನು. ರಾಮಕೃಷ್ಣರಿಬ್ಬರೂ ಅಕ್ರೂರನ ಮಾತನ್ನು ಕೇಳಿ, ಕಂಸನ ದುರ್ಬುದ್ಧಿಗಾಗಿ ನಗುತ್ತ, ಆತನು ತಮ್ಮನ್ನು ಬರಹೇಳಿ ಕಳುಹಿಸಿರುವ ನೆಂಬ ಸಂಗತಿಯನ್ನು ಮಾತ್ರ

ತಮ್ಮ ಜನಕನಾದ ನಂದನಿಗೆ ತಿಳಿಸಿದರು. ನಂದನು ಕೇವಲಋಜುಬುದ್ಧಿಯು ಳ್ಳವನಾದುದರಿಂದ ಆಗಲೇ ಗೋಪಾಲಕರನ್ನು ಕರೆದು“ಓ ಗೋಪಾಲಕರೆ! ನಮ್ಮ ಹಳ್ಳಿಯಲ್ಲಿ ಸಿಕ್ಕುವ ಹಾಲು ಮೊಸರು ಬೆಣ್ಣೆಗಳೆಲ್ಲವನ್ನೂ ಸಂಗ್ರಹಿ ಸಿಡಿರಿ! ಕಾಣಿಕೆಗಳನ್ನು ಸಿದ್ಧಪಡಿಸಿರಿ! ಬಂಡಿಗಳನ್ನು ಕಟ್ಟಿಸಿರಿ! ನಾಳೆಯೇ ನಾವು ಮಥುರಾಪುರಿಗೆ ಹೋಗಿ, ಕಂಸನಿಗೆ ಕಾಣಿಕೆಗಳನ್ನೂ, ಗೋರಸಗಳ ನ್ನೂ ಒಪ್ಪಿಸಿಬಿಡಬೇಕು. ಅಲ್ಲಿ ನಾಳೆ ಧನುರ್ಯಾಗವೆಂಬ ಒಂದು ದೊಡ್ಡ ಯಾಗವು ನಡೆಯುವುದಂತೆ! ನಾವೂ ಆ ಉತ್ಸವವನ್ನು ನೋಡಿ ಬರಬಹುದು! ಊರೂರುಗಳಿಂದ ಅದನ್ನು ನೋಡುವುದಕ್ಕಾಗಿ ಜನರಗುಂಪು ಸೇರುತ್ತಿರುವು ದಂತೆ.” ಎಂದನು. ಮತ್ತು ತನ್ನ ಬಂಡಿಯಾಳಿನಮೂಲಕವಾಗಿ ಊರ ಲ್ಲೆಲ್ಲಾ ಸಾರಿಸಿದನು. ಅಕ್ರೂರನು ರಾಮಕೃಷ್ಣರನ್ನು ಕರೆದುಕೊಂಡು ಹೋಗುವುದಕ್ಕಾಗಿ ಬಂದಿರುವ ಸಂಗತಿಯೂ, ಊರಲ್ಲೆಲ್ಲಾ ಹರಡಿ ಕೊಂಡಿತು. ರಾಮಕೃಷ್ಣರು ಪ್ರಯಾಣಮಾಡುವರೆಂಬ ಸುದ್ದಿಯನ್ನು ಕೇಳಿದೊಡನೆ, ಕೆಲವು ಗೋಪಿಯರು ಹೃದಯತಾಪದಿಂದ ನಿಟ್ಟು ಸಿರುಬಿಡುತ್ತಿದ್ದರು. ಕೆಲವರ ಮುಖವು ಕಂದಿತು. ಕೆಲವರು ದುಃಖದಿಂದ ಮೈಮರೆತು ಹೊರಳುತ್ತ, ಬಿಚ್ಚಿದ ತಲೆಯನ್ನೂ ಸಡಿಲಿದ ಸೀರೆಯನ್ನೂ ತಿಳಿಯದೆ ಚಿಂತಾಕುಲರಾಗಿದ್ದರು ಬೇರೆಕೆಲವರು. ಆ ಕೃಷ್ಣನನ್ನೇ ಮನಸ್ಸಿ ನಲ್ಲಿ ಧ್ಯಾನಿಸುತ್ತ ಇತರ ವ್ಯಾಪಾರಗಳೆಲ್ಲವನ್ನೂ ಮರೆತು, ಆತ್ಮಧ್ಯಾನ ದಲ್ಲಿರುವ ಯೋಗಿಗಳಂತೆ, ಈ ಪ್ರಪಂಚವನ್ನೇ ತಿಳಿಯದಿದ್ದರು. ಮತ್ತೆ ಕೆಲ ವರು ಆ ಕೃಷ್ಣನು ತಮ್ಮಲ್ಲಿ ತೋರಿಸುತ್ತಿದ್ದ ಮಂದಹಾಸವನ್ನೂ, ಮನೋ ಹರವಾದ ಅವನ ಮಾತುಗಳನ್ನೂ, ಆತನ ವಿಚಿತ್ರಲೀಲೆಗಳನ್ನೂ, ಸ್ನೇಹ ಪೂರ್ವಕವಾದ ಅವನ ದೃಷ್ಟಿಯನ್ನೂ, ದುಃಖನಿವಾರಕವಾದ ಆತನ ನರ್ಮ ವಾಕ್ಯಗಳನ್ನೂ; ಅವನು ಆಗಾಗ ನಡೆಸುತಿದ್ದ ಅದ್ಭುತಕಾರ್ಯಗಳನ್ನೂ, ಮನ ಸ್ಸಿನಲ್ಲಿ ಸ್ಮರಿಸಿಕೊಂಡು ಹಾಗೆಯೇ ಮೂರ್ಛೆಬಿದ್ದರು. ಆಕೃಷ್ಣನನ್ನು ಸ್ಮ ರಿಸಿಕೊಂಡಹಾಗೆಲ್ಲಾ ಅವರಿಗೆ ವಿರಹಸಂಕಟದಿಂದ ಹೃದಯವು ನಡುಗು ತಿತ್ತು, ಈ ಸುದ್ದಿಯನ್ನು ಕೇಳಿದ ಗೋಪಿಯರೆಲ್ಲರೂ ಒಂದು ಕಡೆಯಲ್ಲಿ ಗುಂಪಾಗಿ ಸೇರಿ ಕಣ್ಣೀರುಬಿಡುತ್ತ “ಹಾವಿಧೀ! ನಿನಗ ಘೂರಲ್ಲಿಯೂ,

ಸ್ವಲ್ಪಮಾತ್ರವೂ ಕನಿಕರವಿಲ್ಲವೆಂದು ತೋರುವುದು. ಮೊದಲು ನೀನೇ ಜನರಲ್ಲಿ ಅನ್ಯೋನ್ಯಪ್ರೀತಿವಿಶ್ವಾಸಗಳನ್ನು ಹುಟ್ಟಿಸಿ, ಒಬ್ಬರಿಗೊಬ್ಬರು ಸೇರುವಂತೆ ಮಾಡುವೆ! ಅವರು ಅದರ ಫಲವನ್ನನುಭವಿಸಿ ಕೃತಾರ್ಥರಾಗುವುದಕ್ಕೆ ಮೊದಲೇ ಅವರನ್ನಗಲಿಸಿ ಬಿಡುವೆಯಲ್ಲ! ನಿನ್ನ ವ್ಯಾಪಾರಗಳೆಲ್ಲವೂ ಮಕ್ಕಳಾಟಿಕೆಯಂತೆ ನಿರರ್ಥಕಗಳಲ್ಲವೆ? ಆಹಾ! ಕಪ್ಪಾದ ಮುಂಗುರಳು! ಅಂದವಾದ ಕೆನ್ನೆ,! ಎಸಳಾದ ಮೂಗು! ನೋಡಿದವರಿಗೆ ಎಂತಹ ಹೃದಯತಾಪವನ್ನೂ ನೀಗಿಸತಕ್ಕ ಮುಗುಳ್ನಗೆ! ಇಂತಹ ಲೋಕಮೋಹನಾಕಾರವುಳ್ಳ ಆ ಕೃಷ್ಣನ ಮುದ್ದುಮುಖವನ್ನು ನಮಗೆ ಕಂಡೂಕಾಣದಹಾಗೆ ತೋರಿಸಿ, ಕ್ಷಣಮಾತ್ರದಲ್ಲಿ ಮರೆಸಿಬಿಟ್ಟೆಯಲ್ಲಾ! ಇದು ನಿನಗೆ ಯುಕ್ತವೆ? ಕ್ರೂರನಾದ ನೀನೇ ಅಕ್ರೂರನೆಂಬ ಹೆಸರಿನಿಂದ ಬಂದು.ನಮಗೆ ನೀನಾಗಿ ಕೊಟ್ಟ ಕಣ್ಣುಗಳನ್ನು ಕಿತ್ತುಕೊಂಡು ಹೋದೆಯಲ್ಲಾ! ಪ್ರಪಂಚದಲ್ಲಿ ನೀನು ತೋರಿಸತಕ್ಕ ಸೃಷ್ಟಿನೈಪುಣ್ಯವೆಲ್ಲವನ್ನೂ ನಾವು ಆ ಕೃಷ್ಣನ ದೇಹವೊಂದರಲ್ಲಿಯೇ ಏಕಕಾಲದಲ್ಲಿ ನೋಡುತಿದ್ದೆವು! ನೀನು ಅದನ್ನು ಸಹಿಸಲಾರದೆ ತಪ್ಪಿಸಿದಮೇಲೆ, ಇನ್ನು ನಮ್ಮ ಕಣ್ಣುಗಳಿದ್ದರೇನು? ಇಲ್ಲದಿದ್ದರೇನು? ನಮಗೆ ಕಣ್ಣುಗಳಿದ್ದರೂ ಕಾಣಲಾರವು. ಅಥವಾ ಓ ಸಖಿಯರೆ! ನಾವು ದೈವವನ್ನೇಕೆ ನಿಂದಿಸಬೇಕು! ಮುಖ್ಯವಾಗಿ ಆ ಕೃಷ್ಣನ ಸ್ನೇಹವೇ ಸ್ಥಿರವಲ್ಲ! ನಾವು ಮನೆಮಂದಿಮಕ್ಕಳನ್ನೂ, ಕೈಹಿಡಿದ ಪತಿಗಳನ್ನೂ ಬಿಟ್ಟು, ಅವನಲ್ಲಿಯೇ ನಟ್ಟ ಮನಸ್ಸುಳ್ಳವರಾಗಿ, ಅವನ ದಾಸ್ಯವನ್ನು ಮಾಡುವುದಕ್ಕೆ ಹೋದಾಗಲೂ,ಅವನು,ನಮ್ಮನ್ನು ಕಣ್ಣೆತ್ತಿಯೂ ನೋಡದೆ ಹೋದವನಲ್ಲವೆ? ಅವನಿಗೆ ಮೇಲೆಮೇಲೆ ಹೊಸಹೆಂಡಿರು ಸಿಕ್ಕುವಾಗ, ಹಳೆಯ ಹೆಂಡಿರಾದ ನಮ್ಮನ್ನು ಹೇಗೆತಾನೇ ಪ್ರೀತಿಸುವನು?ಮುಖ್ಯವಾಗಿ ಆ ಮಥುರಾಪುರಿಯಲ್ಲಿರುವ ಸ್ತ್ರೀಯರಿಗೆ ಈ ರಾತ್ರಿಯು ಕಳೆದಮೇಲೆ ನಾಳೆ ಸುಪ್ರಭಾತವು! ಅವರ ಕೋರಿಕೆಗಳು ಕೈಗೂಡಿದುವು!ನಾಳೆ ಅವರು, ಕೃಷ್ಣನು ತಮ್ಮ ಪುರವನ್ನು ಪ್ರವೇಶಿಸುವಾಗ, ಆತನ ಮುದ್ದುಮುಖದಲ್ಲಿ ತುಳುಕುತ್ತಿರುವ ಮಂದಹಾಸವೆಂಬ ಅಮೃತವನ್ನು ಯಥೇಷ್ಟವಾಗಿ ಪಾನಮಾಡುವರು. ಆಹಾ! ಅವರ ಭಾಗ್ಯವಲ್ಲವೇ ಭಾಗ್ಯವು! ಕೃಷ್ಣನು ಅಲ್ಲಿಗೆ ಹೋಗಿ, ನಾಗರಿಕರಾದ ಅಲ್ಲಿನ ಸ್ತ್ರೀಯ

ರನ್ನು ನೋಡಿದಮೇಲೆ, ತಿರುಗಿ ನಮ್ಮನ್ನು ಕಣ್ಣೆತ್ತಿಯಾದರೂ ನೋಡುವನೆ? ಕೃಷ್ಣನು ಸಹಜವಾಗಿ ಧೀರನಾಗಿದ್ದರೂ, ಅಮೃತಸಮಾನವಾದ ಅಲ್ಲಿನ ಸ್ತ್ರೀಯರ ಮಧುರಭಾಷಣಗಳನ್ನೂ, ಲಜ್ಜಾಸೂಚಕವಾದ ಅವರ ಮಂದ ಹಾಸವನ್ನೂ, ಅವರ ಹಾವಭಾವವಿಲಾಸಗಳನ್ನೂ ನೋಡಿದಮೇಲೆ, ಅವನ ಮನಸ್ಸು ಕದಲದಿರಲಾರದು. ಅವರಲ್ಲಿ ಮನಸ್ಸಿಟ್ಟಮೇಲೆ,ಹಳ್ಳಿಯ ಹೆಂಗಸ ರಾದ ನಮ್ಮನ್ನು ಬಂದು ನೋಡುವನೆ? ಎಂದಿಗೂ ಇಲ್ಲ! ಲಕ್ಷ್ಮೀಪತಿಯಾಗಿ ಯೂ, ಸಮಸ್ತಕಲ್ಯಾಣಗುಣಾಕರನಾಗಿಯೂ ಇರುವ ಆ ದೇವಕೀಪುತ್ರ ನನ್ನು ನೋಡುವುದರಿಂದ, ಮಧುರಾಪುರಿಯಲ್ಲಿನತಕ್ಕ ದಾಶಾರ್ಹ, ಭೋಜ, ಅಂಧಕ, ವೃಷ್ಣಿ, ಸಾತ್ವತರೆಂಬ ಯಾದವಕುಲದವರೆಲ್ಲರೂ ನಾಳೆ ನೇತ್ರೋ ತ್ಸವವನ್ನನುಭವಿಸುವುದರಲ್ಲಿ ಸಂದೇಹವಿಲ್ಲ. ಆ ಮಧುರಾಪುರಿಯ ದಾರಿಯಲ್ಲಿ ಹೋಗಿ ಬರತಕ್ಕವರೆಲ್ಲರಿಗೂ ನಾಳೆ ಕೃಷ್ಣದರ್ಶನಾನಂದವೆಂಬ ಭಾಗ್ಯವು ಲಭಿಸುವುದು ! ಅಯ್ಯೋ ! ಸ್ವಲ್ಪಮಾತ್ರವೂ ಕರುಣೆಯಿಲ್ಲದೆ, ಅತಿ ಕ್ರೂರ ಹೃದಯನಾದ ಆ ಕಂಸದೂತನಿಗೆ ಅಕ್ರೂರನೆಂದು ಹೆಸರಿಟ್ಟವರಾರೋ ಕಾಣೆನು ? ಮಹಾವ್ಯಸನಪೀಡಿತರಾದ ನಮ್ಮನ್ನು ಸ್ವಲ್ಪವಾದರೂ ಸಮಾ ಧಾನಪಡಿಸದೆ, ನಮಗೆ ಪ್ರಾಣಕ್ಕಿಂತಲೂ ಪ್ರಿಯನಾದ ಕೃಷ್ಣನನ್ನು ಎಲ್ಲಿ ಗೋ ಕಾಣದ ಸ್ಥಳಕ್ಕೆ ಕರೆದುಕೊಂಡು ಹೋಗಬೇಕೆಂದಿರುವನಲ್ಲಾ?ಅವನಿ ಗಿಂತಲೂ ಕ್ರೂರನಾರುಂಟು ? ಅಥವಾ ಆ ಅಕ್ರೂರನನ್ನೇಕೆ ನಿಂದಿಸಬೇಕು? ಅದೋ! ನಮ್ಮ ಕೃಷ್ಣನೇ ನಮ್ಮಲ್ಲಿ ಸ್ವಲ್ಪವಾದರೂ ದಯಾರಸವಿಲ್ಲದೆ ಆಗಲೇ ರಥವನ್ನೇರುವನು ನೋಡಿರಿ! ಈ ಗ್ರಾಮದಲ್ಲಿರುವ ವೃದ್ಧರಾದರೂ ಅವನನ್ನು ತಡೆಯಬಾರದೆ? ಅಯ್ಯೋ ! ಅವರೂ ಅಲಕ್ಷ್ಯವಾಗಿ ನೋಡುತ್ತಿ ರುವರು! ಆ ಕೃಷ್ಣನನ್ನು ಹಿಂಬಾಲಿಸಿ ಹೋಗತಕ್ಕ ಈ ಗೊಲ್ಲಮಕ್ಕಳ ಗರ್ವ ವನ್ನು ನೋಡಿದಿರಾ? ಆಗಲೇ ಬಂಡಿಗಳನ್ನು ಕಟ್ಟಿ, ಕೃಷ್ಣನನ್ನು "ನಡೆನಡೆ" ಯೆಂದು ಆತುರಗೊಳಿಸುತ್ತಿರುವರಲ್ಲಾ ! ದೈವವಾದರೂ ಈಗ ನಮಗೆ ಅನುಕೂಲವಾಗಿ, ಆ ಕೃಷ್ಣನ ಪ್ರಯಾಣಕ್ಕೆ ಏನಾದರೂ ವಿಘ್ನವನ್ನು ತಂದಿಡಬಾರದೆ ? ದೈವವೂ ಈಗ ನಮಗೆ ಪ್ರತಿಕೂಲವಾಗಿಯೇ ನಡೆಯು ತ್ತಿರುವುದು. ಓ ಗೋಪಿಯರೆ ! ಈಗಲೂ ನಾವೆಲ್ಲರೂ ಗುಂಪಾಗಿಹೋಗಿ

ಆ ಕೃಷ್ಣನನ್ನು ತಡೆದು ನಿಲ್ಲಿಸಿಬಿಡುವೆವೆ? ಅದೇ ಸರಿ! ಈಗ ನಾವು ಭಯಪಡ ಬಾರದು! ನಾಚಿಕೆಪಟ್ಟರೆ ಕೆಲಸವು ಕೆಡುವುದು. ನಮ್ಮ ಕುಲವೃದ್ಧರಾಗಲಿ, ನಮ್ಮ ಬಂಧುಗಳಾಗಲಿ ನಮ್ಮನ್ನೇನು ಮಾಡಬಲ್ಲರು?ಅಥವಾ ನಮಗೆ ಅವರು ಯಾವಶಿಕ್ಷೆಯನ್ನು ಮಾಡಿದರೂ ಮಾಡಲಿ! ನಿಮಿಷಮಾತ್ರವೂ ಸಹಿಸಲಾರ ದ ಆ ಕೃಷ್ಣನ ವಿಯೋಗದಿಂದ ಈಗಲೇ, ಸಾಯುವಸ್ಥಿತಿಯಲ್ಲಿರುವ ನಾವು ಯಾರಿಗಾಗಿ ಭಯಪಡಬೇಕು? ಹಿಂದೆ ನಾವೆಲ್ಲರೂ ರಾಸಕ್ರೀಡೆಯಲ್ಲಿರುವಾಗ, ಆ ಕೃಷ್ಣನ ಅನುರಾಗಪೂರ್ವಕವಾದ ಮಂದಹಾಸವನ್ನೂ, ಅವನು ನಮ್ಮೊಡನೆ ಸಲಿಗೆಯಿಂದಾಡುತಿದ್ದ ಸರಸಸಂಭಾಷಣಗಳನ್ನೂ, ವಿಲಾಸವಿಶಿಷ್ಟವಾದ ಅವನ ನೋಟವನ್ನೂ, ಅವನ ಆಲಿಂಗನವನ್ನೂ ಸಂತೋಷದಿಂದನುಭವಿಸುತಿದ್ದ ನಮಗೆ, ಆ ರಾತ್ರಿಗಳೆಲ್ಲವೂ ಕ್ಷಣಮಾತ್ರದಂತೆ ಕಳೆದುಹೋದುವು. ಈಗ ಅಂತಹ ಕೃಷ್ಣನನ್ನು ಬಿಟ್ಟು, ವಿಯೋಗದುಃಖವೆಂಬ ಈ ಮಹಾಂಧಕಾರವನ್ನು ನಾವು ಹೇಗೆ ದಾಟಬಲ್ಲೆವು? ದುಃಖವನ್ನು ದಾಟುವುದು ಹಾಗಿರಲಿ! ನಮ್ಮ ಕೃಷ್ಣನು ಕಾಡಿಗೆ ಹೋಗಿ ದನಗಳನ್ನು ಮೇಯಿಸುತಿದ್ದು, ಸಾಯಂಕಾಲದಲ್ಲಿ ಬಲರಾಮನೊಡನೆಯೂ, ಇತರ ಗೋಪಬಾಲಕರೊಡನೆಯೂ ಹಿಂತಿರುಗಿ ಬರುವಾಗ, ತನ್ನ ಕೊಳಲಿನ ಧ್ವನಿಯಿಂದಲೂ, ಗೋಪಾದಧೂಳಿಯಿಂದ ಕೊಳೆಗಟ್ಟಿದ ಮುಂಗುರುಳುಗಳಿಂದಲೂ,ಮಂದಹಾಸವಿಶಿಷ್ಟವಾದ ತನ್ನ ಕಡೆಗಣ್ಣಿನ ನೋಟದಿಂದಲೂ, ನಮ್ಮ ಮನಸ್ಸನ್ನಾಕರ್ಷಿಸಿ ತನಗೆ ವಶವಾಗಿ ಮಾಡಿಕೊಂಡನಲ್ಲವೆ? ಅಂತಹ ಮೋಹನಾಂಗನನ್ನು ಬಿಟ್ಟು ನಾವು ಬದುಕುವ ಬಗೆಯೇನು? "ಎಂದು ವ್ಯಸನದಿಂದ ಪರಿತಪಿಸುತಿದ್ದರು. ಓ ಪರೀಕ್ಷಿದ್ರಾಜಾ! ಹೀಗೆ ಗೋಪಿಯರೆಲ್ಲರೂ ಕೃಷ್ಣನಲ್ಲಿ ನಟ್ಟ ಮನಸುಳ್ಳವರಾಗಿ, ವಿರಹಾತುರದಿಂದ ನಾಚಿಕೆಯನ್ನು ಬಿಟ್ಟು ಸುಸ್ವರದಿಂದ, "ಗೋವಿಂದಾ! ದಾಮೋದರಾ! ಮಾಧವಾ!"ಎಂದು ಅಳತೊಡಗಿದರು. ಅವರು ಅಳುತಿದ್ದಹಾಗೆಯೇ ಸೂರ್ಯೋದಯವಾಯಿತು. ಆಮೇಲೆ ಅಕ್ರೂರನು, ಆ ನಂದಗೋಕುಲದಲ್ಲಿ ತನಗೆ ಪರಿಚಿತರಾದವರೆಲ್ಲರನ್ನೂ ಮಾತಾಡಿಸಿ ಬಂದು,ಸೂರ್ಯೋಪಾಸನೆ ಮೊದಲಾದ ಬೆಳಗಿನ ಕಾರ್ಯಗಳನ್ನು ಮುಗಿಸಿಕೊಂಡು ಕೃಷ್ಣನೊಡನೆ ರಥವನ್ನೇರಿದನು. ಇವನ ರಥವು

ಹೊರಡುವುದಕ್ಕೆ ಸಿದ್ಧವಾಗುವಷ್ಟರಲ್ಲಿ, ನಂದಾದಿಗೋಪಾಲಕರೂ, ತಮ್ಮ ತಮ್ಮ ಬಂಡಿಗಳನ್ನು ಕಟ್ಟಿಕೊಂಡು, ಹಾಲು. ಮೊಸರು, ಮೊದಲಾದ ಕೈಕಾಣಿಕೆಗಳನ್ನೂ ಸಂಗ್ರಹಿಸಿಕೊಂಡು ಹೊರಟರು. ಗೋಪಿಯರೂಕೂಡ, ತಮಗೆ ಪ್ರಿಯನಾದ ಕೃಷ್ಣನ ರಥವನ್ನು ಹಿಂಬಾಲಿಸುತ್ತ, ಆ ಕೃಷ್ಣನು ತಮಗೆ ಯಾವಸಮಾಧಾನವನ್ನು ಹೇಳುವನೋ ಎಂದು, ಹಿಂದೆಯೇ ಹೋಗುತಿದ್ದರು. ಹೀಗೆ ಗೋಪಿಯರು ತನ್ನ ಪ್ರಯಾಣಕಾಲದಲ್ಲಿ ಬಹಳವಾಗಿ ತಪಿಸುತ್ತಿರುವುದನ್ನು ನೋಡಿ ಕೃಷ್ಣನು, ತಾನು ಶೀಘ್ರದಲ್ಲಿಯೇ ಹಿಂತಿರುಗಿ ಬರುವುದಾಗಿ ದೂತರಮುಖದಿಂದ ಸಮಾಧಾನವನ್ನು ಮಾಡಿ ಕಳುಹಿಸಿದನು. ಕೃಷ್ಣನ ರಥವು ಮುಂದೆ ಹೊರಟಿತು. ಇತ್ತಲಾಗಿ ಗೋಪಿಯರು, ಮೊದಲು ತಮ್ಮ ಕಣ್ಣಿಗೆ ಆ ಕೃಷ್ಣನ ರಥವು ಬೀಳುವವರೆಗೂ ನಟ್ಟ ಕಣ್ಣಿನಿಂದ ಅದನ್ನೇ ನೋಡುತ್ತಿದ್ದರು ಕ್ರಮಕ್ರಮವಾಗಿ ರಥವು ಮರೆಸಿಹೋಗುತ್ತಬಂದು, ಅದರ ಧ್ವಜದಂಡವುಮಾತ್ರ ಕಾಣುತಿತ್ತು. ಸ್ವಲ್ಪಹೊತ್ತಿನೊಳಗಾಗಿ ಅದೂ ಕಾಣ್ಮರೆಯಾಗಿ, ಆ ರಥದ ಧೂಳುಮಾತ್ರ ಆಕಾಶದಲ್ಲಿ ಕಾಣಿಸುತಿತ್ತು. ಕೊನೆಗೆ ಅದೂ ಮರೆಸಿಹೋಯಿತು. ಈ ಗುರುತುಗಳೆಲ್ಲವೂ ಚೆನ್ನಾಗಿ ಮರೆಸಿಹೋಗುವವರೆಗೆ, ಆ ಸ್ತ್ರೀಯರು ಅದನ್ನೇ ನೋಡುತ್ತ, ಚಿತ್ರದ ಬೊಂಬೆಗಳಂತೆ ನಿಂತಿದ್ದರು ಕೊನೆಗೆ ಅವರೆಲ್ಲರೂ ನಿರಾಶರಾಗಿ ಮನೆಗೆ ಬಂದು, ಹಗಲು ರಾತ್ರಿಯೂ ಆ ಕೃಷ್ಣನ ಗುಣಗಳನ್ನೇ ಹಾಡುತ್ತ ದಿನಗಳನ್ನು ಕಳೆಯುತಿದ್ದರು ಇತ್ತಲಾಗಿ ರಾಮಕೃಷ್ಣರಿಬ್ಬರೂ ಅಕ್ರೂರನೊಡನೆ ರಥದಲ್ಲಿ ಕುಳಿತು ವಾಯುವೇಗದಿಂದ ಪ್ರಯಾಣಮಾಡಿ, ಸ್ವಲ್ಪಕಾಲದೊಳಗಾಗಿ ಯಮುನಾತೀರಕ್ಕೆ ಬಂದು ಸೇರಿದರು ಕೃಷ್ಣನು ಬಲರಾಮನೊಡನೆ ಅಲ್ಲಿ ಸ್ನಾನವನ್ನು ಮಾಡಿ, ಸಾಣೆಯಿಕ್ಕಿದ ಇಂದ್ರನೀಲದಂತೆ ಸ್ವಚ್ಛವಾದ ಆನದಿಯ ಜಲವನ್ನು ಸಂತೋಷದಿಂದ ಪಾನಮಾಡಿ, ತೀರವೃಕ್ಷಗಳ ನೆಳಲಲ್ಲಿ ಸ್ವಲ್ಪವಾಗಿ ವಿಶ್ರಮಿಸಿಕೊಂಡಿದ್ದು ರಥವನ್ನೇರಿದನು. ಆ ರಾಮಕೃಷ್ಣರಿಬ್ಬರನ್ನೂ ಕರೆತಂದು ರಥದಲ್ಲಿ ಕುಳ್ಳಿರಿಸಿದಮೇಲೆ, ಅಕ್ರೂರನು ಅವರ ಅನುಜ್ಞೆಯನ್ನು ಪಡೆದು, ತಾನೂ ಯಥಾವಿಧಿಯಾಗಿ ಸ್ನಾನಮಾಡಬೇಕೆಂದು ಹೊರಟು, ಪ್ರಣವಮಂತ್ರವನ್ನು ಜಪಿಸುತ್ತ ನೀರಿನಲ್ಲಿ ಮುಳುಗಿದನು. ತಾನು ಆಗಲೇ ರಥದಲ್ಲಿ

ಕುಳ್ಳಿರಿಸಿ ಬಂದ ರಾಮಕೃಷ್ಣರಿಬ್ಬರೂ ಜಲಮಧ್ಯದಲ್ಲಿ ಅವನ ಕಣ್ಣಿಗೆ ಗೋಚರಿಸಿದರು. ಆಗ ಅವನಿಗುಂಟಾದ ಪರಮಾಶ್ಚರ್ಯವನ್ನು ಕೇಳ ಬೇಕೆ? ಹಿಂದುಮುಂದುತೋರದೆ ವಿಭ್ರಾಂತನಾಗಿ ತನ್ನಲ್ಲಿ ತಾನು "ಆ ಹಾ! ಏನಿದು? ನಾನು ಈಗಲೇ ರಥವನ್ನೇರಿಸಿ ಬಂದ ರಾಮಕೃಷ್ಣರಿಬ್ಬ ರೂ ಇಲ್ಲಿಗೆ ಹೇಗೆ ಬಂದರು? ಒಂದುವೇಳೆ ನಾನು ಅಲ್ಲಿಂದ ಹಿಂತಿರುಗಿದೊಡ ನೆ ನನಗೆ ತಿಳಿಯದಹಾಗೆ ಅವರೂ,ರಥವನ್ನಿಳಿದು, ಮುಂದೆ ಓಡಿಬಂದಿರಬಹುದೆ? ಇದ್ದರೂ ಇರಬಹುದು! ಹಾಗಿದ್ದರೆ ಈಗ ಅವರು ರಥದಲ್ಲಿಲ್ಲದಿರಬೇಕಲ್ಲವೆ! ಇರಲಿ! ಅಲ್ಲಿ ಹೋಗಿ ನೋಡಿಬರುವೆನು."ಎಂದು ರಥದಕಡೆಗೆ ನೋಡುವಾಗ, ರಥದಲ್ಲಿ ಮೊದಲಿನಂತೆಯೇ ಅವರು ಕುಳಿತಿರುವುದನ್ನು ಕಂಡನು. ಆಗ ಮತ್ತ ಷ್ಟು ವಿಸ್ಮಿತನಾಗಿ "ಇದೇನಿದು! ನಾನು ನೀರಿನಲ್ಲಿ ನೋಡಿದುದೇ ಕೇವಲ ಭ್ರಾಂತಿಯಾಗಿರಬಹುದೆ?" ಎಂದು ತಿರುಗಿ ಮುಳುಗಿನೋಡಿದಾಗ, ಅಲ್ಲಿ ಅನೇಕಸಿದ್ಧಗಣಗಳಿಂದಲೂ, ನಾಗರಿಂದಲೂ, ದೇವತೆಗಳಿಂದಲೂ ಪ್ರ ಣಾಮಪೂರ್ವಕವಾಗಿ ಸ್ತುತಿಸಲ್ಪಡುತ್ತಿರುವ ಆದಿಶೇಷನನ್ನು ಕಂಡನು. ಅವನಿ ಗೆ ದಿವ್ಯಕಿರೀಟಶೋಭಿತಗಳಾದ ಸಹಸ್ರಶಿರಸ್ಸುಗಳು! ತಾವರೆದಂಟಿನಂತೆ ಬಿಳುಪಾದ ಮೈ! ಅದರಮೇಲೆ ನೀಲವರ್ಣದ ಪಟ್ಟೆಮಡಿ! ಇಂತಹ ದಿವ್ಯಾ ದ್ಭುತರೂಪದಿಂದ, ಸುವರ್ಣಶಿಖರಗಳುಳ್ಳ ರಜತಪರ್ವತದಂತೆ ಶೋಭಿಸುತ್ತಿ ರುವ ಆ ಆದಿಶೇಷನ ಶರೀರದಲ್ಲಿ, ಮೇಘಶ್ಯಾಮಲಮೂರ್ತಿಯಾಗಿ, ಪೀತಾಂ ಬರವನ್ನುಟ್ಟು ಮಲಗಿದ್ದ ಮಹಾಪುರುಷನನ್ನೂ ಕಂಡನು. ಅವನಿಗೆ ನಾಲ್ಕು ಭುಜಗಳು!ಸೌಮ್ಯವಾದ ಆಕೃತಿ! ಕಮಲದಳದಂತೆ ವಿಶಾಲವಾದ ಕಣ್ಣುಗ ಳು! ಪ್ರಸನ್ನವಾದ ಮುಖದ ಸೊಗಸು! ಮಂದಹಾಸದಿಂದರಳಿದ ಕಣ್ಣುಗ ಳು! ಅಂದವಾದ ಹುಬ್ಬು! ಎತ್ತರವಾದ ಮೂಗು!ಸುಂದರವಾದ ಕಿವಿಗಳು! ನುಣುಪಾದ ಕೆನ್ನೆ! ಕೆಂಪಾದ ತುಟಿ! ದುಂಡಾಗಿ ನೀಡಿದ ತೋಳುಗಳು !ಉ ಬ್ಬಿದ ಹೆಗಲು! ಎದೆಯಲ್ಲಿ ಮಹಾಲಕ್ಷ್ಮಿ! ಶಂಖದಂತೆ ಕೊರಲು! ಆಳವಾದ ಹೊಕ್ಕುಳು! ಚಿಗುರೆಲೆಯಂತೆ ತೆಳುವಾಗಿ, ತ್ರಿವಳಿಗಳಿಂದ ಕೂಡಿದ ಉದರ ಪ್ರದೇಶದ ಸೊಗಸು! ವಿಶಾಲವಾದ ಕಟಿತಟಗಳು! ಆನೆಯ ಸುಂಡಿಲಿನಂತೆ ಉಬ್ಬಿ, ದುಂಡಾದ ತೊಡೆಗಳು! ಸುಂದರವಾದ ಜಾನುಗಳು! ನೀಡಿದ ಮೊಳ

ಕಾಲುಗಳು! ಎತ್ತರವಾದ ಗುಲ್ಫದಿಂದಲೂ, ಕೆಂಪಾದ ನಖಗಳಿಂದಲೂ, ಪ ಲ್ಲವದಳಗಳಂತಿರುವ ಬೆರಳುಗಳಿಂದಲೂ ಶೋಭಿತವಾದ ಪಾದಕಮಲಗಳು! ಸರ್ವಾವಯವಗಳಲ್ಲಿಯೂ ರತ್ನಖಚಿತಗಳಾದ ಕಿರೀಟ, ಕುಂಡಲ, ಹಾರ, ನೂಪುರ, ಕಟಿಸೂತ್ರಾದಿದಿವ್ಯಾಭರಣಗಳು ! ಕಂಠದಲ್ಲಿ ಬ್ರಹ್ಮಸೂತ್ರಗಳು! ನಾಲ್ಕುಕೈಗಳಲ್ಲಿ ಶಂಖ,ಚಕ್ರ, ಗದಾ ಪದ್ಮಗಳೆಂಬ ದಿವ್ಯಾಯುಧಗಳು! ಎದೆ ಯಲ್ಲಿ ಶ್ರೀವತ್ಸವೆಂಬ ಮಚ್ಚೆ ! ಕಂಠದಲ್ಲಿ ಕೌಸ್ತುಭಮಣಿ ಮತ್ತು ವನಮಾ ಲಿಕೆ! ಹೀಗೆ ಶೇಷಶಾಯಿಯಾಗಿರುವ ಆ ಪರಮಪುರುಷನಸುತ್ತಲೂ ಸುನಂ ದ, ನಂದರೇ ಮೊದಲಾದ ಪಾರ್ಷದರೂ,ಸನಕಾದಿಮಹರ್ಷಿಗಳೂ, ಬ್ರಹ್ಮ ರುದ್ರಾದಿದೇವತೆಗಳೂ, ಕವಿಗಳೂ, ಮರೀಚಿ ಮೊದಲಾದ ಬ್ರಾಹ್ಮಣೋತ್ತ ಮರೂ, ಪ್ರಹ್ಲಾದನಾರದರೇ ಮೊದಲಾದ ಭಾಗವತೋತ್ತಮರೂ, ವಸು ಗಳೂ,ತಮ್ಮತಮ್ಮ ಭಾವನೆಗೆ ತಕ್ಕಂತೆ, ಶುದ್ಧವಾಕ್ಯಗಳಿಂದ ಸ್ತುತಿಸುತ್ತಿರು ವರು. ಇವರಲ್ಲಿ ಕೆಲವರು ಸರ್ವಶೇಷಿಯಿಂದೂ, ಕೆಲವರು ಪರಬ್ರಹ್ಮವೆಂದೂ, ಮತ್ತೆ ಕೆಲವರು ಸರ್ವಕಾರಣನೆಂದೂ, ಇನ್ನು ಕೆಲವರು ಪ್ರಜಾಧಿಪತಿಯೆಂದೂ ಭಿನ್ನಾಭಿಪ್ರಾಯವುಳ್ಳವಾಕ್ಯಗಳಿಂದ,ಶುದ್ಧಮನಸ್ಕರಾಗಿ ಸ್ತುತಿಸುತ್ತಿದ್ದರು. ಶ್ರೀ, ಪುಷ್ಟಿ, ಗೀ, ಕಾಂತಿ, ಕೀರ್ತಿ, ತುಷ್ಟಿ, ಇಲೆ, ಊರ್ಜಸ್ಸು, ವಿದ್ಯೆ, ಅವಿದ್ಯೆ, ಶಕ್ತಿ,ಮಾಯೆಯೆಂಬ ದ್ವಾದಶಶಕ್ತಿದೇವತೆಗಳೂ ಅವನನ್ನು ಸೇವಿ ಸುತ್ತಿರುವರು. ಇಂತಹ ಪರಮಪುರುಷನನ್ನು ಅಕ್ರೂರನು ನಟ್ಟಕಣ್ಣಿಂದ ನೋಡುತ್ತಿರುವಾಗ, ಅವನ ಸಂತೋಷವು ಉಕ್ಕಿಬಂದಿತು. ಅವನ ಭಕ್ತಿಯು ಕೊನೆಮುಟ್ಟಿತು ! ಅವನ ದೇಹವು ಪುಳಕಿತವಾಯಿತು. ಕಣ್ಣುಗಳಲ್ಲಿ ಆನಂ ದಬಾಷ್ಪವು ತುಳುಕುತಿತ್ತು. ಕ್ಷಣಕಾಲದವರೆಗೆ ಪ್ರಜ್ಞೆತಪ್ಪಿದಂತಿದ್ದು, ಮೆಲ್ಲಗೆ ಚೇತರಿಸಿಕೊಂಡು, ಉದ್ಧಕ್ಕೆ ನಮಸ್ಕಾರವನ್ನುಮಾಡಿ, ಕೈಮುಗಿದು ನಿಂತನು. ಆ ಆನಂದಾತಿಶಯದಿಂದ ಕಂಠಧ್ವನಿಯು ತಡೆಯುತಿದ್ದರೂ, ಗದ್ಗದಸ್ವರದಿಂದಲೇ ಹೀಗೆಂದು ಸ್ತುತಿಸುವನು. ಇದು ಮೂವತ್ತೊಂಬತ್ತ ನೆಯ ಅಧ್ಯಾಯವು.

---

*

## ಅಕ್ರೂರನು ಕೃಷ್ಣನನ್ನು ಸ್ತುತಿಸಿದುದು.

ದೇವಾ! ಮಹತ್ತು ಮೊದಲಾದ ಎಲ್ಲಾ ಜಗತ್ಕಾರಣವಸ್ತುಗಳಿಗೂ ಆದಿಕಾರಣನಾಗಿ, ಸಮಸ್ತಜೀವಗಳಿಗೂ ಆಧಾರನಾಗಿ, ಆದಿಪೂರುಷನಾಗಿ, ಅವ್ಯಯನೆನಿಸಿಕೊಂಡ ನಿನಗೆ ನಮಸ್ಕಾರವು. ದೇವಾ! ಮೊದಲು ನಿನ್ನ ನಾಭಿಯಲ್ಲಿ ಹುಟ್ಟಿದ ಕಮಲದಿಂದ ಬ್ರಹ್ಮನು ಹುಟ್ಟಿದನು. ಅವನಿಂದ ಈ ಲೋಕವೆಲ್ಲವೂ ಸೃಷ್ಟಿಸಲ್ಪಟ್ಟಿತು. ಆದುದರಿಂದ ಸಮಷ್ಟಿ ವ್ಯಷ್ಟಿ ಸೃಷ್ಟಿಗಳೆರಡಕ್ಕೂ ನೀನೇ ಆದಿಕಾರಣನು! ಭೂಮಿ, ನೀರು, ಅಗ್ನಿ, ವಾಯು, ಆಕಾಶವೆಂಬ ಪಂಚಭೂತಗಳು, ಆ ಭೂತಗಳಿಗೆ ಕಾರಣವಾದ ಅಹಂಕಾರ, ಅದಕ್ಕೂ ಕಾರಣವೆನಿಸಿದ ಮಹತ್ತು, ಆ ಮಹತ್ತಿಗೂ ಕಾರಣವಾದ ಪ್ರಕೃತಿ, ದಶೇಂದ್ರಿಯಗಳು, ಮನಸ್ಸು, ಆ ಇಂದ್ರಿಯಾಧಿಷ್ಠಾನ ದೇವತೆಗಳು, ಆ ಇಂದ್ರಿಯಗಳಿಗೆ ಬೇಕಾದ ಶಬ್ದಾದಿವಿಷಯಗಳು, ಎಂಬೀ ಪ್ರಪಂಚಕಾರಣಗಳೆಲ್ಲವೂ ನಿನ್ನ ಅಂಗಗಳು! ಇವೆಲ್ಲವೂ ನಿನಗೆ ಶರೀರಭೂತಗಳು. ಹೀಗೆ ನೀನು ಸಮಸ್ತಜಗತ್ತಿಗೂ ನಿಮಿತ್ತಕಾರಣನಾಗಿಯೂ, ಉಪಾದಾನಕಾರಣನಾಗಿಯೂ ಇರುವುದರಿಂದಲೇ ಅಖಿಲಹೇತುವೆನಿಸುವೆ! ನಿನಗೆ ಶರೀರಭೂತಗಳಾದ ಮೂಲಪ್ರಕೃತಿ ಮೊದಲಾದುವೂ, ಜೀವಾದಿಗಳೂ, ತಮಗೆ ಅಂತರಾತ್ಮನಾಗಿರುವ ನಿನ್ನನ್ನು ತಿಳಿಯಲಾರವು! ಜೀವಗಳು ಪ್ರಕೃತಿಯಂತೆ ಜಡವೆನಿಸಿಕೊಳ್ಳದೆ, ಜ್ಞಾನಾಶ್ರಯಗಳಾಗಿದ್ದರೂಕೂಡ, ಅವುಗಳಿಗೆ ನಿನ್ನ ಮಾಯೆಯಿಂದ ದೇಹದಲ್ಲಿ ಆತ್ಮಾಭಿಮಾನವೂ, ಆತ್ಮನಲ್ಲಿ ಸ್ವತಂತ್ರಾಭಿಮಾನವೂ ಹುಟ್ಟುವುದು ಸಹಜವು! ಆದುದರಿಂದ ಆ ಜೀವಾತ್ಮರು, ತಮ್ಮ ಆತ್ಮವು ದೇಹಕ್ಕಿಂತಲೂ ಬೇರೆಂಬುದನ್ನಾಗಲಿ, ಆ ಆತ್ಮವು ನಿನಗೆ ಪರತಂತ್ರವೆಂಬುದನ್ನಾಗಲಿ ತಿಳಿಯಲಾರರು. ಹೀಗಿರುವಾಗ ನಿನ್ನ ಪರಸ್ವರೂಪವನ್ನು ಹೇಗೆತಾನೇ ತಿಳಿಯಬಲ್ಲರು? ಬ್ರಹ್ಮನೂಕೂಡ, ತನ್ನ ಶರೀರಪ್ರಾಪ್ತಿಗೆ ಹೇತುವಾದ ಸತ್ವರಜಸ್ತಮೋಗುಣಗಳಿಗೆ ಪರವಶನಾಗಿರುವುದರಿಂದ, ಆ ಪ್ರಕೃತಿಗುಣಗಳಾದ ಸತ್ವಾದಿಗಳಿಗಿಂತಲೂ ವಿಲಕ್ಷಣನಾಗಿ, ಅವುಗಳಿಗೆ ನಿಯಾಮಕನಾಗಿರುವ ನಿನ್ನ ಸ್ವರೂಪವನ್ನು ತಿಳಿಯಲಾರನು. ಹೀಗಿರುವಾಗ ಇತರಸಾಮಾನ್ಯಜೀವರು ಅದನ್ನು ತಿಳಿಯಲಾ

ರರೆಂಬುದನ್ನು ಹೇಳಬೇಕಾದುದೇನು? ಆದುದರಿಂದ ನೀನು ಸರ್ವಕಾರಣನೆಂಬುದು ಎಲ್ಲರಿಗೂ ತಿಳಿಯಲಾರದು. ನೀನು ಪ್ರಕೃತಿಗಿಂತಲೂ, ಆ ಪ್ರಕೃತಿಸಂಬಂಧವುಳ್ಳ ಬದ್ಧಮುಕ್ತಜೀವರಿಗಿಂತಲೂ, ನಿತ್ಯಮುಕ್ತರಿಗಿಂತಲೂ ವಿಲಕ್ಷಣನಾದುದರಿಂದಲೇ ಯೋಗಿಗಳು ನಿನ್ನನ್ನು ಮಹಾಪುರುಷನೆಂದು ತಿಳಿದು ಉಪಾಸಿಸುವರು. ಅಂತರಾದಿತ್ಯವಿದ್ಯೆಯಲ್ಲಿ ನಿಷ್ಠರಾದ ಸಾಧುಗಳು, ನೀನು ಆದಿತ್ಯಮಂಡಲಮಧ್ಯವರ್ತಿಯಾಗಿಯೂ, ಇಂದ್ರಾದಿದೇವತಾಂತರ್ಯಾಮಿಯಾಗಿಯೂ ಇರುವುದರಿಂದ ಸಾಧಿದೈವವೆಂದು ಉಪಾಸಿಸುವರು. ನೀನು ಶರೀರಾವಯವಗಳಲ್ಲಿರುವುದನ್ನು ತಿಳಿದ ಕೆಲವರು, ನಿನ್ನನ್ನು ಸಾಧ್ಯಾತ್ಮನೆಂದು ಉಪಾಸಿಸುವರು. ಮತ್ತೆ ಕೆಲವರು ಸರ್ವಶರೀರಕನಾಗಿ ಸರ್ವಭೂತಗಳಲ್ಲಿಯೂ ಇರುವ ನಿನ್ನನ್ನು ಸಾಧಿಭೂತನೆಂದು ಉಪಾಸಿಸುವರು. ಕರ್ಮನಿಷ್ಠರಾದ ಬ್ರಾಹ್ಮಣರು, ವೇದದ ಪೂರ್ವಭಾಗದಲ್ಲಿ ಹೇಳಲ್ಪಟ್ಟ ನಾನಾವಿಧಕರ್ಮಗಳಮೂಲಕವಾಗಿ, ಸರ್ವದೇವತಾತ್ಮಕನಾದ ನಿನ್ನನ್ನೇ ಇಂದ್ರಾದಿದೇವತಾರೂಪದಿಂದ ಆರಾಧಿಸುವರು. ನಿನ್ನ ಸ್ವರೂಪಗುಣಾದಿಗಳೆಲ್ಲವನ್ನೂ ಚೆನ್ನಾಗಿ ತಿಳಿದ ಜ್ಞಾನಿಗಳು, ತಮ್ಮ ಸಮಸ್ತಕರ್ಮಫಲಗಳನ್ನೂ ನಿನ್ನಲ್ಲಿಯೇ ಅರ್ಪಿಸಿ, ಸರ್ವವಿಧದಲ್ಲಿಯೂ ತಾವು ನಿನಗೆ ಶೇಷಭೂತರೆಂದು ತಿಳಿದು, ಅಹಂಕಾರಮಮಕಾರಾದಿಗಳನ್ನು ಬಿಟ್ಟು, ಜ್ಞಾನಸ್ವರೂಪನಾದ ನಿನ್ನನ್ನು ಜ್ಞಾನಯೋಗದಿಂದಲೇ ಆರಾಧಿಸುವರು. ನಿನ್ನಿಂದುಪದೇಶಿಸಲ್ಪಟ್ಟ ಪಾಂಚರಾತ್ರಶಾಸ್ತ್ರಕ್ರಮದಿಂದ ಪಂಚಸಂಸ್ಕಾರಗಳನ್ನು ಹೊಂದಿ ಶುದ್ಧಾತ್ಮರಾದವರು, ನಿನ್ನಲ್ಲಿಯೇ ನಟ್ಟಮನಸ್ಸುಳ್ಳವರಾಗಿ, ಪರಸ್ವರೂಪದಲ್ಲಿ ಏಕಮೂರ್ತಿಯಾಗಿಯೂ, ವ್ಯೂಹವಿಭವಾದ್ಯವತಾರಗಳಿಂದ ಬಹುಮೂರ್ತಿಯಾಗಿಯೂ ಇರುವ ನಿನ್ನನ್ನು, ಆ ಪಾಂಚರಾತ್ರಶಾಸ್ತ್ರೋಕ್ತವಾದ ಪೂಜಾವಿಧಿಗಳಿಂದಲೇ ನಿನ್ನನ್ನು ಆರಾಧಿಸುವರು. ಶೈವಾಗಮನಿಷ್ಠರಾದ ಶೈವ, ಕಾಪಾಲಿಕ, ಪಾಶುಪತಾದಿಗಳೂಕೂಡ, ತಮ್ಮ ಶಾಸ್ತ್ರವಿಧಿಯನ್ನನುಸರಿಸಿ, ನಿನ್ನನ್ನೇ ಶಿವರೂಪದಿಂದ ಭಾವಿಸಿ ಉಪಾಸಿಸುವರು. ಹೀಗೆ ಲೋಕದಲ್ಲಿ ಬೇರೆಬೇರೆ ದೇವತೆಗಳನ್ನು ಭಜಿಸತಕ್ಕ ಆ ಯಾಜನರು, ನೀನೇ ಸರ್ವದೇವತಾತ್ಮಕನೆಂಬುದನ್ನು ತಿಳಿಯದೆ, ತಮ್ಮತಮ್ಮ

ಇಷ್ಟದೈವಗಳನ್ನು ನಿನಗಿಂತಲೂ ಬೇರೆಯಾಗಿ ತಿಳಿದು ಉಪಾಸನೆಮಾಡಿದ ರೂ, ಕೊನೆಗೆ ಅವರ ಪೂಜೆಗಳೆಲ್ಲವೂ ಸರ್ವದೇವತಾಶರೀರಕವಾದ ನಿನ್ನಲ್ಲಿ ಯೇ ಸೇರುವುವು. ಬೇರೆಬೇರೆ ಪರ್ವತಗಳಿಂದ ಹೊರಡುವ ನದೀಪ್ರವಾಹಗ ಳು, ಮಳೆಯ ನೀರಿನಿಂದ ತುಂಬಿ ನಾನಾಶಾಖೆಗಳಾಗಿ ಹೊರಟರೂ, ಕೊ ನೆಗೆ ಆ ನದಿಗಳೆಲ್ಲವೂ ಸಮುದ್ರದಲ್ಲಿಯೇ ಬಂದು ಸೇರುವಂತೆ, ಬೇರೆಬೇರೆ ದೇವತೆಗಳವಿಷಯವಾಗಿ ಪ್ರಸರಿಸತಕ್ಕ ಭಾವನೆಗಳೆಲ್ಲವೂ, ಕೊನೆಗೆ ನಿನ್ನನ್ನೇ ವಿಷಯೀಕರಿಸುವುವು. ಸತ್ವ, ರಜಸ್ಸು, ತಮಸ್ಸು ಎಂಬಿವು ಮೂರೂ ನಿನ ಗೆ ಶರೀರಭೂತವಾದ ಪ್ರಕೃತಿಯ ಗುಣಗಳು! ಸೂತ್ರಗಳಿಂದ ಬಟ್ಟೆಯು ಹೇಗೋ ಹಾಗೆ, ಬ್ರಹ್ಮನಿಂದ ಹುಲ್ಲುಕಡ್ಡಿಯವರೆಗಿನ ಪ್ರಾಕೃತದೇಹಗಳೆ ಲ್ಲವೂ, ಆ ಮೂರುಗುಣಗಳಿಂದಲೇ ಏರ್ಪಟ್ಟಿರುವುದರಿಂದ, ಈ ಪ್ರಪಂಚ ದ ಪ್ರವೃತ್ತಿಗಳೆಲ್ಲವೂ ನಿನಗೆ ಅಧೀನವಾಗಿಯೇ ಇರುವುವು. ದೇವಾ! ಬ್ರಹ್ಮಾದಿಸಮಸ್ತಕ್ಷೇತ್ರಜ್ಞರಿಗೂ ನೀನೇ ಆತ್ಮನೆನಿಸಿಕೊಂಡಿರುವೆ! ಹಾಗಿದ್ದರೂ ನೀನು ಪ್ರಾಕೃತಶರೀರಗಳಲ್ಲಿರುವ ಇತರಜೀವಗಳಂತೆ ದೇ ಹಾಭಿಮಾನವೇ ಮೊದಲಾದ ಭ್ರಾಂತಿಗೆ ಒಳಗಾಗುವವನಲ್ಲ! ಸಮಸ್ತ ಬುದ್ಧಿಗಳಿಗೂ ನೀನೇ ಸಾಕ್ಷೀಭೂತನಾಗಿ ನೋಡತಕ್ಕವನಾದುದರಿಂದ ನಿನ್ನಲ್ಲಿ ಆ ವಿಧವಾದ ಬುದ್ಧಿಭ್ರಮವು ತಲೆದೋರುವುದಕ್ಕೇ ಅವಕಾಶವಿಲ್ಲ. ದೇವತಿರ್ಯಙ್ಮನುಷ್ಯಾದಿದೇಹಗಳಲ್ಲಿರುವ ಜೀವಗಳಿಗೆ, ಸತ್ವಾದಿಗುಣಗಳ ಪ್ರವಾಹರೂಪವಾದ ಸಂಸಾರದಲ್ಲಿ ಆಗಾಗ ಪ್ರವೃತ್ತಿಯುಂಟಾಗುವುದಕ್ಕೂ ನಿನ್ನ ಮಾಯೆಯೇ (ಪ್ರಕೃತಿ) ಮೂಲವೆನಿಸುವುದು ಹೀಗೆ ಸರ್ವನಿಯಾ ಮಕನಾದ ನಿನಗೆ ನಮಸ್ಕಾರವು. ದೇವಾ! ಅಗ್ನಿಯು ನಿನ್ನ ಮುಖವು! ಭೂ ಮಿಯೇ ನಿನ್ನ ಪಾದವು! ಸೂರ್ಯನೇ ನಿನ್ನ ದೃಷ್ಟಿ! ಆಕಾಶವೇ ನಿನ್ನ ನಾಭಿ ದಿಕ್ಕುಗಳೇ ನಿನ್ನ ಕಿವಿಗಳು! ಆಕಾಶವೇ ನಿನ್ನ ಶಿರಸ್ಸು! ಇಂದ್ರಾದಿದೇವತೆ ಗಳು ನಿನ್ನ ಬಾಹುಗಳು! ಸಮುದ್ರಗಳೇ ನಿನ್ನ ಉದರವು! ವಾಯುವು ನಿನ್ನ ಪ್ರಾಣಗಳು ಮತ್ತು ಬಲವು. ಸಸ್ಯವರ್ಗಗಳೆಲ್ಲವೂ ನಿನ್ನ ದೇಹದ ರೋಮ ಗಳು! ಮೇಘಗಳು ನಿನ್ನ ತಲೆಕೂದಲು! ಪರ್ವತಗಳೇ ನಿನ್ನ ಅಸ್ಥಿನಖಗಳು!. ಹಗಲುರಾತ್ರಿಗಳು ನಿನ್ನ ಎವೆಯಾಟಗಳು! ಸೃಷ್ಟಿಕರ್ತನಾದ ಪ್ರಜಾಧಿ

ಪತಿಯು ನಿನ್ನ ಪುರುಷಲಿಂಗವು! ಮಳೆಯೆಂಬುದು ನಿನ್ನ ವೀರ್ಯವು! ಓ ಅವ್ಯಯಾತ್ಮಾ! ಅನೇಕಜೀವರಾಶಿಗಳಿಂದಲೂ, ಅವುಗಳ ಪಾಲಕರಿಂದಲೂ ತುಂಬಿದ ಸಮಸ್ತಲೋಕಗಳೂ, ಜಲದಲ್ಲಿರುವ ಸಣ್ಣಜಂತುಗಳಂತೆಯೂ, ಅತ್ತಿಯ ಹಣ್ಣಿನೊಳಗೆ ಸೇರಿರುವ ಕ್ರಿಮಿಗಳಂತೆಯೂ, ಪರಮಪುರುಷನಾದ ನಿನ್ನಲ್ಲಿಯೇ ಅಡಗಿರುವುವು. ಇಂತಹ ಮಹಾಮಹಿಮೆಯುಳ್ಳ ನೀನು, ಕೇವಲ ವಿನೋದಾರ್ಥವಾಗಿ ಲೋಕದಲ್ಲಿ ಹೀಗೆ ನಾನಾರೂಪಗಳನ್ನೆತ್ತುತ್ತಿರುವೆ! ಈ ನಿನ್ನ ರೂಪಗಳನ್ನೂ, ಈ ರೂಪಗಳಿಂದ ನೀನು ನಡೆಸತಕ್ಕ ಕಾರ್ಯಗಳನ್ನೂ, ನಿನ್ನ ಗುಣಗಳನ್ನೂ ಅನುಸಂಧಾನಮಾಡುವುದರಿಂದ, ಚೇತನರು ತಮ್ಮ ದುಃಖವನ್ನು ನೀಗಿ, ನಿತ್ಯಸಂತೋಷಿಗಳಾಗಿ, ಆ ನಿನ್ನ ಗುಣಗಳನ್ನೇ ಗಾನ ಮಾಡುತ್ತಿರುವರು. ದೇವಾ! ಜಗತ್ತಿನ ಸ್ಥಿತಿಗೆ ಕಾರಣನಾಗಿ, ಪ್ರಳಯಸಮುದ್ರದಲ್ಲಿ ಮತ್ಸ್ಯರೂಪದಿಂದ ಸಂಚರಿಸುತಿದ್ದ ನಿನಗೆ ನಮಸ್ಕಾರವು! ಹಯಗ್ರೀವರೂಪದಿಂದ ಮಧುಕೈಟಭರನ್ನು ಸಂಹರಿಸಿದ ನಿನಗೆ ನಮಸ್ಕಾರವು. ಮಹಾಕೂರ್ಮನಾಗಿ ಮಂದರಪರ್ವತವನ್ನು ಬೆನ್ನಮೇಲೆ ಧರಿಸಿದ ನಿನಗೆ ನಮಸ್ಕಾರವು. ವರಾಹರೂಪದಿಂದ ಭೂಮಿಯನ್ನುದ್ಧರಿಸಿದ ನಿನಗೆ ನಮಸ್ಕಾರವು. ಅದ್ಭುತವಾದ ಸಿಂಹಸ್ವರೂಪವನ್ನು ತಾಳಿ, ಸಾಧುಜನಗಳ ಭಯವನ್ನು ನೀಗಿಸಿದ ನಿನಗೆ ನಮಸ್ಕಾರವು! ವಾಮನಮೂರ್ತಿಯಾಗಿ ತ್ರೈಲೋಕ್ಯವನ್ನೂ ಮೂರಡಿಗಳಿಂದಳೆದ ನಿನಗೆ ನಮಸ್ಕಾರವು! ಪರಶುರಾಮನಾಗಿ ಭೃಗುವಂಶದಲ್ಲಿ ಅವತರಿಸಿ, ಮದಾಂಧರಾದ ಕ್ಷತ್ರಿಯರನ್ನಡಗಿಸಿದ ನಿನಗೆ ನಮಸ್ಕಾರವು! ಶ್ರೀರಾಮರೂಪದಿಂದ ರಾವಣನನ್ನು ಸಂಹರಿಸಿದ ನಿನಗೆ ನಮಸ್ಕಾರವು ಈಗ ವಸುದೇವಪುತ್ರನಾಗಿ ಅವತರಿಸಿರುವ ನಿನಗೆ ನಮಸ್ಕಾರವು! ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ ನಾಲ್ಕುಬಗೆಯ ವ್ಯೂಹಾವತಾರಗಳನ್ನು ಧರಿಸಿದ ನಿನಗೆ ನಮಸ್ಕಾರವು. ಭಕ್ತಪರಿಪಾಲನಕ್ಕಾಗಿ ಈಗ ಯಾದವಕುಲಪತಿಯಾಗಿರುವ ನಿನಗೆ ನಮಸ್ಕಾರವು. ಯಾವಾಗಲೂ ಶುದ್ಧಚರಿತ್ರನಾಗಿದ್ದರೂ, ವೇದಾಪ್ರಾಮಾಣ್ಯವೇ ಮೊದಲಾದ ಬೋಧನೆಗಳಿಂದ ದೈತ್ಯದಾನವರನ್ನು ಮರುಳುಮಾಡುವುದಕ್ಕಾಗಿ ಬುದ್ಧರೂಪದಿಂದವತರಿಸಿದನಿನಗೆ ನಮಸ್ಕಾರವು. ಕೇವಲಮ್ಲೇಚ್ಛಪ್ರಾಯರಾದ ಕ್ಷತ್ರಿಯರನ್ನು ಕೊಲ್ಲುವುದ

ಕ್ಕಾಗಿ ಮುಂದೆ ಕಲ್ಕಿರೂಪದಿಂದವತರಿಸುವ ನಿನಗೆ ನಮಸ್ಕಾರವು. ಓ ಭಗವಂತಾ ! ಈ ಸಮಸ್ತಜೀವಲೋಕವೂ, ನಿನ್ನ ಮಾಯೆಯಿಂದ ಮೋಹಿತವಾಗಿ, "ನಾನು, ನನ್ನ" ವೆಂಬ ಅಹಂಕಾರಮಮಕಾರಗಳಿಂದ ಕರ್ಮಮಾರ್ಗಗಳಲ್ಲಿ ತೊಳಲುತ್ತಿರುವುದು. ನಾನೂ ಆ ಜೀವಲೋಕದಲ್ಲಿಯೇ ಸೇರಿದವನಾದುದರಿಂದ, ಈ ನನ್ನ ದೇಹವನ್ನೂ, ಪುತ್ರ, ಮಿತ್ರ, ಕಳತ್ರ, ಪರಿಜನ, ಗೃಹ, ಧನ, ಮೊದಲಾದುವನ್ನೂ ಅನಿತ್ಯವೆಂದೂ, ಸ್ವಪ್ನಸಮಾನವೆಂದೂ ತಿಳಿಯದೆ ಮೂಢನಾಗಿ, ಅವುಗಳನ್ನು ನಿತ್ಯವೆಂದು ಭ್ರಮಿಸಿ, ಮೋಹದಿಂದ ಸಂಸಾರದಲ್ಲಿ ತೊಳಲುತ್ತಿರುವೆನು. ನಿತ್ಯವಸ್ತುಗಳನ್ನು ಅನಿತ್ಯವೆಂದೂ, ಆತ್ಮವಲ್ಲದ ದೇಹವನ್ನೇ ಆತ್ಮನೆಂದೂ, ಕೇವಲದುಃಖರೂಪಗಳಾದ ಶಬ್ದಾದಿವಿಷಯಗಳನ್ನು ಸುಖವೆಂದೂ ವಿಪರೀತಬುದ್ಧಿಯುಳ್ಳವನಾಗಿ, ಸುಖದುಃಖಾದಿದ್ವಂದ್ವಗಳಲ್ಲಿ ಸಿಕ್ಕಿ ನರಳುತ್ತಿರುವೆನು. ನನ್ನಲ್ಲಿ ಕೇವಲತಮೋಗುಣವೇ ತುಂಬಿರುವುದರಿಂದ, ನಿರುಪಾಧಿಕಪ್ರಿಯನಾದ ನಿನ್ನನ್ನೇ ತಿಳಿಯಲಾರದಿರುವೆನು ಜಲದಲ್ಲಿ ಹುಟ್ಟಿದ ಪಾಚಿಯೇ ಆ ಜಲದಸ್ವರೂಪವು ಹೊರಕ್ಕೆ ಕಾಣದಹಾಗೆ ಮರೆಸಿಬಿಡುವಂತೆ, ಮನುಷ್ಯನಲ್ಲಿ ಹುಟ್ಟಿದ ಅಜ್ಞಾನವೇ ಅವನಿಗೆ ಆತ್ಮಸ್ವರೂಪವು ತಿಳಿಯದಂತೆ ಮರೆಸಿಬಿಡುವುದು ತಿಳಿಯದ ಮೂಢರು, ಆತೃಣಾಚ್ಛಾದಿತವಾದ ನೀರನ್ನು ಕಂಡುಕೊಳ್ಳಲಾರದೆ, ಜಲದಂತೆ ತೋರುತ್ತಿರುವ ಬಿಸಿಲ್ಗುದುರೆಗೆ ಆಸೆಪಟ್ಟು, ಅದಕ್ಕಾಗಿ ಓಡುವಂತೆ, ಈಗ ನಾನೂ, ಪುರುಷಾರ್ಥಸ್ವರೂಪನಾದ ನಿನ್ನನ್ನು ಬಿಟ್ಟು, ಶಬ್ದಾದಿವಿಷಯಗಳಿಗಾಗಿ ತೊಳಲುತ್ತಿರುವೆನು. "ಹಾಗೆ ಅದನ್ನು ತಿಳಿದಮೇಲೆ, ನಿನಗೆ ಆ ವಿಷಯಗಳಲ್ಲಿ ಅಭಿಲಾಷೆಯೇಕೆ?" ಎಂದು ಕೇಳುವೆಯಾ ? ನಾಥಾ ! ಇದರಲ್ಲಿ ನನ್ನ ಯತ್ನವೇನಿದೆ ? ನನ್ನ ಬುದ್ಧಿಯು ಅನಾದಿಯಾಗಿ ವಿಷಯವಾಸನೆಯಲ್ಲಿ ಸಿಕ್ಕಿ ದುರ್ಬಲವಾಗಿರುವುದು. ಆದುದರಿಂದ ಬಲವತ್ತಾದ ಇಂದ್ರಿಯಗಳಿಂದ ನಾನಾಕಡೆಗೆ ಎಳೆಯಲ್ಪಡುತ್ತ, ಕಾಮದಲ್ಲಿಯೂ, ಕರ್ಮದಲ್ಲಿಯೂ ಬಿದ್ದು ತೊಳಲುತ್ತಿರುವ ಮನಸ್ಸನ್ನು ತಡೆದಿಡುವುದಕ್ಕೆ ನಾನು ಶಕ್ತನಲ್ಲ ಹೀಗೆ ವಿಷಯಪರವಶನಾಗಿ, ಉಪಾಯಾಂತರವನ್ನು ಕಾಣದೆ ಕಳವಳಿಸುತಿದ್ದ ನಾನು, ಈಗ ನಿನ್ನ ಪಾದಮೂಲವನ್ನು ಸೇರಿದನು. ನನ್ನಂತಹ ಅಸತ್ಪುಗಳಿಗೆ ದುರ್ಲಭವಾದ

ನಿನ್ನ ಪಾದದರ್ಶನವು ದೈವಾಧೀನದಿಂದ ಈಗ ನನಗೆ ಲಭಿಸುವಂತಾಯಿತು. ದೇವಾ! ಈ ಭಾಗ್ಯವೂ ನನಗೆ, ನಿನ್ನ ಅನುಗ್ರಹದಿಂದಲೇ ಲಭಿಸಿತೆಂದೆಣಿಸು ವೆನು. ನೀನು ಅವರವರಲ್ಲಿ ಅಂತರ್ಯಾಮಿಯಾಗಿದ್ದು, ಅನುಗ್ರಹಿಸುವುದರಿಂ ದಲೇ ಚೇತನರಿಗೆ ಈ ವಿಧವಾದ ಭಾಗ್ಯವು ಲಭಿಸಬೇಕು. ''ಇಂತಹ ಬುದ್ಧಿ ಯು ಸತ್ಸಹವಾಸದಿಂದ ಹುಟ್ಟಲಾರದೆ?" ಎಂದರೆ, ಸತ್ಸಹವಾಸವೆಂಬುದು, ಸಂಸಾರನಿವೃತ್ತಿಗೆ ಕಾರಣವೆಂಬುದೇನೋ ನಿಜವಾದರೂ,ಆ ಸತ್ಸಹವಾಸದ ಲ್ಲಿ ಬುದ್ಧಿಹುಟ್ಟುವುದಕ್ಕೂ ನಿನ್ನ ಅನುಗ್ರಹವು ಬೇಕು ! ಆದುದರಿಂದ ನಿನ್ನ ಅನುಗ್ರಹವೇ ಎಲ್ಲಕ್ಕೂ ಮೂಲಕಾರಣವು. ಜ್ಞಾನಸ್ವರೂಪನಾಗಿಯೂ, ಸಮಸ್ತರಿಗೂ ಜ್ಞಾನಪ್ರದನಾಗಿಯೂ, ಪ್ರಕೃತಿಪುರುಷರಿಗೆ ನಿಯಾಮಕ ನಾಗಿಯೂ, ಪರಬ್ರಹ್ಮನಾಗಿಯೂ, ಅನಂತ ಶಕ್ತಿಯುಳ್ಳವನಾಗಿಯೂ ಇರು ವ ನಿನಗೆ ನಮಸ್ಕಾರವು. ಹೃಷೀಕೇಶಾ! ನಿನಗೆ ನಮಸ್ಕಾರವು ಪ್ರಭೂ! ನಿನ್ನಲ್ಲಿ ಮರೆಹೊಕ್ಕಿರುವೆನು. ನನ್ನನ್ನು ರಕ್ಷಿಸು " ಎಂದು ಸ್ತುತಿಸಿದನು ಇದು ನಾ ಲ್ವತ್ತನೆಯ ಅಧ್ಯಾಯವು.

---

## ರಾಮಕೃಷ್ಣರು ಮಥುರೆಗೆ ಬಂದುದು

ಹೀಗೆ ಕೃಷ್ಣನು. ಜಲದಲ್ಲಿ ಅಕ್ರೂರನಿಗೆ ತನ್ನ ವಿಶ್ವರೂಪವನ್ನು ತೋರಿಸಿ,ನಟನುರಂಗಸ್ಥಳಕ್ಕೆ ಬಂದು ತನ್ನ ನಾಟ್ಯವನ್ನು ತೋರಿಸಿದಮೇಲೆ, ಆ ವೇಷವನ್ನು ತೆಗೆದುಹಾಕುವಂತೆ, ಅವನು ಸ್ತುತಿಸುತ್ತ ನಿಂತಿರುವಾಗಲೇ ಆ ರೂಪವನ್ನು ಮರೆಸಿಕೊಂಡು ಕಣ್ಮರೆಯಾದರು. ಆ ದಿವ್ಯರೂಪವು ಕಣ್ಮರೆಯಾದಮೇಲೆ, ಅಕ್ರೂರನು ಜಲದಿಂದ ತಟ್ಟನೆ ಮೇಲೆದ್ದು, ಆವಶ್ಯಕ ವಾದ ಮಾಧ್ಯಾಹ್ನಿಕಕರ್ಮಗಳನ್ನು ತೀರಿಸಿಕೊಂಡು, ಆಶ್ಚರ್ಯಪರವಶನಾಗಿ, ಅಲ್ಲಿಂದ ಹೊರಟು ಬಂದು ರಥವನ್ನೇರಿ ಕುಳಿತನು. ಆಗ ಕೃಷ್ಣನು ಅಕ್ರೂ ರನ ಮುಖವನ್ನು ನೋಡಿ ಒಳಗೊಳಗೆ ನಗುತ್ತ,ಏನೂ ತಿಳಿಯದವನಂತೆ ಪ್ರಶ್ನೆ ಮಾಡುವನು. ''ಮಿತ್ರಾ ! ಅಕ್ರೂರಾ! ಏನಿದು ? ನಿನ್ನ ಮುಖವನ್ನು ನೋಡಿ ದರೆ, ಈಗಲೇ ನೀನು ಯಾವುದೋ !ಅತ್ಯಾಶ್ಚರ್ಯವನ್ನು ನೋಡಿ ಬಂದಂತೆ ತೋರುವುದು. ನೆಲದಲ್ಲಿಯಾಗಲಿ, ಜಲದಲ್ಲಿಯಾಗಲಿ, ಆಕಾಶದಲ್ಲಿಯಾಗಲಿ

ಏನಾದರೂ ಅದ್ಭುತವನ್ನು ಕಂಡು ಬಂದೆಯೇನು ? ನಿನ್ನ ಆಶ್ಚರ್ಯಕಾರಣ ವೇನು ಹೇಳು" ಎಂದನು. ಆಗ ಅಕ್ರೂರನು ಬದ್ಧಾಂಜಲಿಯಾಗಿ ಕೃಷ್ಣ ನನ್ನು ಕುರಿತು. "ಕೃಷ್ಣಾ ! ಸರ್ವಾಶ್ಚರ್ಯಗಳಿಗೂ ನಿಧಿಯಾದ ನೀನು ಇಲ್ಲಿ ನನ್ನ ಮುಂದೆಯೇ ಇರುವಾಗ, ನಾನು ನೋಡಬೇಕಾದ ಆಶ್ಚರ್ಯವು ಬೇರೆಲ್ಲಿ ರುವುದು ? ಭೂಮ್ಯಾಕಾಶಗಳಲ್ಲಿಯಾಗಲಿ, ಜಲದಲ್ಲಿಯಾಗಲಿ ಕಾಣಬಹು ದಾದ ಅದ್ಭುತಗಳೆಲ್ಲವೂ ವಿಶ್ವಶರೀರಕನಾದ ನಿನ್ನಲ್ಲಿಯೇ ಅಡಗಿರುವುವು. ನಿನ್ನ ಲ್ಲಿಲ್ಲದ ಆಶ್ಚರ್ಯಗಳು ಬೇರೆಲ್ಲಿರುವುವು ? " ಎಂದುಮಾತ್ರ ಹೇಳಿ, ರಥವನ್ನು ಮುಂದೆ ಬಿಟ್ಟುಕೊಂಡು ಸಂಜೆಯುಹೊತ್ತಿಗೆ ಸರಿಯಾಗಿ.ರಾಮಕೃಷ್ಣರಿಬ್ಬ ರನ್ನೂ ಮಧುರಾಪುರದ್ವಾರಕ್ಕೆ ಕರೆತಂದುಬಿಟ್ಟನು. ಇವರ ಪ್ರಯಾಣಕಾಲ ದಲ್ಲಿ ದಾರಿಯುದ್ದಕ್ಕೂ ಅಲ್ಲಲ್ಲಿನ ಗ್ರಾಮವಾಸಿಗಳೆಲ್ಲರೂ, ಈ ರಾಮಕೃಷ್ಣ ರನ್ನು ನೋಡಿ ಸಂತೋಷದಿಂದುಬ್ಬುತ್ತ, ಅವರಮೇಲೆ ಬಿದ್ದದೃಷ್ಟಿಯನ್ನು ಹಿಂತಿರುಗಿಸಲಾರದೆ ಹೋದರು. ಗೋಕುಲದಿಂದ ಹೊರಟು ನಂದಾದಿಗೊ ಪಾಲಕರೆಲ್ಲರೂ, ಮುಂದಾಗಿಯೇ ಬಂದು, ಪಟ್ಟಣದ ಹೊರಗಿನ ಪುರೋದ್ಯಾನದಲ್ಲಿ, ರಾಮಕೃಷ್ಣರ ರಥವನ್ನು ಇದಿರುನೋಡುತ್ತ ನಿಂತಿ ದ್ದರು.ಅಕ್ರೂರನ ರಥವು ಅಲ್ಲಿಗೆ ಬಂದು ಸೇರಿದಮೇಲೆ, ಅಲ್ಲಿಂದ ಎಲ್ಲರೂ ಒಂದಾಗಿಕಲೆತು ಮುಂದೆ ಹೊರಡಲು ಸಿದ್ಧರಾದರು. ಆಗ ಕೃಷ್ಣನು, ಅಕ್ರೂರನ ಕೈಯ್ಯನ್ನು ಹಿಡಿದು, "ಮಿತ್ರಾ ! ನೀನು ಇದೇರಥದಮೇಲೆ ಕುಳಿತು, ಮುಂದಾಗಿ ಪಟ್ಟಣವನ್ನು ಪ್ರವೇಶಿಸಿ ನಿನ್ನ ಗೃಹವನ್ನು ಸೇರು. ನಾವು ಈ ರಾತ್ರಿ ಇಲ್ಲಿಯೇ ಇದ್ದು, ಬೆಳಗಾದಮೇಲೆ ಪಟ್ಟಣವನ್ನು ನೋಡುವುದಕ್ಕೆ ಬರುವೆವು"ಎಂದನು. ಅದಕ್ಕಾ ಅಕ್ರೂರನು. "ಕೃಷ್ಣಾ! ನಿ ಮ್ಮನ್ನು ಬಿಟ್ಟು ನಾನು ಎಂದಿಗೂ ಪಟ್ಟಣಕ್ಕೆ ಪ್ರವೇಶಿಸಲಾರೆನು ಭಕ್ತವತ್ಸಲ ನಾದ ನೀನು ನನ್ನನ್ನು ಕೈಬಿಡಬಾರದು. ಈಗ ನೀನು ಅವಶ್ಯವಾಗಿ ಈ ಸಮ ಸ್ತ ಗೋಪಾಲಕರೊಡನೆಯೂ, ಈ ನಿನ್ನ ಬಂಧುಮಿತ್ರರೊಡನೆಯೂ, ನ ನ್ನಮನೆಗೆ ಬಂದು,ನನ್ನ ಆತಿಥ್ಯವನ್ನು ಸ್ವೀಕರಿಸಬೇಕು!ಗೃಹಸ್ಥರಾದ ನಮಗೆ ನಿಮ್ಮಂತವರ ಪಾದಪೂಜೆಯನ್ನು ಮಾಡುವುದಕ್ಕಿಂತಲೂ ಉತ್ತಮಧರ್ಮ ವೇನಿದೆ ? ಓ ದೇವದೇವಾ ? ನೀನು ನಮ್ಮ ಮನೆಗೆ ಬಂದು, ಅನಾಥರಾದ

ನಮ್ಮನ್ನು ಸನಾಥರನ್ನಾಗಿ ಮಾಡಬೇಕು. ಯಾವ ಪಾದಗಳನ್ನು ತೊಳೆದ ತೀರ್ಥವನ್ನು ಪಾನಮಾಡಿದರೂ, ತಲೆಯಲ್ಲಿ ಧರಿಸಿದರೂ, ಅಗ್ನಿಮುಖರಾದ ಸಮಸ್ತದೇವತೆಗಳೂ, ಪಿತೃದೇವತೆಗಳೂ ತೃಪ್ತಿಹೊಂದುವರೋ, ಅಂತಹ ನಿನ್ನ ಪಾದಾರವಿಂದದ ಧೂಳಿಯಿಂದ ಗೃಹಸ್ಥರಾದ ನಮ್ಮ ಗೃಹವನ್ನು ಪವಿತ್ರಮಾಡಬೇಕು. ಹಿಂದೆ ಬಲಿಚಕ್ರವರ್ತಿಯು, ಈ ನಿನ್ನ ಪಾದಗಳನ್ನು ತೊಳೆದು ಸತ್ಕರಿಸಿದುದರಿಂದಲ್ಲವೇ, ಕೀರ್ತಿಯಲ್ಲಿಯೂ,ಗುಣದಲ್ಲಿಯೂ ಮೇಲೆನಿಸಿಕೊಂಡು, ಎಣೆಯಿಲ್ಲದ ಐಶ್ವರ್ಯವನ್ನು ಹೊಂದಿ, ಕೊನೆಗೆ ಅನನ್ಯಪ್ರಯೋಜನರಾದ ಪ್ರಪನ್ನರ ಗತಿಯನ್ನೂ ಪಡೆದನು ಕೃಷ್ಣಾ! ಈಗ ತ್ರೈಲೋಕ್ಯವನ್ನೂ ಪಾವನಮಾಡುತ್ತಿರುವ ಗಂಗಾನದಿಯೂಕೂಡ. ಈ ನಿನ್ನ ಪಾದಗಳನ್ನು ತೊಳೆದ ನೀರಲ್ಲವೆ? ಆ ತೀರ್ಥವನ್ನು ತಲೆಯಲ್ಲಿ ಧರಿಸಿದುದರಿಂದಲ್ಲವೇ ಶಿವನು ಮಹೇಶ್ವರನೆನಿಸಿಕೊಂಡನು! ಆ ತೀರ್ಥದಿಂದಲ್ಲವೇ ಅರುವತ್ತುಸಾವಿರಮಂದಿ ಸಗರಪುತ್ರರಿಗೂ ಸ್ವರ್ಗವು ಲಭಿಸಿತು! ದೇವದೇವಾ! ಜಗನ್ನಾಥಾ! ನಿನ್ನ ನಾಮಾಕ್ಷರಗಳ ಶ್ರವಣಕೀರ್ತನೆಗಳೇ ಸಮಸ್ತಲೋಕವನ್ನೂ ಪಾವನಮಾಡುವುವು. ಓ ಯದೂತ್ತಮಾ! ಉತ್ತಮಶ್ಲೋಕಾ! ನಾರಾಯಣಾ! ನಿನಗೆ ನಮಸ್ಕಾರವು" ಎಂದನು. ಆಗ ಕೃಷ್ಣನು ಅಕ್ರೂರನನ್ನು ಕುರಿತು "ಓ ಭದ್ರಾ! ಮೊದಲು ನಾನು ಯದುಕುಲಕ್ಕೆ ದ್ರೋಹಿಯಾದ ಕಂಸನನ್ನು ಕೊಂದು, ಆಮೇಲೆ ನನ್ನಣ್ಣನೊಡನೆ ನಿನ್ನ ಮನೆಗೆ ಬರುವೆನು. ಮೊದಲು ಆ ಕಾರ್ಯವನ್ನು ಮಾಡಿದಮೇಲೆಯೇ ನಿನಗೂ, ಇತರಮಿತ್ರರಿಗೂ ಪ್ರಿಯವನ್ನುಂಟುಮಾಡಬೇಕು! ನೀನು ಚಿಂತಿಸಬೇಡ ಹೋಗು" ಎಂದನು. ಕೃಷ್ಣನು ಈ ಮಾತನ್ನು ಹೇಳಿದರೂ, ಅಕ್ರೂರನ ಮನಸ್ಸಿಗೆ ಅಷ್ಟಾಗಿ ಸಮಾಧಾನವಿರಲಿಲ್ಲ. ಆದರೂ ಕೃಷ್ಣಾಜ್ಞೆಯನ್ನು ಮೀರಲಾರದೆ, ಮುಂದಾಗಿ ಪುರವನ್ನು ಪ್ರವೇಶಿಸಿ, ತಾನು ನಡೆಸಿಬಂದ ಕಾರ್ಯಗಳನ್ನು ಕಂಸನಿಗೆ ತಿಳಿಸಿ,ತನ್ನ ಮನೆಗೆ ಬಂದು ಸೇರಿದನು.ಆಮೇಲೆ ಇತ್ತಲಾಗಿ ಕೃಷ್ಣನು, ಆ ರಾತ್ರಿಯು ಕಳೆದು ಬೆಳಗಾದಮೇಲೆ, ಮಧ್ಯಾಹ್ನದವರೆಗೂ ಆ ತೋಟದಲ್ಲಿಯೇ ವಿನೋದದಿಂದಿದ್ದು, ಅಪರಾಹ್ಣದಲ್ಲಿ ತನ್ನಣ್ಣನಾದ ಬಲರಾಮನೊಡನೆಯೂ, ಇತರಗೋಪಾಲಕರೊಡನೆಯೂ ಮಧುರಾಪುರವನ್ನು

ನೋಡುವಉದ್ದೇಶದಿಂದ ಹೊರಟು ಪುರದ್ವಾರಕ್ಕೆ ಬಂದನು. ಅಲ್ಲಿನ ಸೌಭಾಗ್ಯವನ್ನು ಕೇಳಬೇಕೆ? ಮಹೋನ್ನತಗಳಾದ ಸ್ಫಟಿಕದ ಗೋಪುರಗಳು! ದೊಡ್ಡದೊಡ್ಡ ಸುವರ್ಣಕವಾಟಗಳು! ಅಂದವಾದ ಬಾಗಿಲುವಾಡಗಳು! ಅಲ್ಲಲ್ಲಿ ತಾಮ್ರ ಮತ್ತು ಹಿತ್ತಾಳೆಯ ತಗಡುಗಳಿಂದ ಕಟ್ಟಲ್ಪಟ್ಟ ಧಾನ್ಯಶಾಲೆಗಳು! ಪಟ್ಟಣದ ಕೋಟೆಯ ಸುತ್ತಲೂ ದಾಟಲಸಾಧ್ಯವಾದ ದೊಡ್ಡಅಗಳು! ಅದರ ಸುತ್ತಲೂ ಶೃಂಗಾರವನಗಳು! ಅದರ ಸುತ್ತಿನಲ್ಲಿ ಮರದ ತೋಪುಗಳು! ಅಲ್ಲಲ್ಲಿ ಸುವರ್ಣದಿಂದ ಚಿತ್ರಿತಗಳಾದ ಚತುಷ್ಪಥಗಳು! ದೊಡ್ಡದೊಡ್ಡ ಉಪ್ಪರಿಗೆಗಳು! ಆ ಉಪ್ಪರಿಗೆಗಳ ಹಿಂದೆ ಸಣ್ಣತೋಟಗಳು! ಅಲ್ಲಲ್ಲಿ ಬೇರೆಬೇರೆ ಶಿಲ್ಪಗಾರರಿಗೆ ನಿವಾಸಯೋಗ್ಯಗಳಾದ ಕೇರಿಗಳು! ಅಲ್ಲಲ್ಲಿ ಸಭಾಮಂಟಪಗಳು! ಅಲ್ಲಲ್ಲಿ ವಿನೋದಶಾಲೆಗಳು! ಮತ್ತು ಉಪ್ಪರಿಗೆಯ ಮುಂದೆ ವಸಾರೆಗಳು, ಅದರ ಕೆಳಗೆ ವೇದಿಕೆಗಳು, ಗವಾಕ್ಷಗಳು, ಮನೆಯ ಮುಂದಿನ ನೆಲಗಟ್ಟುಗಳು, ರಾಜಮಾರ್ಗಗಳು, ಇವೆಲ್ಲವೂ, ವಜ್ರ,ವೈಡೂರ್ಯ, ನೀಲ, ಮರಕತ, ಮುತ್ತು,ಹವಳ,ಮುಂತಾದ ನವರತ್ನಗಳ ಚಿತ್ರಕಾರ್ಯಗಳಿಂದ ಶೋಭಿಸುತ್ತಿರುವುವು. ಮನೆಗಳಮುಂದೆ, ನವಿಲು,ಪಾರಿವಾಳ, ಮುಂತಾದ ಪಕ್ಷಿಗಳು ಕಿವಿಗಿಂಪಾಗಿ ಧ್ವನಿಮಾಡುತ್ತಿರುವುವು ಅಲ್ಲಿನ ರಾಜಮಾರ್ಗಗಳು, ಅಂಗಡಿಬೀದಿಗಳು, ಚತುಷ್ಪಥಗಳು ಇವೆಲ್ಲವೂ ಶೀತಲಜಲದಿಂದ ಸೇಚಿತವಾಗಿ, ಅಲ್ಲಲ್ಲಿ ಹೂ, ಗಂಧ, ಅರಳು, ಅಕ್ಷತೆ, ಗರಿಕೆ ಮೊದಲಾದ ಮಂಗಳದ್ರವ್ಯಗಳಿಂದ ಶೋಭಿತವಾಗಿರುವುವು. ಒಂದೊಂದು ಮನೆಯ ಬಾಗಿಲುಗಳೂ, ಮೊಸರು, ಗಂಧ ಮೊದಲಾದ ಮಂಗಳದ್ರವ್ಯಗಳಿಂದಲಂಕರಿಸಲ್ಪಟ್ಟ ಪೂರ್ಣಕುಂಭಗಳಿಂದಲೂ, ದೀಪಮಾಲಿಕೆಗಳಿಂದಲೂ, ಪುಷ್ಪಹಾರಗಳಿಂದಲೂ, ಚಿಗುರಿನ ತೋರಣಗಳಿಂದಲೂ, ಹಣ್ಣುಗೊನೆಗಳೊಡಗೂಡಿದ ಬಾಳೆಯ ಕಂಬಗಳಿಂದಲೂ, ಅಡಕೆಯ ಹೂಗಳಿಂದಲೂ ಅಲಂಕೃತವಾಗಿರುವುವು. ಒಂದೊಂದು ಗೃಹದ್ವಾರದಲ್ಲಿಯೂ ವಿಚಿತ್ರವರ್ಣದ ಧ್ವಜಪಟಗಳು ತೂಗಾಡುತ್ತಿರುವುವು. ಒಂದೊಂದು ಮನೆಯ ಬಾಗಿಲೂ, ರಂಗವಲ್ಲಿ ಮುಂತಾದ ವಿಚಿತ್ರಾಲಂಕಾರಗಳಿಂದ ಶೋಭಿಸುತ್ತಿರುವುವು. ಓ ಪರೀಕ್ಷಿದ್ರಾಜಾ! ಕಂಸನು

ಧನುರ್ಯಾಗವೆಂಬ ನೆವವನ್ನು ಹೇಳಿ, ತನ್ನ ಪುರಜನರನ್ನು ನಿರ್ಬಂಧಿಸಿ ಮಾಡಿ ಸಿದ ಈ ಅಲಂಕಾರಗಳೆಲ್ಲವೂ, ಈ ರಾಮಕೃಷ್ಣರ ಪುರಪ್ರವೇಶಕ್ಕಾಗಿ ಪುರಜನರೆಲ್ಲರೂ ಸಂತೋಷದಿಂದ ಮಾಡಿದ ಮಂಗಳಾಲಂಕಾರಗ ಳಂತಾಯಿತು. ರಾಮಕೃಷ್ಣರಿಬ್ಬರೂ ಹೀಗೆ ಸರ್ವಾಲಂಕಾರಶೋಭಿತ ವಾದ ಮಧುರಾಪುರಿಯನ್ನು ಪ್ರವೇಶಿಸಿ, ತಮ್ಮ ಮಿತ್ರವರ್ಗದೊಡನೆ ಅಲ್ಲಿನ ರಾಜಬೀದಿಯಮಾರ್ಗವಾಗಿ ಬರುತಿದ್ದರು. ಅಲ್ಲಿನ ಪುರಸ್ತ್ರೀಯರೆಲ್ಲ ರೂ ಇವರನ್ನು ನೋಡಬೇಕೆಂಬ ಆತುರದಿಂದ, ತಾವುತಾವು ಮಾಡುತಿದ್ದ ಮನೆಗೆಲಸಗಳನ್ನು ಅಷ್ಟಕ್ಕೇ ನಿಲ್ಲಿಸಿ, ತಮ್ಮತಮ್ಮ ಮನೆಯ ಉಪ್ಪರಿಗೆಯ ಮೇಲೆ ಹೋಗಿ ನಿಂತರು. ಈ ಆತುರದಲ್ಲಿ ಕೆಲವು ಸ್ತ್ರೀಯರು, ತಮ್ಮ ವ ಸ್ತ್ರಾಭರಣಗಳನ್ನು ಸರಿಯಾಗಿ ಧರಿಸಿಕೊಂಡು ಬರುವಷ್ಟಕ್ಕೂ ಅವಕಾಶ ವಿಲ್ಲದೆ, ತಾರುಮಾರಾಗಿ ಮೈಮೇಲೆ ಜೋಡಿಸಿಕೊಂಡು, ಹಾಗೆಯೇ ಬಂದು ನಿಂತರು. ಬೇರೆ ಕೆಲವರು ಕಿವಿಯೋಲೆ, ಕೈಬಳೆ, ಕಾಲಂದುಗೆ, ಮುಂತಾದ ಜತೆಜತೆಯಾದ ಆಭರಣಗಳಲ್ಲಿ, ಒಂದನ್ನುಮಾತ್ರ ತೊಟ್ಟುಕೊಂಡು, ಮ ತ್ತೊಂದನ್ನು ಮರೆತು ಬಂದುದರಿಂದ, ಆ ಸ್ತ್ರೀಯರ ಗುಂಪಿನಲ್ಲಿ, ಒಂದು ಕಿವಿಗೆಮಾತ್ರ ಓಲೆಯನ್ನಿಟ್ಟವರೂ, ಒಂದೇಕಾಲಲ್ಲಿ ಕಾಲಂದುಗೆಯ ನ್ನು ಧರಿಸಿದವರೂ, ಒಂದು ಕಣ್ಣಿಗೆಮಾತ್ರ ಕಾಡಿಗೆಯನ್ನು ಹಚ್ಚಿದವರೂ ಬಹಳಮಂದಿಯಿದ್ದರು. ಇದಲ್ಲದೆ ಊಟಮಾಡುತ್ತಿದ್ದವರು ಕೈತೊಳೆಯ ದಂತೆಯೇ ಬಂದುನಿಂತರು. ಅಭ್ಯಂಗನಮಾಡುತಿದ್ದವರು ಮೈಯೊರಸಿಕೊ ಳ್ಳದಹಾಗೆಯೇ ಬಂದರು. ಮಲಗಿದ್ದವರು ಈ ಗದ್ದಲವನ್ನು ಕೇಳಿ ಹಾಸಿಗೆ ಯಿಂದೆದ್ದಹಾಗೆಯೇ ಬಂದುನಿಂತರು. ಮಕ್ಕಳಿಗೆ ಮೊಲೆಯೂಡಿಸು ತಿದ್ದವರು, ಬಲಾತ್ಕಾರದಿಂದ ಬಿಡಿಸಿಕೊಂಡು ಓಡಿಬಂದರು ಹೀಗೆ ಪುರ ಸ್ತ್ರೀಯರೆಲ್ಲರೂ ನೆರೆದು ನೋಡುತಿದ್ದಾಗ, ಪುಂಡರೀಕಾಕ್ಷನಾದ ಶ್ರೀ ಕೃ ಷ್ಣನು, ಮದದಾನೆಯಂತೆ ಗಂಭೀರವಾದ ನಡೆಯಿಂದ ಬೀದಿಯಲ್ಲಿ ನಡೆದು ಬರುತಿತ್ತು, ತನ್ನ ನಡೆಯ ಸೊಗಸಿನಿಂದಲೂ, ಮಂದಹಾಸಸೌಂದರ್ಯದಿಂದ ಲೂ, ಪ್ರಸನ್ನದೃಷ್ಟಿಯಿಂದಲೂ, ಆ ಸ್ತ್ರೀಯರ ಮನಸ್ಸನ್ನು ಸೂರೆಗೊಳು ತ್ತ, ಅಲ್ಲಿ ತನ್ನನ್ನು ನೋಡಿದವರೆಲ್ಲರಿಗೂ ನೇತ್ರೋತ್ಸವವನ್ನುಂಟುಮಾಡು

ತಿದ್ದನು. ಇದಕ್ಕೆಮೊದಲೇ ಆಗಾಗ ಕೃಷ್ಣನ ಗುಣಗಳನ್ನೂ, ಸೌಂದರ್ಯ ವನ್ನೂ ಕೇಳಿ, ಅವನಲ್ಲಿಯೇ ನಟ್ಟಮನಸ್ಸುಳ್ಳವರಾಗಿದ್ದ ಆ ಪುರಾಂಗನೆಯರಿಗೆ, ಈಗ ಆತನ ಸಾಕ್ಷಾದ್ದರ್ಶನವು ಲಭಿಸಿದಮೇಲೆ, ಅವರ ಸಂತೋಷಸಂಭ್ರಮಗಳನ್ನು ಕೇಳಬೇಕೆ! ಕೃಷ್ಣನು ತಮ್ಮ ಮನೆಯಮುಂದೆ ಬರುತ್ತಿರುವಾಗ, ಮಂದಹಾಸಪೂರ್ವಕವಾದ ಅವನ ಕಟಾಕ್ಷಾಮೃತಸೇಚನದಿಂದ ಪರಮಾನಂದಭರಿತರಾಗಿ, ಆನಂದಮೂರ್ತಿಯಾದ ಆಕೃಷ್ಣನ ರೂಪವನ್ನು ನೇತ್ರರಂಧ್ರಗಳಮೂಲಕವಾಗಿ ತಮ್ಮ ಹೃದಯದಲ್ಲಿ ಸೇರಿಸಿಟ್ಟು ಕೊಂಡು, ಮನಸ್ಸಿನ ಭಾವನೆಯಿಂದಲೇ ಆತನ ದೇಹಾಲಿಂಗನಸೌಖ್ಯವನ್ನನುಭವಿಸುತಿದ್ದರು. ಆ ಆನಂದದಿಂದ ಪುಳಕಿತವಾದ ಮೈಯುಳ್ಳವರಾಗಿ, ಬಹುಕಾಲದಿಂದ ತಮ್ಮ ಮನಸ್ಸಿನಲ್ಲಿದ್ದ ವಿರಹದುಃಖವನ್ನು ಮರೆತರು. ಹೀಗೆ ಮಥುರಾನಗರದ ಸ್ತ್ರೀಯರೆಲ್ಲರೂ, ಉಪ್ಪರಿಗೆಗಳಮೇಲೆ ನಿಂತು ಸಂತೋಷದಿಂದರಳಿದ ಕಣ್ಣುಗಳುಳ್ಳವರಾಗಿ, ರಾಮಕೃಷ್ಣರನ್ನು ನೋಡುತ್ತ, ಅವರಮೇಲೆ ಪುಷ್ಪವರ್ಷವನ್ನು ಕರೆಯುತಿದ್ದರು ಆ ಪಟ್ಟಣದಲ್ಲಿದ್ದ ಬ್ರಾಹ್ಮಣರೆಲ್ಲರೂ ರಾಮಕೃಷ್ಣರು ಬರುವ ದಾರಿಯಲ್ಲಿ,ಮಂಗಳಾರ್ಥವಾಗಿ,ಮೊಸರು, ಅಕ್ಷತೆ, ಪೂರ್ಣಕುಂಭಗಳು, ಹೂ, ಗಂಧ, ಹಣ್ಣು, ಮುಂತಾದ ಕೈಕಾಣಿಕೆಗಳನ್ನು ಹಿಡಿದು ನಿಂತು, ಸಂತೋಷದಿಂದ ಸ್ವಸ್ತಿವಾಚನವನ್ನು ಮಾಡುತಿದ್ದರು. ಆಗ ಆ ಮಧುರಾನಗರದಲ್ಲಿದ್ದ ಪುರಸ್ತ್ರೀಯರೆಲ್ಲರೂ ರಾಮಕೃಷ್ಣರ ರೂಪಕ್ಕೆ ಮೋಹಿತರಾಗಿ, "ಆಹಾ! ಮನುಷ್ಯಲೋಕಕ್ಕೆಲ್ಲಾ ಮಹೋತ್ಸವದಂತಿರುವ ಈ ಮೋಹನಾಂಗನನ್ನು, ಅನವರತವೂ ತಮ್ಮ ಕಣ್ಣಮುಂದೆ ನೋಡುತ್ತಿರುವ ಗೋಪಸ್ತ್ರೀಯರ ಭಾಗ್ಯವಲ್ಲವೇ ಭಾಗ್ಯವು? ಅವರು ಪೂರ್ವಜನ್ಮದಲ್ಲಿ ಯಾವ ಮಹಾತಪಸ್ಸನ್ನು ಮಾಡಿದರೋ" ಎಂದು ಹೇಳಿಕೊಳ್ಳುತಿದ್ದರು

## ರಜಕವಧವು

ಓ ಪರೀಕ್ಷಿದ್ರಾಜಾ! ಹೀಗೆ ರಾಮಕೃಷ್ಣರಿಬ್ಬರೂ ಮಧುರಾಪುರದ ಬೀದಿಯಲ್ಲಿ ಮಹಾವೈಭವದೊಡನೆ ಬರುತ್ತಿರುವಾಗ, ಬಟ್ಟೆಗಳಿಗೆ ಬಣ್ಣಹಾಕತಕ್ಕ ಅಗಸನೊಬ್ಬನು, ಮಡಿಬಟ್ಟೆಗಳನ್ನು ಹೊತ್ತುಕೊಂಡು, ಇದಿರಾಗಿ

ಬರುತಿದ್ದನು. ಅವನು ಕಂಸನ ಅರಮನೆಗೆ ಬಟ್ಟೆಗಳನ್ನೊಗೆಯತಕ್ಕವನಾ ದುದರಿಂದ, ಅವನಲ್ಲಿ ಬಹಳ ಬೆಲೆಬಾಳತಕ್ಕ ಉತ್ತಮವಸ್ತ್ರಗಳಿದ್ದುವು. ಅ ದನ್ನು ನೋಡಿ ಕೃಷ್ಣನು, ಅವನನ್ನು ಕುರಿತು. “ಅಯ್ಯಾ! ಈಗ ನಾವು ರಾಜದರ್ಶನಾರ್ಥವಾಗಿ ಅರಮನೆಗೆ ಹೋಗುತ್ತಿರುವೆವು. ರಾಜಾಸ್ಥಾನಕ್ಕೆ ತಕ್ಕಂತೆ ಉತ್ತಮವಾದ ಕೆಲವು ಮಡಿಬಟ್ಟೆಗಳನ್ನು ಕೊಡುವೆಯಾ? ಅಲ್ಲಿಂ ದ ಹಿಂತಿರುಗಿ ಬಂದೊಡನೆ ನಿನ್ನ ಬಟ್ಟೆಗಳನ್ನು ಹಿಂತಿರುಗಿ ಕೊಟ್ಟುಬಿಡುವೆ ವು. ನಮ್ಮ ಕೋರಿಕೆಯನ್ನು ನಡೆಸಿಕೊಟ್ಟಪಕ್ಷದಲ್ಲಿ, ಮುಂದೆ ನಿನಗೆ ಅದ ರಿಂದ ಬಹಳ ಶ್ರೇಯಸ್ಸುಂಟು. ಇದರಲ್ಲಿ ಸಂದೇಹವಿಲ್ಲ! ನಾವು ಧರಿಸುವು ದಕ್ಕೆ ಯೋಗ್ಯವಾದ ಬಟ್ಟೆಯನ್ನು ನೋಡಿಕೊಡು” ಎಂದನು. ಅವಾಪ್ತ ಸಮಸ್ತಕಾಮನಾದ ಭಗವಂತನೇ ತನ್ನನ್ನು ಪರೀಕ್ಷಿಸುವುದಕ್ಕಾಗಿ ಹೀಗೆ ಯಾಚಿಸುತ್ತಿರುವನೆಂಬುದನ್ನು, ಮೂಢನಾದ ಆ ಅಗಸನು ಹೇಗೆತಾನೇ ತಿಳಿಯಬಲ್ಲನು.? ಇದಲ್ಲದೆ ಅವನು ಕಂಸನ ಭೃತ್ಯನಾದುದರಿಂದ, ತನ್ನ ಪ್ರಭುವಿನಂತೆಯೇ ದುರ್ಮದದಿಂದ ಬೀಗಿದ್ದವನು ಕೃಷ್ಣನ ಮಾತನ್ನು ಕೇಳಿ ದೊಡನೆ ಅವನಿಗೆ ಮಿತಿಮೀರಿದ ಕೋಪವುಂಟಾಯಿತು ಆ ಕೋಪದಿಂದ ಧಿಕ್ಕಾರಪೂರ್ವಕವಾಗಿ, ತನ್ನ ಮುಂದೆ ದೈನ್ಯದಿಂದ ಯಾಚಿಸುತ್ತಿರುವ ಕೃ ಷ್ಣನನ್ನು ಕುರಿತು. “ಏನಯ್ಯಾ! ಯಾರು ನೀವು! ಸುಮ್ಮನೆ ಹೋಗಲಾ ರದೆ ಬಾಯಿಕೊಬ್ಬಿನಿಂದ ಮಾತಾಡುವಹಾಗಿದೆ! ಕಾಡುಗುಡ್ಡಗಳಲ್ಲಿ ವಾ ಸಮಾಡತಕ್ಕ ನಿಮಗೆ ಬಟ್ಟೆಯ ಸೊಗಸು ಬೇರೆಯೆ? ನೀವು ನಿತ್ಯವೂ ಇಂ ತಹ ಬಟ್ಟೆಗಳನ್ನೇ ಕಟ್ಟಿಕೊಳ್ಳುತಿದ್ದವರಲ್ಲವೆ? ಸ್ವಲ್ಪವಾದರೂ ವಿವೇಕವಿಲ್ಲ ದೆ ರಾಜದ್ರವ್ಯಕ್ಕಾಗಿ ಆಸೆಪಡುತ್ತಿರುವಿರಾ? ಸಾಕು! ಸುಮ್ಮನೆ ನಡೆಯಿರಿ! ಇನ್ನೂ ಕೆಲವು ಕಾಲದವರೆಗೆ ಬದುಕಿರಬೇಕೆಂಬ ಆಸೆಯಿದ್ದರೆ, ಹೀ ಗೆ ತಲೆಕೊಬ್ಬಿ ಮಾತಾಡಬಾರದು ಕಂಡಿರಾ! ಜೋಕೆ! ಈಗ ನೀವು ಹೇಳಿ ದ ಮಾತು ರಾಜಭಟರ ಕಿವಿಗೆ ಬಿದ್ದರೆ, ಈಗಲೇ ನಿಮ್ಮನ್ನು ಹಿಡಿದು, ಸಾ ಯಬಡಿಯುತಿದ್ದರಲ್ಲದೆ, ನಿಮ್ಮ ಮೈಮೇಲಿದ್ದುದನ್ನೂ ಕಿತ್ತುಕೊಳ್ಳುತಿ ದ್ದರು! ಜೋಕೆ! ಇದುಮೊದಲು ಇಂತಹ ಮಾತುಗಳನ್ನಾಡಬೇಡಿರಿ!” ಎಂ ದನು ಹೀಗೆ ಆ ಅಗಸನು ಬಾಯಿಗೆ ಬಂದಹಾಗೆ ಬೊಗುಳುತ್ತಿರುವುದನ್ನು

ನೋಡಿ, ಕೃಷ್ಣನಿಗೂ ಕೋಪವುಂಟಾಯಿತು ಒಂದೇ ಮುಷ್ಟಿಪ್ರಹಾರ ದಿಂದ ಅವನ ತಲೆಯನ್ನು ಕೆಳಕ್ಕೆ ಕೆಡಹಿದನು ಆ ಅಗಸನಲ್ಲಿ ಜೀತಕ್ಕೆ ಸೇರಿ ಕೊಂಡು, ಅವನ ಹಿಂದೆ ಮೂಟೆಯನ್ನು ಹೊತ್ತುತರುತಿದ್ದ ಆಳುಗಳೆಲ್ಲರೂ ಇದನ್ನು ನೋಡಿ ಭಯಪಟ್ಟು, ತಾವು ಹೊತ್ತಿದ್ದ ಮೂಟೆಗಳನ್ನು ಅಲ್ಲಿಯೇ ಬಿಸುಟು, ನಾನಾದಿಕ್ಕಿಗೆ ಚದರಿ ಓಡಿಹೋದರು ಆಮೇಲೆ ರಾಮಕೃ ಷ್ಣರು, ಅವರು ಬಿಟ್ಟುಹೋದ ಬಟ್ಟೆಗಳೆಲ್ಲವನ್ನೂ ತೆಗೆದುನೋಡಿ, ಅವುಗ ಳಲ್ಲಿ ತಮಗಿಷ್ಟವಾದ ಬಟ್ಟೆಗಳನ್ನು ತಾವು ಧರಿಸಿಕೊಂಡು, ತಮ್ಮೊಡನಿ ದ್ದ ಇತರಗೋಪಾಲಕರಿಗೂ, ಅವರವರಿಗೆ ಬೇಕಾದ ವಸ್ತ್ರಗಳನ್ನು ಕೊ ಟ್ಟರು ಉಳಿದ ಬಟ್ಟೆಗಳನ್ನು ಅಲ್ಲಿಯೇ ಬಿಟ್ಟು ಮುಂದೆ ಹೊರಟರು

ನೇಗೆಯವನನ್ನು ಅನುಗ್ರಹಿಸಿದುದು.

ಇಷ್ಟರಲ್ಲಿ ಆ ಊರಿನ ನೇಗೆಯವನೊಬ್ಬನು, ಹೊಸಬಟ್ಟೆಗಳನ್ನು ಮಾರುವುದಕ್ಕಾಗಿ ಬೀದಿಯಲ್ಲಿ ತಿರುಗುತ್ತ, ಈ ರಾಮಕೃಷ್ಣರನ್ನು ಕಂಡು ಸಂತೋಷದಿಂದ ಮುಂದೆ ಬಂದು, ತನ್ನಲ್ಲಿದ್ದ ವಿಚಿತ್ರವರ್ಣದ ತಲೆಪಾ ಗು, ಅಂಗಿ, ಮೊದಲಾದುವುಗಳನ್ನು ತಾನಾಗಿಯೇ ಅವರಿಗೆ ಉಡಿಸಿ,ಅಲಂಕ ರಿಸಿದನು. ಹೀಗೆ ನಾನಾಬಣ್ಣದ ವಸ್ತ್ರಗಳಿಂದ ಅಲಂಕರಿಸಲ್ಪಟ್ಟ ಆ ರಾಮಕೃಷ್ಣರಿಬ್ಬರೂ, ಉತ್ಸವಕಾಲದಲ್ಲಿ ನಾನಾವರ್ಣದ ಕೌದಿಗಳಿಂದ ಲಂಕರಿಸಲ್ಪಟ್ಟ ಬಿಳುಪು ಮತ್ತು ಕಪ್ಪುಬಣ್ಣದ ಆನೆಯಮರಿಗಳಂತೆ ಶೋ ಭಿಸುತಿದ್ದರು. ಆಗ ಕೃಷ್ಣನು,ಆ ನೇಗೆಯವನ ಪ್ರೀತಿಗೆ ಸಂತೋಷಪಟ್ಟು, ಅವನಿಗೆ ಇಹಲೋಕದಲ್ಲಿ ಮೇಲಾದ ಸೌಭಾಗ್ಯವೂ, ಬಲವೂ, ಐಶ್ವರ್ಯವೂ, ತನ್ನ ವಿಷಯವಾದ ಭಕ್ತಿಯೂ, ಇಂದ್ರಿಯಪಟುತ್ವವೂ ಉಂಟಾಗುವಂತೆ ಅನುಗ್ರಹಿಸಿದುದಲ್ಲದೆ ದೇಹಾವಸಾನದಲ್ಲಿ ಅವನಿಗೆ ತನ್ನ ಸಾರೂಪ್ಯವೂ ಲ ಭಿಸುವಂತೆ ಸಂಕಲ್ಪಿಸಿದನು

ಸುದಾಮನೆಂಬ ಹೂವಾಡಿಗನನ್ನು ಅನುಗ್ರಹಿಸಿದುದು.

ಆಮೇಲೆ ರಾಮಕೃಷ್ಣರಿಬ್ಬರೂ, ಸುದಾಮನೆಂಬ ಒಬ್ಬ ಹೂವಾ ಡಿಗನ ಮನೆಗೆ ಪ್ರವೇಶಿಸಿದರು ಇವರನ್ನು ಕಂಡೊಡನೆ ಆ ಸುದಾಮನು,ತಟ್ಟ ನೆ ಮೇಲೆದ್ದು, ತಲೆಬಗ್ಗಿ ಅವರಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ,ಉ

ತಾಸನವನ್ನು ಕೊಟ್ಟು ಕುಳ್ಳಿರಿಸಿದನು. ಅರ್ಘ್ಯಪಾದ್ಯಗಳನ್ನೂ ಗಂಧ ಪುಷ್ಪತಾಂಬೂಲಾದಿಗಳನ್ನೂ ಸಮರ್ಪಿಸಿ ಭಕ್ತಿಯಿಂದ ಪೂಜಿಸಿದನು ಆಮೇಲೆ ಅವರ ಮುಂದೆ ಬದ್ಧಾಂಜಲಿಯಾಗಿ ನಿಂತು ಹೀಗೆಂದು ವಿಜ್ಞಾಪಿಸುವನು. “ಓ ಮಹಾತ್ಮರೆ! ನಿಮ್ಮ ಸೇವೆಯಿಂದ ಈಗ ನನ್ನ ಜನ್ಮವು ಸಾರ್ಥಕವಾಯಿತು! ನನ್ನ ಕುಲವು ಪವಿತ್ರವಾಯಿತು. ತಾವು ನನ್ನ ಮನೆಗೆ ಅತಿಥಿಗಳಾಗಿ ಬಂದುದರಿಂದ, ನಮ್ಮ ಪಿತೃಗಳೂ, ದೇವತೆಗಳೂ, ದೇವರ್ಷಿಗಳೂ ಈಗ ನಮ್ಮ ವಿಷಯದಲ್ಲಿ ಸಂತುಷ್ಟರಾದರು ನೀವಿಬ್ಬರೂ ಸಾಮಾನ್ಯರಾದವರಲ್ಲ! ಈ ಸಮಸ್ತಜಗತ್ತಿಗೂ ನೀವೇ ಆದಿಕಾರಣವೆನಿಸಿಕೊಂಡವರು. ಈ ಪ್ರಪಂಚದ ಯೋಗಕ್ಷೇಮಗಳನ್ನು ನಿರ್ವಹಿಸುವುದಕ್ಕಾಗಿಯೇ ನೀವು ನಿಜೇಚ್ಛೆಯಿಂದ ಈ ಅವತಾರವನ್ನೆತ್ತಿರುವುದಾಗಿ ನಾನು ಕೇಳಿಬಲ್ಲೆನು. ನೀವು ಆಗಾಗ ಕೆಲವರನ್ನು ನಿಗ್ರಹಿಸಿ, ಕೆಲವರಲ್ಲಿ ಅನುಗ್ರಹವನ್ನು ತೋರಿಸುತಿದ್ದರೂ, ನಿಮ್ಮ ನಿಗ್ರಹಾನುಗ್ರಹಗಳೆರಡೂ, ಅವರವರ ಕ್ಷೇಮದಲ್ಲಿಯೇ ಪರ್ಯವಸಿತಗಳಾಗುವುವು ಏಕೆಂದರೆ, ಈ ಸಮಸ್ತಪ್ರಪಂಚಕ್ಕೂ ನೀವೇ ಆತ್ಮಭೂತರಾದುದರಿಂದ, ಈ ಜಗತ್ತೆಲ್ಲವೂ ನಿಮಗೆ ಶರೀರವೆನಿಸಿರುವುದು. ಮನುಷ್ಯನಿಗೆ ತನ್ನ ಸರ್ವಾವಯವಗಳೂ ಪ್ರಿಯವಾಗಿರುವಂತೆ, ಸಮಸ್ತಭೂತಗಳಲ್ಲಿಯೂ ನಿಮಗೆ ಪ್ರೀತಿಯು ಸಮಾನವಾಗಿಯೇ ಇರುವುದು. ಹೀಗೆ ನೀವುಸರ್ವಭೂತಸುಹೃತ್ತುಗಳೆನಿಸಿಕೊಂಡಿರುವಾಗನಿಮಗೆ,ವಿಷಮದೃಷ್ಟಿಯೆಲ್ಲಿಯದು? ನಿಮ್ಮನ್ನು ಭಜಿಸಿದವರವಿಷಯದಲ್ಲಿಮಾತ್ರ ನೀವು ಅನುಕೂಲಭಾವವನ್ನು ತೋರಿಸಿದರೂ, ನಿಮ್ಮನ್ನು ಪಕ್ಷಪಾತಬುದ್ಧಿಯುಳ್ಳವರೆಂದು ತಿಳಿಯುವುದು ತಪ್ಪು! ನಾನು ನಿಮ್ಮ ಕಿಂಕರನು! ನನ್ನಿಂದ ಈಗ ನಿಮಗೆ ನಡೆಯಬೇಕಾದ ಕಾರ್ಯವೇನೆಂಬುದನ್ನು ಆಜ್ಞಾಪಿಸಬೇಕು! ನಿಮ್ಮಿಂದ ಕೆಲಸನಲ್ಲಿ ನಿಯೋಗಿಸಲ್ಪಡುವುದೇ ಮನುಷ್ಯನಿಗೆ ಪರಮಾನುಗ್ರಹವು!” ಎಂದು ಹೇಳಿ, ಆಸುದಾಮನು, ಮನಸ್ಸಿನಲ್ಲಿ ಸಂತೋಷಗೊಂಡುಕೊಳ್ಳುತ್ತ, ಸುಗಂಧವಿಶಿಷ್ಟವಾದ ಹೂವಿನ ಹಾರವನ್ನು ಮಾಡಿತಂದು, ಅವರಿಗೆ ಸಮರ್ಪಿಸಿದನು ರಾಮಕೃಷ್ಣರಿಬ್ಬರೂ ತಮ್ಮ ಅನುಚರರಾದ ಇತರಗೋಪಾಲಕರೊಡನೆ ಆ ಸುದಾಮನು ಕೊಟ್ಟ ಪುಷ್ಪಮಾಲಿಕೆಗಳಿಂದ ದೇಹವನ್ನಲಂಕರಿಸಿಕೊಂಡರು. ಮತ್ತು

. ಆ ಸುದಾಮನು ತೋರಿಸಿದ ಪ್ರೀತಿಗಾಗಿ ಸಂತೋಷಪಟ್ಟು, ವಿನೀತನಾಗಿ ನಿಂತಿದ್ದ ಆತನನ್ನು ಕುರಿತು, ಬೇಕಾದ ವರಗಳನ್ನು ಕೇಳಿಕೊಳ್ಳುವಂತೆ ಹೇಳಿದರು. ಹೀಗೆ ರಾಮಕೃಷ್ಣರಿಬ್ಬರೂ ತನಗೆ ಬೇಕಾದ ಅಭೀಷ್ಟಗಳನ್ನು ಕೊಡುವುದಕ್ಕೆ ಸಿದ್ಧರಾಗಿರುವಾಗಲೂ, ಸುದಾಮನು, ಇಹಲೋಕಸುಖವೊಂದಕ್ಕೂ ಆಸೆಪಡದೆ, ಅಖಿಲಾತ್ಮನಾದ ಆ ಕೃಷ್ಣನಲ್ಲಿ ತನಗೆ ನಿಶ್ಚಲವಾದ ಭಕ್ತಿಯೂ, ಹರಿಭಕ್ತರೊಡನೆ ನಿತ್ಯಸಹವಾಸವೂ, ಸಮಸ್ತ ಭೂತಗಳಲ್ಲಿಯೂ ಉತ್ತಮವಾದ ದಯಾಬುದ್ಧಿಯೂ ಉಂಟಾಗಬೇಕೆಂದು ಕೇಳಿಕೊಂಡನು. ಆಗ ಕೃಷ್ಣನು ಅವನಿಗೆ ಹಾಗೆಯೇ ವರವನ್ನು ಕೊಟ್ಟುದಲ್ಲದೆ, ಅವನಿಗೆ ವಂಶಪರಂಪರೆಯಾಗಿ ವೃದ್ಧಿಹೊಂದತಕ್ಕ ಸಂಪತ್ತನ್ನೂ, ಬಲವನ್ನೂ, ಆಯುಷ್ಯವನ್ನೂ, ಯಶಸ್ಸನ್ನೂ, ಕಾಂತಿಯನ್ನೂ, ಅನುಗ್ರಹಿಸಿ, ಅಣ್ಣನಾದ ಬಲರಾಮನೊಡಗೂಡಿ ಅಲ್ಲಿಂದ ಹೊರಟನು. ಇದು ನಾಲ್ವತ್ತೊಂದನೆಯ ಅಧ್ಯಾಯವು

---

## { ಕೃಷ್ಣನು (ಗೂನುಬೆನ್ನಿನ) ಕುಬ್ಜೆಯೊಬ್ಬಳನ್ನು ನೆಟ್ಟಗೆ ಮಾಡಿದುದು }

ಆಮೇಲೆ ಕೃಷ್ಣನು, ರಾಜಮಾರ್ಗದಿಂದ ಮುಂದೆ ನಡೆದು ಹೋಗುತ್ತಿರುವಾಗ, ಗೂನುಬೆನ್ನಿನ ಹೆಂಗಸೊಬ್ಬಳು, ಕೈಯಲ್ಲಿ ಗಂಧದ ಬಟ್ಟಲನ್ನು ಹಿಡಿದು ಇದಿರಾಗಿ ಬರುತ್ತಿದ್ದಳು. ಅವಳು ಇನ್ನೂ ವಯಸ್ಸುಮೀರದ ಯುವತಿಯಾಗಿದ್ದಳು' ಅವಳ ಮುಖವು ಸುಲಕ್ಷಣವಾಗಿದ್ದಿತು' ಆದರೆ! ಅವಳ ಬೆನ್ನು ಮಾತ್ರ ಬಗ್ಗಿಹೋಗಿ, ದೇಹದಲ್ಲಿ ವಿಕಾರವುಂಟಾಗಿದ್ದಿತು. ಆಶ್ರಿತರಿಗೆ ಸುಖಪ್ರದನಾದ ಕೃಷ್ಣನು ಅವಳ ಸ್ಥಿತಿಯನ್ನು ನೋಡಿ ಕನಿಕರಗೊಂಡು ಮಂದಹಾಸಪೂರ್ವಕವಾದ ಮೃದುವಾಕ್ಯದಿಂದ ಅವಳನ್ನು ಕುರಿತು. ''ಎಲೆ ವರಾಂಗಿ! ನೀನು ಯಾರು? ಈ ಗಂಧವನ್ನು ಯಾರಿಗಾಗಿ ತೆಗೆದುಕೊಂಡು ಹೋಗುತ್ತಿರುವೆ? ಯಥಾರ್ಥವನ್ನು ಹೇಳು! ನಿನ್ನ ಕೈಯಲ್ಲಿರುವ ಗಂಧವು ಬಹಳ ಪರಿಮಳಯುಕ್ತವಾಗಿರುವಂತೆ ತೋರುವುದು! ನಮಗೂ ಒಂದಿಷ್ಟು ಗಂಧವನ್ನು ಕೊಡುವೆಯಾ? ಹಾಗೆ ಕೊಟ್ಟರೆ, ಅದರಿಂದ ಮುಂ

ದೆ ನಿನಗೆ ಶ್ರೇಯಸ್ಸುಂಟು." ಎಂದನು. ಅದಕ್ಕಾ ಗೂನಿಯು "ಓ ಸುಂದರಾಂಗಾ! ನಾನು ಕಂಸನ ಅಂತಃಪುರದ ದಾಸಿ! ಕಂಸನಿಗೆ ನಾನು ಬಹಳ ವಿಶ್ವಾಸಪಾತ್ರಳಾಗಿರುವೆನು! ನನ್ನನ್ನು ತ್ರಿವಕ್ರೆಯೆಂದು ಕರೆಯುವರು ಕಂಸನಿಗೆ ಪ್ರತಿದಿನವೂ ಗಂಧವನ್ನರೆದುಕೊಡಬೇಕಾದುದು ನನ್ನ ಕಾರ್ಯವು ನಾನು ಅರೆದುಕೊಡತಕ್ಕ ಗಂಧದಲ್ಲಿ ಅವನಿಗೆ ಬಹಳ ಪ್ರೀತಿಯುಂಟು ಅವನಿಗಾಗಿಯೇ ಈಗ ನಾನು ಈ ಗಂಧವನ್ನು ತೆಗೆದುಕೊಂಡು ಹೋಗುತ್ತಿರುವೆನು ಆದರೇನು? ಈ ದಿನದಲ್ಲಿ ನಾನು ಅರೆದು ತಂದಿರತಕ್ಕ ಈ ಅನುಲೇಪನವು ಅತ್ಯುತ್ತಮವಾಗಿರುವುದು. ನಿಮ್ಮಿಬ್ಬರ ರೂಪಲಾವಣ್ಯಗಳನ್ನು ನೋಡಿದರೆ, ಇದನ್ನು ಧರಿಸುವುದಕ್ಕೆ ನಿಮಗಿಂತಲೂ ಅರ್ಹರಾದವರು ಬೇರೊಬ್ಬರಿಲ್ಲವೆಂದೂ ನನಗೆ ತೋರಿರುವುದು ಆದುದರಿಂದ ನೀವು ಯಥೇಚ್ಛವಾಗಿ ಸ್ವೀಕರಿಸಬಹುದು. ಸಂತೋಷದಿಂದ ಕೊಡುವೆನು" ಎಂದಳು. ಹೀಗೆ ಆ ಗೂನಿಯು, ರಾಮಕೃಷ್ಣರ ರೂಪಕ್ಕೂ, ಸೌಕುಮಾರ್ಯಕ್ಕೂ, ರಸಿಕತೆಗೂ, ಮಂದಹಾಸಪೂರ್ವಕವಾದ ಅವರ ಮಾತಿಗೂ, ಅವರ ದೃಷ್ಟಿ ಸೌಂದರ್ಯಕ್ಕೂ ಮರುಳಾಗಿ, ತಾನು ತಂದಿದ್ದ ಗಂಧವನ್ನು ಅವರಿಬ್ಬರಿಗೂ ಪ್ರೀತಿಪೂರ್ವಕವಾಗಿ ಕೊಟ್ಟಳು ಬಿಳುಪು ಮತ್ತು ಕಪ್ಪುಬಣ್ಣದ ಮೈಯುಳ್ಳ ಆ ರಾಮಕೃಷ್ಣರಿಬ್ಬರೂ, ತಮ್ಮ ಮೈಬಣ್ಣಕ್ಕಿಂತಲೂ ಬೇರೆಯಾಗಿ ತೋರುವಂತೆ, ಕುಂಕುಮಕೇಸರದಿಂದ ಮಿಶ್ರಿತವಾಗಿದ್ದ ಆ ರಕ್ತಚಂದನವನ್ನು ಮೈಗೆ ಲೇಪಿಸಿಕೊಂಡು, ಅಪೂರ್ವ ಶೋಭೆಯಿಂದ ಪ್ರಕಾಶಿಸುತಿದ್ದರು. ಆಗ ಕೃಷ್ಣನಿಗೆ ಅವಳಲ್ಲಿ ಅನುಗ್ರಹ ಬುದ್ಧಿಯುಂಟಾಯಿತು, ಅಂದವಾದ ಮುಖವುಳ್ಳ ಆಕೆಯ ವಕ್ರದೇಹವನ್ನು ನೆಟ್ಟಗೆ ಮಾಡುವುದರಿಂದ, ತನ್ನ ದರ್ಶನಕ್ಕೆ ಆಗಲೇ ಅವಳಿಗೆ ಫಲವನ್ನು ತೋರಿಸಬೇಕೆಂದುದ್ದೇಶಿಸಿದನು. ಅವಳ ಕಾಲುಗಳೆರಡನ್ನೂ ತನ್ನ ಪಾದಾಗ್ರಗಳಿಂದ ಮೆಟ್ಟಿ ಹಿಡಿದು, ಅವಳ ಗಡ್ಡದ ಕೆಳಗೆ ತನ್ನ ಕೈಬೆರಳುಗಳನ್ನಿಟ್ಟು, ಅವಳ ದೇಹವು ನೆಟ್ಟಗೆ ನಿಲ್ಲುವಂತೆ ಮೇಲಕ್ಕೆಳೆದನು. ಹೀಗೆ ಕೃಷ್ಣನು ಮೇಲಕ್ಕೆತ್ತಿದೊಡನೆ, ಬಗ್ಗಿ ಹೋಗಿದ್ದ ಅವಳ ಬೆನ್ನಮೂಳೆಯು ನೆಟ್ಟಗೆ ನಿಂತಿತು. ಕೃಷ್ಣನ ಕರಸ್ಪರ್ಶಮಾತ್ರದಿಂದಲೇ ಅವಳ ದೇಹ



೨೦೩೦. ಕೃಷ್ಣನು ಕುಬ್ಜೆಯನ್ನು ಅನುಗ್ರಹಿಸಿದುದು.

ದಲ್ಲಿದ್ದ ಡೊಂಕುಗಳೆಲ್ಲವೂ ಕ್ರಮಪಟ್ಟುವು. ಉಬ್ಬಿದ ಸ್ತನನಿತಂಬಗಳೊಡನೆ ಆಕೆಯು ಉತ್ತಮಸೌಂದರ್ಯದಿಂದ ಶೋಭಿಸಿದಳು. ಹೀಗೆ ರೂಪದಿಂದಲೂ, ಯೌವನದಿಂದಲೂ, ಗುಣದಿಂದಲೂ ಸ್ತ್ರೀಯರಲ್ಲಿ ತಾನೇ ಮೇಲೆನಿಸಿಕೊಂಡಿದ್ದ ಆ ಸ್ತ್ರೀಯು, ಪರಮಸಂತೋಷದಿಂದ ಮಂದಹಾಸಪೂರ್ವಕವಾಗಿ ಹೀಗೆಂದು ಹೇಳುವಳು. "ಓ ವೀರಾ! ಮನೆಗೆ ಹೋಗುವೆವು ಬಾ! ನಾನು ನಿನ್ನನ್ನು ಬಿಟ್ಟು ಹೋಗಲಾರೆನು ನಿನ್ನ ಗುಣಕ್ಕೂ, ನಿನ್ನ ರೂಪಕ್ಕೂ ನನ್ನ ಮನಸ್ಸು ಕಲಗಿ ಹೋಗಿರುವುದು. ಅವಶ್ಯವಾಗಿ ನೀನು ನನ್ನೊಡನೆ ಬಂದೇ ತೀರಬೇಕು." ಎಂದು ಹೇಳುತ್ತ, ಆ ಕೃಷ್ಣನು ಹೊದೆದಿದ್ದ ಉತ್ತರೀಯದ ಸೆರಗನ್ನು ಹಿಡಿದು ಎಳೆಯುತ್ತಿದ್ದಳು. ಹೀಗೆ ಆ ಯುವತಿಯು ಬಲಾತ್ಕರಿಸುತ್ತಿರಲು, ಕೃಷ್ಣನು, ಬಲರಾಮನ ಮತ್ತು ತನ್ನ ಸಂಗಡಿಗರಾದ ಇತರಗೋಪಾಲಕರ ಮುಖವನ್ನು ನೋಡಿ ನಗುತ್ತ, ಅವಳನ್ನು ಕುರಿತು, "ಓ ಸುಭ್ರು! ನಿನ್ನ ಇಷ್ಟದಂತೆಯೇ ಆಗಲಿ! ಹೋಗು! ಆದರೆ ಈಗ ನೀನು ನನ್ನನ್ನು ನಿರ್ಬಂಧಿಸಬೇಡ. ನಾವು ಇಲ್ಲಿಗೆ ಬಂದ ಕಾರ್ಯವನ್ನು ಮೊದಲು ನಡೆಸಿ, ಆಮೇಲೆ ನಿನ್ನ ಮನೆಗೆ ಬಂದೇ ಹೋಗುವೆನು. ಹೇಗಿದ್ದರೂ ಇಲ್ಲಿಗೆ ನಾವು ಪರದೇಶಿಗಳು! ಇಲ್ಲಿ ನಮಗೆ ಮನೆಮಠಗಳೊಂದೂ ಇಲ್ಲವಷ್ಟೆ? ಪರಸ್ಥಳದಿಂದ ಬಂದ ನಮ್ಮಂತವರಿಗೆ ನಿಮ್ಮಮನೆಯೇ ಸತ್ರದಂತಿರುವುದು. ಅವಶ್ಯವಾಗಿ ಬರುವೆವು ಹೋಗು." ಎಂದು ಹೇಳಿ ಅವಳನ್ನು ಸಮಾಧಾನಪಡಿಸಿ, ಅಂಗಡಿಬೀದಿಯಮಾರ್ಗವಾಗಿ ಹೊರಟನು ಬೀದಿಯುದ್ದಕ್ಕೂ ಅಲ್ಲಲ್ಲಿದ್ದ ವರ್ತಕರು, ಗಂಧಪುಷ್ಪತಾಂಬೂಲಾದಿಗಳೊಡನೆ ಕೈಕಾಣಿಕೆಯ ತಟ್ಟೆಗಳನ್ನು ಹಿಡಿದು ಬಂದು, ರಾಮಕೃಷ್ಣರನ್ನು ಪೂಜಿಸುತ್ತಿದ್ದರು. ಈ ರಾಮಕೃಷ್ಣರನ್ನು ನೋಡಿದೊಡನೆ, ಆ ಮಧುರಾಪುರಿಯಲ್ಲಿದ್ದ ಸ್ತ್ರೀಯರೆಲ್ಲರೂ ಕಾಮವಿಕಾರದಿಂದ ಮನಸ್ಸು ಕಲಗಿ, ಮೈಮೇಲಿನ ವಸ್ತ್ರಾಭರಣಗಳು ಕದಲಿದುದನ್ನೂ ತಿಳಿಯದೆ, ಚಿತ್ರದ ಬೊಂಬೆಗಳಂತೆ ಬಹಳ ಹೊತ್ತಿನವರೆಗೆ ಮೈಮರೆತು ನಿಂತುಬಿಟ್ಟರು. ಹೀಗೆ ಕೃಷ್ಣನು ಆ ಪುರದ ರಾಜಮಾರ್ಗಗಳನ್ನು ಸುತ್ತಿ ನೋಡಿದಮೇಲೆ, ಕಂಸನು ಧನುರ್ಯಾಗಕ್ಕಾಗಿ ಪೂಜಿಸಿಟ್ಟಿರುವ ಧನುಸ್ಸೆಲ್ಲಿರುವುದೆಂದು ಪುರಜನರನ್ನು ವಿಚಾರಿಸಿ ತಿಳಿದು

ಕೊಂಡು, ಆ ಧನುಶ್ಶಾಲೆಗೂ ಪ್ರವೇಶಿಸಿ. ಅಲ್ಲಿ ಇಂದ್ರಧನುಸ್ಸಿನಂತೆ ಅ-
ಪ್ಸುತವಾದ ಮಹಾಧನುಸ್ಸನ್ನು ಕಂಡನು ಅದಕ್ಕೆ ಅನೇಕವೀರಪುರುಷರು
ಸುತ್ತಲೂ ಕಾವಲಾಗಿ ನಿಂತಿದ್ದರು. ಸುವರ್ಣಭೂಷಣಗಳಿಂದಲೂ, ಗಂಧ
ಪುಷ್ಪಾದಿಗಳಿಂದಲೂ ಅಲಂಕರಿಸಲ್ಪಟ್ಟಿದ್ದ ಆ ಧನುಸ್ಸನ್ನು ನೋಡಿ ಕೃಷ್ಣ
ನು, ಅದರ ಸಮೀಪಕ್ಕೆ ಹೋದನು. ಸುತ್ತಲೂ ನಿಂತಿದ್ದ ಕಾವಲಿನವರು ಅ
ಡ್ಡಗಟ್ಟಿ ತಡೆಯುತಿದ್ದರೂ ಬಲಾತ್ಕಾರದಿಂದ ಮುಂದೆ ಹೋಗಿ ಆ ಬಿಲ್ಲಿ
ನ್ನು ಕೈಗೆತ್ತಿಕೊಂಡನು. ಎಲ್ಲರೂ ಆಶ್ಚರ್ಯದಿಂದ ನೋಡುತಿದ್ದಹಾಗೆಯೇ
ಅದನ್ನು ತನ್ನ ಎಡಗೈಯಿಂದ ಅನಾಯಾಸವಾಗಿ ಮೇಲಕ್ಕೆತ್ತಿ, ಅದಕ್ಕೆ
ನಾಣೇರಿಸುವಸಿವ ದಿಂದ, ಮದದಾನೆಯು ಕಬ್ಬಿನ ಜಲ್ಲೆಯನ್ನು ಮು
ರಿಯುವಂತೆ ನಿಮಿಷಮಾತ್ರದಲ್ಲಿ ಆ ಮಹಾಧನುಸ್ಸನ್ನು ಎರಡುತುಂಡಾಗಿ
ಮುರಿದುಬಿಟ್ಟನು. ಆ ಬಿಲ್ಲು ಮುರಿಯುವಾಗ, ಅದರಿಂದುಂಟಾದ ಮಹಾಧ್ವ
ನಿಯು ಭೂಮ್ಯಾಕಾಶಗಳನ್ನೂ, ಸಮಸ್ತ ದಿಕ್ಕುಗಳನ್ನೂ ತುಂಬಿಕೊಂಡಿತು.
ಈ ಶಬ್ದವನ್ನು ಕೇಳಿ ಕಂಸನ ಎದೆಯು ನಡುಗಿತು. ಅಲ್ಲಿ ಕಾವಲಿ
ದ್ದವರೆಲ್ಲರೂ ಕೋಪದಿಂದ ಗುಂಪುಗೂಡಿ "ಅವನನ್ನು ಹಿಡಿಯಿರಿ! ಸೆರೆಯಲ್ಲಿ
ಡಿರಿ!" ಎಂದು ಕೂಗುತ್ತ ಕೃಷ್ಣನಮೇಲೆ ಬೀಳುವುದಕ್ಕಾಗಿ ಸುತ್ತಲೂ ಮು
ತ್ತಿನಿಂತರು. ಹೀಗೆ ಗರ್ವದಿಂದ ಆರ್ಭಟಿಸುತ್ತಿರುವ ಆ ಸೇವಕರನ್ನು ನೋ
ಡಿ ಬಲರಾಮಕೃಷ್ಣರಿಬ್ಬರೂ ಕೋಪಾವಿಷ್ಟರಾಗಿ, ಆ ಬಿಲ್ಲಿನ ಒಂದೊಂದು
ತುಂಡನ್ನು ಒಬ್ಬೊಬ್ಬರು ಕೈಗೆತ್ತಿಕೊಂಡು, ಅದರಿಂದಲೇ ಆ ಕಾವಲುಗಾ
ರರೆಲ್ಲರನ್ನೂ ಹೊಡೆದೋಡಿಸಿಬಿಟ್ಟರು ಹಾಗೆಯೇ ಕಂಸನಿಂದ ಕಳುಹಿಸಲ್ಪ
ಟ್ಟ ಇನ್ನೂ ಅನೇಕಸೈನ್ಯಗಳನ್ನೂ ಧ್ವಂಸಮಾಡಿದರು, ಆಮೇಲೆ ಧನುಶ್ಶಾಲೆ
ಯಿಂದ ಹೊರಟು, ಪುರದ ವೈಭವಗಳನ್ನು ನೋಡುತ್ತ, ಅಲ್ಲಲ್ಲಿ ಸಂಚರಿಸುತಿ
ದ್ದರು. ರಾಮಕೃಷ್ಣರ ಈ ಅದ್ಭುತಪರಾಕ್ರಮವನ್ನೂ, ಅವರ ತೇಜಸ್ಸ
ನ್ನೂ, ಧೈರ್ಯವನ್ನೂ ನೋಡಿ, ಪುರವಾಸಿಗಳೆಲ್ಲರೂ ಆಶ್ಚರ್ಯಪಡುತ್ತ, ಅವರು
ಯಾರೋ ದೇವತೆಗಳಾಗಿರಬೇಕೇಹೊರತು, ಸಾಮಾನ್ಯಮನುಷ್ಯರಲ್ಲವೆಂ
ದೇ ನಿಶ್ಚಯಿಸಿದ್ದರು. ರಾಮಕೃಷ್ಣರು ಹೀಗೆ ಆ ಪುರವೀಧಿಗಳನ್ನು ಸುತ್ತಿ
ನೋಡುವುದರಲ್ಲಿ ಸೂರ್ಯಾಸ್ತಮಯವಾಯಿತು. ಆಮೇಲೆ ಅವರಿಬ್ಬರೂ

ಇತರಗೋಪಾಲಕರೊಡನೆ, ತಾವು ಬಂಡಿಗಳನ್ನು ನಿಲ್ಲಿಸಿದ್ದ ಸ್ಥಲಕ್ಕೆ ಬಂದು ಸೇರಿದರು. ಈ ರಾಮಕೃಷ್ಣರಿಬ್ಬರೂ ಗೋಕುಲದಿಂದ ಹೊರಡುವಾಗ, ಅಲ್ಲಿನ ಗೋಪಿಯರು, ಕೃಷ್ಣನನ್ನು ಬಿಟ್ಟಿರಲಾರದೆ. ವಿರಹದುಃಖದಿಂದ ಹಂಬಲಿಸುತ್ತ, ಮಧುರಾಪುರವಾಸಿಗಳಿಗೆ ಈ ಕೃಷ್ಣದರ್ಶನದಿಂದುಂಟಾಗುವ ಸಂತೋಷಗಳನ್ನು ಕುರಿತು ಯಾವಯಾವ ವಿಧದಲ್ಲಿ ಪ್ರಶಂಸೆಮಾಡಿತಿದ್ದರೋ, ಅವೆಲ್ಲವೂ ಹಾಗೆಯೇ ಸತ್ಯವಾಯಿತು. ಸಾಕ್ಷಾಲ್ಲಕ್ಷ್ಮೀದೇವಿಯೂಕೂಡ ಯೌವನ ರೂಪಸಂಪತ್ತಿಗೆ ಮೋಹಿತಳಾಗಿ, ಬೇರೆ ಎಲ್ಲಾ ದೇವತೆಗಳನ್ನೂ ಬಿಟ್ಟು ಅವನನ್ನೇ ಕಾಮಿಸಿದಳೋ, ಅಂತಹ ಲೋಕಮೋಹನಾಕಾರವುಳ್ಳ ಕೃಷ್ಣನನ್ನು ಕಣ್ಣಾರೆ ನೋಡುವುದಕ್ಕಿಂತಲೂ ಬೇರೆ ಭಾಗ್ಯವೇನುಂಟು? ಇತ್ತಲಾಗಿ ರಾಮಕೃಷ್ಣರಿಬ್ಬರೂ, ತಮ್ಮ ಬಂಡಿಯ ಮೈದಾನಕ್ಕೆ ಬಂದಮೇಲೆ, ಕೈಕಾಲುಗಳನ್ನು ತೊಳೆದುಕೊಂಡು, ಆ ರಾತ್ರಿಯಲ್ಲಿ ಕ್ಷೀರಾನ್ನವನ್ನು ಭುಜಿಸಿ, ಮರುದಿನದ ಬೆಳಿಗ್ಗೆ ಕಂಸನು ಮಾಡಬಹುದಾದ ಕಾರ್ಯಗಳನ್ನು ಮನಸ್ಸಿನಲ್ಲಿ ಯೋಚಿಸುತ್ತ, ಸುಖನಿದ್ರೆಯಿಂದ ಆ ರಾತ್ರಿಯನ್ನು ಕಳೆದರು. ಅತ್ತಲಾಗಿ ಕಂಸನಾದರೋ,ರಾಮಕೃಷ್ಣರಿಬ್ಬರೂ ಲೀಲಾಮಾತ್ರದಿಂದ ತನ್ನ ಮಹಾಧನುಸ್ಸನ್ನು ಮುರಿದು, ಅದರ ಕಾವಲಿನವರನ್ನೂ, ತನ್ನ ಚತುರಂಗಸೈನ್ಯವನ್ನೂ ಧ್ವಂಸಮಾಡಿ ಹೋದುದನ್ನು ದೂತರ ಮುಖದಿಂದ ಕೇಳಿ, ಮನಸ್ಸಿನಲ್ಲಿ ಮಹಾಭಯದಿಂದ ನಡುಗುತ್ತ, ಆ ರಾತ್ರಿಯೆಲ್ಲವೂ ಸರಿಯಾಗಿ ನಿದ್ರೆಯಿಲ್ಲದೆ ಕೊರಗುತಿದ್ದನು. ಅಕಸ್ಮಾತ್ತಾಗಿ ನಿದ್ರೆಬರುವಂತಾದರೂ, ಕಣ್ಣುಮುಚ್ಚಿದೊಡನೆ ಅವನಿಗೆ ಭಯಂಕರಗಳಾದ ದುಸ್ವಪ್ನಗಳು ಕಾಣುತಿದ್ದುವು. ಕಣ್ಣುತೆರೆದಾಗ, ಮಹೋತ್ಪಾತಗಳು ತೋರುತಿದ್ದುವು. ಹೀಗೆ ಕನಸಿನಲ್ಲಿಯೂ, ಎಚ್ಚರದಲ್ಲಿಯೂ ಅವನ ಕಣ್ಣಿಗೆ ಬಿದ್ದ ದುರ್ನಿಮಿತ್ತಗಳೆಲ್ಲವೂ ಮುಂದಿನ ಮೃತ್ಯುವನ್ನೇ ಸೂಚಿಸುತಿದ್ದುವು. ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳುವಾಗ ತಲೆಯಿಲ್ಲದ ಮುಂಡದಂತೆ ಕಾಣುವುದು, ಚಂದ್ರಸೂರ್ಯಾದಿಜ್ಯೋತಿಗಳು ಎರಡೆರಡಿದ್ದಂತೆ ಕಾಣಿಸುವುದು,ತನ್ನ ದೇಹದ ನೆರಳನ್ನು ನೋಡುವಾಗ ಅದರಲ್ಲಿ ನಡುನಡುವೆ ರಂಧ್ರಗಳು ಕಾಣುವುದು,ಆಗಾಗ ತನ್ನ ದೇಹದೊಳಗೆ ಪ್ರಾಣವಾಯುವಿನ ಧ್ವನಿ

ಮೊದಲಾದ ಜೀವಚಿಹ್ನಗಳೊಂದೂ ತೋರದೆಹೋಗುವುದು, ಮರಗಳು ಬಂಗಾರದಂತೆ ಗೋಚರಿಸುವುದು, ಕೆಸರಿನಲ್ಲಿ ಕಾಲಿಟ್ಟಾಗಲೂ ತನ್ನ ಹೆಜ್ಜೆಯ ಗುರುತು ಕಾಣಿಸದಿರುವುದು, ಇದಲ್ಲದೆ ಕನಸಿನಲ್ಲಿ, ಹೆಣವನ್ನಪ್ಪಿಕೊಳ್ಳುವಂತೆಯೂ, ಕತ್ತೆಯಿನ್ನೇರಿಹೋಗುವಂತೆಯೂ, ತಾವರೆದಂಟನ್ನು ಕಡಿದು ತಿನ್ನುವಂತೆಯೂ, ಮ್ಯೆಮೇಲೆ ಬಟ್ಟೆಯಿಲ್ಲದೆ ಎಣ್ಣೆಯನ್ನು ಹಚ್ಚಿಕೊಂಡು, ಕಂಠದಲ್ಲಿ ಕೆಂಪುಹೂವಿನ ಮಾಲಿಕೆಯೊಡನೆ ಒಂಟಿಯಾಗಿ ಸಂಚರಿಸುವಂತೆಯೂ ಕಾಣುವುದು, ಇವೇ ಮೊದಲಾಗಿ, ತನಗೆ ಮರಣಸೂಚಕಗಳಾದ ಅನೇಕ ದುರ್ನಿಮಿತ್ತಗಳನ್ನು ನೋಡಿ ಭಯದಿಂದ ತತ್ತಳಿಸುತ್ತ, ಆ ರಾತ್ರಿಯೆಲ್ಲವೂ ನಿದ್ರೆಯಿಲ್ಲದೆ ಕೊರಗುತಿದ್ದನು. ಹೀಗೆ ಆ ರಾತ್ರಿಯನ್ನು ಎಷ್ಟೋಕಷ್ಟದಿಂದ ಕಳೆದನು. ರಾತ್ರಿಯು ಕಳೆದು ಬೆಳಗಾಯಿತು, ಸೂರ್ಯನು ಸಮುದ್ರಮಧ್ಯದಿಂದ ಉದಿಸಿಬಂದೊಡನೆ, ಆ ದಿನವೇ ಜಟ್ಟಿಯ ಕಾಳಗವನ್ನು ನಡೆಸಬೇಕೆಂದು ತಕ್ಕ ಸನ್ನಾಹಗಳನ್ನು ಮಾಡಿಸುತಿದ್ದನು. ಆ ಕಾಳಗವು ನಡೆಯತಕ್ಕ ರಂಗಸ್ಥಳಕ್ಕೆ ಪೂಜಾದಿಸಂಸ್ಕಾರಗಳು ನಡೆದುವು. ವಾದ್ಯಗಳು ನುಡಿಸಲ್ಪಟ್ಟುವು. ಆ ಮೈದಾನದ ಸುತ್ತಲೂ ಪುಷ್ಪಮಾಲಿಕೆಗಳಿಂದಲೂ, ಧ್ವಜಗಳಿಂದಲೂ, ಪತಾಕೆಗಳಿಂದಲೂ, ತೋರಣಗಳಿಂದಲೂ ಅಲಂಕೃತಗಳಾದ ಆಸನಗಳು ಸಿದ್ಧಪಡಿಸಲ್ಪಟ್ಟುವು. ಅನೇಕರಾಜರೂ ಬ್ರಾಹ್ಮಣಾದಿವರ್ಣದವರೂ, ಪುರವಾಸಿಗಳೂ, ಗ್ರಾಮವಾಸಿಗಳೂ ಬಂದು ನೆರೆದು, ತಮತಮಗೆ ನಿಯಮಿಸಲ್ಪಟ್ಟ ಸ್ಥಾನಗಳಲ್ಲಿ ಕುಳಿತರು. ಕಂಸನೂಕೂಡ ತನ್ನ ಪ್ರಧಾನಮಂತ್ರಿಗಳೊಡನೆ ಬಂದು, ಬೇರೆಬೇರೆ ಮಂಡಲಾಧೀಶ್ವರರ ನಡುವೆ, ತನಗೆ ಯೋಗ್ಯವಾದ ಬಂದು ಉನ್ನತಾಸನದಲ್ಲಿ ಬಂದು ಕುಳಿತನು. ಈ ಮಹೋತ್ಸವಸಂಭ್ರಮದಲ್ಲಿಯೂ, ಅವನು ಮನಸ್ಸಿಗೆ ನೆಮ್ಮದಿಯಿಲ್ಲದೆ, ಚಿಂತಾಕುಲನಾಗಿಯೇ ರಾಜಾಸನದಮೇಲೆ ಕುಳಿತಿದ್ದನು. ವಾದ್ಯಘೋಷಗಳೂ, ಜಟ್ಟಿಗಳು ತೋಳನ್ನು ತಟ್ಟುವ ಧ್ವನಿಗಳೂ ಕೇಳಿಸುತಿದ್ದುವು. ಆಗ ಕಂಸನಿಂದ ನಿಯುಕ್ತರಾಗಿದ್ದ ಕೆಲವು ಪ್ರಧಾನಮಲ್ಲರು, ವೀರಯೋಗ್ಯವಾದ ಅಲಂಕಾರಗಳನ್ನು ಧರಿಸಿ, ತಮ್ಮತಮ್ಮ ಉಪಾಧ್ಯಾಯರೊಡನೆ ರಂಗಸ್ಥಳವನ್ನು ಪ್ರವೇಶಿಸಿದರು. ಕೊನೆಗೆ, ಚಾಣೂರ, ಮು

ಷ್ಟಿಕ,ಕೂಟ, ಶಲ, ತೋಸಲರೆಂಬ ಪ್ರಸಿದ್ಧರಾದ ಐದುಮಂದಿಜಟ್ಟಿಗಳೂ, ಆಗಿನ ವಾದ್ಯಘೋಷಗಳನ್ನು ಕೇಳಿ ಮಹೋತ್ಸಾಹಯುಕ್ತರಾಗಿ,ಭುಜವನ್ನ ಪ್ಪಳಿಸುತ್ತ, ಆ ಮೈದಾನದನಡುವೆ ಬಂದು ನಿಂತರು. ಇಷ್ಟರಲ್ಲಿ ನಂದಾದಿ ಗೋಪಾಲಕರೊಡನೆ ಕಂಸನಿಂದ ಒಳಕ್ಕೆ ಕರೆಸಲ್ಪಟ್ಟು, ಅವನಿಗಾಗಿ ತಾವು ತಂದಿದ್ದ ಕಾಣಿಕೆಗಳನ್ನೊಪ್ಪಿಸಿ, ತಮಗಾಗಿ ಏರ್ಪಡಿಸಿದ್ದ ಒಂದಾನೊಂದು ಮಂಚದಮೇಲೆ ಕುಳಿತರು. ಇದು ನಾಲ್ವತ್ತೆರಡನೆಯ ಅಧ್ಯಾಯವು.

---

(ಕೃಷ್ಣನು ರಂಗಸ್ಥಳವನ್ನು ಪ್ರವೇಶಿಸುವಾಗ, ಕುವಲಯಾಪೀಡವೆಂಬ ಮದದಾನೆಯನ್ನೂ, ಅದರ ಮಾವಟಿಗನನ್ನೂ ಸಂಹರಿಸಿದುದು)

ರಾಜಾ! ಕೇಳು! ಇಷ್ಟರಲ್ಲಿ ರಾಮಕೃಷ್ಣರೊಡನೆ, ಬೆಳಗಾದಮೇಲೆ ಶೌಚಾದಿಕಾರ್ಯಗಳನ್ನು ಮುಗಿಸಿಕೊಂಡು, ಕಾಳಗದ ಮೈದಾನದಿಂದ ಹೊರಟುಬರುತಿದ್ದ ವಾದ್ಯಧ್ವನಿಯನ್ನು ಕೇಳಿ, ಅಲ್ಲಿನ ವಿನೋದವನ್ನು ನೋಡಬೇಕೆಂಬ ಕುತೂಹಲದಿಂದ ಹೊರಟುಬಂದರು. ಇವರು ರಂಗದ್ವಾರಕ್ಕೆ ಬರುವಷ್ಟರಲ್ಲಿ ಬಾಗಿಲಿಗಡ್ಡಲಾಗಿ, ಅದ್ಭುತಾಕಾರವುಳ್ಳ ಒಂದಾನೊಂದು ಮದದಾನೆಯು ನಿಂತಿದ್ದಿತು. ಸಮರ್ಥನಾದ ಮಾವಟಿಗನೊಬ್ಬನು ಮೇಲೆ ಕುಳಿತು ಅದನ್ನು ಅತ್ತಿತ್ತ ಚಿತ್ರಾಕಾರವಾಗಿ ತಿರುಗಾಡಿಸುತ್ತ, ರಾಮಕೃಷ್ಣರಮೇಲೆ ಬಿಡುವುದಕ್ಕಾಗಿಯೇ ಸಮಯವನ್ನು ನಿರೀಕ್ಷಿಸುತಿದ್ದನು. ಕೃಷ್ಣನು ಬರುವಾಗಲೇ ಈ ಸಂಚನ್ನು ತಿಳಿದು, ನಡುದಟ್ಟಿಯನ್ನು ಬಿಗಿದು, ಕೆದರಿದ ಕುರುಳನ್ನು ಕೈಯಿಂದ ತಿದ್ದಿಕೊಂಡು, ಆನೆಯಮೇಲಿದ್ದ ಮಾವಟಿಗನನ್ನುಕುರಿತು ಮೇಘಗಂಭೀರಧ್ವನಿಯಿಂದ ಹೀಗೆಂದು ಹೇಳುವನು. "ಓ ಮಾವಟಿಗಾ! ಮಾವಟಿಗಾ! ದಾರಿಬಿಟ್ಟು ಹಿಂದೆ ಹೋಗು! ವಿಳಂಬಮಾಡಬೇಡ! ಹಾಗಿಲ್ಲದಪಕ್ಷದಲ್ಲಿ ಈಗಲೇ ನಿನ್ನನ್ನೂ, ಈ ನಿನ್ನ ಆನೆಯನ್ನೂ ಯಮಪುರಿಗೆ ಕಳುಹಿಸಿಬಿಡುವೆನು. ಜೋಕೆ!" ಎಂದನು. ಕೃಷ್ಣನು ಹೇಳಿದ ಈ ಬೆದರಿಕೆಯ ಮಾತನ್ನು ಕೇಳಿ ಆ ಮಾವಟಿಗನಿಗೆ ಮಹಾಕೋಪವುಂಟಾಯಿತು. ಕಾಲಮೃತ್ಯುವಿನಂತಿದ್ದ

ತನ್ನ ಮಹಾಗಜವನ್ನು ಮುಂದೆ ಬಿಟ್ಟು, ಕೃಷ್ಣನಮೇಲೆ ಪ್ರೇರಿಸಿದನು. ಆ ಆನೆಯು ಕೋಪಾವೇಶದಿಂದ ಮುಂದೆಬಂದು, ತನ್ನ ಸೊಂಡಿಲನ್ನು ಕೃಷ್ಣನ ಮೈಗೆ ಸುತ್ತಿತು. ಕೃಷ್ಣನು ಉಪಾಯದಿಂದ ಬಿಡಿಸಿಕೊಂಡು, ಅದನ್ನು ಬಲವಾಗಿ ತನ್ನ ಮುಷ್ಟಿಯಿಂದಪ್ಪಳಿಸಿ, ಅದರ ಕಾಲುಗಳನಡುವೆ ನುಗ್ಗಿ ಕಣ್ಣಿಗೆ ಬೀಳದಂತೆ ಅಲ್ಲಿಯೇ ಮರೆಯಾಗಿದ್ದನು. ಆ ಆನೆಗೆ ಮತ್ತಷ್ಟು ಕೋಪವುಂಟಾಯಿತು. ಅತ್ತಿತ್ತ ಸೊಂಡಿಲನ್ನು ನೀಡಿ, ಕೃಷ್ಣನನ್ನು ಹುಡುಕುತ್ತ,ಕೊನೆಗೆ ಕೃಷ್ಣನು ತನ್ನ ಕಾಲುಗಳನಡುವೆ ಅವಿತುಕೊಂಡಿರುವುದನ್ನು ವಾಸನೆಯಿಂದ ಕಂಡುಕೊಂಡು, ತಿರುಗಿ ಅವನನ್ನು ಸೊಂಡಿಲಿನಿಂದ ಹಿಡಿಯಿತು. ಆಗಲೂ ಕೃಷ್ಣನು ಉಪಾಯದಿಂದ ತಪ್ಪಿಸಿಕೊಂಡು, ಅದರ ಹಿಂದಿನ ಕಾಲುಗಳನಡುವೆ ನುಗ್ಗಿ, ಹೊರಗೆಬಂದು,ಅದರ ಬಾಲವನ್ನು ಹಿಡಿದು, ಗರುಡನು ಸರ್ಪವನ್ನು ಹೇಗೋಹಾಗೆ, ಲೀಲೆಯಿಂದಲೇ ಅದನ್ನು ಇಪ್ಪತ್ತೈದುಬಿಲ್ಲಳತೆಯ ದೂರಕ್ಕೆ ಹಿಮ್ಮೊಗವಾಗಿಯೇ ದರದರನೆ ಎಳೆದುಕೊಂಡು ಹೋದನು. ಬಾಲಕರು ಸಣ್ಣಕರುಗಳನ್ನು ಎಳೆದಾಡುವಂತೆ ಕೃಷ್ಣನು,ಆ ಮಹಾಗಜದ ಬಾಲವನ್ನು ಹಿಡಿದು,ಅದು ಎಡಗಡೆಗೆ ತಿರುಗಿದಾಗ, ತಾನು ಬಲಗಡೆಗೆ ತಿರುಗುವುದು, ಅದು ಬಲಗಡೆಗೆ ತಿರುಗಿದಾಗ, ತಾನು ಎಡಗಡೆಗೆ ತಿರುಗುವುದು, ಹೀಗೆ ಬಹಳ ಹೊತ್ತಿನವರೆಗೆ ಅದನ್ನು ಚಕ್ರಾಕಾರವಾಗಿ ಸುತ್ತಿಸಿಬಿಟ್ಟನು. ಈ ಸುತ್ತಾಟದಲ್ಲಿಯೇ ಆ ಆನೆಗೆ ಅರ್ಧಶಕ್ತಿಯು ಕಳೆದುಹೋಯಿತು. ಆಮೇಲೆ ಕೃಷ್ಣನು ಅದಕ್ಕಿದಿರಾಗಿ ಬಂದು, ತನ್ನ ಅಂಗೈಯಿಂದ ಅದನ್ನು ಬಲವಾಗಿ ಅಪ್ಪಳಿಸಿದನು. ಮತ್ತು,ಆಗಾಗ ಅದರ ಕೈಗೆ ಸಿಕ್ಕುವಹಾಗೆ ನಿಲ್ಲುವುದು, ಅದು ಬಂದು ಸೊಂಡಿಲಿನಿಂದ ಮುಟ್ಟಿದೊಡನೆ ಓಡುವುದು, ಓಡುತ್ತಿರುವಾಗ ಆಯಾಸದಿಂದ ಕೆಳಕ್ಕೆ ಬಿದ್ದಹಾಗೆ ಮಲಗುವುದು, ಅದು ಸಮೀಪಕ್ಕೆ ಬಂದೊಡನೆ ಮೇಲೆದ್ದು ತಿರುಗಿ ಓಡುವುದು, ತನಗೆ ಅವಕಾಶವು ಸಿಕ್ಕಿದಾಗ ಅದನ್ನು ಕೈಯಿಂದಪ್ಪಳಿಸಿ ಕೆಳಕ್ಕೆ ಕೆಡಹುವುದು, ಅದು ಚೇತರಿಸಿಕೊಂಡು ಮೇಲೆದ್ದು ಬರುವವರೆಗೆ ತಾನೂ ಒಂದು ಕಡೆಯಲ್ಲಿ ಸುಮ್ಮನೆ ಮಲಗಿರುವುದು, ಈ ರೀತಿಯಾಗಿ ಬಹಳಹೊತ್ತಿನವರೆಗೆ ಅದರೊಡನೆ ಆಟವಾಡುತಿದ್ದನು. ಒಮ್ಮೆ ಕೃಷ್ಣನು ಕೆಳಗೆ

ಬಿದ್ದುಹಾಗೆ ಮಲಗಿರುವುದನ್ನು ನೋಡಿ,ಆ ಆನೆಯು ಅತಿಕೋಪಾವೇಶದಿಂದ ಬಂದು, ತನ್ನ ಕೊಂಬುಗಳಿಂದ ಅವನನ್ನಪ್ಪಳಿಸುವುದಕ್ಕೆ ಯತ್ನಿಸಿತು. ಇಷ್ಟರಲ್ಲಿ ಕೃಷ್ಣನು, ಉಪಾಯದಿಂದ ತಪ್ಪಿಸಿಕೊಂಡು ಓಡಿ ಹೋಗಲು, ಅದರ ಕೊಂಬುಗಳೆರಡೂ ನೆಲಕ್ಕೆ ತಗುಲಿ, ಮುರಿಯುವಂತಾದುವು. ಹೀಗೆ, ತನ್ನ ಪರಾಕ್ರಮವೆಲ್ಲವೂ ಆ ಕೃಷ್ಣನಮೇಲೆ ವಿಫಲವಾಗುತ್ತಿರುವುದನ್ನು ನೋಡಿ, ಆ ಆನೆಗೆ, ಮೇಲೆಮೇಲೆ ಕೋಪವು ಹೆಚ್ಚುತ್ತ ಬಂದಿತು. ಮಾವಟಿಗನೂ ಅದನ್ನು ಬಹಳವಾಗಿ ರೇಗಿಸಿ ಮುಂದೆ ಬಿಡುತ್ತಿದ್ದನು. ಆ ಕೋಪದಿಂದ ಕೃಷ್ಣನಮೇಲೆ ಬೀಳುವುದಕ್ಕಾಗಿ ಇದಿರುಬಿದ್ದುಬಂದಿತು. ಹೀಗೆ ವೇಗದಿಂದ ತನಗಿದಿರಾಗಿ ಬರುತ್ತಿರುವ ಆ ಆನೆಯನ್ನು ನೋಡಿ ಕೃಷ್ಣನು,ತಾನಾಗಿಯೇ ಅದಕ್ಕಿದಿರಾಗಿ ಮುಂದೆ ಬಂದು, ತನ್ನ ಕೈಯಿಂದ ಅದರ ಸುಂಡಿಲನ್ನು ಹಿಡಿದು, ತಿರುಚಿ ಕೆಳಕ್ಕೆ ಕೆಡಹಿದನು. ಸಿಂಹದಂತೆ ಅದನ್ನು ಕಾಲಿಂದ ಮೆಟ್ಟಿಕೊಂಡಮೇಲೆ, ಅದರ ಕೊಂಬುಗಳೆರಡನ್ನೂ ಕಿತ್ತುಕೊಂಡು, ಅದರಿಂದ ಮಾವಟಿಗನನ್ನೂ ಕೊಂದುಹಾಕಿದನು ಆಮೇಲೆ ಆ ಮೃತಶರೀರವನ್ನು ಅಲ್ಲಿಯೇ ಬಿಟ್ಟು, ಅದರ ಒಂದುಕೊಂಬನ್ನು ಭುಜದಮೇಲಿಟ್ಟುಕೊಂಡು, ಮಲ್ಲರಂಗಕ್ಕೆ ಪ್ರವೇಶಿಸಿದನು. ಆಗ ಕೃಷ್ಣನಿಗೆ, ಮೈಮೇಲೆ ಅಲ್ಲಲ್ಲಿ ಆನೆಯ ರಕ್ತಬಿಂದುಗಳೂ, ಅಲ್ಲಲ್ಲಿ ಮದಜಲದ ಗುರುತುಗಳೂ, ಮುಖದಲ್ಲಿ ಸಣ್ಣಸಣ್ಣ ಬೆವರಿನ ಹನಿಗಳೂ ಅಪೂರ್ವಶೋಭೆಯನ್ನುಂಟುಮಾಡುತಿದ್ದುವು. ರಾಮಕೃಷ್ಣರಿಬ್ಬರೂ ಹೀಗೆ ಆನೆಯ ದಂತವನ್ನೇ ಆಯುಧವಾಗಿ ಹಿಡಿದು, ಕೆಲವು ಗೋಪಬಾಲಕರೊಡಗೂಡಿ, ಮಲ್ಲರಂಗದ ಬಾಗಿಲನ್ನು ದಾಟಿ ಒಳಕ್ಕೆ ಬಂದರು. ಆಗ ಕೃಷ್ಣನು ರಂಗಸ್ಥಳದಲ್ಲಿ ತನ್ನನ್ನು ನೋಡತಕ್ಕ ಜಟ್ಟಿಗಳಿಗೆ ಸಿಡಿಲಿನಂತೆ ರೌದ್ರರಸವನ್ನೂ, ಸಾಮಾನ್ಯಮನುಷ್ಯರಿಗೆ ಮಹಾಪುರುಷನಂತೆ ಅದ್ಭುತರಸವನ್ನೂ, ಸ್ತ್ರೀಯರಿಗೆ ಮನ್ಮಥನಂತೆ ಮೋಹಜನಕನಾಗಿ ಶೃಂಗಾರರಸವನ್ನೂ, ಗೋಪಾಲಕರಿಗೆ ಬಂಧುವಿನಂತೆ ಪ್ರೇಮರಸವನ್ನೂ, ದುಷ್ಟಕ್ಷತ್ರಿಯರಿಗೆ ದಂಡಿಸತಕ್ಕ ಪ್ರಭುವಿನಂತೆ ವೀರರಸವನ್ನೂ, ತಂದೆತಾಯಿಗಳಿಗೆ ಮುದ್ದುಮಗುವಿನಂತೆ ಕರುಣರಸವನ್ನೂ, ಭೋಜರಾಜನಾದ ಕಂಸನಿಗೆ ಮೃತ್ಯುವಿನಂತೆ ಭಯಾನಕರಸವನ್ನೂ, ದೇಹಾತ್ಮಾಭಿಮಾ-

ನವುಳ್ಳ ಅಜ್ಞರಿಗೆ, ತಾನೊಬ್ಬಗೊಲ್ಲನಂತೆ ಹಾಸ್ಯರಸವನ್ನೂ, ಯೋಗಿಗಳಿಗೆ ಪರಮಾತ್ಮಸ್ವರೂಪದಿಂದ ಶಾಂತರಸವನ್ನೂ, ವೃಷ್ಣಿಕುಲದವರಿಗೆ ತಾನೇ ಪರದೇವತೆಯೆಂಬ, ಗೌರವವನ್ನೂ, ಹುಟ್ಟಿಸುತ್ತ ಬಲರಾಮಸಹಿತನಾಗಿ ಮಲ್ಲರಂಗದಲ್ಲಿ ನಿಂತಿದ್ದನು.

ಚಾಣೂರ ಮುಷ್ಟಿಕಾದಿಮಲ್ಲರನ್ನು ವಧಿಸಿದುದು.

ಇಷ್ಟರಲ್ಲಿ ಇತ್ತಲಾಗಿ ಕಂಸನಿಗೆ ಕುವಲಯಾಪೀಡವೆಂಬ ತನ್ನ ಮದದಾನೆಯು ಕೃಷ್ಣನಿಂದ ಹತವಾದ ವೃತ್ತಾಂತವು ತಿಳಿಯಿತು. ಆ ಕಂಸನು ಸಹಜವಾಗಿ ಧೀರನಾಗಿದ್ದರೂ, ರಾಮಕೃಷ್ಣರಿಬ್ಬರೂ ಅತಿದುರ್ಜಯವಾದ ಪರಾಕ್ರಮವುಳ್ಳವರೆಂದು ತೋರಿ, ಆಗಲೇ ಅವನ ಮನಸ್ಸಿಗೆ ಬಹಳ ಭಯವುಂಟಾಯಿತು. ಮಹಾಭುಜವುಳ್ಳ ಆ ಅಣ್ಣತಮ್ಮಂದಿರಿಬ್ಬರೂ, ರಂಗಸ್ಥಳದಲ್ಲಿ ಬಂದು ಕುಳಿ, ತಾಗು ಉತ್ತಮವೇಷಧಾರಿಗಳಾದ ನಟರಂತೆ, ಬೇರೆಬೇರೆ ಬಣ್ಣದ ವಸ್ತ್ರಾಭರಣಗಳಿಂದಲೂ, ಪುಷ್ಪಮಾಲಿಕೆಗಳಿಂದಲೂ ವಿಚಿತ್ರವೇಷವುಳ್ಳವರಾಗಿ, ದಿವ್ಯತೇಜಸ್ಸಿನಿಂದ ಸಮಸ್ತಜನರ ಮನಸ್ಸನ್ನೂ ಆಕರ್ಷಿಸುತಿದ್ದರು. ಮಲ್ಲಯುದ್ಧವನ್ನು ನೋಡುವುದಕ್ಕಾಗಿ ಅಲ್ಲಿಗೆ ಬಂದು ನೆರೆದಿದ್ದ ಪುರವಾಸಿಗಳೂ, ದೇಶವಾಸಿಗಳೂ, ಆ ಮಹಾಪುರುಷರ ಅದ್ಭುತರೂಪಕ್ಕೆ ಮರುಳಾಗಿ, ಅವರ ಮುಖಸೌಂದರ್ಯವನ್ನು ಎಷ್ಟೆಷ್ಟು ಪಾನಮಾಡಿದರೂ ತೃಪ್ತಿಯಿಲ್ಲದವರಂತೆ ನಟ್ಟ ಕಣ್ಣುಗಳಿಂದ ಅವರನ್ನೇ ನೋಡುತಿದ್ದರು. ಅಲ್ಲಿದ್ದ ಜನರೆಲ್ಲರೂ ಆ ರಾಮಕೃಷ್ಣರ ದಿವ್ಯಸೌಂದರ್ಯವನ್ನು ತಮ್ಮ ಕಣ್ಣುಗಳಿಂದ ಕುಡಿದು ಬಿಡುವಂತೆಯೂ, ನಾಲಗೆಯಿಂದ ನಕ್ಕುವಂತೆಯೂ, ತಮ್ಮ ಮೂಗಿನಿಂದ ಆಘ್ರಾಣಿಸುವಂತೆಯೂ, ತೋಳುಗಳಿಂದ ಆಲಿಂಗಿಸುವಂತೆಯೂ, ಆಶ್ಚರ್ಯದಿಂದ ಸ್ತಬ್ಧರಾಗಿ ನೋಡುತಿದ್ದರು. ಮತ್ತು ಅಲ್ಲಿದ್ದವರೆಲ್ಲರೂ, ಆ ರಾಮಕೃಷ್ಣರವಿಷಯವಾಗಿ ತಾವು ಹಿಂದೆ ಕಿವಿಯಿಂದ ಕೇಳಿಯೂ, ಪ್ರತ್ಯಕ್ಷವಾಗಿ ನೋಡಿಯೂ ಇದ್ದ ಅವರ ಗುಣಗಳನ್ನೂ, ರೂಪವನ್ನೂ, ಮಾಧುರ್ಯವನ್ನೂ, ಅಸಾಧಾರಣಸಾಮರ್ಥ್ಯವನ್ನೂ, ಆಗ ತಮ್ಮ ಮನಸ್ಸಿನಲ್ಲಿ ಭಾವಿಸುತ್ತ ಒಬ್ಬರಿಗೊಬ್ಬರು ಹೀಗೆಂದು ಗುಸುಗುಟ್ಟುವರು. “ಭಗವಂತನಾದ ಸಾಕ್ಷಾನ್ನಾರಾಯ

ಣನೇ ನಿಜಾಂಶದಿಂದ ವಸುದೇವನ ಮನೆಯಲ್ಲಿ ಈ ಬಾಲಕರಾಗಿ ಹುಟ್ಟಿರ ಬೇಕೇಹೊರತು, ಇವರನ್ನು ಸಾಮಾನ್ಯಬಾಲಕರೆಂದು ಹೇಳುವುದಕ್ಕಿಲ್ಲ ! ಅದೋ! ಅವನೇ ದೇವಕಿಯ ಗರ್ಭದಲ್ಲಿ ಜನಿಸಿದ ಕೃಷ್ಣನು! ಹು ಟ್ಟಿದೊಡನೆ ಗೋಕುಲದಲ್ಲಿಡಲ್ಪಟ್ಟು. ಇದುವರೆಗೂ ನಂದನ ಮನೆಯಲ್ಲಿ ಗೂಢವಾಗಿ ಬಳೆಯುತಿದ್ದವನು. ಇವನೇ ಪೂತನೆಯನ್ನು ಕೊಂದವನು! ತೃಣಾವರ್ತನೆಂಬ ರಾಕ್ಷಸನನ್ನು ಕೊಂದವನೂ ಇವನೇ! ಯಮಳಾರ್ಜುನಭಂ ಜನವೂ ಇವನಿಂದಲೇ ನಡೆಯಿತು! ಕೇಶಿ, ಧೇನುಕ, ಶಂಖಚೂಡರೆಂಬ ದಾ ನವರೂ ಇವನಿಂದಲೇ ಸಂಹೃತರಾದರು! ಈತನೇ ಗೋವುಗಳನ್ನೂ, ಗೋ ಪಾಲಕರನ್ನೂ ಕಾಡುಗಿಚ್ಚಿನಿಂದ ತಪ್ಪಿಸಿದವನು! ಕಾಳಿಯನೆಂಬ ಸರ್ಪವ ನ್ನು ಮೆಟ್ಟಿದವನೂ ಈತನೇ ! ಇಂದ್ರನ ಹೆಮ್ಮೆಯನ್ನು ಮುರಿದು, ಗೋವರ್ಧನಪರ್ವತವನ್ನು ಒಂದೇ ಕೈಯಿಂದ ಮೇಲಕ್ಕೆತ್ತಿ, ಮಳೆಗಾಳಿಗಳಿಂ ದ ಗೋಕುಲವನ್ನು ರಕ್ಷಿಸಿದ ಅದ್ಭುತಪರಾಕ್ರಮಿಯೂ ಇವನೇ ! ಮಂ ದಹಾಸಮನೋಹರವಾದ ತನ್ನ ಮುಖದ ಸೊಗಸಿನಿಂದ ಗೋಪಿಯರೆಲ್ಲರಿಗೂ ಮನಸ್ಸಂತಾಪವನ್ನು ನೀಗಿಸಿ, ಸಂತೋಷಗೊಳಿಸತಕ್ಕ ದಿವ್ಯಮೂರ್ತಿಯೂ ಇವನೇ ! ಇವನಿಂದಲೇ ಪ್ರಸಿದ್ಧವಾದ ಈ ಯದುವಂಶವು ಸುರಕ್ಷಿತವಾಗಿ, ಎಣೆಯಿಲ್ಲದ ಸೌಭಾಗ್ಯವನ್ನೂ, ಕೀರ್ತಿಯನ್ನೂ, ಗೌರವವನ್ನೂ ಪಡೆಯು ವುದೆಂದು ಹೇಳುವರು. ಅದೋ ! ಕಮಲದಂತೆ ಕಣ್ಣುಳ್ಳವನಾಗಿ ಅವನ ಪಕ್ಕದಲ್ಲಿ ನಿಂತಿರುವವನೇ ಅವನ ಅಣ್ಣನಾದ ಬಲರಾಮನು. ಇವನಿಂದ ಲೇ ಪ್ರಲಂಬ, ವತ್ಸ, ಧೇನುಕಾದಿರಾಕ್ಷಸರು ಹತರಾದರು." ಎಂದು ಅಲ್ಲಲ್ಲಿ ಜನರು ಗುಸುಗುತ್ತಿಟ್ಟುತ್ತಿದ್ದರು. ಉತ್ಸಾಹಜನಕಗಳಾದ ಯುದ್ಧತೂರ್ಯ ಗಳು ಮೊಳಗಿದುವು ! ಆಗ ಚಾಣೂರನು ರಾಮಲಕ್ಷ್ಮಣರಬಳಿಗೆ ಬಂ ದು, "ಕೃಷ್ಣಾ! ಬಲರಾಮಾ! ನೀವಿಬ್ಬರೂ ಬಹಳ ವೀರ್ಯವುಳ್ಳವರೆಂದೂ, ಜ ಟ್ಟಿಯ ಕಾಳಗದಲ್ಲಿ ನಿಪುಣರೆಂದೂ ಕೇಳಿ, ನಮ್ಮ ಪ್ರಭುವಾದ ಕಂಸ ನು, ನಿಮ್ಮ ಸಾಮರ್ಥ್ಯವನ್ನು ನೋಡಬೇಕೆಂಬ ಉದ್ದೇಶದಿಂದಲೇ ನಿಮ್ಮಿಬ್ಬ ರನ್ನೂ ಇಲ್ಲಿಗೆ ಕರೆಸಿರುವನು. ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂ ದಲೂ ರಾಜನಿಗೆ ಪ್ರಿಯವನ್ನುಂಟುಮಾಡತಕ್ಕ ಪ್ರಜೆಗಳಿಗೆ ಸರ್ವವಿಧದಿಂದ

ಲೂ ಶ್ರೇಯಸ್ಸುಂಟು. ಹಾಗಿಲ್ಲದೆ ರಾಜನಿಗೆ ಅಪ್ರಿಯವನ್ನುಂಟುಮಾಡತಕ್ಕವರು, ಅನೇಕವಿಧವಾದ ಅಶ್ರೇಯಸ್ಸಿಗೆ ಗುರಿಯಾಗುವರು. ಈಗ ನೀವು ಮಲ್ಲಯುದ್ಧದಲ್ಲಿ ನಮಗೆ ಪರಿಚಯವಿಲ್ಲ" ವೆಂದು ಅಪಲಪಿಸುವುದಕ್ಕೂ ಅವಕಾಶವಿಲ್ಲ! ಏಕೆಂದರೆ, ನೀವು ಸಣ್ಣಕರುಗಳನ್ನು ಮೇಯಿಸುವುದಕ್ಕೆ ತೊಡಗಿದುದುಮೊದಲು, ದೊಡ್ಡದೊಡ್ಡ ಮಂದೆಗಳನ್ನು ಮೇಯಿಸಿಕೊಂಡು ಬರುತ್ತಿರುವ ಈ ವಯಸ್ಸಿನವರೆಗೂ, ಪ್ರತಿದಿನವೂ ಎಷ್ಟೋ ಅಸಾಧ್ಯ ಕಾರ್ಯಗಳನ್ನು ನಡೆಸಿರುವಿರಿ ! ಇದುವರೆಗೆ ನೀವು, ಕಾಡುಗಳಲ್ಲಿ ಮಂದೆಯನ್ನು ಕಾಯುತ್ತಿರುವಾಗಲೇ, ಎಷ್ಟೋವಿಧದಿಂದ ನಿಮ್ಮ ಮಲ್ಲಯುದ್ಧದ ನೈಪುಣ್ಯವನ್ನು ತೋರಿಸಿರುವಿರಿ ! ಇದರಿಂದ ನೀವು ಯುದ್ಧನಿಪುಣರೆಂಬುದು ನಮ್ಮೆಲ್ಲರಿಗೂ ಚೆನ್ನಾಗಿ ತಿಳಿದಿರುವುದು. ಆದುದರಿಂದ ಈಗ ನೀವೂ ನಾವೂ ಸೇರಿ,ನಮ್ಮ ಪ್ರಭುವಾದ ಕಂಸರಾಜನಿಗೆ ಮನಸ್ಸಂತೋಷವನ್ನುಂಟುಮಾಡಬೇಕು ! ರಾಜನಿಗೆ ಪ್ರಿಯವನ್ನುಂಟುಮಾಡುವುದರಿಂದ ಸಮಸ್ತಭೂತಗಳೂ ಪ್ರಸನ್ನವಾಗುವುವು. ಏಕೆಂದರೆ, ರಾಜನು ಸರ್ವಭೂತಮಯನೆಂದು ಶಾಸ್ತ್ರಗಳು ವಿಧಿಸಿರುವುವು.ಮುಂದೆ ಬಂದು ನಿಲ್ಲಿರಿ"ಎಂದನು. ಕೃಷ್ಣನಿಗೂ ಅದೇ ಉದ್ದೇಶವಿದ್ದುದರಿಂದ, ಚಾಣೂರನಮಾತಿಗೆ ಮನಸ್ಸಿನಲ್ಲಿ ಸಂತೋಷಪಡುತ್ತ, ಹೊರಕ್ಕೆಮಾತ್ರ, ದೇಶಕಾಲೋಚಿತವಾಗಿ ಹೀಗೆಂದು ಹೇಳುವನು. "ಓ ಚಾಣೂರಾ! ನೀನು ಹೇಳಿದುದು ವಾಸ್ತವವು! ನಾವು ಮನೆಮಠಗಳಿಲ್ಲದೆ ಕಾಡಿನಲ್ಲಿ ವಾಸಮಾಡತಕ್ಕವರಾಗಿದ್ದರೂ, ನಾವೂ ಈ ಕಂಸರಾಜನ ಪ್ರಜಾವರ್ಗಕ್ಕೇ ಸೇರಿದವರು. ಈ ರಾಜನ ಮನಸ್ಸಿಗೆ ಪ್ರಿಯವನ್ನುಂಟುಮಾಡಬೇಕಾದುದೇ ನಮ್ಮೆಲ್ಲರ ಮುಖ್ಯಕಾರ್ಯವು ! ಇಂತಹ ರಾಜನ ಪ್ರೀತಿಯನ್ನು ಸಂಪಾದಿಸುವುದೇ ನಮಗೆ ಪರಮಾನುಗ್ರಹವೆಂಬುದರಲ್ಲಿ ಸಂದೇಹವೇನಿದೆ? ಆದರೆ ನಾವಾದರೋ ಇನ್ನೂ ಬಾಲಕರು! ವಯಸ್ಸಿನಲ್ಲಿಯೂ, ದೇಹಬಲದಲ್ಲಿಯೂ ನಮಗೆ ಸಮಾನರಾದವರೊಡನೆ ಕೈಕಲೆತು ನಿಲ್ಲಬಹುದೇ ಹೊರತು, ನಮಗಿಂತಲೂ ಎಷ್ಟೋ ಬಲಾಢ್ಯರಾದ ನಿಮ್ಮಂತವರೊಡನೆ ಇದಿರಿಸಿ ನಿಲ್ಲಬಲ್ಲೆವೆ?ಆದುದರಿಂದ ನಮಗೆ ಸಮಾನಸ್ಕಂಧರಾದವರನ್ನೇ ನಿಲ್ಲಿಸಿ, ಯೋಗ್ಯವಾದ ರೀತಿಯಲ್ಲಿ ಬಾಹುಯುದ್ಧವನ್ನು ನಡೆಸುವುದಾದರೆ

ನಾವು ಸಿದ್ಧರಾಗಿರುವೆವು. ಮುಖ್ಯವಾಗಿ ಇಲ್ಲಿ ನೆರೆದು ನೋಡತಕ್ಕ ಸಭಾಜನರಿಗೆ ಅಧರ್ಮವು ತಟ್ಟದಂತೆ, ಈಗಿನ ಕಾಳಗವನ್ನು ನ್ಯಾಯರೀತಿಯಿಂದ ನಡೆಸಬೇಕಾದುದು ನಿಮ್ಮ ಕಾರ್ಯವು" ಎಂದನು. ಅದಕ್ಕಾ ಚಾಣೂರನು "ನಂದಕುಮಾರಾ! ಸಾಕು ಸುಮ್ಮನಿರು! ಅಯ್ಯೋ ಪಾಪ! ಇನ್ನೂ ನೀವು ಎಳೇಮಕ್ಕಳಲ್ಲವೆ? ಇನ್ನೂ ನೀವು, ನಿಮ್ಮನ್ನು ಅರಿಯದಬಾಲಕರೆಂದೇ ತಿಳಿದುಕೊಂಡಿರುವಹಾಗಿದೆ, ಈ ನಡುಪ್ರಾಯದಲ್ಲಿರುವ ನಿಮ್ಮನ್ನು ಯಾರುತಾನೇ ಬಾಲಕರೆಂದು ಹೇಳುವರು? "ವಯಸ್ಸಾದಮಾತ್ರಕ್ಕೆ ಅದಕ್ಕೆ ತಕ್ಕಂತೆ ದೇಹಬಲವಿರಬೇಡವೆ?" ಎಂದು ಕೇಳುವಿರೇನು? ಬಲಾಢ್ಯರೊಳಗೆಲ್ಲಾ ನಿನ್ನನ್ನೇ ಅತಿಬಲಾಢ್ಯನೆಂದು ಹೇಳಬಹುದು. ಸಾವಿರಾನೆಗಳ ಬಲವುಳ್ಳ ನಮ್ಮ ಮದದಾನೆಯನ್ನು ಲೀಲಾಮಾತ್ರದಿಂದ ಸಂಹರಿಸಿ ಬಂದ ನೀನು, ಈಗ ಕೈಲಾಗದವನೆಂದು ಹೇಳಿದರೆ, ಯಾರುತಾನೇ ನಂಬುವರು? ಆದುದರಿಂದ ನೀವು ನಮ್ಮಂತವರೊಡನೆಯೇ ಯುದ್ಧಕ್ಕೆ ನಿಲ್ಲಬೇಕು. ಇದರಿಂದ ಅಧರ್ಮವುಂಟಾಗದು! ನೀನು ನನಗಿದಿರಾಗಿ ನಿಲ್ಲು! ನಿನ್ನಣ್ಣನಾದ ಬಲರಾಮನು ಈ ಮುಷ್ಟಿಕನೊಡನೆ ಕಾಳಗಕ್ಕೆ ನಿಲ್ಲಲಿ!"ಎಂದನು. ಇದು ನಾಲ್ವತ್ತುಮೂರನೆಯ ಅಧ್ಯಾಯವು.

---

## ಕೃಷ್ಣಬಲರಾಮರು ಚಾಣೂರಮುಷ್ಟಿಕಾದಿಮಲ್ಲರನ್ನು ಕೊಂದುದು.

ಹೀಗೆ ಕೃಷ್ಣನು ಚಾಣೂರನೊಡನೆ ಚರ್ಚಿಸುವುದರಿಂದ, ತನ್ನ ಉದ್ದೇಶವನ್ನು ಚೆನ್ನಾಗಿ ಸ್ಥಿರಪಡಿಸಿಕೊಂಡಮೇಲೆ, ಅವನಿಗಿದಿರಾಗಿ ನಿಂತನು. ಬಲರಾಮನು ಮುಷ್ಟಿಕನಿಗಿದಿರಾಗಿ ನಿಂತನು. ಮಲ್ಲಯುದ್ಧಕ್ಕೆ ಆರಂಭವಾಯಿತು. ಒಬ್ಬರನ್ನೊಬ್ಬರು ಜಯಿಸಬೇಕೆಂಬ ಹಟದಿಂದ, ಕೈಗೆ ಕೈಯನ್ನು ಪೋಣಿಸುವುದು, ಕಾಲಿಗೆ ಕಾಲನ್ನು ತೊಡರುಹಾಕುವುದು, ಮತ್ತು ಮೊಳಕೈಗೆ ಮೊಳಕೈ, ಮೊಳಕಾಲಿಗೆ ಮೊಳಕಾಲು, ತಲೆಗೆ ತಲೆ, ಎದೆಗೆ ಎದೆ, ಹೀಗೆ ಆಯಾಅವಯವಗಳಿಗೆ ಆದೇ ಅವಯವಗಳನ್ನೊಡ್ಡಿ, ಗುದ್ದಾಡುತಿದ್ದರು. ಮತ್ತು ಯುದ್ಧನೈಪುಣ್ಯದಿಂದ ಒಬ್ಬರನ್ನೊಬ್ಬರು ಹಿಡಿದು·

ಗಿರಗಿರನೆ ಸುತ್ತಿಸುವುದು, ಒಬ್ಬರನ್ನೊಬ್ಬರು ಮೇಲಕ್ಕೆತ್ತಿ ಬಿಸುಡುವುದು, ಅಲ್ಲಾಡುವುದಕ್ಕೆ ಸಾಧ್ಯವಿಲ್ಲದಂತೆ ಒಬ್ಬರನ್ನೊಬ್ಬರು ಬಿಗಿಯಾಗಿ ಅಪ್ಪಿಹಿಡಿಯುವುದು,ಕೆಳಕ್ಕೆ ಕೆಡಹುವುದು, ಮುಂದೆ ಬರುವುದು, ಬೆನ್ನಹಿಂದೆ ನಿಲ್ಲುವುದು, ಹೀಗೆನಾನಾತರದ ವರಿಸೆಗಳಿಂದ ಒಬ್ಬರನ್ನೊಬ್ಬರು ಮೇಲೆ ಬೀಳದಹಾಗೆ ತಡೆಯುತಿದ್ದರು.ಮತ್ತು ಕುಳಿತವನನ್ನು ಮೇಲಕ್ಕೆಬ್ಬಿಸುವುದು, ಎದ್ದವನನ್ನು ಕೈಯಿಂದೆತ್ತುವುದು, ಒಬ್ಬರನ್ನೊಬ್ಬರು ಮೈಹಿಡಿದಾಡಿಸುವುದು,ಅಲ್ಲಾಡದಹಾಗೆ ಕೈಕಾಲುಗಳನ್ನು ಹಿಡಿದು ನಿಲ್ಲಿಸುವುದು, ಹೀಗೆ ಹಠದಿಂದ ಮೈಮುರಿದು ಹೋರಾಡುತಿದ್ದರು. ಬಾಲಕರಾದ ಆರಾಮಕೃಷ್ಣರಿಬ್ಬರೂ, ಮೈಕೊಬ್ಬಿಬೆಳೆದ ಜಟ್ಟಿಗಳೊಡನೆ ಹೋರಾಡುತ್ತಿರುವುದನ್ನುನೋಡಿ, ಅಲ್ಲಿ ನೆರೆದಿದ್ದ ಸ್ತ್ರೀಯರೆಲ್ಲರೂ ಪರಿತಾಪಪಡುತ್ತ “ಛೀ! ಇದು ಬಹಳ ಅನ್ಯಾಯವು! ಈ ರಾಜನು ದಾಂಡಿಗರಾದ ಈ ಜಟ್ಟಿಗಳೊಡನೆ ಈ ಸಣ್ಣಬಾಲಕರನ್ನು ನಿಲ್ಲಿಸಿ ಯುದ್ಧಮಾಡಿಸುತ್ತಿರುವಾಗಲೂ,ಇಲ್ಲಿನ ಸಭಿಕರಲ್ಲಿ,ಯಾರೊಬ್ಬರೂ ಬಾಯೆತ್ತದೆ ಸುಮ್ಮನೆ ನೋಡುತ್ತಿರುವರಲ್ಲಾ! ಏನನ್ಯಾಯವಿದು! ಬೆಟ್ಟದಂತೆ ಮೈಕೊಬ್ಬಿಬೆಳೆದು ವಜ್ರದೇಹವುಳ್ಳ ಈ ಜಟ್ಟಿಗಳೆಲ್ಲಿ! ಇನ್ನೂ ಯೌವನಾರಂಭವಿಲ್ಲದೆ ಸುಕುಮಾರವಾದ ಮೈಯುಳ್ಳ ಈ ಬಾಲಕರೆಲ್ಲಿ! ಇಲ್ಲಿ ನೋಡುತ್ತಿರುವ ಸಭಿಕರಿಗೆ. ಇದರಿಂದ ಧರ್ಮಾತಿಕ್ರಮದೋಷವು ಎಂದಿಗೂ ತಪ್ಪಲಾರದು! ಹೀಗೆ ಅಧರ್ಮವು ನಡೆಯತಕ್ಕ ಸ್ಥಳದಲ್ಲಿ ಕ್ಷಣಮಾತ್ರವೂ ನಿಲ್ಲಬಾರದು. ಸಭ್ಯರಲ್ಲಿ ದೋಷವುಂಟೆಂದು ತಿಳಿದಮೇಲೆ,ಬುದ್ಧಿಶಾಲಿಯಾದವನು ಅಂತಹ ಸಭೆಗಳಿಗೆ ಪ್ರವೇಶಿಸಲೇಬಾರದು! ಏಕೆಂದರೆ, ಒಬ್ಬರಲ್ಲಿರುವ ದೋಷವನ್ನು ತಿಳಿದಮೇಲೆಯೂ, ಅದನ್ನು ಹೇಳದಿದ್ದರೆ, ಅಥವಾ ಮುಖದಾಕ್ಷಿಣ್ಯಕ್ಕಾಗಿ ವಿಪರೀತವಾಗಿ ಹೇಳಿದರೆ, ಅದರಿಂದ ಬಹಳ ಪಾಪವುಂಟು! ಓ ಸಖೀ! ಈ ಧರರ್ಮಾಧರ್ಮವಿಚಾರವು ಹಾಗಿರಲಿ! ಶತ್ರುವಿಗಿದಿರಾಗಿ ಸುತ್ತಾಡುವುದರಿಂದ, ನಮ್ಮ ಕೃಷ್ಣನ ಮುದ್ದುಮುಖವು ಎಷ್ಟು ಬಾಡಿಹೋಗಿರುವುದು ನೋಡು! ಕಮಲದಲ್ಲಿ ಮಕರಂದಬಿಂದುವಿನಂತೆ ಅವನ ಮುಖದಲ್ಲಿ ಬೆವರಿನ ಹನಿಗಳು ಹೇಗೆ ತೊಟ್ಟಿಕ್ಕುತ್ತಿರುವುವು ನೋಡು!ಓ ಸಖಿಯರೆ! ಅದೋ! ಅಲ್ಲಿ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ,

ಮುಷ್ಟಿಕನಿದಿರಿಗೆ ನಿಂತಿರುವ ಬಲರಾಮನನ್ನು ನೋಡಲಿಲ್ಲವೆ? ಕೋಪಗ ರ್ಭವಾದ ಮಂದಹಾಸದಿಂದ ಸುಂದರವಾದ ಅವನ ಮುಖವು, ಎಷ್ಟು ಮುದ್ದು ಬೀರುತ್ತಿರುವುದು ನೋಡಿರಿ! ಆಹಾ! ಮಹಾಲಕ್ಷ್ಮಿಯಿಂದಲೂ, ರುದ್ರನಿಂ ದಲೂ ಪೂಜಿಸಲ್ಪಟ್ಟ ಪಾದಾರವಿಂದಗಳುಳ್ಳ ಸಾಕ್ಷಾತ್ಪುರಾಣಪುರುಷನೇ, ಮನುಷ್ಯಾಕೃತಿಯಿಂದ ತನ್ನ ಪರಸ್ವರೂಪವನ್ನು ಮರೆಸಿಕೊಂಡು, ಕಾಡು ಹೂವಿನ ದಂಡೆಯನ್ನು ಕೊರಲಲ್ಲಿ ಧರಿಸಿ, ದನಗಳನ್ನು ಮೇಯಿಸುತ್ತ, ತನಗೆ ವಿಹಾರಸ್ಥಾನವನ್ನಾಗಿ ಮಾಡಿಕೊಂಡಿರುವ ಆ ಗೋಕುಲಪ್ರದೇಶಕ್ಕಿಂತಲೂ ಪವಿತ್ರವಾದ ಪ್ರದೇಶವುಂಟೆ? ಅಂತಹ ಮಹಾತ್ಮನನ್ನು ಪರಿಭವಿಸುವುದ ಕ್ಕಾಗಿ ಕಂಸನು ಏರ್ಪಡಿಸಿರುವ ಈ ಮಲ್ಲರಂಗವನ್ನು ಸುಡಬೇಕಲ್ಲವೆ! ಲಾ ವಣ್ಯನಿಧಿಯಾಗಿಯೂ, ನಿಸ್ಸಮಾಭ್ಯಧಿಕವಾಗಿಯೂ, ಯಶಸ್ಸಿಗೂ, ಸಂಪ ತ್ತಿಗೂ, ಐಶ್ವರ್ಯಕ್ಕೂ ಮುಖ್ಯಸ್ಥಾನವಾಗಿಯೂ, ಪುಣ್ಯಹೀನರಿಗೆ ದುರ್ಲಭ ವಾಗಿಯೂ, ನೋಡುವವರಿಗೆ ಕ್ಷಣಕ್ಷಣಕ್ಕೂ ಹೊಸದಾಗಿ, ಪ್ರೀತಿಯನ್ನು ಹುಟ್ಟಿಸತಕ್ಕುದಾಗಿಯೂ ಇರುವ ಈ ಕೃಷ್ಣನ ದಿವ್ಯಾದ್ಭುತರೂಪವನ್ನು ಅನವರತವೂ ಕಣ್ಣಾರೆ ನೋಡಿ ಅನುಭವಿಸುತ್ತಿರುವ ಗೋಪಿಯರು ಪೂರ್ವ ಜನ್ಮದಲ್ಲಿ ಎಂತಹ ತಪಸ್ಸನ್ನು ಮಾಡಿದರೋ,? ಹಾಲುಕರೆಯುವುದು, ನೀರನ್ನು ಹೊತ್ತುತರುವುದು, ಮೊಸರುಕಡೆಯುವುದು, ಮನೆಯನ್ನು ಸಾರಿ ಸುವುದು, ತೊಟ್ಟಿಲಾಡಿಸುವುದು, ಅಳುವ ಮಕ್ಕಳನ್ನು ಸಮಾಧಾನಪಡಿಸು ವುದು, ಮಕ್ಕಳಿಗೆ ನೀರೆರೆಯುವುದು, ಕಸಬಳಿಯುವುದು, ಮುಂತಾದ ಮನೆ ಕೆಲಸಗಳಲ್ಲಿರುವಾಗಲೂ, ಅವರು, ಆಕೃಷ್ಣನಲ್ಲಿಯೇ ನಟ್ಟ ಮನಸ್ಸುಳ್ಳವರಾಗಿ, ಅವನ ಧ್ಯಾನಾನಂದದಿಂದ ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುವರು! ಗದ್ಗದಕಂಠದೊಡನೆ ಅವನ ವಿಷಯವಾದ ಹಾಡುಗಳನ್ನೇ ಹಾಡುವರು! ಆ ಗೋಪಾಂಗನೆಯರಲ್ಲವೇ ಪರಮಧನ್ಯರು! ಬೆಳಿಗ್ಗೆ ಕೃಷ್ಣನು ದನಗಳನ್ನಟ್ಟಿ ಕೊಂಡು ಕಾಡಿಗೆ ಹೊರಡುವಾಗಲೂ, ಸಾಯಂಕಾಲದಲ್ಲಿ ಹಿಂತಿರುಗಿಬರು ವಾಗಲೂ, ಅವನ ವೇಣುಧ್ವನಿಯನ್ನು ಕೇಳಿದೊಡನೆ, ಮನೆಯೊಳಗಿಂದ ಬೇ ಗನೆ ಹೊರಗೆ ಬಂದು, ಮಂದಹಾಸದಿಂದಲೂ, ದಯಾದೃಷ್ಟಿಯಿಂದಲೂ ಕೂಡಿದ ಆ ಕೃಷ್ಣನ ಮುಖವನ್ನು ನೋಡತಕ್ಕ ಗೋಪಿಯರ ಭಾಗ್ಯಕ್ಕಿಂತ

ಲೂ ಭಾಗ್ಯವುಂಟೆ ?" ಎಂದು ಅಲ್ಲಿ ನೆರೆದಿದ್ದ ಸ್ತ್ರೀಯರೆಲ್ಲರೂ ಅಲ್ಲಲ್ಲಿ ಗುಂಪು ಗುಂಪಾಗಿಸೇರಿ ಮಾತಾಡಿಕೊಳ್ಳುತಿದ್ದರು. ಹೀಗೆ ಸ್ತ್ರೀಯರು, ಪಶ್ಚಾತ್ತಾಪದಿಂದ ಗುಸುಗುಟ್ಟುತ್ತಿರುವುದನ್ನು ನೋಡಿ, ಕೃಷ್ಣನಿಗೆ ಶತ್ರುವನ್ನು ಶೀಘ್ರದಲ್ಲಿ ಕೊಂದುಬಿಡಬೇಕೆಂಬ ಉದ್ದೇಶವು ಹುಟ್ಟಿತು ! ರಾಮಕೃಷ್ಣರ ಶಕ್ತಿಯೇನೆಂಬುದನ್ನು ತಿಳಿಯದೆ, ಮೊದಲೇ ಪುತ್ರಮೋಹದಿಂದ ಕುದಿಯುತಿದ್ದ ನಂದಾದಿಗಳಿಗೆ, ಈ ಸ್ತ್ರೀಯರು ಆಡಿಕೊಳ್ಳುತಿದ್ದ ಮಾತನ್ನು ಕೇಳಿ ಮತ್ತಷ್ಟು ಭೀತಿ ಹುಟ್ಟಿತು. ಒಂದುಕಡೆಯಲ್ಲಿ ಕೃಷ್ಣಚಾಣೂರರೂ, ಮತ್ತೊಂದುಕಡೆಯಲ್ಲಿ ಬಲರಾಮಮುಷ್ಟಿಕರೂ ಯುದ್ಧಚಾತುರ್ಯವನ್ನು ತೋರಿಸುತಿದ್ದರು. ವಜ್ರಪಾತಗಳಿಗೆ ಸಮಾನವಾದ ಕೃಷ್ಣನ ಅವಯವಗಳ ಪ್ರಹಾರದಿಂದ, ಚಾಣೂರನ ದೇಹವೆಲ್ಲವೂ ಜರ್ಝರಿತವಾಗಿ, ಅವನ ಪ್ರಾಣವು ಕುಗ್ಗುತ್ತಬಂದಿತು! ಅವನಿಗೆ ದೇಹದಲ್ಲಿ ಶಕ್ತಿಯು ಕುಗ್ಗುತ್ತ ಬಂದ ಹಾಗೆಲ್ಲಾ ಕೋಪವೂ ಹೆಚ್ಚುತ್ತಬಂದಿತು. ಈ ಕೋಪದಿಂದ ಚಾಣೂರನು, ತನ್ನ ಎರಡು ಕೈಗಳಲ್ಲಿಯೂ ವಜ್ರಮುಷ್ಟಿಯನ್ನು ಜೋಡಿಸಿ ಗಿಡುಗನಂತೆ ವೇಗದಿಂದ ಹಾರಿಬಂದು, ಕೃಷ್ಣನ ಎದೆಯಮೇಲೆ ಅಪ್ಪಳಿಸಿದನು. ಆದರೇನು ? ಪುಷ್ಪಮಾಲಿಕೆಯಿಂದ ಪ್ರಹರಿಸಲ್ಪಟ್ಟ ಮದದಾನೆಯಂತೆ, ಕೃಷ್ಣನು, ಆ ಪ್ರಹಾರದಿಂದ ಸ್ವಲ್ಪಮಾತ್ರವೂ ಚಲಿಸದೆ ನಿಂತಿದ್ದನು. ಅಲ್ಲದೆ, ಮೇಲೆಬಿದ್ದು ಬಂದ ಚಾಣೂರನ ತೋಳುಗಳನ್ನು ಹಿಡಿದು, ಅನೇಕಾವರ್ತಿ ಗಿರಗಿರನೆ ತಿರುಗಿಸಿ, ಅದರಿಂದಲೇ ಗತಪ್ರಾಣನಾದ ಆತನ ದೇಹವನ್ನು ನೆಲದಲ್ಲಿ ಕುಕ್ಕಿ ಕಾಲಿಂದ ಮರ್ದಿಸಿದನು. ಆಗ ಕದಲಿದ ಪುಷ್ಪಾಭರಣಗಳೊಡನೆ ತಲೆಕೆದರಿ ಕೆಳಗೆಬಿದ್ದ ಚಾಣೂರನು, ಮುರಿದುಬಿದ್ದ ಇಂದ್ರಧ್ವಜದಂತೆ ಕಾಣುತಿದ್ದನು. ಹೀಗೆಯೇ ಅತ್ತಲಾಗಿ ಬಲರಾಮಮುಷ್ಟಿಕರಿಬ್ಬರೂ ಯುದ್ಧಮಾಡುತ್ತಿರುವಾಗ, ಮುಷ್ಟಿಕನು ಕೋಪದಿಂದ ಮೇಲೆ ಬಿದ್ದುಬರಲು, ಬಲರಾಮನು, ಒಂದೇ ಮುಷ್ಟಿಪ್ರಹಾರದಲ್ಲಿ ಅವನನ್ನು ಕೆಳಕ್ಕೆ ಕೆಡಹಿದನು. ಬಲರಾಮನ ತಲಪ್ರಹಾರದಿಂದ ಮುಷ್ಟಿಕನು ಬಾಯಲ್ಲಿ ರಕ್ತವನ್ನು ಕಕ್ಕುತ್ತ, ಬಿರುಗಾಳಿಯಿಂದ ಮುರಿದು ಬಿದ್ದ ಮರದಂತೆ ಸತ್ತುಕೆಳಗೆ ಬಿದ್ದನು. ಆಮೇಲೆ ಕೂಟನೆಂಬ ಜಟ್ಟಿಯು,ಮೇಲೆಬಿದ್ದು ಬರುತ್ತಿರಲು, ಬಲರಾ



೨೦೪೫. ಕಂಸವಧವು.

ಮನು, ತನ್ನ ಎಡಗೈಯ ಮುಷ್ಟಿಯಿಂದಲೇ ಅವನನ್ನು ಲೀಲಾಮಾತ್ರದಿಂದ ವಧಿಸಿದನು. ಆಮೇಲೆ ಶಲ ತೋಸಲಕರೆಂಬ ಜಟ್ಟಿಗಳಿಬ್ಬರೂ ಮುಂದೆ ಬಂದುಸಿಲ್ಲಲು, ಕೃಷ್ಣನು ಅವರಿಬ್ಬರನ್ನೂ ತನ್ನ ಕಾಲಿಂದ ಮೆಟ್ಟಿ, ಅವರ ದೇಹವನ್ನು ಎರಡುತುಂಡಾಗಿ ಮಾಡಿ ಬಿಸಾಡಿದನು. ಹೀಗೆ ಚಾಣೂರ, ಮುಷ್ಟಿಕ, ಕೂಟ, ಶಲ, ತೋಸಲಕರೆಂಬ ಪ್ರಬಲರಾದ ಐದುಮಂದಿ ಜಟ್ಟಿಗಳೂ ಕ್ರಮವಾಗಿ ರಾಮಕೃಷ್ಣರಿಂದ ಹತರಾದುದನ್ನು ನೋಡಿ, ಅಲ್ಲಿಗೆ ಯುದ್ಧೋದ್ಯುಕ್ತರಾಗಿ ಬಂದಿದ್ದ ಬೇರೆ ಜಟ್ಟಿಗಳೆಲ್ಲರೂ, ತಮ್ಮ ಪ್ರಾಣವುಳಿದರೆ ಸಾಕೆಂದು ತಲೆತಪ್ಪಿಸಿಕೊಂಡು ಓಡಿಹೋದರು! ಆಮೇಲೆ ರಾಮಕೃಷ್ಣರಿಬ್ಬರೂ ತಮ್ಮ ಸಹಚರರಾದ ಗೋಪಾಲಬಾಲಕರನ್ನು ಸಮೀಪಕ್ಕೆ ಕರೆದು, ಅವರೊಡನೆ ವಿನೋದದಿಂದ ಮಾತಾಡುತಿದ್ದರು. ಅನೇಕಜನರು ರಾಮಕೃಷ್ಣರ ಸುತ್ತುಮುತ್ತಲೂ ನೆರೆದು, ವಿಜಯಘೋಷಗಳಿಂದಲೂ, ಮಂಗಳವಾದ್ಯಗಳಿಂದಲೂ, ತಮ್ಮ ಸಂತೋಷವನ್ನು ಸೂಚಿಸುತಿದ್ದರು. ಕಂಸನೊಬ್ಬನುಹೊರತು ಪ್ರಾಯಕವಾಗಿ ಅಲ್ಲಿದ್ದ ಸಮಸ್ತಜನರೂ, ರಾಮಕೃಷ್ಣರ ಪರಾಕ್ರಮಕ್ಕೆ ಸಂತೋಷಪಟ್ಟು "ಕೃಷ್ಣಾ! ರಾಮಾ! ಭಲೆ! ಶಹಬಾಸು!" ಎಂದು ಸಾಧುವಾದಗಳನ್ನು ಮಾಡುತಿದ್ದರು.

### ಕಂಸವಧಘಟ್ಟವು.

ಹೀಗೆ ರಾಮಕೃಷ್ಣರಿಂದ ತನ್ನ ಕಡೆಯ ಪ್ರಧಾನವೀರರೆಲ್ಲರೂ ಹತರಾಗಿ, ಉಳಿದ ಜಟ್ಟಿಗಳೆಲ್ಲರೂ ಭಯದಿಂದೋಡಿದುದನ್ನು ನೋಡಿ, ಕಂಸನಿಗೆ ಸಹಿಸಲಾರದ ಸಂಕಟವುಂಟಾಯಿತು. ಆ ಮಲ್ಲರಂಗದಲ್ಲಿ ನಡೆಯುತಿದ್ದ ತನ್ನ ಕಡೆಯ ವಾದ್ಯಗಳನ್ನೂ, ಕೋಲಾಹಲಧ್ವನಿಯನ್ನೂ, ಆ ಕ್ಷಣವೇ ನಿಲ್ಲಿಸಿಬಿಟ್ಟು, ಅಲ್ಲಿದ್ದವರೆಲ್ಲರೂ ಕೇಳುತ್ತಿರುವಹಾಗೆ, ತನ್ನ ದೂತರನ್ನು ಕರೆದು ಹೀಗೆಂದು ಹೇಳುವನು. "ಎಲೈ ದೂತರೆ! ದುಷ್ಟರಾದ ಈ ವಸುದೇವಪುತ್ರರಿಬ್ಬರನ್ನೂ ಈಕ್ಷಣವೇ ನಮ್ಮ ಪುರದಿಂದ ಹೊರಕ್ಕೆ ಹೊರಡಿಸಿರಿ! ಗೋಪಾಲಕರ ಧನವೆಲ್ಲವನ್ನೂ ಸೂರೆಮಾಡಿರಿ! ದುರ್ಬುದ್ಧಿಯಾದ ಈ ನಂದನನ್ನು ಬಂಧಿಸಿ ಸೆರೆಯಲ್ಲಿಡಿರಿ! ನೀಚನಾದ ವಸುದೇವನನ್ನು ಈಕ್ಷಣವೇ ಹಿಡಿದು ವಧಿಸಿರಿ! ನನ್ನ ತಂದೆಯಾದ ಉಗ್ರಸೇನನೂಕೂಡ, ಶತ್ರುಗಳ

ವಿಷಯದಲ್ಲಿಯೇ ಪಕ್ಷಪಾತವನ್ನು ತೋರಿಸುತ್ತಿರುವುದರಿಂದ, ಅವನನ್ನೂ, ಅವನ ಅನುಚರರನ್ನೂ ಶಂಕೆಯಿಲ್ಲದೆ ಸಂಹರಿಸಿರಿ!" ಎಂದನು. ಹೀಗೆ ಕಂಸನು ಬಾಯಿಗೆ ಬಂದಹಾಗೆ ಬೊಗುಳುತ್ತಿರುವುದನ್ನು ಕೇಳಿ, ಕೃಷ್ಣನಿಗೆ ಸಹಿಸಲಾರದ ಕೋಪವುಂಟಾಯಿತು. ತಾನು ನಿಂತಿದ್ದ ಸ್ಥಳದಿಂದ ಒಂದೇ ಓಟದಲ್ಲಿ ಬಂದು, ಕಂಸನು ಕುಳಿತಿದ್ದ ಎತ್ತರವಾದ ಪೀಠವನ್ನೇರಿದನು. ತನಗೆ ಮೃತ್ಯುವಾದ ಕೃಷ್ಣನು ಮೇಲೆ ಬೀಳುವುದಕ್ಕಾಗಿ ಬರುವುದನ್ನು ನೋಡಿದಾಗಲೂ ಕಂಸನು, ಮನಸ್ಸಿನಲ್ಲಿ ಧೈರ್ಯಗೆಡದೆ, ತಟ್ಟನೆ ಮೇಲೆದ್ದು, ಕತ್ತಿಯನ್ನೂ, ಗುರಾಣಿಯನ್ನೂ ಕೈಗೆತ್ತಿಕೊಂಡು, ಕೃಷ್ಣನನ್ನಿದಿರಿಸುವುದಕ್ಕೆ ಯತ್ನಿಸಿದನು. ಹೀಗೆ ಕಂಸನು ಖಡ್ಗಪಾಣಿಯಾಗಿ ನಿಂತು, ಆಹಾರಕ್ಕಾಗಿ ಆಕಾಶದಲ್ಲಿ ಹೊಂಚುಹಾಕಿ ತಿರುಗುತ್ತಿರುವ ಗಿಡಗನಂತೆ, ವೇಗದಿಂದ ಎಡಕ್ಕೂ ಬಲಕ್ಕೂ ತಿರುಗುತ್ತಿರುವಾಗಲೇ, ಶತ್ರುದುಸ್ಸಹವಾದ ಉಗ್ರತೇಜಸ್ಸುಳ್ಳ ಕೃಷ್ಣನು, ವೇಗದಿಂದ ಮುಂದೆ ಬಂದು, ಗರುಡನು ಸರ್ಪವನ್ನು ಹಿಡಿಯುವಂತೆ ಅವನನ್ನು ಹಿಡಿದನು. ಮತ್ತು ಆ ಕಂಸನ ತಲೆಯಲ್ಲಿದ್ದ ಕಿರೀಟವನ್ನು ಕಿತ್ತು ಬಿಸುಟು, ಅವನ ತಲೆಕೂದಲನ್ನು ಹಿಡಿದು, ಮಹೋನ್ನತವಾದ ಆ ಮಂಚದಿಂದ ದರದರನೆ ಎಳೆದು ತಂದು, ನೆಲದಲ್ಲಿ ಕೆಡಹಿದನು. ಅವನ ಮೈಯೆಲ್ಲವೂ ನೆಗ್ಗಿಹೋಗುವಂತೆ ತಾನೂ ಅವನಮೇಲೆ ಧೊಪ್ಪನೆ ಬಿದ್ದನು. ಇಷ್ಟುಮಾತ್ರದಲ್ಲಿಯೇ ಕಂಸನಿಗೆ ಪ್ರಾಣೋತ್ಕ್ರಮಣವಾಯಿತು. ಅಲ್ಲಿದ್ದ ಜನರೆಲ್ಲರೂ ಹಾಹಾಕಾರದಿಂದ ಕೂಗಿಡುತಿದ್ದರು. ಸಕಲಲೋಕಾಶ್ರಯನಾಗಿಯೂ, ಸರ್ವಸ್ವತಂತ್ರನಾಗಿಯೂ ಇರುವ ಶ್ರೀ ಕೃಷ್ಣನು, ಅಲ್ಲಿನ ಜನವೆಲ್ಲವೂ ನೋಡುತ್ತಿದ್ದಹಾಗೆಯೇ, ಸಿಂಹವು ಆನೆಯನ್ನು ಹೇಗೋಹಾಗೆ, ಆ ಕಂಸನನ್ನು ನೆಲದಮೇಲೆ ಎಳೆದಾಡುತಿದ್ದನು. ಓ ಪರೀಕ್ಷಿದ್ರಾಜಾ! ಹೀಗೆ ಕಂಸನು ಕೃಷ್ಣನಲ್ಲಿ ದ್ವೇಷವನ್ನು ಬೆಳೆಸಿ, ಅವನ ಕೈಯಿಂದ ಹತನಾದರೂ, ಅವನೇ ಲೋಕದಲ್ಲಿ ಪರಮಧನ್ಯನೆಂದು ತಿಳಿ! ಏಕೆಂದರೆ, ಆತನು, ಕೃಷ್ಣನು ತನಗೆ ಮೃತ್ಯುವೆಂಬುದನ್ನು ಕೇಳಿದುದುಮೊದಲು ಅವನ ಭಯದಿಂದ ಅನವರತವೂ ತತ್ತಳಿಸುತ್ತ, ಊಟಮಾಡುವಾಗಲೂ, ನೀರುಕುಡಿಯುವಾಗಲೂ, ನಡೆಯುವಾಗಲೂ, ನಿದ್ರಿಸುವಾಗಲೂ, ಮಾತಾಡುವಾಗಲೂ, ಉಸಿರುಬಿಡು

ವಾಗಲೂ, ಆ ಕೃಷ್ಣನು ತನ್ನ ಮುಂದೆ ಚಕ್ರಧಾರಿಯಾಗಿ ಬಂದು ನಿಂತಿರುವಂತೆಯೇ ಕಾಣುತಿದ್ದನಾದುದರಿಂದ, ಅದೇ ವಿಧವಾದ ಅವಿಚ್ಛಿನ್ನಭಾವನೆಯಿಂದ, ಯೋಗಿಗಳಿಗೂ ದುರ್ಲಭವಾದ ಭಗವತ್ಸಾರೂಪ್ಯವನ್ನು ಹೊಂದಿದನು. ಆಮೇಲೆ ಅಲ್ಲಿ ಕಂಸನಿಗೆ ಸಹೋದರರಾಗಿ ಅವನನ್ನು ಅನುವರ್ತಿಸುತಿದ್ದ, ಕಂಕ, ನ್ಯಗ್ರೋಧಕ, ಮೊದಲಾದ ಎಂಟುಮಂದಿ ವೀರರು, ತಮ್ಮ ಸಹೋದರನನ್ನು ಕೊಂದ ಕೃಷ್ಣನಮೇಲೆ ಹಗೆತೀರಿಸಿಕೊಳ್ಳಬೇಕೆಂಬ ಕೋಪದಿಂದ, ಮೇಲೆ ಬಿಳುವುದಕ್ಕೆ ಬರಲು, ಬಲರಾಮನು, ಪರಿಘವನ್ನು ಕೈಗೆತ್ತಿಕೊಂಡು, ಸಿಂಹವು ಪಶುಗಳನ್ನು ಕೊಲ್ಲುವಂತೆ ಅವರೆಲ್ಲರನ್ನೂ ಧ್ವಂಸಮಾಡಿದನು ಒಡನೆಯೇ ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು! ಬ್ರಹ್ಮರುದ್ರಾದಿದೇವತೆಗಳೆಲ್ಲರೂ ಸಂತೋಷದಿಂದ ರಾಮಕೃಷ್ಣರಮೇಲೆ ಪುಷ್ಪವರ್ಷವನ್ನು ಕರೆದು, ಅವರ ಕೀರ್ತಿಯನ್ನು ಕೊಂಡಾಡುತಿದ್ದರು. ಅಪ್ಸರಸ್ತ್ರೀಗಳು ನರ್ತಿಸಿದರು. ಗಂಧರ್ವರು ಗಾನಮಾಡಿದರು.

ಓ ರಾಜೇಂದ್ರಾ! ಕೇಳು! ಇಷ್ಟರಲ್ಲಿ, ಇಲ್ಲಿ ರಾಮಕೃಷ್ಣರಿಂದ ಹತರಾದ ಕಂಸಾದಿಗಳ ಪತ್ನಿಯರೆಲ್ಲರೂ, ಪತಿಮರಣವಾರ್ತೆಯನ್ನು ಕೇಳಿ, ದುಃಖದಿಂದ ಕಣ್ಣೀರುಬಿಟ್ಟು, ತಲೆಯನ್ನು ಬಡಿದುಕೊಳ್ಳುತ್ತ ಮಲ್ಲರಂಗಕ್ಕೆ ಬಂದರು. ಅಲ್ಲಿ ಸತ್ತುಬಿದ್ದಿದ್ದ ತಮ್ಮತಮ್ಮ ಪತಿಗಳ ಮೃತದೇಹವನ್ನಪ್ಪಿಕೊಂಡು, ಗಟ್ಟಿಯಾಗಿ ರೋದಿಸತೊಡಗಿದರು. “ಹಾ ನಾಥಾ! ಹಾ ಪ್ರಿಯಾ! ಧರ್ಮಜ್ಞಾ! ಕರುಣಾಕರಾ! ಹಾ ವತ್ಸಲಾ! ಹೋದೆಯಾ! ನೀನಿಲ್ಲದಮೇಲೆ ನಮ್ಮ ಬಾಳೇಕೆ? ಮನೆಮಕ್ಕಳೊಡನೆ ನಾವೂ ಹತರಾದಂತೆಯೇಹೊರತು ಬೇರೆಯಲ್ಲ! ಓ ಪುರುಷಶ್ರೇಷ್ಠಾ! ನೀನಿಲ್ಲದುದರಿಂದ ಈ ನಮ್ಮ ಪಟ್ಟಣವೂ ಕೂಡ, ಪತಿಹೀನೆಯರಾದ ನಮ್ಮಂತೆ, ಮಂಗಳೋತ್ಸವರಹಿತವಾಗಿ ಕಾಂತಿಗುಂದಿತಲ್ಲಾ! ಮುಖ್ಯವಾಗಿ ನಿನ್ನ ದುಷ್ಕರ್ಮವೇ ನಿನ್ನನ್ನು ಕೆಡಿಸಿತು! ನಿರಪರಾಧಿಗಳಾದ ಭೂತಗಳಿಗೆಲ್ಲಾ ನೀನು ಮಹಾದ್ರೋಹವನ್ನು ಮಾಡುತಿದ್ದವನಾದುದರಿಂದಲೇ, ನಿನಗೆ ಈ ದುರವಸ್ಥೆಯು ಪ್ರಾಪ್ತವಾಯಿತು! ಭೂತದ್ರೋಹಿಯಾದವನು ಯಾವನುತಾನೇ ಸುಖದಿಂದ ಬದುಕುವನು? ಭೂತದ್ರೋಹವೂ ಹಾಗಿರಲಿ! ಸಮಸ್ತಭೂತಗಳ ಉ

ತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣನಾದ ಈ ಕೃಷ್ಣನನ್ನೇ ನೀನು ಅವಮಾನಪಡಿಸುವುದಕ್ಕೆ ಯತ್ನಿಸಿದೆ! ಅಂತಹ ಮಹಾತ್ಮನ ವಿಷಯದಲ್ಲಿ ಅಪರಾಧಿಯಾದವನು ಯಾವನು ತಾನೇ ಸುಖದಿಂದ ಬದುಕುವನು? ನಿನ್ನ ಕರ್ಮವೇ ನಿನ್ನನ್ನು ಕೆಡಿಸಿತು" ಎಂದು ವಿಲಪಿಸುತಿದ್ದರು. ಆಗ ಸಮಸ್ತಲೋಕಗಳಿಗೂ ಶ್ರೇಯಃಪ್ರವರ್ತಕನಾದ ಶ್ರೀಕೃಷ್ಣನು, ಆ ರಾಜಸ್ತ್ರೀಯರೆಲ್ಲರನ್ನೂ ತಾನೇ ಸಮಾಧಾನಪಡಿಸಿ, ಅಲ್ಲಿ ಸತ್ತವರಿಗೆ ಪಾರಲೌಕಿಕಗಳಾದ ಸಂಸ್ಕಾರಗಳನ್ನೂ ತಾನೇ ನಿಂತು ಮಾಡಿಸಿದನು. ಆಮೇಲೆ ರಾಮಕೃಷ್ಣರಿಬ್ಬರೂ, ಸೆರೆಮನೆಗೆಬಂದು, ಅಲ್ಲಿದ್ದದ್ದ ತಮ್ಮ ತಂದೆತಾಯಿಗಳಿಗೆ (ದೇವಕೀವಸುದೇರಿಗೆ) ಬಂಧವಿಮೋಚನೆಯನ್ನು ಮಾಡಿಸಿ, ಅವರ ಪಾದಗಳನ್ನು ಹಿಡಿದು ಸಾಷ್ಟಾಂಗಪ್ರಣಾಮವನ್ನು ಮಾಡಿದರು. ಆಗ ದೇವಕೀವಸುದೇವರಿಬ್ಬರೂ, ತಮಗೆ ವಂದನಮಾಡುತ್ತಿರುವ ಆವರನ್ನು ಪ್ರೀತಿಯಿಂದಾಲಿಂಗಿಸಿ ಆ ಮಕ್ಕಳಿಬ್ಬರನ್ನೂ ಜಗದೀಶ್ವರರೆಂದೇ ತಿಳಿದು ಕೊಂಡರು. ಇದು ನಾಲ್ವತ್ತುನಾಲ್ಕನೆಯ ಅಧ್ಯಾಯವು.

---

### ಕೃಷ್ಣನು ತಂದೆತಾಯಿಗಳನ್ನು ಸಮಾಧಾನಪಡಿಸಿದುದು.

ಓ ರಾಜೇಂದ್ರಾ! ಕೇಳು! ಆಗ ಕೃಷ್ಣನು, ತನ್ನ ತಂದೆತಾಯಿಗಳಿಬ್ಬರೂ ತನ್ನಲ್ಲಿ ಪುತ್ರನೆಂಬ ಭಾವವನ್ನು ಬಿಟ್ಟು, ಸಕಲಪುರುಷಾರ್ಥಸ್ವರೂಪನಾದ ಲೋಕೇಶ್ವರನೇ ತಾನೆಂಬ ಗೌರವಜ್ಞಾನದಿಂದಿರುವುದನ್ನು ನೋಡಿ, ತಿರುಗಿ ಅವರಿಗೆ, ತನ್ನಲ್ಲಿ ಪುತ್ರವಾತ್ಸಲ್ಯವೇ ಹುಟ್ಟುವಂತೆ ಲೋಕಮೋಹಕವಾದ ತನ್ನ ಮಾಯೆಯನ್ನು ಅವರಮೇಲೆ ಬೀಸುವುದಕ್ಕಾಗಿ, ಬಲರಾಮನೊಡಗೂಡಿ ಅವರ ಸಮೀಪದಲ್ಲಿ ವಿನಯಪೂರ್ವಕವಾಗಿ ಕೈಮುಗಿದು ನಿಂತು "ಅಮ್ಮಾ ! ಅಯ್ಯಾ!" ಎಂದು ಪ್ರಿಯವಾಕ್ಯಗಳಿಂದ ಕರೆಯುತ್ತ ಹೀಗೆಂದು ಹೇಳುವನು. " ಓ ಜನನೀಜನಕರೆ! ನಾವು ನಿಮ್ಮ ಮಕ್ಕಳಾಗಿದ್ದರೂ, ನೀವಿಬ್ಬರೂ ಅನವರತವೂ ನಮ್ಮ ವಿಷಯವಾಗಿಯೇ ಚಿಂತಿಸುತಿದ್ದರೂ, ನಮಗೆ ಬಾಲ್ಯ, ಪೌಗಂಡ, ಕೌಮಾರಾವಸ್ಥೆಗಳು ಮೂರೂ, ನಿಮ್ಮ ಪರೋಕ್ಷದಲ್ಲಿಯೇ ಕಳೆದುಹೋದುವು! ಕ್ಷಣಕಾಲವಾದರೂ ನಿಮ್ಮೊ

ಡನೆ ಸೇರಿ ಸಂತೋಷಿಸತಕ್ಕ ಭಾಗ್ಯವು ನಮಗೆ ಲಭಿಸಲಿಲ್ಲ. ಮಕ್ಕಳಿಗೆ ತಂದೆ ತಾಯಿಗಳ ಸಮೀಪದಲ್ಲಿದ್ದು,ಅವರ ಲಾಲನೆಗಳಿಂದ ಪಡೆಯಬಹುದಾದ ಆ ಪಾರಸಂತೋಷಕ್ಕೆ, ದುರ್ಭಾಗ್ಯರಾದ ನಾವು ಇದುವರೆಗೆ ಪಾತ್ರರಾಗದೆ ಹೋದೆವು. ಲೋಕದಲ್ಲಿ ಸಮಸ್ತಪುರುಷಾರ್ಥಗಳಿಗೂ ಮೂಲಾಧಾರವಾದ ಈ ಶರೀರವು, ಯಾರಿಂದ ಹುಟ್ಟಿ, ಯಾರಿಂದಲೇ ಪೋಷಿಸಲ್ಪಡುವುದೋ, ಅಂತಹ ತಂದೆತಾಯಿಗಳ ಋಣವನ್ನು, ಮನುಷ್ಯನು ತನ್ನ ನೂರಾಯುಸ್ಸಿನಿಂದಲೂ ತೀರಿಸಲಾರನು. ಯಾವನು ಪುತ್ರನಾಗಿ ಹುಟ್ಟಿದುದಕ್ಕೆ ತನ್ನ ಶರೀರದಿಂದಲೂ, ತನ್ನ ಸರ್ವಸ್ವದಿಂದಲೂ, ಮಾತಾಪಿತೃಗಳ ಸೇವೆಯನ್ನು ಮಾಡದಿರುವನೋ, ಅವನು ಮೃತನಾದಮೇಲೆ, ಯಮದೂತರು ಅವನ ಮಾಂಸವನ್ನೇ ಅವನಿಂದ ತಿನ್ನಿಸುವರು. ಯಾವನು ಸಮರ್ಥನಾಗಿದ್ದರೂ ತಂದೆತಾಯಿಗಳನ್ನೂ, ವೃದ್ಧರನ್ನೂ, ಪತಿವ್ರತೆಯಾದ ಭಾರ್ಯೆಯನ್ನೂ ಹೊಟ್ಟೆಯಲ್ಲಿ ಹುಟ್ಟಿದ ಎಳೆಮಕ್ಕಳನ್ನೂ, ಗುರುಗಳನ್ನೂ, ಬ್ರಾಹ್ಮಣರನ್ನೂ, ಶರಣಾಗತರನ್ನೂ ಪೋಷಿಸದೆ ಬಿಡುವನೋ. ಅವನು ಬದುಕಿದ್ದರೂ ಜೀವಚ್ಛವವೆನಿಸಿಕೊಳ್ಳುವನೇಹೊರತು ಬೇರೆಯಲ್ಲ! ಈಗ ನಮ್ಮ ಸ್ಥಿತಿಯೂ ಹಾಗೆಯೇ ಆಯಿತು! ನೀವಿಬ್ಬರೂ ಕಂಸನ ಬಾಧೆಯಿಂದ ಬಹಳವಾಗಿ ಕಷ್ಟಪಡುತ್ತಿರುವಾಗಲೂ, ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ನಾವು ಶಕ್ತರಾಗಿದ್ದರೂ, ನಿಮ್ಮ ಸೇವೆಯನ್ನು ಮಾಡದೆ ಇಷ್ಟುದಿನಗಳನ್ನೂ ವ್ಯರ್ಥವಾಗಿ ಕಳೆದಂತಾಯಿತು. ಆದುದರಿಂದ ಓ ಜನನೀಜನಕರೆ! ಇದುವರೆಗೂ ಪರಾಧೀನರಾಗಿದ್ದುದರಿಂದ, ನಿಮ್ಮ ಶುಶ್ರೂಷೆಯನ್ನು ಮಾಡುವುದಕ್ಕಾಗಲಿ, ನಿಮ್ಮ ಕಷ್ಟವನ್ನು ಬಿಡಿಸುವುದಕ್ಕಾಗಲಿ ಅವಕಾಶವಿಲ್ಲದೆ, ಕಠಿನಹೃದಯರಾಗಿ ಇದುವರೆಗೆ ಕಾಲವಿಳಂಬವನ್ನು ಮಾಡಿದ ನಮ್ಮ ಅಪರಾಧವನ್ನು ಕ್ಷಮಿಸಬೇಕು.” ಎಂದನು.

ಕೃಷ್ಣನು ವಿಶ್ವಾತ್ಮಕನಾಗಿದ್ದರೂ, ಮಾಯಾಮನುಷ್ಯನಾಗಿ ಹೇಳಿದ ಈ ಮಾತುಗಳಿಗೆ ದೇವಕೀವಸುದೇವರಿಬ್ಬರೂ ಮರುಳಾಗಿ, ಅವನಲ್ಲಿ, ತಮಗೆ ಹುಟ್ಟಿದ್ದ ಜಗದೀಶ್ವರನೆಂಬ ಬುದ್ಧಿಯನ್ನು ಮರೆತುಹೋದರು. ಅವರಿಗೆ ಮೊದಲಿನಂತೆ ಕೃಷ್ಣನಲ್ಲಿ ಪುತ್ರನೆಂಬ ವಾತ್ಸಲ್ಯವೇ ಹುಟ್ಟಿತು. ಆ

ತಾಯಿತಂದೆಗಳಿಬ್ಬರೂ ರಾಮಕೃಷ್ಣರನ್ನು ಕರೆದು, ತೊಡೆಯಮೇಲೆ ಕು ಳ್ಳಿರಿಸಿಕೊಂಡು, ಸಂತೋಷದಿಂದಾಲಿಂಗಿಸಿದರು. ಅವರ ಕಣ್ಣುಗಳಲ್ಲಿ ಆ ನಂದಬಾಷ್ಪವು ಉಕ್ಕಿ ಬರುತಿತ್ತು. ಅವರ ಕಂಠಸ್ವರವು ಕುಗ್ಗಿತು. ಮಾತಾ ಡಲಾರದೆ ಸುಮ್ಮನಿದ್ದರು.

ಹೀಗೆ ಕೃಷ್ಣನು ತಾಯಿತಂದೆಗಳಿಬ್ಬರನ್ನೂ ಸಮಾಧಾನಪಡಿಸಿದ ಮೇಲೆ, ತನ್ನ ಮಾತಾಮಹನಾದ ಉಗ್ರಸೇನನ ಬಳಿಗೆಬಂದು ಅವನನ್ನು ರಾಜ ನನ್ನಾಗಿಮಾಡಿ ಅವನೊಡನೆ ಹೀಗೆಂದು ಹೇಳುವನು. ‘‘ಓ ಮಹಾಭಾಗಾ! ನಾವು ನಿನ್ನ ಪ್ರಜೆಗಳು! ನೀನೇ ನಮ್ಮೆಲ್ಲರಿಗೂ ಪ್ರಭುವಾಗಿದ್ದು, ನಮ್ಮ ನ್ನು ಆಯಾಕಾರ್ಯಗಳಲ್ಲಿ ನಿಯಮಿಸಬೇಕು! ಯಯಾತಿಯ ಶಾಪದಿಂದ ಯ ದುಕುಲದವರಿಗೆ ರಾಜಸಿಂಹಾಸನವನ್ನೇರುವುದಕ್ಕೆ ಅರ್ಹತೆಯಿಲ್ಲ! ನಾನು ನಿನಗೆ ಭೃತ್ಯನಾಗಿ ನಿನ್ನ ಸೇವೆಯನ್ನು ಮಾಡುತ್ತಿರುವಾಗ, ದೇವತೆಗಳೂ ನಿನಗೆ ನಮ್ರರಾಗಿ ನಿನಗೆ ಪೂಜೆಗಳನ್ನರ್ಪಿಸುವರೆಂದು ತಿಳಿ! ಇನ್ನು ಸಾಮಾನ್ಯರಾಜರು ನಿನಗೆ ಅಧೀನರಾಗಿರುವವಿಷಯದಲ್ಲಿ ಹೇಳಬೇಕಾದು ಹೇನು" ಎಂದನು. ಆಮೇಲೆ ಕೃಷ್ಣನು, ಹಿಂದೆ ಕಂಸನ ಭಯದಿಂದ ದೇಶವ ನ್ನು ಬಿಟ್ಟು ನಾನಾದಿಕ್ಕುಗಳಿಗೆ ಓಡಿಹೋಗಿದ್ದ ತನ್ನ ಜ್ಞಾತಿಗಳಾದ ಯಾ ದವರು, ವೃಷ್ಣಿಗಳು, ಅಂಧಕರು, ಮಧುಗಳು, ದಾಶಾರ್ಹರು, ಕುಕುರರು ಮೊದಲಾದವರೆಲ್ಲರನ್ನೂ ಅಲ್ಲಲ್ಲಿ ಹುಡುಕಿ ಕರೆತರಿಸಿ, ಅವರನ್ನು ಸಮಾಧಾ ನಪಡಿಸಿದನು. ಮತ್ತು ದೇಶಾಂತರವಾಸದಿಂದುಂಟಾದ ಕಷ್ಟದಿಂದ ಬಹ ಳ ಕೃಶರಾಗಿದ್ದ ಆ ಬಂಧುಗಳೆಲ್ಲರಿಗೂ ಸಮೃದ್ಧಿಯಾಗಿ ಧನವನ್ನು ಕೊ ಟ್ಟು ಸಂತೋಷಪಡಿಸಿ, ಅವರವರ ಮನೆಗಳಲ್ಲಿ ಸುಖವಾಗಿರಿಸಿದನು. ಅವ ರೆಲ್ಲರೂ ಬಲರಾಮಕೃಷ್ಣರ ಭುಜಬಲದಿಂದ ರಕ್ಷಿತರಾಗಿ, ತಮತಮಗೆ ಬೇ ಕಾದ ಕೋರಿಕೆಗಳನ್ನು ಪಡೆದು, ನಿಶ್ಚಿಂತರಾಗಿ ತಮ್ಮತಮ್ಮ ಮನೆಗಳಲ್ಲಿ ಸು ಖಿಸುತಿದ್ದರು. ಮತ್ತು ಅವರೆಲ್ಲರೂ ದಿನದಿನವೂ, ಮಂದಹಾಸಸುಂದರವಾದ ಶ್ರೀಕೃಷ್ಣನ ಮುಖಾರವಿಂದವನ್ನು ನೋಡುವುದರಿಂದ ಸಂತೋಷಭರಿತ ರಾಗಿ ಕಾಲವನ್ನು ಕಳೆಯುತಿದ್ದರು. ವಯಸ್ಸುಕಳೆದ ಮುದುಕರೂಕೂಡ, ಬಾರಿಬಾರಿಗೂ ಆ ಶ್ರೀಕೃಷ್ಣನ ಮುಖಾರವಿಂದಸುಧೆಯನ್ನು ತಮ್ಮ ನೇತ್ರ

ಗಳ ಮೂಲಕವಾಗಿ ಆಗಾಗ ಪಾನಮಾಡುವುದರಿಂದ, ಯೌವನಶಾಲಿಗಳಂತೆ ಹೊಸದಾಗಿ ದೇಹಬಲವನ್ನೂ, ತೇಜಸ್ಸನ್ನೂ ಹೊಂದಿ ಶೋಭಿಸುತಿದ್ದರು. ಆಮೇಲೆ ರಾಮಕೃಷ್ಣರಿಬ್ಬರೂ ತಮ್ಮ ಸಾಕುತಂದೆಯಾದ ನಂದಗೋಪನ ಬಳಿಗೆ ಬಂದು,ಅವನನ್ನು ಪ್ರೀತಿಯಿಂದಾಲಿಂಗಿಸಿ''ಜನಕಾ!ನಮ್ಮನ್ನು ಇದುವರೆಗೆ ಎಷ್ಟೋ ಪ್ರೇಮದಿಂದ ಲಾಲಿಸಿ ಪೋಷಿಸಿದಿರಿ! ತಂದೆತಾಯಿಗಳಿಗೆ ತಮ್ಮ ಶರೀರಕ್ಕಿಂತಲೂ ಮಕ್ಕಳಲ್ಲಿ ಹೆಚ್ಚು ಪ್ರೀತಿಯಿರುವುದೇನೋ ಸಹಜವು! ಮತ್ತು ಹೆತ್ತ ತಾಯ್ತಂದೆಗಳು, ತಮ್ಮ ಮಕ್ಕಳನ್ನು ಪೋಷಿಸಲಾರದೆ ಕೈಬಿಟ್ಟಾಗ, ಯಾವ ಬಂಧುಗಳು ಆ ಮಕ್ಕಳನ್ನು ಪೋಷಿಸುವರೋ, ಅವರೇ ಆ ಮಕ್ಕಳಿಗೆ ತಾಯ್ತಂದೆಗಳು ! ಆದುದರಿಂದ ನಮ್ಮನ್ನು ಹೆತ್ತವರು ಬೇರೆಯಾಗಿದ್ದರೂ, ನೀವೇ ನಮಗೆ ತಂದೆತಾಯಿಗಳು ! ತಾತಾ! ಇನ್ನು ನೀವು ಗೋಕುಲಕ್ಕೆ ಹೋಗಿರಿ ! ನಾವು ಇಲ್ಲಿ ನಮ್ಮ ಮಿತ್ರರೆಲ್ಲರನ್ನೂ ನೋಡಿಕೊಂಡು, ಅವರ ಮನಸ್ಸನ್ನು ಸಂತೋಷಪಡಿಸಿ ನಿಮ್ಮನ್ನು ನೋಡುವುದಕ್ಕಾಗಿ ಗೋಕುಲಕ್ಕೆ ಬರುವೆವು." ಎಂದು ಹೇಳಿ ನಂದನಿಗೂ, ಅವನ ಸಂಗಡಿಗರಿಗೂ ಯಥೇಷ್ಟವಾಗಿ ವಸ್ತ್ರಾಭರಣಗಳನ್ನೂ, ಪಾತ್ರಪದಾರ್ಥಗಳನ್ನೂ ಕೊಡಿಸಿ, ಅತ್ಯಾದರದಿಂದ ಮನ್ನಿಸಿ ಕಳುಹಿಸಿದನು. ನಂದನು, ಪುತ್ರಪ್ರೇಮದಿಂದ ಕಣ್ಣೀರುಸುರಿಸುತ್ತ. ರಾಮಕೃಷ್ಣರನ್ನಾಲಿಂಗಿಸಿಕೊಂಡು, ಅವರನ್ನು ಬಿಟ್ಟು ಹೋಗಲಾರದೆ ಕಳವಳಿಸುತ್ತಿದ್ದು ಕೊನೆಗೆ ತನ್ನ ಪರಿವಾರಗಳೊಡನೆ ಮುಂದೆಗೆ ಹೊರಟನು.

{ ರಾಮಕೃಷ್ಣರಿಗೆ ವಸುದೇವನು ಉಪನಯನಾದಿ ಸಂಸ್ಕಾರಗಳನ್ನು ನಡೆಸಿದುದು. }

ಆಮೇಲೆ ವಸುದೇವನು, ಪುರೋಹಿತರಾದ ಗರ್ಗಾಚಾರ್ಯರನ್ನೂ, ಇತರಬ್ರಾಹ್ಮಣರನ್ನೂ ಕರೆಸಿ, ತನ್ನ ಮಕ್ಕಳಿಬ್ಬರಿಗೂ ದ್ವಿಜರಿಗೆ ನಡೆಯಬೇಕಾದ ಉಪನಯನಸಂಸ್ಕಾರವನ್ನು ಯಥಾವಿಧಿಯಾಗಿಮಾಡಿಸಿದನು. ಆಗ ಬ್ರಾಹ್ಮಣರೆಲ್ಲರನ್ನೂ ವಿಶೇಷವಾಗಿ ಸತ್ಕರಿಸಿ, ಅವರನ್ನು ವಸ್ತ್ರಾಭರಣಗಳಿಂದಲಂಕರಿಸಿ, ಭೂರಿದಕ್ಷಿಣೆಗಳೊಡನೆ ಸುವರ್ಣಾಲಂಕೃತಗಳಾದ ಅನೇಕಗೋವುಗಳನ್ನು ಕರುಗಳಸಹಿತವಾಗಿ ದಾನಮಾಡಿದನು. ಮತ್ತು ಹಿಂದೆ

ತಾನು ಕಂಸನ ಸೆರೆಯಲ್ಲಿದ್ದಾಗ, ರಾಮಕೃಷ್ಣರ ಜನನಕಾಲದಲ್ಲಿ, ಎಷ್ಟು ಗೋವುಗಳನ್ನು ದಾನಮಾಡುವುದಾಗಿ ಸಂಕಲ್ಪಿಸಿದ್ದನೋ ಅವೆಲ್ಲವನ್ನೂ ಈಗ ಲೋಪವಿಲ್ಲದೆ ನಡೆಸಿದನು. ಇದಲ್ಲದೆ ಕಂಸನು ಅಧರ್ಮದಿಂದ ಯಾವಯಾವ ಬ್ರಾಹ್ಮಣರ ಸ್ವತ್ತನ್ನು ಅಪಹರಿಸಿದ್ದನೋ, ಅವೆಲ್ಲವನ್ನೂ ತರಿಸಿ ಆಯಾಬ್ರಾಹ್ಮಣರಿಗೆ ಒಪ್ಪಿಸಿದನು. ರಾಮಕೃಷ್ಣರಿಬ್ಬರೂ ಉಪನಯನ ಸಂಸ್ಕಾರದಿಂದ ದ್ವಿಜತ್ವವನ್ನು ಹೊಂದಿದಮೇಲೆ, ಗರ್ಗಾಚಾರ್ಯರ ಉಪದೇಶಕ್ರಮವನ್ನನುಸರಿಸಿ ಬ್ರಹ್ಮಚರ್ಯವ್ರತವನ್ನು ನಡೆಸುತಿದ್ದರು. ಆ ಸಹೋದರರಿಬ್ಬರೂ ಸಮಸ್ತವಿದ್ಯೆಗಳಿಗೂ ತಾವೇ ಉತ್ಪತ್ತಿಸ್ಥಾನವಾಗಿ, ಸರ್ವಜ್ಞರಾಗಿದ್ದರೂ, ಸ್ವತಸ್ಸಿದ್ಧವಾದ ತಮ್ಮ ವಿಮಲಜ್ಞಾನವನ್ನು ಮನುಷ್ಯಲೀಲೆಯಿಂದ ಮರೆಸಿಟ್ಟುಕೊಂಡು, ಲೋಕನಟನೆಗಾಗಿ ಗುರುಕುಲವಾಸವನ್ನು ಮಾಡಬೇಕೆಂಬ ಉದ್ದೇಶದಿಂದ, ಅವಂತೀಪುರಕ್ಕೆ ಬಂದು, ಅಲ್ಲಿ ಕಾಶ್ಯಗೋತ್ರದ ಸಾಂದೀಪನನೆಂಬ ಗುರುವಿನಲ್ಲಿ ಜಿತೇಂದ್ರಿಯರಾಗಿ ಗುರುಶುಶ್ರೂಷೆಯನ್ನು ಮಾಡುತಿದ್ದರು. ಮತ್ತು ತಮ್ಮ ನಡತೆಯಿಂದ ಗುರೂಪಾಸನಾಕ್ರಮವನ್ನು ಲೋಕಕ್ಕೆ ಬೋಧಿಸುವುದಕ್ಕಾಗಿ, ಆ ಗುರುವನ್ನೇ ಪರದೇವತೆಯಂತೆ ಗೌರವಿಸಿ ಪೂಜಿಸುತಿದ್ದರು. ಬ್ರಾಹ್ಮಣೋತ್ತಮನಾದ ಸಾಂದೀಪನನು, ಆ ಅಣ್ಣತಮ್ಮಂದಿರಿಬ್ಬರೂ ನಿರ್ಮಲಭಾವದಿಂದ ತನಗೆ ಮಾಡುತ್ತಿರುವ ಶುಶ್ರೂಷೆಗಾಗಿ ಬಹಳ ಸಂತೋಷಪಟ್ಟು, ಉಪನಿಷತ್ತುಗಳೊಡನೆ ಸಮಸ್ತವೇದಗಳನ್ನೂ, ವೇದಾಂಗಗಳನ್ನೂ ಕ್ರಮವಾಗಿ ಅವರಿಗೆ ಉಪದೇಶಿಸಿದನು. ಮತ್ತು ಮಂತ್ರರಹಸ್ಯಗಳೊಡನೆ ಧನುರ್ವೇದವನ್ನೂ, ಮನ್ವಾದಿಧರ್ಮಶಾಸ್ತ್ರಗಳನ್ನೂ, ನ್ಯಾಯಶಾಸ್ತ್ರವನ್ನೂ, ಮೀಮಾಂಸೆಯನ್ನೂ, ಸಂಧಿವಿಗ್ರಹ ಮೊದಲಾದ ಆರುಬಗೆಯ ರಾಜನೀತಿಗಳನ್ನೂ ತಿಳಿಸಿದನು. ಭಗವದಂಶಭೂತರಾದ ಆ ಬಾಲಕರಿಬ್ಬರೂ ಸ್ವತಃ ಸರ್ವಜ್ಞರಾಗಿಯೂ, ಸಮಸ್ತವಿದ್ಯೆಗಳಿಗೂ ತಾವೇ ಪ್ರವರ್ತಕರಾಗಿಯೂ ಇದ್ದುದರಿಂದ, ತಮ್ಮಗುರುವಿನಬಾಯಿಂದ ಒಂದಾವರ್ತಿ ಹೊರಟಮಾತ್ರಕ್ಕೆ ಅವನು ಹೇಳಿದುದಕ್ಕಿಂತಲೂ ಹೆಚ್ಚಾಗಿ ಗ್ರಹಿಸುತ್ತ, ಅರುವತ್ತುನಾಲ್ಕು ದಿನಗಳೊಳಗಾಗಿಯೇ, ಅರುವತ್ತುನಾಲ್ಕು ಕಲೆಗಳನ್ನೂ, ಅವುಗಳ ಅನುಷ್ಠಾನನಿಯಮಗಳನ್ನೂ ಕಲಿ

ತು ಸಕಲಕಲಾಪಾರಂಗತರಾದರು. ಹೀಗೆ ವಿದ್ಯಾಭ್ಯಾಸವು ಮುಗಿದಮೇಲೆ, ತಾವು ಕೊಡಬೇಕಾದ ಗುರುದಕ್ಷಿಣೆಯೇನೆಂದು ಆಚಾರ್ಯನಲ್ಲಿ ವಿನಯದಿಂದ ಪ್ರಾರ್ಥಿಸಿದರು. ಆ ಬಾಲಕರಿಬ್ಬರ ಅದ್ಭುತಮಹಿಮೆಯನ್ನೂ, ಅತಿಮಾನುಷಚರಿತ್ರಗಳನ್ನೂ ನೋಡಿ, ಸಾಂದೀಪನನಿಗೆ, ಅವರು ಯಾರೋ ದೇವಾಂಶಪುರುಷರಾಗಿರಬೇಕೇಹೊರತು ಸಾಮಾನ್ಯಬಾಲಕರಲ್ಲವೆಂದು ತೋರಿತು. ತನ್ನ ಪತ್ನಿಯೊಡನೆ ಆಲೋಚನೆಮಾಡಿ ಬಂದು, “ ಓ ಬಾಲಕರೆ ! ಪ್ರಭಾಸಕ್ಷೇತ್ರದಲ್ಲಿ, ಮಹಾಸಮುದ್ರದಲ್ಲಿ ಬಿದ್ದು ಮೃತನಾದ ನಮ್ಮ ಬಾಲಕನನ್ನು ಬದುಕಿಸಿ ತರಬೇಕು! ಇದೇ ನೀವು ನನಗೆ ಕೊಡಬೇಕಾದ ಗುರುದಕ್ಷಿಣೆ!” ಎಂದನು. ರಾಮಕೃಷ್ಣರಿಬ್ಬರೂ ಹಾಗೆಯೇ ಆಗಲೆಂದು ಹೇಳಿ, ರಥವನ್ನೇರಿ ಹೊರಟು, ಪ್ರಭಾಸಕ್ಷೇತ್ರಕ್ಕೆ ಬಂದು, ಅಲ್ಲಿನ ಸಮುದ್ರತೀರದಲ್ಲಿ ಕ್ಷಣಕಾಲದವರೆಗೆ ಕುಳಿತಿದ್ದರು. ಸಮುದ್ರರಾಜನು,ಆ ಬಾಲಕರ ಮಹಾಮಹಿಮೆಯನ್ನು ತಿಳಿದು, ಕೈಕಾಣಿಕೆಗಳನ್ನು ತಂದಿಟ್ಟು, ಅವರನ್ನು ಯಥೋಚಿತವಾಗಿ ಸತ್ಕರಿಸಿದನು. ಆಗ ಕೃಷ್ಣನು ಸಮುದ್ರರಾಜನನ್ನು ಕುರಿತು “ಓ ಸಿಂಧುರಾಜಾ! ಈ ಸತ್ಕಾರಗಳೆಲ್ಲವೂ ಹಾಗಿರಲಿ! ನೀನು ನಿನ್ನ ಅಲೆಗಳಿಂದ ನುಂಗಿಬಿಟ್ಟಿರುವ ನಮ್ಮ ಗುರುಪುತ್ರನನ್ನು ಮಾತ್ರ ಹೊರಗೆ ಬಿಟ್ಟರೆ ಸಾಕು ! ” ಎಂದನು. ಅದಕ್ಕಾಸಮುದ್ರನು “ ದೇವಾ ! ಆ ಬ್ರಾಹ್ಮಣಕುಮಾರನನ್ನು ಅಪಹರಿಸಿದವನು ನಾನಲ್ಲ! ನನ್ನಲ್ಲಿ ಪಂಚಜನನೆಂಬ ರಾಕ್ಷಸನೊಬ್ಬನು ಸಂಚರಿಸುತ್ತಿರುವನು. ಅವನು ಶಂಖದಂತೆಯೇ ರೂಪನ್ನು ತಾಳಿರುವುದರಿಂದ, ಅವನನ್ನು ಕಂಡುಹಿಡಿಯುವುದಕ್ಕೂ ಯಾರಿಗೂ ಸಾಧ್ಯವಲ್ಲ ! ಅವನೇ ನಿಮ್ಮ ಗುರುಪುತ್ರನನ್ನು ಕದ್ದು ನುಂಗಿರುವನು ” ಎಂದನು. ಒಡನೆಯೇ ಕೃಷ್ಣನು, ಸಮುದ್ರಜಲದಲ್ಲಿ ಪ್ರವೇಶಿಸಿ, ಆರಾಕ್ಷಸನನ್ನು ಕಂಡುಹಿಡಿದು ಅವನನ್ನು ವಧಿಸಿಬಿಟ್ಟನು. ಅವನ ಹೊಟ್ಟೆಯನ್ನು ಸೀಳಿನೋಡುವಾಗ, ಅಲ್ಲಿ ಉತ್ತಮವಾದ ಒಂದು ಶಂಖವುಮಾತ್ರ ಸಿಕ್ಕಿತೇಹೊರತು, ಗುರುಪುತ್ರನು ಕಾಣಿಸಲಿಲ್ಲ.ಆಗ ಕೃಷ್ಣನು, ಅವನ ಗರ್ಭದಲ್ಲಿ ಸಿಕ್ಕಿದ ಪಾಂಚಜನ್ಯನೆಂಬ ಶಂಖವನ್ನು ಕೈಗೆತ್ತಿಕೊಂಡು, ಬಲರಾಮನೊಡನೆ ರಥವನ್ನೇರಿ ಒಡನೆಯೇ ಅಲ್ಲಿಂದ ಹೊರಟು,ಯಮನ ರಾಜಧಾನಿಯಾದ ಸಂಯಮಿನೀಪುರ,

ಕ್ಕೆ ಬಂದನು. ಆಪುರದ್ವಾರಕ್ಕೆ ಬಂದೊಡನೆ, ತನ್ನ ಕೈಯಲ್ಲಿದ್ದ ಶಂಖವನ್ನು ಪೂರಯಿಸಿ ಧ್ವನಿಮಾಡಿದನು. ಈ ಶಂಖಧ್ವನಿಯನ್ನು ಕೇಳಿದಮಾತ್ರದಲ್ಲಿಯೇ ಯಮನು, ಆ ಬಾಲಕರ ಪ್ರಭಾವವನ್ನು ತಿಳಿದು, ಕೈಕಾಣಿಕೆಗಳೊಡನೆ ಇದಿರುಗೊಂಡು ಬಂದು, ಭಕ್ತಿಯಿಂದ ಆ ರಾಮಕೃಷ್ಣರನ್ನು ಪೂಜಿಸಿದನು. ಮತ್ತು ಸರ್ವಭೂತನಿವಾಸನಾದ ಕೃಷ್ಣನನ್ನು ಕುರಿತು ವಿನಯದಿಂದ ವಿಜ್ಞಾಪಿಸುವನು." ಓ ಮಹಾತ್ಮಾ ! ನೀನು ಲೀಲಾಮಾನುಷವಿಗ್ರಹವನ್ನು ಧರಿಸಿದ ಮಹಾವಿಷ್ಣುವೆಂಬುದನ್ನು ನಾನು ಬಲ್ಲೆನು! ನೀವು ನನ್ನಲ್ಲಿಗೆ ಬಂದ ಕಾರ್ಯವೇನು ? ಆಜ್ಞಾಪಿಸಬೇಕು! ಶಿರಸಾವಹಿಸಿ ನಡೆಸುವೆನು" ಎಂದನು ಅದಕ್ಕಾ ಕೃಷ್ಣನು "ಓ ಧರ್ಮರಾಜಾ ! ನಿನ್ನ ದೂತರು ನಮ್ಮ ಗುರುಪುತ್ರನನ್ನು ಇಲ್ಲಿಗೆ ತಂದಿರುವರು. ಆ ಕುಮಾರನಿಗೆ ಕರ್ಮಾಧೀನವಾಗಿ ಈ ಸ್ಥಿತಿಯು ಪ್ರಾಪ್ತವಾಗಿದ್ದರೂ, ನೀನು ನನ್ನ ಮೇಲೆ ಭಾರವಿಟ್ಟು ಅವನನ್ನು ಹಿಂತಿರುಗಿ ನಮ್ಮ ವಶಕ್ಕೆ ಕೊಟ್ಟುಬಿಡಬೇಕು! ಇದೇ ನಮ್ಮ ಕೋರಿಕೆ." ಎಂದನು ಯಮನು ಹಾಗೆಯೇ ಆಗಲೆಂದು ಆ ಪುತ್ರನನ್ನು ತಂದೊಪ್ಪಿಸಲು, ರಾಮಕೃಷ್ಣರಿಬ್ಬರೂ ಆ ಕುಮಾರನನ್ನು ತಂದು, ತಮ್ಮ ಗುರುವಿನ ಮುಂದೆ ನಿಲ್ಲಿಸಿ "ಆಚಾರ್ಯಾ! ನಿಮ್ಮ ಪುತ್ರನನ್ನು ಸ್ವೀಕರಿಸಬೇಕು! ನಮ್ಮಿಂದ ಇನ್ನೇನಾಗಬೇಕು" ಎಂದು ಕೇಳಿದರು. ಅದಕ್ಕಾ ಗುರುವು " ಓ ಬಾಲಕರೆ ! ನಿಮ್ಮಿಂದ ಅತ್ಯುತ್ತಮವಾದ ಗುರುದಕ್ಷಿಣೆಯು ನನಗೆ ಲಭಿಸುತು. ನಿಮ್ಮಂತಹ ಶಿಷ್ಯರಿದ್ದಮೇಲೆ, ಗುರುಗಳಿಗೆ ಯಾವವಿಧದಲ್ಲಿ ಕೊರತೆಯುಂಟು ! ಇನ್ನು ನೀವು ನಿಮ್ಮ ಮನೆಗೆ ಹೋಗಬಹುದು. ನಿಮಗೆ ಇದರಿಂದ ಶಾಶ್ವತಕೀರ್ತಿಯಿರಲಿ !" ಎಂದನು. ಆಮೇಲೆ ರಾಮಕೃಷ್ಣರಿಬ್ಬರೂ, ಗುರುವಿನ ಅನುಜ್ಞೆಯನ್ನು ಪಡೆದು, ರಥವನ್ನೇರಿ ಮಥುರೆಗೆ ಬಂದರು. ಬಹುದಿನಗಳಿಂದ ರಾಮಕೃಷ್ಣರನ್ನು ಕಾಣದೆ ಕಳವಳಿಸುತಿದ್ದ ಮಥುರಾಪುರದ ಜನರೆಲ್ಲರೂ, ಮೇಘಗಂಭೀರಧ್ವನಿಯೊಡನೆ ಬರುತಿದ್ದ ರಾಮಕೃಷ್ಣರ ರಥವನ್ನು ನೋಡಿ, ಕಳೆದುಹೋಗಿದ್ದ ಹಣವು ಕೈಗೆ ಸಿಕ್ಕಿದಂತೆ ಸಂತೋಷವನ್ನು ಹೊಂದಿದರು. ಇದು ನಾಲ್ವತ್ತೈದನೆಯ ಅಧ್ಯಾಯವು.

---

## ಶ್ರೀ ಕೃಷ್ಣನು ಉದ್ಧವನನ್ನು ನಂದಗೋಕುಲಕ್ಕೆ ಕಳುಹಿಸಿದುದು.

ರಾಜಾ! ಕೇಳು! ವೃಷ್ಣಿಕುಲದಲ್ಲಿ ಶ್ರೇಷ್ಠನಾದ ಉದ್ಧವನೆಂಬವನೊಬ್ಬನು ಕೃಷ್ಣನಿಗೆ ಬಹಳ ಪ್ರಿಯಮಿತ್ರನಾಗಿಯೂ, ಆಗಾಗ ಮಂತ್ರಾಲೋಚನೆಯನ್ನು ಹೇಳತಕ್ಕವನಾಗಿಯೂ ಇದ್ದನು. ಅವನು ದೇವಗುರುವಾದ ಬೃಹಸ್ಪತಿಯಲ್ಲಿ ಸಾಕ್ಷಾತ್ತಾಗಿ ಶಿಷ್ಯವೃತ್ತಿಯಲ್ಲಿದ್ದವನು. ಬಹಳ ಬುದ್ಧಿಶಾಲಿ! ಆಶ್ರಿತದುಃಖನಿವಾರಕನಾದ ಕೃಷ್ಣನು, ತನಗೆ ಏಕಾಂತಭಕ್ತನಾಗಿದ್ದ ಅವನನ್ನು ಕೈಹಿಡಿದು ಕರೆದು, ಹೀಗೆಂದು ಹೇಳುವನು. ‘‘ಉದ್ಧವಾ! ಸೌಮ್ಯಾ! ಈಗಲೇ ನೀನು ನಂದಗೋಕುಲಕ್ಕೆ ಹೋಗಿ, ನನ್ನ ತಾಯ್ತಂದೆಗಳಾದ ಯಶೋದೆಗೂ, ನಂದನಿಗೂ ನನ್ನ ಕ್ಷೇಮವನ್ನು ತಿಳಿಸಿ, ಅವರಿಗೆ ಸಂತೋಷವನ್ನುಂಟುಮಾಡು! ಅಲ್ಲಿ ನನ್ನ ವಿಯೋಗದಿಂದ ದುಃಖಿಸುತ್ತಿರುವ ಗೋಪಿಯರಿಗೂ, ನನ್ನ ಮಾತಿನಿಂದ ಸಮಾಧಾನವನ್ನು ಹೇಳಿ, ಅವರ ಸಂತಾಪವನ್ನು ನೀಗಿಸು! ಅವರು ಯಾವಾಗಲೂ ನನ್ನನ್ನೇ ಚಿಂತಿಸುತ್ತ, ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ನನ್ನನ್ನು ಪ್ರೀತಿಸುತ್ತಿರುವರು. ನನಗಾಗಿ ತಮ್ಮ ದೇಹಪೋಷಣವನ್ನೂ ಅನಾದರಿಸಿ, ನಾನೇ ತಮಗೆ ಆತ್ಮಭೂತನೆಂದು ನಿಶ್ಚಯಿಸಿರುವರು. ಹೀಗೆ ನನಗಾಗಿ ಲೋಕಧರ್ಮಗಳನ್ನೂ ಬಿಟ್ಟು, ಏಕಾಗ್ರಮನಸ್ಸಿನಿಂದ ಭಜಿಸತಕ್ಕವರನ್ನು ಸರ್ವವಿಧದಿಂದಲೂ ಪೋಷಿಸಬೇಕಾದುದು ನನ್ನ ಕರ್ತವ್ಯವು! ಉದ್ಧವಾ! ನಾನು ಸಮೀಪದಲ್ಲಿಲ್ಲದಿರುವಾಗ, ಆ ಗೋಪಿಯರೆಲ್ಲರೂ, ವಿರಹತಾಪದಿಂದ ಕುದಿಯುತ್ತ, ನನ್ನನ್ನು ಸ್ಮರಿಸಿಕೊಂಡಹಾಗೆಲ್ಲಾ ಮೈಮರೆತು ಮೂರ್ಛೆಬೀಳುವರು. ಹಿಂದೆ ನಾನು ಗೋಕುಲದಿಂದ ಹೊರಟುಬರುವಾಗ, ಅವರು ನನ್ನನ್ನು ಬಿಟ್ಟಿರಲಾರದೆ ಸಂಕಟಪಡುತ್ತಿದ್ದುದನ್ನು ನೋಡಿ ‘‘ನಾನು ಶೀಘ್ರದಲ್ಲಿಯೇ ಹಿಂತಿರುಗಿ ಬರುವೆ” ನೆಂದು ಸಮಾಧಾನಮಾಡಿ ಬಂದೆನು. ನನ್ನ ಮಾತಿನಮೇಲೆಯೇ ಅವರು ಇನ್ನೂ ಕುತೂಹಲವನ್ನಿಟ್ಟುಕೊಂಡು, ಎಷ್ಟೋ ಕಷ್ಟದಿಂದ ಪ್ರಾಣವನ್ನು ಧರಿಸಿರುವರು. ಆದುದರಿಂದ ನೀನು ಈಗಲೇ ಹೊರಟು, ಅವರಿಗೆ ನನ್ನ ಸಂದೇಶವನ್ನು ತಿಳಿಸಿ. ಸಮಾಧಾನಪಡಿಸಬೇಕು!”

ಎಂದನು. ಉದ್ಧವನು ತನ್ನ ಪ್ರಭುವಾದ ಕೃಷ್ಣನ ಆಜ್ಞೆಯನ್ನು ಶಿರಸಾ ವಹಿಸಿ, ಒಡನೆಯೇ ರಥವನ್ನೇರಿ ನಂದಗೋಕುಲಕ್ಕೆ ಹೊರಟುಬಂದನು. ಸೂರ್ಯಾಸ್ತಮಯವಾಗುವುದರೊಳಗಾಗಿ ನಂದಗೋಕುಲವನ್ನು ಪ್ರವೇಶಿಸಿದನು.ಆಗಲೇ ಹಸುಗಳೆಲ್ಲವೂ ಕಾಡಿನಿಂದ ಮಂದೆಗೆ ಹಿಂತಿರುಗಿ ಬರುತಿದ್ದುವು. ಆ ಹಸುಗಳ ಪಾದಧೂಳಿಯು ಉದ್ಧವನ ರಥವೇ ಕಣ್ಣಿಗೆ ಕಾಣದಂತೆ ಮರೆಸುತಿತ್ತು. ಕಾಡಿನಲ್ಲಿ ಪುಷ್ಕಲವಾಗಿ ಮೇದು ಹಿಂತಿರುಗಿ ಬರುತಿದ್ದ ಆ ಮಂದೆಯ ಸೊಗಸನ್ನು ಕೇಳಬೇಕೆ? ಭೋಗವುಳ್ಳ ಹಸುಗಳಮೇಲೆ ಹಾರುವುದಕ್ಕಾಗಿ, ವೃಷಭಗಳು ಒಂದಕ್ಕೊಂದು ಮೇಲೆ ಬಿದ್ದು ಬರುತ್ತಿರುವುವು! ಹಸುಗಳು ಕೆಚ್ಚಲಿನ ಭಾರದಿಂದ ತೂಗಾಡುತ್ತ, ತಮ್ಮತಮ್ಮ ಕರುಗಳಬಳಿಗೆ ಓಡುತ್ತಿರುವುವು! ಕರುಗಳು ತಮ್ಮತಮ್ಮ ತಾಯಿಯನ್ನು ನೋಡಿದ ಉತ್ಸಾಹದಿಂದ, ಹಾರಿಹಾರಿ ನೆಗೆದಾಡುತ್ತಿರುವುವು! ಒಂದು ಕಡೆಯಲ್ಲಿ ಹಾಲುಕರೆಯುವ ಧ್ವನಿ! ಮತ್ತೊಂದುಕಡೆಯಲ್ಲಿ ಕೊಳಲಿನ ಧ್ವನಿ! ಬೇರೊಂದುಕಡೆಯಲ್ಲಿ ಬಲರಾಮಕೃಷ್ಣರ ಲೀಲೆಗಳನ್ನು ಸುಸ್ವರದಿಂದ ಹಾಡುತ್ತಿರುವ ಗೋಪಾಂಗನೆಯರ ಗಾನಧ್ವನಿ! ತಮ್ಮತಮ್ಮ ಹಸುಗಳನ್ನು ಮಂದೆಗೆ ಸೇರಿಸುತ್ತಿರುವ ಗೋಪಾಲಕರ ಕೋಲಾಹಲಧ್ವನಿ! ಇವೆಲ್ಲವೂ ಒಂದಾಗಿ ಸೇರಿ, ಅಲ್ಲಿ ಬಂದವರ ಮನಸ್ಸಿಗೆ ಮಹೋತ್ಸಾಹವನ್ನುಂಟುಮಾಡುತಿದ್ದುವು. ಮತ್ತು ಆ ಸಂಧ್ಯಾಕಾಲದಲ್ಲಿ, ಅಗ್ನಿಯನ್ನೂ, ಸೂರ್ಯನನ್ನೂ, ಅತಿಥಿಗಳನ್ನೂ, ಬ್ರಾಹ್ಮಣರನ್ನೂ, ಪಿತೃದೇವತೆಗಳನ್ನೂ ಪೂಜಿಸುವುದಕ್ಕಾಗಿ, ಗೋಕುಲವಾಸಿಗಳು, ಅಲ್ಲಲ್ಲಿ ಸಿದ್ಧಪಡಿಸಿರುವ ಪುಷ್ಪಧೂಪದೀಪಾದಿಗಳು, ನೋಡುವವರ ಮನಸ್ಸಿಗೆ ಎಣೆಯಿಲ್ಲದ ಸಂತೋಷವನ್ನುಂಟುಮಾಡುತ್ತಿರುವುವು. ಮತ್ತು ಅಲ್ಲಿ ಯಾವಕಡೆಯನ್ನು ನೋಡಿದರೂ, ಭ್ರಮರ ಝುಂಕಾರದಿಂದಲೂ, ಪಕ್ಷಿಗಳ ಕೋಲಾಹಲದಿಂದಲೂ ಕೂಡಿದ ಹೂತೋಟಗಳೂ, ಹಂಸಕಾರಂಡವಾದಿಜಲಪಕ್ಷಿಗಳ ಮಧುರಧ್ವನಿಯಿಂದ ಶೋಭಿತಗಳಾದ ತಾವರೆಕೊಳಗಳೂ ಕಂಗೊಳಿಸುತಿದ್ದುವು. ಹೀಗೆ ಶೋಭಾಸ್ಪದವಾದ ಆ ನಂದಗೋಕುಲದ ಸೊಗಸನ್ನು ನೋಡುತ್ತ ಉದ್ಧವನು, ರಥವನ್ನು ಬಿಟ್ಟುಕೊಂಡು ಮುಂದೆ ಹೋದನು. ಕೃಷ್ಣನಿಗೆ ಪ್ರಿಯಮಿತ್ರನಾದ ಉದ್ಧವನು ಬಂದಿರುವ

ಸಂಗತಿಯನ್ನು ಕೇಳಿ, ನಂದನು, ಕೃಷ್ಣನೇ ಬಂದಂತೆ ಭಾವಿಸಿ, ತಾನಾಗಿಯೇ ಇದಿರುಗೊಂಡು ಬಂದು, ಸಂತೋಷದಿಂದ ಅವನನ್ನಾಲಿಂಗಿಸಿ, ಸರ್ವೋಪಚಾರಗಳಿಂದ ಪೂಜಿಸಿದನು. ಅವನಿಗೆ ಮೃಷ್ಟಾನ್ನವನ್ನಿಕ್ಕಿ ಭೋಜನಮಾಡಿಸಿದನು. ಸುಖಾಸನವನ್ನು ಕೊಟ್ಟು ಕುಳ್ಳಿರಿಸಿದನು. ಆಯಾಸಪರಿಹಾರವಾಗುವಂತೆ, ಅವನ ಕಾಲುಗಳನ್ನು ತನ್ನ ಕೈಯಿಂದೊತ್ತುತಿದ್ದನು. ಇನ್ನೂ ಅವನಿಗೆ ಬೇಕಾದ ಉಪಚಾರಗಳೆಲ್ಲವನ್ನೂ ನಡೆಸಿದನು. ಆಮೇಲೆ ಸುಖಾಸೀನನಾಗಿ ಕುಳಿತಿದ್ದ ಆ ಉದ್ಧವನನ್ನು ಕುರಿತು ಪ್ರಶ್ನೆಮಾಡುವನು. “ಓ ಮಹಾಭಾಗಾ! ಉದ್ಧವಾ! ನನ್ನ ಮಿತ್ರನಾದ ವಸುದೇವನು. ಕಂಸನ ಸೆರೆಯಿಂದ ತಪ್ಪಿಬಂದಮೇಲೆ, ತನ್ನ ಇಷ್ಟಮಿತ್ರಬಂಧುಗಳೊಡಗೂಡಿ ಕ್ಷೇಮದಿಂದಿರುವನಷ್ಟೆ? ಪಾಪಿಯಾದ ಕಂಸನು ತನ್ನ ದುಷ್ಕೃತ್ಯಕ್ಕೆ ಫಲವಾಗಿ ತನ್ನ ಪರಿವಾರಗಳೊಡನೆ ಹತನಾದುದು ನಮ್ಮ ಭಾಗ್ಯವು! ಅವನು ಧರ್ಮಶೀಲರಾಗಿಯೂ, ಸಾಧುಗಳಾಗಿಯೂ ಇದ್ದ ಯಾದವರನ್ನು ನಿಷ್ಕಾರಣವಾಗಿ ಹಿಂಸಿಸುತಿದ್ದನು. ಅದುಹಾಗಿರಲಿ! ನಮ್ಮ ಕೃಷ್ಣನು, ಇಲ್ಲಿ ತನ್ನ ತಾಯಿಯನ್ನೂ, ತನ್ನ ಮಿತ್ರರನ್ನೂ, ಇಷ್ಟಬಂಧುಗಳನ್ನೂ, ಇಲ್ಲಿನ ಗೋಪಾಲಕರನ್ನೂ, ತನ್ನನ್ನೇ ದಿಕ್ಕಾಗಿ ನಂಬಿದ್ದ ಈ ನಮ್ಮ ಮಂದೆಯನ್ನೂ, ಇಲ್ಲಿನ ಗೋವುಗಳನ್ನೂ, ಈ ಬೃಂದಾವನಗಿರಿಯನ್ನೂ ಸ್ಮರಣೆಗೆ ತಂದುಕೊಳ್ಳುತ್ತಿರುವನಷ್ಟೆ? ಆ ಗೋವಿಂದನು ತನ್ನ ಕಡೆಯವರಾದ ನಮ್ಮನ್ನು ನೋಡುವುದಕ್ಕಾಗಿ ಒಂದಾವರ್ತಿಯಾದರೂ ಇಲ್ಲಿಗೆ ಬರಬಹುದೆ? ಹಾಗೆ ಬಂದಪಕ್ಷದಲ್ಲಿ, ಎಸಳಾದ ಮೂಗಿನಿಂದಲೂ, ಅರಳಿದ ಕಣ್ಣುಗಳಿಂದಲೂ, ಮಂದಹಾಸದಿಂದಲೂ ಮನೋಹರವಾದ ಆತನ ಮುಖಕಮಲವನ್ನು ನೋಡಬಹುದಾದ ಭಾಗ್ಯವು ನಮಗ ಲಭಿಸುವುದು! ಮಹಾತ್ಮನಾದ ಆ ಕೃಷ್ಣನಿಂದಲ್ಲವೇ ನಮಗೆ ಬಂದ ಅಪಮೃತ್ಯುಗಳೆಲ್ಲವೂ ತಪ್ಪಿದುವು. ಕಾಡುಗಿಚ್ಚಿನಿಂದ ನಮ್ಮನ್ನು ತಪ್ಪಿಸಿದನು! ಮಳೆಗಾಳಿಗಳ ಬಾಧೆಯಿಂದ ಕಾಪಾಡಿದನು! ವೃಷಾಸುರನಿಂದಲೂ, ಕಾಳಿಯನಿಂದಲೂ ಇನ್ನೂ ಅನೇಕವಿಧವಾದ ಅತ್ಯಾಹಿತಗಳಿಂದಲೂ ನಮ್ಮನ್ನು ರಕ್ಷಿಸಿದನು! ಆ ಕೃಷ್ಣನ ವೀರಕಾರ್ಯಗಳೂ, ಅವನ ಕಟಾಕ್ಷಸೌಂದರ್ಯವೂ, ಅವನ ಮಂದಹಾಸವೂ, ಅವನ

ಮುದ್ದುಮಾತುಗಳೂ ನಮ್ಮ ಸ್ಮರಣೆಗೆ ಬಂದಹಾಗೆಲ್ಲಾ, ನಮಗೆ ಇತರ ಕಾರ್ಯಗಳಲ್ಲಿ ಕೈಕಾಲುಗಳೇ ಆಡದಂತೆ ನಿಂತುಹೋಗುವುವು. ಅವನು ನಡೆಸಿದ ಲೀಲೆಳೆಲ್ಲವೂ ಈಗಲೂ ನಮ್ಮ ಕಣ್ಣಿನಲ್ಲಿ ಕಟ್ಟಿರುವುವು. ಇಲ್ಲಿನ ಪರ್ವತಾರಣ್ಯಗಳಲ್ಲಿಯೂ, ನದೀತೀರಗಳಲ್ಲಿಯೂ, ಇತರ ಕ್ರೀಡಾಸ್ಥಾನಗಳಲ್ಲಿಯೂ ಆ ಕೃಷ್ಣನ ಹಜ್ಜೆಯ ಗುರುತುಗಳಿಂದಲಂಕೃತವಾದ ಭೂಪ್ರದೇಶಗಳನ್ನು ನೋಡಿದಹಾಗೆಲ್ಲಾ, ನಮ್ಮಮನಸ್ಸು ತನ್ಮಯತ್ವವನ್ನು ಹೊಂದಿದಂತಾಗುವುದು. ಉದ್ಧವಾ! ಹಿಂದೆ ಗರ್ಗಾಚಾರ್ಯನು ನನಗೆ ಹೇಳಿದ್ದಂತೆ, ಆ ರಾಮಕೃಷ್ಣರಿಬ್ಬರೂ ದೇವತೆಗಳ ಕಾರ್ಯಾರ್ಥವಾಗಿ ಭೂಲೋಕದಲ್ಲಿ ಅವತರಿಸಿರುವ ಪುರಾಣಪುರುಷಂಬುದರಲ್ಲಿ ಸಂದೇಹವಿಲ್ಲ! ಅವರು ಆಗಾಗ ನಡೆಸಿದ ಅದ್ಭುತಕಾರ್ಯಗಳಿಂದಲೇ ಇದು ವ್ಯಕ್ತವಾಗುವುದು. ಸಾವಿರಾನೆಗಳ ಬಲವುಳ್ಳ ಕಂಸನನ್ನೂ, ಅವನ ಕಡೆಯ ಜಟ್ಟಿಗಳನ್ನೂ, ಕುವಲಯಾಪೀಡವೆಂಬ ಗಜವನ್ನೂ, ಕೃಷ್ಣನು, ಸಿಂಹವು ಮೃಗಗಳನ್ನು ಕೊಲ್ಲುವಂತೆ ಲೀಲಾಮಾತ್ರದಿಂದ ಕೊಂದನಲ್ಲವೆ? ಇದಕ್ಕಿಂತಲೂ ಬೇರೆ ನಿದರ್ಶನವೇಕೆ? ಇದಲ್ಲದೆ ಮೂರುತಾಳೆಯ ಮರಗಳಷ್ಟು ಉದ್ದವಾದ ಮತ್ತು ದೃಢವಾದ ಧನುಸ್ಸನ್ನು, ಆನೆಯು ಕಬ್ಬಿನ ಜಲ್ಲೆಯನ್ನು ಮುರಿಯುವಂತೆ ಮುರಿದುಹಾಕಿದನು. ಗೋವರ್ಧನಪರ್ವತವನ್ನು ಒಂದೇ ಕೈಯಿಂದ ಮೇಲಕ್ಕೆತ್ತಿ ಏಳುದಿನಗಳವರೆಗೆ ಹಾಗೆಯೇ ನಿಂತಿದ್ದನು. ಪ್ರಲಂಬ, ಧೇನುಕ, ಅರಿಷ್ಟ, ತೃಣಾವರ್ತ, ಬಕ, ಮುಂತಾದ ವೀರರಾಕ್ಷಸರು ದೇವಾಸುರರನ್ನೂ ಜಯಿಸಿದ ಮಹಾವೀರ್ಯವುಳ್ಳವರಾಗಿದ್ದರೂ, ಅವರೆಲ್ಲರನ್ನೂ ಲೀಲಾಮಾತ್ರದಿಂದ ಸಂಹರಿಸಿದನು. ಇಂತಹ ಅತಿಮಾನುಷಕೃತ್ಯಗಳನ್ನು ನಡೆಸಿರುವ ಆ ರಾಮಕೃಷ್ಣರನ್ನು ಸಾಮಾನ್ಯಬಾಲಕರೆಂದು ಹೇಳಬಹುದೆ?" ಎಂದನು. ಹೀಗೆ ನಂದನು ಕೃಷ್ಣನಲ್ಲಿ ನಟ್ಟ ಮನಸ್ಸುಳ್ಳವನಾಗಿ, ಅವನು ನಡೆಸಿದ ಒಂದೊಂದು ಕಾರ್ಯಗಳನ್ನೂ ನೆನೆಸಿಕೊಂಡು, ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತ, ಅವನಲ್ಲಿರುವ ಪುತ್ರವಾತ್ಸಲ್ಯದಿಂದ ಮೈಮರೆತು ಮಾತಾಡಲಾರದೆ ಸುಮ್ಮನಾದನು. ಯಶೋದಾದೇವಿಯೂಕೂಡ, ನಂದನು ವರ್ಣಿಸುತಿದ್ದ ಕೃಷ್ಣನ ಗುಣಗಳನ್ನು ಕೇಳಿ, ಪುತ್ರವಾತ್ಸಲ್ಯದಿಂದ ತೊರೆಯಿಕ್ಕು

ವ ಸ್ತನಗಳುಳ್ಳವಳಾಗಿ ಆನಂದಬಾಷ್ಪವನ್ನು ಸುರಿಸುತಿದ್ದಳು. ಹೀಗೆ ನಂದ ಯಶೋದೆಯರಿಬ್ಬರೂ ಕೃಷ್ಣನಲ್ಲಿ ತೋರಿಸುತ್ತಿರುವ ಪ್ರೇಮವನ್ನೂ, ಎಣೆಯಿಲ್ಲದ ಅನುರಾಗವನ್ನೂ ನೋಡಿ, ಉದ್ಧವನು ಸಂತೋಷಭರಿತನಾಗಿ ನಂದನನ್ನು ಕುರಿತು ಹೀಗೆಂದು ಹೇಳುವನು. "ಓ ಪೂಜ್ಯಾ! ನಂದಾ! ದಂಪತಿಗಳಾದ ನಿಮ್ಮಿಬ್ಬರಿಗೂ, ಲೋಕಗುರುವಾದ ಆ ನಾರಾಯಣನಲ್ಲಿ, ನಿಷ್ಕಲ್ಮಷವಾದ ಇಂತಹ ಅನುರಾಗಬುದ್ಧಿಯು ಹುಟ್ಟಿರುವುದರಿಂದ,ಲೋಕ ದಲ್ಲಿ ನೀವೇ ಧನ್ಯರು! ದೇವತೆಗಳೂ ನಿಮ್ಮನ್ನು ಕೊಂಡಾಡುವುದರಲ್ಲಿ ಸಂ ದೇಹವಿಲ್ಲ! ನಿಮ್ಮಲ್ಲಿ ಪುತ್ರಭಾವದಿಂದ ಬೆಳೆದ ರಾಮಕೃಷ್ಣರಿಬ್ಬರೂ ಸಾ ಮಾನ್ಯಬಾಲಕರಲ್ಲ! ಈ ಪ್ರಪಂಚಕ್ಕೆ ಕಾರಣವೆನಿಸಿಕೊಂಡ ಪೃಥಿವ್ಯಾ ದಿಭೂತಗಳಿಗೂ ಅವರೇ ಕಾರಣಭೂತರು. ಅವರೇ ಪ್ರಕೃತಿಪುರುಷ ರನ್ನು ಶರೀರವಾಗಿ ಉಳ್ಳ ಪುರಾಣಪುರುಷರು! ದೇವಮನು ಷ್ಯಾದಿ ನಾನಾರೂಪಗಳಲ್ಲಿರುವ ಭೂತಗಳಲ್ಲಿದ್ದು, ಜ್ಞಾನಪ್ರವರ್ತನೆಯ ನ್ನು ಮಾಡತಕ್ಕವರೂ ಅವರೇ! ಪ್ರಾಣಿಗಳು ತಮ್ಮ ಪ್ರಾಣವಿಯೋಗ ಕಾಲದಲ್ಲಿಯಾದರೂ ಕ್ಷಣಮಾತ್ರದವರೆಗೆ, ವಿಷಯಾಂತರಗಳಲ್ಲಿ ಆಸೆಯ ನ್ನು ಬಿಟ್ಟು ಯಾವನನ್ನು ಧ್ಯಾನಿಸಿದಮಾತ್ರಕ್ಕೆ, ತಮ್ಮ ಕರ್ಮವಾಸನೆಯೆಲ್ಲ ವನ್ನೂ ಕಳೆದು, ಜ್ಞಾನಮಯವಾದ ಅಪ್ರಾಕೃತಸ್ವರೂಪವನ್ನು ಹೊಂದಿ, ಉತ್ತಮಗತಿಯನ್ನೂ ಪಡೆಯುವರೋ, ಅಂತಹ ಜಗತ್ಕಾರಣಭೂತನಾದ ನಾರಾಯಣನಲ್ಲಿ, ಸಾಧುಸಂರಕ್ಷಣಾರ್ಥವಾಗಿ ಲೀಲಾಮಾನುಷವಿಗ್ರಹ ವನ್ನು ಧರಿಸಿರುವ ಆ ಶ್ರೀಕೃಷ್ಣನಲ್ಲಿ, ನಿಮಗೆ ಈ ವಿಧವಾದ ಅನುರಾಗವು ಹುಟ್ಟಿದಮೇಲೆ, ಇನ್ನು ನೀವು ಪಡೆಯಬೇಕಾದ ಅಭೀಷ್ಟವೇನಿದೆ?ಇನ್ನು ನೀ ವು ಕೃತಾರ್ಥರು! ಇದಕ್ಕಿಂತಲೂ ನೀವು ಈ ಲೋಕದಲ್ಲಿ ಪಡೆಯಬೇಕಾದ ಭಾಗ್ಯವಿಲ್ಲ! ನಿಮಗೆ ಇನ್ನು ಯಾವವಿಧದಲ್ಲಿಯೂ ಕೊರತೆಯಿಲ್ಲ! ಓ ನಂದಾ! ಅಚ್ಯುತನು ಶೀಘ್ರದಲ್ಲಿಯೇ ಈ ನಿಮ್ಮ ಗೋಕುಲಕ್ಕೆ ಬರುವನು. ಯದು ಕುಲಪತಿಯಾದ ಕೃಷ್ಣನು, ಇನ್ನು ಸ್ವಲ್ಪಕಾಲದಲ್ಲಿಯೇ ತಂದೆತಾಯಿ ಗಳಾದ ನಿಮ್ಮ ಮನಸ್ಸನ್ನು ಸಂತೋಷಗೊಳಿಸುವನು! ಕೃಷ್ಣನು ಯದು ಕುಲದ್ರೋಹಿಯಾದ ಆ ಕಂಸನನ್ನು ಕೊಂದಮೇಲೆ, ನಿಮ್ಮಲ್ಲಿಗೆ ಬಂದು ಹೇ

ಳಿಹೋದಂತೆಯೇ, ಅವನು ಇಲ್ಲಿಗೆ ಬರುವುದರಲ್ಲಿ ಸಂದೇಹವಿಲ್ಲ! ಅವನು ಆಡಿದಮಾತಿಗೆ ತಪ್ಪಿನಡೆಯಲಾರನು! ನೀವು ಚಿಂತಿಸಬೇಕಾದುದಿಲ್ಲ! ನೀವು ಶೀಘ್ರದಲ್ಲಿಯೇ ಅವನನ್ನು ಇಲ್ಲಿ ನೋಡಬಹುದು! ಅಥವಾ ಈಗಲೂ ಕೃಷ್ಣನು ನಿಮ್ಮನ್ನು ಬಿಟ್ಟುಹೋಗಿರುವನೆಂದು ತಿಳಿಯಬೇಡಿರಿ! ಅರಣಿಯಲ್ಲಿರುವ ಅಗ್ನಿಯಂತೆ, ಅವನು ಯಾವಾಗಲೂ, ಎಲ್ಲರ ಹೃದಯದಲ್ಲಿಯೂ ಗೂಢವಾಗಿ ಅಡಗಿರುವನು. ಅರಣಿಕಾಷ್ಠಗಳನ್ನು ಚಿಚ್ಚಿದಾಗಲ್ಲವೇ ಅಗ್ನಿಯು ಹೊರಕ್ಕೆ ಬರುವುದು? ಅದರಂತೆ ಹೃದ್ಗತನಾದ ಆ ಪರಮಾತ್ಮನನ್ನು ಭಕ್ತಿಭಾವದಿಂದ ಕಂಡುಕೊಳ್ಳಬಹುದು. ಆದರೆ "ಆಕೃಷ್ಣನಿಗೆ, ಹೆತ್ತತಾಯಿತಂದೆಗಳಾದ ದೇವಕೀವಸುದೇವರರು ನಮಗಿಂತಲೂ ಹೆಚ್ಚು ಪ್ರಿಯರಾಗಿರುವಾಗ, ಅವರನ್ನು ಬಿಟ್ಟು ಇಲ್ಲಿಗೆ ಬರುವನೆ?" ಎಂದು ನೀವು ಶಂಕಿಸಬೇಡಿರಿ! ಅವನಿಗೆ ಒಬ್ಬನು ಪ್ರಿಯನೆಂದೂ, ಮತ್ತೊಬ್ಬನು ಅಪ್ರಿಯನೆಂದೂ, ಉತ್ತಮನೆಂದೂ, ಅಧಮನೆಂದೂ, ಸಮಾನನೆಂದೂ ಭೇದಬುದ್ಧಿಯಿಲ್ಲ ಎಲ್ಲರಲ್ಲಿಯೂ ಸಮಬುದ್ಧಿಯುಳ್ಳವನು. ಏಕೆಂದರೆ, ಅವನಿಗೆ ಯಾವುದರಲ್ಲಿಯೂ "ತನ್ನದೆಂಬ ಮಮತೆಯೇ ಹುಟ್ಟಲಾರದು ಅವನಿಗೆ ತಂದೆ, ತಾಯಿ, ಹೆಂಡತಿ, ಮಕ್ಕಳು, ಎನ್ನವರು, ತನ್ನವರೆಂಬವರು ಯಾರೂ ಇಲ್ಲ!

ಅವನಿಗೆ ಕರ್ಮಸಂಬಂಧವಿಲ್ಲದುದರಿಂದ, ಕರ್ಮಾಯತ್ತವಾದ ದೇಹವೂ ಅವನಿಗಿರುವುದಿಲ್ಲ! ಹೀಗೆ ದೇಹಸಂಬಂಧವೇ ಇಲ್ಲದವನಿಗೆ, ಆ ದೇಹದ ಮೂಲಕವಾಗಿ ಏರ್ಪಡುವ ಬಂಧುತ್ವಾಭಿಮಾನವೆಲ್ಲಿಯದು? ಅವನು ತಾನಾಗಿ ಸ್ವೇಚ್ಛೆಯಿಂದ ಅವತಾರವನ್ನೆತ್ತುವನೇಹೊರತು ನಮ್ಮಂತೆ ಅವನಿಗೆ ಉತ್ತಮಮಧ್ಯಮಾಧಮಗಳೆನಿಸಿಕೊಂಡ ದೇವಾದಿ ಜನ್ಮಗಳೂ ಇಲ್ಲ ಅವನು ಈ ಅವತಾರಗಳನ್ನು ಕೈಕೊಳ್ಳುವುದೂ ಲೋಕಕ್ಷೇಮಕ್ಕಾಗಿಯೇಹೊರತು ಬೇರೆಯಲ್ಲ. ಇವೆಲ್ಲವೂ ಅವನ ಲೀಲೆಗಳು! ಮತ್ತು ಅವನು, ಸತ್ವ,ರಜಸ್ಸು, ತಮಸ್ಸು ಎಂಬೀ ಮೂರುಗುಣಗಳಿಗೆ ವಶನಲ್ಲದಿದ್ದರೂ, ಲೀಲಾರ್ಥವಾಗಿಯೇ ಅವುಗಳನ್ನು ಕೈಕೊಂಡು, ಸೃಷ್ಟಿ, ಸ್ಥಿತಿ, ಸಂಹಾರಗಳನ್ನು, ನಡೆಸುತ್ತಿರುವನು. ಮನುಷ್ಯನು ತನ್ನಷ್ಟಕ್ಕೆ ತಾನು ಸುತ್ತುವಾಗ, ಅವನ ಕಣ್ಣಿಗೆ ಸ್ಥಿರವಾದ ಭೂಮಿಯೂ ಸುತ್ತುತ್ತಿರುವ

ಹಾಗೆ ಕಾಣುವುದಲ್ಲವೆ? ಅದರಂತೆಯೇ ಕರ್ಮಮಾರ್ಗದಲ್ಲಿ ತೊಳಲುತ್ತಿರುವ ಜೀವನು ತನ್ನಂತೆಯೇ ಆ ಕೃಷ್ಣನನ್ನೂ ಭಾವಿಸಬಹುದು. ಓ ನಂದಾ! ಭಗವಂತನಾದ ಕೃಷ್ಣನು ನಿಮಗೆಮಾತ್ರವೇ ಆತ್ಮಜ (ಮಗ) ನಲ್ಲ! ಸಮಸ್ತಪ್ರಾಣಿಗಳಲ್ಲಿಯೂ ಅಂತರಾತ್ಮನಾಗಿರುವುದರಿಂದ ಎಲ್ಲರಿಗೂ ಆತ್ಮಜನೆನಿಸಿರುವನು. ಮತ್ತು ಎಲ್ಲರಿಗೂ ಅವನೇ ತಂದೆ! ಅವನೇ ತಾಯಿ! ಪಾಲಿಸತಕ್ಕ ಪ್ರಭುವೂ ಆತನೇ! ಅಷ್ಟೇಕೆ? ನಾವು ಕಣ್ಣಿಂದ ಕಾಣುವುದು. ಕಿವಿಯಿಂದ ಕೇಳುವುದು, ಹಿಂದೆ ಹುಟ್ಟಿದುದು, ಮುಂದೆ ಹುಟ್ಟತಕ್ಕುದು, ಈಗ ಇರತಕ್ಕುದು, ಸ್ಥಿರಚರಗಳು, ಎಲ್ಲಕ್ಕಿಂತಲೂ ಮಹತ್ತಾದುದು, ಅತ್ಯಲ್ಪವಾದುದು, ಇವೆಲ್ಲವೂ ಆ ಪರಮಾತ್ಮನ ಸ್ವರೂಪವೆಂದೇ ತಿಳಿ! ಆ ಅಚ್ಯುತನಿಲ್ಲದ ವಸ್ತುವೊಂದಾದರೂ ಇಲ್ಲ! ಸಮಸ್ತಲೋಕಕ್ಕೂ ಅಂತರಾತ್ಮನಾಗಿ ನಿಯಮಿಸತಕ್ಕವನೇ ಅವನಾದುದರಿಂದ ಜಗತ್ತೆಲ್ಲವೂ ಅವನೇ!" ಎಂದನು.

ಹೀಗೆ ನಂದನೂ, ಉದ್ಧವನೂ ಪರಸ್ಪರಸಂಭಾಷಣಗಳನ್ನು ಮಾಡುತ್ತಿರುವುದರಲ್ಲಿಯೇ ಆ ರಾತ್ರಿಯು ಕಳೆಯುತ್ತಬಂದಿತು. ಬೆಳಗಿನ ಜಾವದಲ್ಲಿಯೇ ಗೋಪಿಯರೆಲ್ಲರೂ ಎಚ್ಚರಗೊಂಡು, ದೀಪಗಳನ್ನು ಬೆಳಗಿಸಿ, ಮನೆಗೆಲಸಗಳನ್ನು ನೋಡುತಿದ್ದರು. ಮನೆಬಾಗಿಲುಗಳನ್ನು ಸಾರಿಸಿ ಗುಡಿಸಿ, ರಂಗೋಲೆಗಳಿಂದಲೂ, ಗಂಧಪುಷ್ಪಾದಿಗಳಿಂದಲೂ ಅಲಂಕರಿಸಿಟ್ಟು, ಮೊಸರನ್ನು ಕಡೆಯುವುದಕ್ಕೆ ಆರಂಭಿಸಿದರು ಮೊಸರನ್ನು ಕಡೆಯುವಾಗ ಅವರಿಗೆ, ಕೈಬಳೆಗಳ ಘುಲ್ಘುಲಧ್ವನಿ, ದೀಪಪ್ರಭೆಯಲ್ಲಿ ಥಳಥಳಿಸುತ್ತಿರುವ ರತ್ನಾಭರಣಗಳು! ಕುಲುಕಾಡುವ ಸ್ತನಜಘನಗಳು! ಕಂಠದಲ್ಲಿ ತೂಗಾಡುತ್ತಿರುವ ಮುತ್ತಿನ ಸರಗಳು! ಕೆನ್ನೆಯಲ್ಲಿ ಅಲುಗಾಡುತ್ತಿರುವ ಕಿವಿಯೋಲೆಗಳು! ಮುಖದಲ್ಲಿ ಕದಲಿದ ಕುಂಕುಮಪರಾಗಗಳು! ಇವೆಲ್ಲವೂ ಒಂದು ವಿಧವಾದ ಅಪೂರ್ವಶೋಭೆಯನ್ನುಂಟುಮಾಡುತಿದ್ದುವು ಆ ಗೋಪಸ್ತ್ರೀಯರು, ಶ್ರೀಕೃಷ್ಣನ ಗುಣವರ್ಣನರೂಪವಾದ ಹಾಡುಗಳನ್ನು ಹಾಡುತ್ತ ಮೊಸರನ್ನು ಕಡೆಯುವಾಗ, ಉತ್ಸಾಹದಿಂದುಬ್ಬಿದ ಅವರ ಕಂಠಧ್ವನಿಯೂ, ಕಡೆಯುವ ಧ್ವನಿಯೂ ಒಂದಾಗಿ ಕಲೆತು, ದಿಕ್ಕುಗಳನ್ನೂ, ಆ

ಕಾಶವನ್ನೂ ವ್ಯಾಪಿಸಿ, ಅಲ್ಲಲ್ಲಿನ ಅಮಂಗಳಗಳೆಲ್ಲವನ್ನೂ ನೀಗಿಸುವಂತಿದ್ದು ವು. ಇಷ್ಟರಲ್ಲಿ ಸೂರ್ಯೋದಯವಾಗಿ, ಗೋಪಸ್ತ್ರೀಯರೆಲ್ಲರೂ ಒಬ್ಬೊಬ್ಬರಾಗಿ ಹೊರಗೆ ಬಂದು ನೋಡುವಷ್ಟರಲ್ಲಿ ಅವರಿಗೆ ಊರುಬಾಗಿಲಲ್ಲಿದ್ದ ಸುವರ್ಣಮಯವಾದ ರಥವು ಕಾಣಿಸಿತು. ಅದನ್ನು ನೋಡಿದೊಡನೆ ಸಂಭ್ರಮದಿಂದ ಒಬ್ಬರಿಗೊಬ್ಬರು. “ಆಹಾ ! ಇದೇನು?” ಈ ರಥವು ಯಾರದು? ಕಂಸನ ದುರ್ಬೋಧನೆಯಿಂದ ನಮ್ಮ ಕೃಷ್ಣನನ್ನು ಮಥುರೆಗೆ ಕರೆದುಕೊಂಡು ಹೋದ ಕ್ರೂರನಾದ ಆ ಅಕ್ರೂರನೇ ತಿರುಗಿ ಇಲ್ಲಿಗೆ ಬಂದನೇನು ? ಅವನು ತಿರುಗಿ ಇಲ್ಲಿಗೆ ಬರಬೇಕಾದ ಕಾರ್ಯವೇನು ? ಕೃಷ್ಣನ ಕೈಯಿಂದ ಹತನಾದ ತನ್ನ ಪ್ರಭುವಿಗೆ ಅಪರಸಂಸ್ಕಾರಗಳನ್ನು ನಡೆಸುವಾಗ ನಮ್ಮ ದೇಹಮಾಂಸದಿಂದ ಪಿಂಡವನ್ನು ಹಾಕಬೇಕೆಂದು ಬಂದಿರವನೇನು?” ಎಂದು ಆ ಸ್ತ್ರೀಯರೆಲ್ಲರೂ ಕೃಷ್ಣವಿಯೋಗದಿಂದ ಕುದಿಯುತ್ತ, ಬಾಯಿಗೆ ಬಂದಹಾಗೆ ಮಾತಾಡುತ್ತಿರುವಾಗಲೇ, ಉದ್ಧವನೂ, ಪ್ರಾತಃಕಾಲದ ಆಹ್ನಿಕಗಳನ್ನು ಮುಗಿಸಿಕೊಂಡು ಅಲ್ಲಿಗೆ ಬಂದನು. ಇದು ನಾಲ್ವತ್ತಾರನೆಯ ಅಧ್ಯಾಯವು.

---

ಉದ್ಧವನಿಗೂ ಗೋಪಿಯರಿಗೂ ನಡೆದ ಸಂಭಾಷಣಗಳು.

ಭ್ರ ಮ ರ ಗೀ ತೆ.

ರಾಜಾ ! ಕೇಳು ! ಆ ಉದ್ಧವನಿಗಾದರೋ ಕಮಲದಳದಂತೆ ಕಣ್ಣುಗಳು! ಮೊಳಕಾಲಿನವರೆಗೆ ನೀಡಿದ ಭುಜಗಳು ! ನಡುವಿನಲ್ಲಿ ಹೊಂಬಣ್ಣದ ಪಟ್ಟೆಮಡಿ! ಕಂಠದಲ್ಲಿ ಕಮಲಮಾಲಿಕೆ! ಕಮಲದಂತೆ ಮನೋಹರವಾದ ಮುಖದ ಸೊಗಸು! ಕಿವಿಯಲ್ಲಿ ಥಳಥಳಿಸುವ ಕರ್ಣಕುಂಡಲಗಳು! ಇಂತಹ ಶುಭಲಕ್ಷಣಗಳುಳ್ಳ ಆ ಉದ್ಧವನನ್ನು ಕಂಡಾಗ,ಗೋಪಸ್ತ್ರೀಯರಿಗೆ ಸಾಕ್ಷಾತ್ತಾಗಿ ಆ ಕೃಷ್ಣನನ್ನೇ ನೋಡಿದಂತಾಯಿತು. ಗೋಪಸ್ತ್ರೀಯರೆಲ್ಲರೂ ಆತನ ವನ್ನು ಕಂಡೊಡನೆ ಆಶ್ಚರ್ಯಭರಿತರಾಗಿ, ಮಂದಹಾಸದಿಂದ ಒಬ್ಬರಿಗೊಬ್ಬರು “ಏನಿದು! ಸುಂದರಾಕಾರವುಳ್ಳ ಈತನು ಯಾರಿರಬಹುದು? ಎಲ್ಲಿಂದ ಬಂದವನು ? ಯಾರ ಕಡೆಯವನು? ಇವನ ವೇಷಭೂಷಣಗಳೆಲ್ಲವೂ

ಕೃಷ್ಣನನ್ನೇ ಹೋಲುತ್ತಿರುವುವು?" ಎಂದು ಒಬ್ಬರಿಗೊಬ್ಬರು ಪ್ರಶ್ನೆಮಾ ಡುತ್ತ, ಎಲ್ಲರೂ ಆ ಉದ್ಧವನ ಸುತ್ತಲೂ ಬಂದು ನೆರೆದು ನೋಡುತ್ತಿದ್ದರು. ಒಬ್ಬೊಬ್ಬರೂ ಬಹಳವಿನಯದಿಂದ ಅವನ ಸಮೀಪಕ್ಕೆ ಬಂದು, ಲಜ್ಜಾಗ ರ್ಭಿತವಾದ ತಮ್ಮ ಮುಗುಳ್ನಗೆಯಿಂದಲೂ, ಪ್ರೀತಿಪೂರ್ವಕವಾದ ನೋಟ ದಿಂದಲೂ, ಪ್ರಿಯವಚನಗಳಿಂದಲೂ ಅವನನ್ನು ಸತ್ಕರಿಸಿ, ಸುಖಾಸನವ ನ್ನುಕೊಟ್ಟು ಕುಳ್ಳಿರಿಸಿದರು. ಅವನ ಗುಣರೂಪಾದಿಗಳಿಂದ ಅವನು ಕೃಷ್ಣನಕಡೆಯವನಾಗಿರಬಹುದೆಂದು ತಿಳಿದುಕೊಂಡು, ಏಕಾಂತದಲ್ಲಿ ಅ ವನನ್ನುಕುರಿತು ಪ್ರಶ್ನೆಮಾಡುವರು. “ಓ ಸೌಮ್ಯಾ! ನಿನ್ನನ್ನು ನೋಡಿದ ರೆ ಕೃಷ್ಣನ ಕಡೆಯವನೆಂದು ತೋರುವುದು! ನಿನ್ನ ಪ್ರಭುವಾದ ಕೃಷ್ಣನು ತನ್ನ ತಂದೆತಾಯಿಗಳಿಗೆ ಪ್ರಿಯವನ್ನುಂಟುಮಾಡುವುದಕ್ಕಾಗಿ, ಅವರಿಗೆ ನಿನ್ನ ಮೂಲಕವಾಗಿ ಕ್ಷೇಮಲಾಭಗಗಳನ್ನು ಹೇಳಿ ಕಳುಹಿಸಿರಬಹು ದಲ್ಲವೆ? ಹಾಗೆಯೇ ಇರಬೇಕು! ಹಾಗಿಲ್ಲದಿದ್ದರೆ, ಈ ಹಳ್ಳಿಯಲ್ಲಿ ಅವನಿಗೆ, ತ ನ್ನತಂದೆತಾಯಿಗಳು ಹೊರತು ಬೇರೆ ಯಾವುದೂ ನೆನಪಿಗೆ ತಕ್ಕ ವಿಷಯಗ ಳಿಲ್ಲ! ಬಂಧುಸ್ನೇಹವೆಂಬುದು, ಜಿತೇಂದ್ರಿಯನಾದ ಯೋಗಿಯ ಮನಸ್ಸ ನ್ನಾದರೂ ಎಳೆಯದೆ ಬಿಡಲಾರದು! ಹಾಗಿಲ್ಲದೆ ಯಾವುದೋ ಒಂದು ಕಾ ರ್ಯೋದ್ದೇಶದಿಂದ ಆಗಂತುಕವಾಗಿ ಒಬ್ಬರಿಗೊಬ್ಬರಿಗೆ ಹುಟ್ಟಿದ ಪ್ರೀತಿ ಯು, ಆ ಕಾರ್ಯವು ಮುಗಿಯುವವರೆಗೆಮಾತ್ರ ಇರುವುದೇಹೊರತು ಸ್ಥಿರ ವಲ್ಲ! ಇದರಲ್ಲಿ ಮುಚ್ಚುಮರೆಯೇಕೆ? ಸ್ಪಷ್ಟವಾಗಿಯೇ ಹೇಳುವೆವು ಕೇ ಳು! ಗಂಡಸು ಹೆಂಗಸರಲ್ಲಿ ತೋರಿಸತಕ್ಕ ಪ್ರೇಮವು, ಭ್ರಮರಗಳಿಗೆ ಪುಷ್ಪ ಗಳಲ್ಲಿರುವ ಪ್ರೇಮದಷ್ಟೇಹೊರತು ಅದಕ್ಕಿಂತಲೂ ಹೆಚ್ಚಿಲ್ಲ! ದುಂಬಿಗ ಳು ಮಕರಂದರಸವನ್ನು ಕುಡಿದುಬಿಟ್ಟಮೇಲೆ, ಆ ಪುಷ್ಪಗಳನ್ನು ಕಣ್ಣೆ ತ್ತಿಯಾದರೂ ನೋಡುವುವೆ? ಅದರಂತೆಯೇ ಗಂಡಸರೂ, ತಮ್ಮ ಆಸೆಯು ತೀರಿದಮೇಲೆ ಹೆಂಗಸರಕಡೆಗೆ ಕಣ್ಣೆತ್ತಿಯೂ ನೋಡಲಾರರು. ಹೀಗೆಯೇ ಲೋಕದಲ್ಲಿ ವೇಶ್ಯಾಸ್ತ್ರೀಯರು, ಧನಹೀನನಾದ ವಿಟನನ್ನೂ, ಪ್ರಜೆಗಳು ಶಕ್ತಿಹೀನನಾದ ರಾಜನನ್ನೂ, ಶಿಷ್ಯರು ವಿದ್ಯೆಯನ್ನು ಕಲಿತಮೇಲೆ ಆಚಾ ರ್ಯನನ್ನೂ, ಋತ್ವಿಕ್ಕುಗಳು ದಕ್ಷಿಣೆಯು ಕೈಗೆ ಬಿದ್ದಮೇಲೆ ಯಜಮಾನನ

ನ್ನೂ, ಪಕ್ಷಿಗಳು ಫಲಹೀನವಾದ ವೃಕ್ಷವನ್ನೂ, ಅತಿಥಿಗಳು ಊಟವಾದ ಮೇಲೆ ಗೃಹಸ್ಥರ ಮನೆಗಳನ್ನೂ, ಮೃಗಗಳು ಬೆಂದುಹೋದ ಅರಣ್ಯವನ್ನೂ, ಜಾರಪುರುಷರು ತಮ್ಮ ಭೋಗದಾಸೆಯು ತೀರಿದಮೇಲೆ ಹೆಂಗಸರನ್ನೂ ಅನಾದರಿಸಿ ಹೋಗುವುದು ಸಹಜವು. ಕೃಷ್ಣನೂ ಈಗ ನಮ್ಮ ವಿಷಯದ ಲ್ಲಿ ಹಾಗೆಯೇ ಇರುವನು." ಎಂದರು. ಓ ರಾಜೇಂದ್ರಾ! ಹೀಗೆ ಗೋಪಿಯು ರು ಕೃಷ್ಣನ ಕಡೆಯಿಂದ ಬಂದ ಉದ್ಧವನನ್ನು ಕಂಡೊಡನೆ, ತಮ್ಮ ಗೃಹ ಕೃತ್ಯಗಳೆಲ್ಲವನ್ನೂ ಬಿಟ್ಟು, ಮನೋವಾಕ್ಕಾಯಗಳೆಂಬ ತ್ರಿಕರಣಗಳನ್ನೂ ಆಕೃಷ್ಣನ ವಿಷಯದಲ್ಲಿಯೇ ಅರ್ಪಿಸಿದವರಾಗಿ, ವಿರಹತಾಪದಿಂದ ಕುದಿಯು ತಿದ್ದರು. ಆ ಕೃಷ್ಣನ ಚರಿತ್ರಗಳನ್ನೇ ಬಾಯಿಂದ ಹಾಡುತ್ತಾ, ಆ ತನು ಶೈಶವದಲ್ಲಿಯೂ, ಬಾಲ್ಯದಲ್ಲಿಯೂ ನಡೆಸಿದ ಕಾರ್ಯಗಳೆಲ್ಲವನ್ನೂ ಮ ನಸ್ಸಿನಲ್ಲಿ ನೆನೆಸಿಕೊಂಡು, ಲಜ್ಜೆಯಿಲ್ಲದೆ ಅಳುವುದಕ್ಕೂ ಆರಂಭಿಸಿದರು.




ಅವರಲ್ಲಿ ಒಬ್ಬಳು, ಕೃಷ್ಣನ ಸಮಾಗಮವನ್ನು ಮನಸ್ಸಿನಲ್ಲಿ ಭಾವಿಸಿ ಕೊಂಡು, ತನ್ನ ಮುಂದೆ ಹಾರಾಡುತಿದ್ದ ಒಂದಾನೊಂದು ಭ್ರಮರವನ್ನು ನೋಡಿ, ಅದನ್ನೇ ಕೃಷ್ಣನು ತನ್ನ ಕಡೆಗೆ ಕಳುಹಿಸಿಕೊಟ್ಟ ದೂತನಂತೆ ಭಾ ವಿಸಿ ಹೀಗೆಂದು ಹೇಳುವಳು. "ಓಮಧುಪಾ! ನೀನು ಧೂರ್ತನಾದ ಆ ಕೃಷ್ಣನ ದೂತನಲ್ಲವೆ? ಅದಕ್ಕೆ ತಡೆಯೇನು? ನಮ್ಮ ಸವತಿಯರ ಕಂಠದ ಲ್ಲಿರುವ ಪುಷ್ಪಮಾಲಿಕೆಯಲ್ಲಿ ಬಿದ್ದು, ಅಲ್ಲಿನ ಸ್ತನಕುಂಕುಮದ ಧೂಳನ್ನು ಅಂ ಟಿಸಿಕೊಂಡು ಬಂದಿರುವೆಯಲ್ಲವೆ? ನಿನ್ನ ಮೀಸೆಯಿಂದ ನಮ್ಮ ಕಾಲಿಗೆ ಬೀಳಬೇ ಡಹೋಗು! ಆ ಮೀಸೆಯಿಂದ ನಮ್ಮ ಕಾಲನ್ನು ಮುಟ್ಟಬೇಡ! ಆ ನನ್ನ ಸವ ತಿಯರಕಾಲಿಗೇ ಬೀಳುವಂತೆ ಕೃಷ್ಣನಿಗೆ ಹೇಳು! ನೀನು ನಮ್ಮ ಕಾಲಿಗೆ ಬೀಳ ಬೇಕಾದುದಿಲ್ಲ! ನಿನ್ನ ಕೃಷ್ಣನಿಗೆ ನಮ್ಮ ಅನುಗ್ರಹವೇನೂ ಬೇಕಾದುದಿಲ್ಲ! ಆ ಕೃಷ್ಣನ ಕಪಟಪ್ರೇಮವನ್ನು ನಾಲ್ಕಾರುಜನಗಳಮುಂದೆ ಹೇಳಿ ಹಗ ರಣಮಾಡಬೇಕಾದುದೇ ಉಚಿತವು! ಹೊಸಹೆಂಗಸರನ್ನು ಹುಡುಕತಕ್ಕ ಆ ಕೃಷ್ಣನಿಗೆ, ಹೊಸಹೊಸ ಹೂಗಳನ್ನು ಹುಡುಕತಕ್ಕ ನೀನು ತಕ್ಕ ದೂ ತನೇ ಸರಿ!

ನೀನು ಒಂದಾವರ್ತಿ ಮುಟ್ಟಿ ಮಧುಪಾನಮಾಡಿದ ಹೂಗಳನ್ನು ಬಿಟ್ಟು ಹೋಗುವಂತೆ, ಅವನೂ ನಮಗೆ ಸಮಸ್ತತಾಪನಿವಾರಕವಾದ ತನ್ನ ಅಧರಾಮೃತವನ್ನು ಪಾನಮಾಡಿಸಿ ಬಿಟ್ಟುಹೋದನು. ಲಕ್ಷ್ಮೀದೇವಿಯು ಅವನನ್ನು ಹೇಗೆ ತಾನೇ ನಂಬಿ,ಅವನ ಪಾದಸೇವೆಯನ್ನುಮಾಡುತ್ತಿರುವಳೋ ಕಾಣೆವು? ಒಂದುವೇಳೆ ಅಲ್ಲಲ್ಲಿ ವೈದಿಕರಾದ ಯೋಗಿಗಳು, ಅವನವಿಷಯವಾಗಿ ಹೇಳುತ್ತಿರುವ ಸುಳ್ಳುಗುಣಗಳನ್ನು ಕೇಳಿ, ಅವಳು ಮೋಸಹೋಗಿರಬಹುದು. ಅಂತಹ ಮಾತಿಗೆ ನಾವು ಮರುಳಾಗುವವರಲ್ಲ! ಹೋಗು !

ಓ ಭೃಂಗವೆ! ನೀನು ಹಳ್ಳಿಯ ಹೆಂಗಸರಾಡ ನಮ್ಮ ಮುಂದೆ ಬಂದು ಸುಮ್ಮನೆ ಹೀಗೆ ಕೂಗುವುದರಿಂದ ಪ್ರಯೋಜನವಿಲ್ಲ!ಆ ಕೃಷ್ಣನನ್ನು ಕೊಂಡಾಡುವ ನಿನ್ನ ಗಾನಗಳಿಗೆ ನಾವೇನೂ ಮರುಳಾಗುವವರಲ್ಲ!ನಾವು ಬಹುಕಾಲದಿಂದ ಅವನನ್ನು ತಿಳಿದುಬಲ್ಲೆವು! ಮಧುರಾಪುರದಲ್ಲಿ ಆತನ ಕರಸ್ಪರ್ಶದಿಂದ ತಮ್ಮ ಸ್ತನಗಳ ನವೆಯನ್ನು ತೀರಿಸಿಕೊಂಡಿರುವ ಅಲ್ಲಿನ ಪುರಸ್ತ್ರೀಯರ ಮುಂದೆ ನೀನೂ ನಿಮ್ಮ ಕೃಷ್ಣನನ್ನು ಬೇಕಾದಷ್ಟು ಹೊಗಳು ! ಅವರೂ ನಿನ್ನ ಈ ಗಾನವನ್ನು ಇಷ್ಟದಿಂದ ಕೇಳುವರು! ನಿನ್ನ ಇಷ್ಟವನ್ನೂ ನೆರವೇರಿಸುವರು.

“ಒಂದುವೇಳೆ ಕೃಷ್ಣನು ತಾನಾಗಿ ಆಸೆಪಟ್ಟುಹೋದರೂ, ನಿಮ್ಮಂತೆಯೇ ಹಳ್ಳಿಯ ಗೊಲ್ಲನಾಗಿದ್ದ ಅವನನ್ನು ನಾಗರಕರಾದ ಪುರಸ್ತ್ರೀಯರು ಮೋಹಿಸುವರೆಂಬುದು ಹೇಗೆ ? ” ಎಂದು ಕೇಳುವೆಯೇನು ? ಸ್ವರ್ಗಮರ್ತ್ಯಪಾತಾಳಗಳೆಂಬ ಮೂರುಲೋಕಗಳಲ್ಲಿಯೂ, ಅವನಿಗೆ ಸಿಕ್ಕದ ಸ್ತ್ರೀಯರೊಬ್ಬರೂ ಇಲ್ಲ ! ಕಪಟವಾದ ಅವನ ಮಂದಹಾಸಕ್ಕೂ, ಅವನ ಹುಬ್ಬಿನಾಟಗಳಿಗೂ ಮರುಳಾಗದವರು ಯಾರೂ ಇಲ್ಲ ! ಸಾಕ್ಷಾಲ್ಲಕ್ಷ್ಮೀದೇವಿಯೂ, ಅವನ ಮೋಸಕ್ಕೆ ಮರುಳಾಗಿಯೇ ಅಲ್ಲವೇ, ಅವನ ಪಾದರಜಸ್ಸನ್ನು ಸೇವಿಸುತ್ತಿರುವಳು! ಆದರೆ ನಾವುಮಾತ್ರ ಹಾಗೆ ಮೋಸಹೋಗುವವರಲ್ಲವೆಂದು ತಿಳಿ ! ದೀನಜನರಮುಂದೆ ಆ ಕೃಷ್ಣನ ಕೊಂಡಾಟವೇಹೊರತು ನಮ್ಮ ಮುಂದೆ ಸಾಗಲಾರದು. ಓ ಭ್ರಮರಾ!ಕಿವಿಯಲ್ಲಿ ಗುಟ್ಟುಹೇಳುವ ನೆವದಿಂದ ನನ್ನ ತಲೆಯಮೇಲೆ ಕಾಲಿಡುವುದಕ್ಕೆ ಬಂದೆಯೇನು.? ಸಾಕು

ಹೋಗು ! ನೀನು ಹೇಳುವ ಗುಟ್ಟನ್ನು ನಾನು ಬಲ್ಲೆನು? ನೀನು ಆ ಕೃಷ್ಣನ ದೂತನಲ್ಲವೆ ? ಒಳ್ಳೇಮಾತಿನಿಂದ ಪುಸಲಾಯಿಸುವುದರಲ್ಲಿ ನೀನು ಬಹಳ ನಿಪುಣನು!ಸ್ವಲ್ಪವಾದರೂ ಕೃತಜ್ಞತೆಯಿಲ್ಲದೆ, ತನಗಾಗಿ ಪತಿಪುತ್ರಬಂಧುಗಳೆಲ್ಲರನ್ನೂ ಬಿಟ್ಟು ಬಂದ ನಮ್ಮನ್ನು ವಂಚಿಸಿದವನೊಡನೆ ನಾವು ಸಂಧಿ ಮಾಡಿಕೊಂಡು ಫಲವೇನು ?

ಅವನು ಕೃತಜ್ಞತೆಯಿಲ್ಲದವನೆಂಬುದುಮಾತ್ರವೇ ಅಲ್ಲ ! ಬಹಳ ಕ್ರೂರನಾಗಿಯೂ, ಕಠಿನಹೃದಯಾನಾಗಿಯೂ ಇರುವನು. ಹಿಂದೆ ಅವನು, ಬೇಡನಂತೆ ಮರೆಯಾಗಿನಿಂತು ನಿರಪರಾಧಿಯಾದ ವಾಲಿಯೆಂಬ ಕಪಿಯನ್ನು ಕೊಂದುಬಿಟ್ಟನು. ತನ್ನ ಹೆಂಡತಿಗೆ ವಶನಾಗಿ, ತನ್ನಲ್ಲಿ ಕಾಮಿಸಿಬಂದ ಸ್ತ್ರೀಯನ್ನು (ಶೂರ್ಪನಖಿಯನ್ನು) ವಿರೂಪಮಾಡಿದನು. ಅದಕ್ಕೆ ಮೊದಲು (ವಾಮನಾವತಾರದಲ್ಲಿ) ಬಲಿಚಕ್ರವರ್ತಿಯು ತನಗೆ ಕೊಟ್ಟ ಪೂಜೋಪಹಾರಗಳೆಲ್ಲವನ್ನೂ ಕಾಗೆಯಂತೆ ಪುಷ್ಕಲವಾಗಿ ತಿಂದುಬಿಟ್ಟು, ಕೊನೆಗೆ ಅವನನ್ನೇ ಪಾಶಗಳಿಂದ ಬಿಗಿಸಿದನು. ಅಂತಹ ಮೋಸಗಾರನೊಡನೆ ನಮಗೆ ಸ್ನೇಹವೇ ಬೇಡ ! ಏನೋ ಬಿಡಲಾರದ ಸಂಕಟದಿಂದ ಅವನ ಕಥೆಗಳನ್ನು ಬಾಯಿಂದ ಹಾಡುತ್ತ ನಾವು ಹೊತ್ತನ್ನು ಕಳೆಯುವೆವು. ಅದನ್ನು ಬಿಟ್ಟು ಬಿಡಬೇಕೆಂದರೆಮಾತ್ರ ನಮಗೂ ಸಾಧ್ಯವಲ್ಲ ! ನಮಗೆ ಮಾತ್ರವೇನು ? ಲೋಕದಲ್ಲಿ ಯಾರಾದರೂ, ಆ ಶ್ರೀಕೃಷ್ಣನ ಕಥಾಮೃತದಲ್ಲಿ ಬಿಂದುಮಾತ್ರವನ್ನಾದರೂ ಒಂದಾವರ್ತಿ ರುಚಿನೋಡಿದಮೇಲೆ, ರಾಗದ್ವೇಷಾದಿಗಳೆಲ್ಲವನ್ನೂ ಮರೆತು ಅಚೇತನ ಪ್ರಾಯರಾಗುವರು. ಮತ್ತು ತಮ್ಮ ಗೃಹಕುಟುಂಬಾದಿಗಳೆಲ್ಲವನ್ನೂ ಮರೆತು, ಪಕ್ಷಿಗಳಂತೆ ಭಿಕ್ಷುಚರ್ಯೆಯಿಂದ ತಿರುಗಲಾರಂಭಿಸುವರು.

ಓ ಭೃಂಗಾ ! ಕಾಡಿನಲ್ಲಿರುವ ಹೆಣ್ಣುಜಿಂಕೆಗಳು, ಬೇಡರ ಕೃತ್ರಿಮಗಾನಕ್ಕೆ ಮರುಳಾಗಿ, ಬಂದು ಬಲೆಯಲ್ಲಿ ಸಿಕ್ಕಿ ಬೀಳುವಂತೆ, ನಾವೂ ಆ ಕೃಷ್ಣನ ಲಲ್ಲೆಮಾತುಗಳನ್ನು ನಿಜವೆಂದು ನಂಬಿ ಮೋಸಹೋದೆವು. ಅವನು ತನ್ನ ನಖಕ್ಷತಗಳಿಂದ ಒಂದಾವರ್ತಿ ನಮ್ಮಸ್ತನದ ನವೆಯನ್ನಾರಿಸಿ ಹೊರಟು ಹೋದುದರಿಂದ, ಈಗ ಸಹಿಸಲಾರದ ಹೃದಯತಾಪದಿಂದ ಕುದಿಯುತ್ತಿರು

ವೆವು! ಓ ಕೃಷ್ಣದೂತಾ ! ಇನ್ನು ನೀನು ನಮ್ಮ ಮುಂದೆ ಆ ಕೃಷ್ಣನ ಮಾತನ್ನೇ ಎತ್ತಬೇಡ ! ಬೇರೆ ಯಾವುದಾದರೂ ಇದ್ದರೆ ಹೇಳು ! ಓ ಪ್ರಿಯಸಖಾ ! ಹೊರಟುಹೋದವನು ತಿರುಗಿ ಬಂದೆಯೇಕೆ ? ಕೃಷ್ಣನು ತಿರುಗಿ ನಿನ್ನನ್ನು ನಿರ್ಬಂಧಿಸಿ ಕಳುಹಿಸಿದನೇನು ? ಹಾಗಿದ್ದಪಕ್ಷದಲ್ಲಿ ನೀನು ನಮಗೆ ಪೂಜ್ಯನು! ನಿನ್ನ ಕೋರಿಕೆಯೇನು ಹೇಳು ! ನಾವೇನೋ ಅವನನ್ನು ಬಿಟ್ಟಿರಲಾರೆವು. ನಮ್ಮನ್ನು ನೀನು ಅವನಬಳಿಗೆ ಹೇಗೆ ಸಾಗಿಸಬಲ್ಲೆ ! ಅದನ್ನಾದರೂ ಹೇಳು ! ಲಕ್ಷ್ಮೀದೇವಿಯು ಅವನ ಎದೆಯಲ್ಲಿಯೇ ಎಡೆಬಿಡದೆ ಕುಳಿತಿರುವಾಗ, ನಮ್ಮಲ್ಲಿ ಸವತಿತನವನ್ನು ತೋರಿಸದೆ ಬಿಡುವಳೆ ! ನಮ್ಮನ್ನು ಅವನ ಸಮೀಪಕ್ಕೆ ಹೊದ್ದಿಸುವಳೆ ?

ಓ ಸೌಮ್ಯಾ ! ಕೃಷ್ಣನು ಈಗಲೂ ಆ ಮಥುರೆಯಲ್ಲಿಯೇ ಇರುವನೆ ? ಅವನು ಇಲ್ಲಿ ತನ್ನ ತಂದೆತಾಯಿಗಳನ್ನೂ, ಬಂಧುಗಳನ್ನೂ, ತನ್ನ ಮನೆಯನ್ನೂ, ತನ್ನ ಗೋವುಗಳನ್ನೂ, ತನ್ನ ಸಂಗಡಿಗರಾದ ಗೋಪಾಲಕರನ್ನೂ ನಿಜವಾಗಿ ಇನ್ನೂ ಸ್ಮರಣೆಯಲ್ಲಿಟ್ಟಿರುವನೆ ? ಎಂದಾದರೂ ಒಮ್ಮೆ ಅವನು, ಹಳ್ಳಿಯ ಪ್ರಸ್ತಾವದಲ್ಲಿಯಾದರೂ ದಾಸಿಯರಾದ ನಮ್ಮ ವಿಷಯವನ್ನು ಕುರಿತು ಮಾತಾಡುವನೆ ? ಅಯ್ಯೋ ! ಆ ಕೃಷ್ಣನು, ಅಗರು ಗಂಧವಿಶಿಷ್ಟವಾದ ತನ್ನ ಭುಜವನ್ನು ನಮ್ಮ ಶಿರಸ್ಸಿನಮೇಲೆ ಯಾವಾಗ ಇಡುವನೋ ಕಾಣೆವಲ್ಲಾ ! ” ಎಂದಳು.

ಓ ಪರೀಕ್ಷಿದ್ರಾಜಾ ! ಹೀಗೆ ಗೋಪಿಯರು ಕೃಷ್ಣವಿರಹದಿಂದ ಮೈಮರೆತು ಬಾಯಿಗೆ ಬಂದಹಾಗೆ ಮಾತಾಡುತ್ತಿರುವುದನ್ನು ಉದ್ಧವನು ಸ್ವಲ್ಪಹೊತ್ತಿನವರೆಗೆ ಮೌನದಿಂದ ಕೇಳುತಿದ್ದು, ಅವರಿಗೆ ಕೃಷ್ಣನು ಹೇಳಿ ಕಳುಹಿಸಿರುವ ಮಾತುಗಳನ್ನು ತಿಳಿಸಿ ಸಮಾಧಾನಪಡಿಸುವುದಕ್ಕಾಗಿ, ಮುಂದೆ ಬಂದು ಹೀಗೆಂದು ಹೇಳುವನು. “ಓ ಗೋಪಿಯರೆ ! ನೀವೇ ಕೃತಾರ್ಥರು ! ನೀವೇ ಮೂರುಲೋಕಕ್ಕೂ ಪೂಜ್ಯರು ! ಭಗವಂತನಾದ ವಾಸುದೇವನಲ್ಲಿ ಬೇರೆ ಯಾರಿಗೆ ತಾನೇ ಈ ವಿಧವಾದ ದೃಢಾನುರಾಗವು ಹುಟ್ಟುವುದು?ಅನೇಕಕಾಲದವರೆಗೆ, ಜಪ, ತಪಸ್ಸು, ಹೋಮ, ದಾನ, ವ್ರತ, ವೇದಾಧ್ಯಯನ, ಇಂದ್ರಿಯಜಯ, ಮೊದಲಾದ ಸಾಧನಗಳನ್ನು ನಡೆಸಿದಲ್ಲದೆ,ಆ ಭಗವಂತನಲ್ಲಿ

ಈ ವಿಧವಾದ ಭಕ್ತಿಯು ಹುಟ್ಟಲಾರದು. ನಿಮಗೆ ಈಗ ಹುಟ್ಟಿರುವ ಭಕ್ತಿ. ಯಾದರೋ ಅಸಾಧಾರಣವಾಗಿರುವುದು. ಈ ವಿಧವಾದ ಭಕ್ತಿಯು ಮಹಾ ಯೋಗಿಗಳಿಗೂ ದುರ್ಲಭವು. ಹೀಗೆ ನೀವು ಪತಿಪುತ್ರಾದಿಬಂಧುಗಳನ್ನೂ, ಮನೆಗಳನ್ನೂ ತೊರೆದು, ದೇಹಾಭಿಮಾನವನ್ನೂ ಬಿಟ್ಟು, ಪರಮ ಪುರುಷ ನಾದ ಆ ಕೃಷ್ಣನಲ್ಲಿ ಪ್ರೀತಿಯನ್ನಿಡಬೇಕೆಂದರೆ ಇದು ನಿಮ್ಮ ಭಾಗ್ಯವಿಶೇಷ ವಲ್ಲದೆ ಬೇರೆಯಲ್ಲ ! ಆದುದರಿಂದ ನೀವೇ ಲೋಕದಲ್ಲಿ ಕೃತಾರ್ಥರು! ನೀವೇ ಲೋಕಪೂಜ್ಯರು! ಈ ವಿರಹತಾಪವೆಂಬ ನೆವವನ್ನಿಟ್ಟುಕೊಂಡು, ಮನೋ ವಾಕ್ಕಾಯಗಳೆಂಬ ಕರಣತ್ರಯದಿಂದ ಆ ಕೃಷ್ಣನನ್ನೇ ಧ್ಯಾನಿಸುತ್ತಿರುವ ನಿಮ್ಮನ್ನು ನೋಡುವಂತಾದುದೇ ನನಗೆ ಪರಮಾನುಗ್ರಹವು. ನಿಮ್ಮ ಭಕ್ತಿ ಪರಿಪಾಕವನ್ನು ಸ್ಮರಿಸುವುದರಿಂದಲೇ ನಾನೂ ಕೃತಾರ್ಥನಾದೆನು. ಓ ಮಂಗಳಸ್ವರೂಪಿಣಿಯರೆ ! ಕೃಷ್ಣನು ನಿಮಗಾಗಿ ನನ್ನೊಡನೆ ಹೇಳಿ ಕಳುಹಿ ಸಿರುವ ಪ್ರಿಯವಾರ್ತೆಯನ್ನು ತಿಳಿಸುವೆನು ಕೇಳಿರಿ ! ಅವನು ತನ್ನ ಮಾತಿನಿಂ ದಲೇ ನಿಮಗೆ ತಿಳಿಸುವಂತೆ ಹೀಗೆ ಹೇಳಿ ಕಳುಹಿಸಿರುವನು. –

“ಓ ಗೋಪಿಯರೆ ! ನಿಮಗೂ ನನಗೂ ಪರಸ್ಪರವಿಯೋಗವೆಂಬುದು ಯಾವಾಗಲೂ ಎಲ್ಲಿಯೂ ಸಂಭವಿಸಲಾರದು! ಏಕೆಂದರೆ, ನಾನು ಎಲ್ಲರಲ್ಲಿ ಯೂ ಯಾವಾಗಲೂ ಆತ್ಮಭೂತನಾಗಿರತಕ್ಕವನು. ಆತ್ಮವನ್ನು ಬಿಟ್ಟು ಶರೀರವಿರುವುದುಂಟೆ ? ಆದುದರಿಂದ ನಾನು ನಿಮಗೆ ಯಾವಾಗಲೂ ಆತ್ಮ ಭೂತನಾಗಿ,ನಿಮ್ಮನಿಮ್ಮ ಶರೀರದಲ್ಲಿಯೇ ಇರುವೆನು.ಇದಲ್ಲದೆ ಕಾರ್ಯರೂಪಗ ಳಾದ ದೇವಮನುಷ್ಯಾದಿಶರೀರಗಳಲ್ಲಿ, ಅವುಗಳಿಗೆ ಕಾರಣಗಳೆನಿಸಿಕೊಂಡ ಆಕಾಶಾದಿಪಂಚಭೂತಗಳು ಯಾವಾಗಲೂ ಒಂದಾಗಿ ಕಲೆತಿರುವ ಹಾಗೆಯೇ, ನಾನೂ, ನಿಮ್ಮ ಮನಸ್ಸು, ಪ್ರಾಣ, ಬುದ್ಧಿ, ಇಂದ್ರಿಯಗಳು, ಶಬ್ದಾದಿವಿಷಯಗಳು, ಇವೆಲ್ಲಕ್ಕೂ ಆಧಾರನಾಗಿ, ನಿಮ್ಮಲ್ಲಿಯೇ ಯಾವಾಗ ಲೂ ಇರುವೆನು. ಕಾರಣವನ್ನು ಬಿಟ್ಟು ಕಾರ್ಯವು ಹೇಗಿರಲಾರದೋ ಹಾಗೆ ನನ್ನನ್ನು ಬಿಟ್ಟು ನೀವಿರುವುದೇ ಅಸಂಭವವು. ಹೀಗೆ ಆತ್ಮರೂಪದಿಂದಲೂ, ಕಾರಣರೂಪದಿಂದಲೂ ಚಿದಚಿದಾತ್ಮಕವಾದ ಸಮಸ್ತಜಗತ್ತಿಗೂ ಆ ಧಾರನಾದ ನಾನು, ನಿಮ್ಮನ್ನು ಅಗಲಿರುವೆನೆಂಬುದು ಎಂದಿಗಾದರೂ

ಸಂಭವಿಸುವುದೆ ? ನಾನು ಯಾವಾಗಲೂ ನಿಮ್ಮಲ್ಲಿಯೇ ಇರುವೆನು. ಓ ಗೋಪಿಯರೆ ! ನಾನು ನನ್ನನ್ನೇ ಆಧಾರವಾಗಿ ಮಾಡಿಕೊಂಡು, ನನ್ನಿಂದ ನನ್ನನ್ನೇ ಈ ಪ್ರಪಂಚರೂಪವಾಗಿ ಸೃಷ್ಟಿಸಿ, ಪಾಲಿಸುತ್ತಿದ್ದು, ಕೊನೆಗೆ ನಾನೇ ಸಂಹರಿಸುವೆನು. ವ್ಯಷ್ಟಿಪ್ರಪಂಚವುಮಾತ್ರವೇ ಅಲ್ಲದೆ, ಭೂತೇಂದ್ರಿಯಗುಣಾತ್ಮಕವಾದ ಸಮಷ್ಟಿಪ್ರಪಂಚವೂ ನನ್ನ ಸಂಕಲ್ಪಪ್ರಭಾವದಿಂದಲೇ ಹುಟ್ಟುವುದು. ಆದುದರಿಂದ ನನ್ನನ್ನು ಬಿಟ್ಟು ಸ್ವತಂತ್ರವಸ್ತುವೊಂದಾದರೂ ಇರುವುದಿಲ್ಲ. ಹೀಗೆ ಜಗತ್ತೆಲ್ಲವೂ ನಾನೇ ಆಗಿರುವಾಗ, ನಾನು ನಿಮ್ಮನ್ನಗಲಿರುವೆನೆಂಬುದು ಅಸಂಭವವಲ್ಲವೆ ? "ಹಾಗಿದ್ದರೆ, "ನೀನು ನಾನೆ"ಂಬ ಭೇದಬುದ್ಧಿಯೂ, ಸಂಯೋಗವಿಯೋಗಗಳಿಂದುಂಟಾದ ಸುಖದುಃಖಗಳೂ ಮನುಷ್ಯರಿಗೆ ಹುಟ್ಟುವುದು ಹೇಗೆ"? ಎಂದು ಕೇಳುವಿರಾ?ಇವೆಲ್ಲಕ್ಕೂ ಕರ್ಮವಾಸನೆಯಿಂದುಂಟಾದ ಮನಸ್ಸಿನ ವ್ಯಾಪಾರವೇ ಕಾರಣವು. ಆತ್ಮವೆಂಬುದು ಸಹಜವಾಗಿ ಶುದ್ಧವಾದುದು. ಕೇವಲಜ್ಞಾನಸ್ವರೂಪವಾಗಿ, ದೇಹೇಂದ್ರಿಯಾದಿಗಳಿಗಿಂತಲೂ ವಿಲಕ್ಷಣವಾಗಿರುವುದು. ಹಾಗಿದ್ದರೂ ಪ್ರಕೃತಿಪರಿಣಾಮರೂಪಗಳಾದ, ಎಚ್ಚರ, ಕನಸು, ನಿದ್ರೆಗಳೆಂಬ ಮನಸ್ಸಿನ ವ್ಯಾಪಾರಗಳಿಂದ, ಆ ವಿಧವಾದ ಭೇದಬುದ್ಧಿಗಳೆಲ್ಲವೂ ಹುಟ್ಟುವುವು. ಒಮ್ಮೊಮ್ಮೆ ಮನುಷ್ಯನು ಎಚ್ಚರಗೊಂಡಮೇಲೆ, ಕನಸಿನಲ್ಲಿ ಕಂಡ ವಿಷಯಗಳೂ ನಿಜವಾಗಿ ನಡೆದಹಾಗೆ ಅವನ ಮನಸ್ಸಿಗೆ ತೋರುವಂತೆ, ಹಿಂದೆ ಅನುಭವಿಸಿದ, ಅಥವಾ ಯಾವಾಗಲೂ ಅನುಭವಿಸಿ ಕಾಣದಿರುವ, ನಿಸ್ಸಾರವಾದ ವಿಷಯಗಳಿಗಾಗಿ ಮನಸ್ಸು ಕಳವಳಿಸುವುದುಂಟು. ಅಂತಹ ಮನಸ್ಸನ್ನೂ, ಇಂದ್ರಿಯಗಳನ್ನೂ ತಡೆದು ನನ್ನಲ್ಲಿ ನೆಲೆಗೊಳಿಸಬೇಕು. ವೇದಾರ್ಥಜ್ಞಾನ, ಯೋಗ, ಸಾಂಖ್ಯ, ಯಾಗ, ದಾನ, ತಪಸ್ಸು, ಇಂದ್ರಿಯನಿಗ್ರಹ, ಸತ್ವ, ಮುಂತಾದುವೆಲ್ಲಕ್ಕೂ, ನದಿಗಳಿಗೆ ಸಮುದ್ರವು ಹೇಗೋ ಹಾಗೆ,ಆ ಆತ್ಮಜ್ಞಾನವೇ ಕೊನೆಯು(ಫಲವು.)ಓ ಪ್ರಿಯಸಖಿಯರೆ! ಈಗನಾನು ನಿಮ್ಮ ಕಣ್ಣಿಗೆ ದೂರವಾಗಿರುವುದೂ, ನಿಮ್ಮ ಮನಸ್ಸನ್ನು ನನಗೆ ಸಮೀಪವಾಗುವಂತೆ ಮಾಡಿಕೊಳ್ಳುವುದಕ್ಕಾಗಿಯೇಹೊರತು ಬೇರೆಯಲ್ಲ ! ಸ್ತ್ರೀಯರಿಗೆ, ತಮ್ಮ ಪ್ರಿಯನು ದೂರದಲ್ಲಿರುವಾಗ,ಅವನಲ್ಲಿ ಮನಸ್ಸು ದೃಢವಾಗಿನಿಲ್ಲುವ

ಹಾಗೆ, ಆತನು ತಮ್ಮ ಸಮೀಪದಲ್ಲಿ ಕಣ್ಣಿದಿರಿಗಿರುವಾಗ ನಿಲ್ಲಲಾರದು. ನೀವು ನಿಮ್ಮ ಮನಸ್ಸೆಲ್ಲವನ್ನೂ ನನ್ನಲ್ಲಿಯೇ ನೆಲೆಗೊಳಿಸಿ, ಇತರ ವ್ಯಾಪಾರಗಳೆಲ್ಲವನ್ನೂ ಮರೆತು, ಯಾವಾಗಲೂ ನನ್ನನ್ನು ಸ್ಮರಿಸುವುದರಿಂದ, ನಿಮಗೆ ಶೀಘ್ರದಲ್ಲಿಯೇ ನನ್ನ ನಿತ್ಯಸಾನ್ನಿಧ್ಯವು ಲಭಿಸುವುದರಲ್ಲಿ ಸಂದೇಹವಿಲ್ಲ. ಹಿಂದೆ ಶರತ್ಕಾಲದ ರಾತ್ರಿಗಳಲ್ಲಿ ನಾನು ರಾಸಕ್ರೀಡೆಯನ್ನು ನಡೆಸುವಾಗ, ಯಾವ ಸ್ತ್ರೀಯರು, ತಮ್ಮ ಪತಿಪುತ್ರಾದಿಗಳಿಂದ ಮನೆಯಲ್ಲಿಯೇ ನಿರ್ಬಂಧಿಸಲ್ಪಟ್ಟು, ನನ್ನೊಡನೆ ರಾಸಕ್ರೀಡೆಯಲ್ಲಿ ಸೇರುವುದಕ್ಕೆ ಅವಕಾಶವನ್ನು ಪಡೆಯದೆ ಹೋದರೋ, ಅವರೆಲ್ಲರೂ ಮನೆಯಲ್ಲಿಯೇ ನನ್ನ ಸಂತತಧ್ಯಾನದಿಂದ ನನ್ನ ಸಾನ್ನಿಧ್ಯವನ್ನು ಹೊಂದಲಿಲ್ಲವೆ? ಪರೋಕ್ಷದಲ್ಲಿದ್ದರೂ ನನ್ನನ್ನು ಪಡೆಯಬಹುದೆಂಬುದಕ್ಕೆ ಇದಕ್ಕಿಂತಲೂ ಬೇರೆ ನಿದರ್ಶನವೇನಾಗಬೇಕು?" ಎಂದು ನಿಮಗೆ ತಿಳಿಸುವಂತೆ ಕೃಷ್ಣನು ಹೇಳಿರುವನು. ಎಂದು ಉದ್ಧವನು ಹೇಳಿದ ಕೃಷ್ಣಸಂದೇಶವನ್ನು ಕೇಳಿ, ಗೋಪಿಯರೆಲ್ಲರೂ ಆ ಕೃಷ್ಣನ ಸಂದೇಶವಾಕ್ಯಗಳಿಂದ ಹಿಂದಿನ ವೃತ್ತಾಂತಗಳೆಲ್ಲವನ್ನೂ ಸ್ಮರಿಸಿಕೊಂಡು, ಸಂತೋಷದಿಂದ ಉದ್ಧವನನ್ನು ಕುರಿತು ಹೀಗೆಂದು ಹೇಳುವರು. "ಓ ಸೌಮ್ಯಾ! ಯದುಕುಲದ್ರೋಹಿಯಾಗಿ, ಪರಮಪಾಪಿಯಾದ ಕಂಸನು ಸಂಹೃತನಾದನಲ್ಲವೆ? ಕೃಷ್ಣನೂಕೂಡ ತನ್ನ ಇಷ್ಟಬಂಧುಗಳ ಕೋರಿಕೆಗಳೆಲ್ಲವನ್ನೂ ಈಡೇರಿಸಿಕೊಟ್ಟು, ಈಗ ನಿಶ್ಚಿಂತನಾಗಿ ಕ್ಷೇಮದಿಂದಿರುವನಷ್ಟೆ? ಇವೆಲ್ಲವೂ ನಮ್ಮ ಭಾಗ್ಯವು! ಉದ್ಧವಾ! ಈಗ ಕೃಷ್ಣನು, ಮಧುರಾಪುರದಲ್ಲಿರುವ ಸ್ತ್ರೀಯರ ಅನುರಾಗಪೂರ್ವಕವಾದ ಮತ್ತು ಲಜ್ಜಾಗರ್ಭಿತವಾದ ಮಂದಹಾಸಕ್ಕೂ, ಅವರ ನೇತ್ರಸೌಂದರ್ಯಕ್ಕೂ ಮೋಹಿತನಾಗಿ, ಹಿಂದೆ ನಮ್ಮಲ್ಲಿ ತೋರಿಸುತಿದ್ದ ಪ್ರೀತಿಯನ್ನೇ ಅವರಲ್ಲಿಯೂ ತೋರಿಸುತ್ತಿರಬಹುದಲ್ಲವೆ? ಅಥವಾ ಅವನು ರತಿವಿಶೇಷಗಳನ್ನು ಚೆನ್ನಾಗಿ ಬಲ್ಲವನು! ಆ ಪುರಸ್ತ್ರೀಯರಿಗೂ ಅವನಲ್ಲಿ ಬಹಳ ಅನುರಾಗವುಂಟು! ಹೀಗಿರುವಾಗ ಆ ಕೃಷ್ಣನು, ಅವರ ಮೋಹದ ಮಾತುಗಳಿಗೂ, ಅವರ ನಾಗರಿಕವಿಲಾಸಗಳಿಗೂ ಹೇಗೆತಾನೇ ಪರವಶವಾಗದಿರುವನು? ಓ ಸಾಧೂ! ಆ ಕೃಷ್ಣನು ಅಲ್ಲಿನ ಪುರಸ್ತ್ರೀಯರೊಡನೆ ಲೀಲೆಗಳನ್ನು ನಡೆ

ಕುತ್ತಿರುವಾಗಲೂ, ಯಾವಾಗಲಾದರೂ ಒಮ್ಮೆ ಈ ನಮ್ಮ ಗೊಲ್ಲರಹಳ್ಳಿಯ ವಿಷಯವಾದ ಪ್ರಸ್ತಾವವು ಬಂದಾಗ, ನಮ್ಮನ್ನು ಒಂದಾವರ್ತಿಯಾದರೂ ಜ್ಞಾಪಿಸಿಕೊಳ್ಳುವನೆ ? ಹಿಂದೆ ನಾವು ಕುಂದಕುಮುದಾದಿಪುಷ್ಪಗಳಿಂದಲೂ, ಚಂದ್ರಿಕೆಯಿಂದಲೂ ಮನೋಹರವಾದ ಬೃಂದಾವನದಲ್ಲಿ, ಕಾಲಂದುಗೆಗಳ ಗಲ್ಗಲಧ್ವನಿಯೊಡನೆ ಆ ಕೃಷ್ಣನ ಗುಣಗಳನ್ನು ಹಾಡುತ್ತ, ಆತನೊಡನೆ ರಾಸಗೋಷ್ಠಿಯಿಂದ ವಿನೋದಿಸುತಿದ್ದ ಆ ಶರತ್ಕಾಲದ ರಾತ್ರಿಗಳನ್ನು ಯಾವಾಗಲಾದರೂ ಒಮ್ಮೆ ಅವನು ತನ್ನ ನೆನಪಿಗೆ ತಂದುಕೊಳ್ಳುತ್ತಿರಬಹುದೆ? ಉದ್ಧವಾ! ಆ ಕೃಷ್ಣನು ತಿರುಗಿ ಎಂದಾದರೂ ಇಲ್ಲಿಗೆ ಬಂದು, ಅವನ ವಿರಹತಾಪದಿಂದ ಬೇಯುತ್ತಿರುವ ನಮ್ಮನ್ನು, ದೇವೇಂದ್ರನು ಬೇಸಗೆಯಿಂದೊಣಗಿದ ವನವನ್ನು ಮೇಘಗಳಿಂದ ಹೇಗೋಹಾಗೆ, ತನ್ನ ಅಂಗಸ್ಪರ್ಶದಿಂದ ಬದುಕಿಸುವನೆ!ನನಗೇನೋ ಅವನು ತಿರುಗಿ ಬರುವಹಾಗೆ ತೋರಲಿಲ್ಲ ! ಮೊದಲು ಬೇರೆವಿಧಿಯಿಲ್ಲದುದಕ್ಕಾಗಿ ಈ ಹಳ್ಳಿಯಲ್ಲಿದ್ದು ನಮ್ಮೊಡನೆ ಕಾಲವನ್ನು ಕಳೆಯಬೇಕಾಯಿತು. ಈಗಲಾದರೋ ಅವನು ತನ್ನ ಶತ್ರುವನ್ನು ಕೊಂದು, ತನ್ನ ರಾಜ್ಯವನ್ನು ಕೈವಶಮಾಡಿಕೊಂಡಿರುವನು ಅಲ್ಲಿ ದೊಡ್ಡದೊಡ್ಡ ರಾಜಕನ್ಯೆಯರನ್ನು ವಿವಾಹಮಾಡಿಕೊಂಡು, ತನ್ನ ಇಷ್ಟಮಿತ್ರರೊಡನೆ ಸುಖವಾಗಿರುವನು. ಇನ್ನುಮೇಲೆ ಅವನು ಇಲ್ಲಿಗೆ ಬರಬೇಕಾದ ಕಾರ್ಯವೇನಿದೆ ? ಇಲ್ಲಿ ಕಾಡುಮನುಷ್ಯರಾದ ನಮ್ಮಿಂದಾಗಲಿ, ಬೇರೆಯವರಿಂದಾಗಲಿ ಅವನಿಗಾಗಬೇಕಾದುದೇನು? ಸಾಕ್ಷಲ್ಲಲಕ್ಷ್ಮೀದೇವಿಗೇ ತಾನು ಪತಿಯೆನಿಸಿರುವನು. ಮತ್ತು ಪೂರ್ಣಕಾಮನು. ಹೀಗಿರುವಾಗ ಅವನಿಗೆ ಈ ಹಳ್ಳಿಯ ಜನಗಳಿಂದ ಆಗಬೇಕಾದ ಪ್ರಯೋಜನವೇನಿದೆ ? ಹಿಂದೆ ಆ ಕೃಷ್ಣನೊಡನೆ ಕಲೆತಿದ್ದ ಪಿಂಗಳೆಯೆಂಬ ವೇಶ್ಯೆಯೊಬ್ಬಳು, ಅವನ ಸಂಗತಿಯನ್ನು ಅನುಭವದಿಂದ ತಿಳಿದು, "ಅವನ ವಿಷಯದಲ್ಲಿ ನಿರಾಶೆಯಾಗಿರುವುದೇ ಪರಮಸುಖ" ವೆಂದು ಹೇಳಿದ್ದಳು. ನಾವೂ ಅದನ್ನು ಚೆನ್ನಾಗಿ ಬಲ್ಲೆವು. ಆದರೇನು ! ಇನ್ನೂ ನಮಗೆ ಆ ಆಶೆಯು ಬಿಟ್ಟುಹೋಗದೆ ಬಾಧಿಸುತ್ತಿರುವುದು. ನಾವು ಮಾಡುವುದೇನು ? ಅಥವಾ ನಮ್ಮ ಸಂಗತಿಯೂ ಹಾಗಿರಲಿ ! ಅವನಾಗಿ ಇಷ್ಟಪಡದಿದ್ದರೂ ಲಕ್ಷ್ಮೀದೇವಿಯು, ಅವನನ್ನು ಕ್ಷಣ

ಮಾತ್ರವಾದರೂ ಬಿಡದೆ ಅವನ ಎದೆಯಲ್ಲಿಯೇ ಕುಳಿತಿರುವಳಲ್ಲಾ ! ಅಂತಹ ಉತ್ತಮಶ್ಲೋಕನನ್ನು ಯಾರುತಾನೇ ಬಿಡಬಲ್ಲರು ? ಈ ನದಿಗಳು, ಈ ಪರ್ವತಗಳು, ಈ ವನಪ್ರದೇಶಗಳು, ಈ ಗೋವುಗಳು, ಈ ಕೊಳಲಿನ ಧ್ವನಿಗಳು, ಇವೆಲ್ಲವೂ ಹಿಂದೆ ಆ ಕೃಷ್ಣನು ಅನುಭವಿಸಿ ಬಿಟ್ಟುಹೋದ ವಸ್ತುಗಳೇ ! ಆ ನಂದಕುಮಾರನ ಪಾದಚಿಹ್ನಗಳಿಂದ ಶೋಭಿತವಾದ ಈ ಪ್ರದೇಶವು, ನಮ್ಮ ಕಣ್ಣಿಗೆ ಬೀಳುತ್ತಿರುವವರೆಗೆ, ನಾವು ಹೇಗೆತಾನೇ ಆತನನ್ನು ಮರೆಯಬಲ್ಲೆವು ? ಹಿಂದೆ ಆ ಕೃಷ್ಣನ ಗಂಭೀರವಾದ ನಡೆಯನ್ನೂ, ಅವನ ಮಂದಹಾಸದ ಸೊಗಸನ್ನೂ, ವಿಲಾಸವಿಶಿಷ್ಟವಾದ ಅವನ ದೃಷ್ಟಿ ಸೌಂದರ್ಯವನ್ನೂ ಆಗಾಗ ನೋಡಿ, ಅದರಿಂದ ಪರವಶಹೃದಯರಾದ ನಮಗೆ, ಈಗ ಅವೆಲ್ಲವನ್ನೂ ಮರೆತುಬಿಡಬೇಕೆಂದರೆ ಹೇಗೆತಾನೇ ಸಾಧ್ಯವು ? " ಎಂದು ಹೇಳಿ ಆ ಕೃಷ್ಣನನ್ನು ಮನಸ್ಸಿನಲ್ಲಿ ನೆನೆಸಿಕೊಂಡು " ಓ ನಾಥಾ ! ಓ ರಮಾನಾಥಾ ! ಓ ಗೋಕುಲನಾಥಾ ! ಓ ದುಃಖನಿವಾರಕಾ ! ನಿನ್ನ ವಿರಹದುಃಖದಲ್ಲಿ ಮುಳುಗಿಹೋಗಿರುವ ಈ ಗೋಕುಲವನ್ನು ನೀನು ಕೃಪೆಯಿಂದುದ್ಧರಿಸಬಾರದೆ ?" ಎಂದು ಪ್ರಾರ್ಥಿಸಿದರು.

ಓ ಪರೀಕ್ಷಿದ್ರಾಜಾ ! ಆಮೇಲೆ ಆಗೋಪಿಯರೆಲ್ಲರೂ, ಕೃಷ್ಣನು ತಮಗೆ ಹೇಳಿಕಳುಹಿಸಿದ ಸಂದೇಶಗಳನ್ನು ಸ್ಮರಿಸಿಕೊಂಡು, ಆಕೃಷ್ಣನು ಸರ್ವಾಂತರಾತ್ಮನೆಂಬುದನ್ನು ತಿಳಿದು, ಮನಸ್ಸನ್ನು ಸಮಾಧಾನಮಾಡಿಕೊಂಡು, ದೂತನಾಗಿ ತಮ್ಮಲ್ಲಿಗೆ ಬಂದ ಉದ್ಧವನನ್ನು ಅನೇಕವಿಧದಿಂದ ಸತ್ಕರಿಸಿ ಪೂಜಿಸಿದರು. ಉದ್ಧವನೂ ಕೆಲವುತಿಂಗಳವರೆಗೆ ಆ ಗೋಪಿಯರ ಮುಂದೆ ಕೃಷ್ಣನ ಕಥೆಗಳನ್ನು ಹಾಡುತ್ತ, ಅವರ ಮನಸ್ಸಿನ ದುಃಖವನ್ನು ನೀಗಿಸಿ ಸಂತೋಷಪಡಿಸುತಿದ್ದನು. ಉದ್ಧವನು ಅಲ್ಲಿದ್ದಷ್ಟು ದಿನಗಳೂ, ಅವನಿಂದ ಕೃಷ್ಣನ ಕಥೆಗಳನ್ನು ಕೇಳುತ್ತಿದ್ದ ಗೋಪಿಯರಿಗೆ ಕ್ಷಣಪ್ರಾಯವಾಗಿ ಕಳೆದುಹೋದುವು. ಮತ್ತು ಉದ್ಧವನು ಅಲ್ಲಿನ ಪರ್ವತಗಳನ್ನೂ, ಅರಣ್ಯಗಳನ್ನೂ, ನದಿಗಳನ್ನೂ, ಪುಷ್ಪಿತಗಳಾದ ವನಗಳನ್ನೂ ನೋಡುತ್ತ, ಅಲ್ಲಲ್ಲಿ ಕೃಷ್ಣನು ನಡೆಸಿದ ಲೀಲೆಗಳನ್ನು ಪ್ರಶ್ನೆಮಾಡುವುದರಿಂದ, ಅವರಿಗೆ ಆಗಾಗ ಆತನ ಸ್ಮರಣೆಯನ್ನುಂಟುಮಾಡುತ್ತ ಸಂತೋಷದಿಂದಿರುತಿದ್ದನು.

ಗೋಪಿಯರು ಸದಾಕೃಷ್ಣನ ಚಿಂತೆಯಿಂದ ಕೊರಗುತ್ತಿರುವುದನ್ನು ನೋಡಿ, ಉದ್ಧವನು ಅವರ ಭಕ್ತಿಗೆ ಮೆಚ್ಚಿ, ಸಂತೋಷದಿಂದ ಅವರಿಗೆ ನಮುಸ್ಕರಿಸುತ್ತ, ತನ್ನಲ್ಲಿ ತಾನು ಅವರನ್ನು ಹೀಗೆಂದು ಕೊಂಡಾಡುವನು.” ಆಹಾ ! ಲೋಕದಲ್ಲಿ ಈ ಗೋಪಿಯರಲ್ಲವೇ ಸಾರ್ಥಕವಾದ ಜನ್ಮವುಳ್ಳವರು ! ಅಖಿಲಾತ್ಮನಾದ ಗೋವಿಂದಲ್ಲಿ ಇವರಿಗೆ ಹುಟ್ಟಿರುವ ಭಕ್ತಿವಿಶೇಷವು ಬೇರೆಯಾರಿಗೆತಾನೇ ಹುಟ್ಟುವುದು! ಸಂಸಾರಕ್ಕೆ ಭಯಪಟ್ಟು, ಮೋಕ್ಷಾಪೇಕ್ಷೆಯಿಂದಿರುವ ಮಹಾಮುನಿಗಳೂ, ಅಲ್ಪರಾದ ನನ್ನಂತವರೂ ಅಪೇಕ್ಷಿಸಬೇಕಾದುದೂ ಇದೇ ಅಲ್ಲವೆ? ಆ ಭಗವಂತನ ಕಥಾನುಭವದಲ್ಲಿ ಈವಿಧವಾದ ಅಭಿರುಚಿಯು ಹುಟ್ಟಿದಮೇಲೆ,ಬ್ರಹ್ಮಪಟ್ಟದಲ್ಲಿಯಾಗಲಿ,ಬ್ರಾಹ್ಮಣ ಜನ್ಮದಲ್ಲಿಯಾಗಲಿ ಅತಿಶಯವೇನು? ಹಳ್ಳಿಯಲ್ಲಿ ಗೊಲ್ಲಿತಿಯರಾಗಿ ಹುಟ್ಟಿದ್ದರೂ ಇವರ ಜನ್ಮವೇ ಜನ್ಮವು! ಅಡವಿಯಲ್ಲಿ ತಿರುಗುತ್ತ,ಮೃಗಗಳಂತೆ ಕೇವಲ ವ್ಯಭಿಚಾರಶೀಲರಾದ ಈ ಗೊಲ್ಲಿತಿಯರೆಂದರೇನು ? ಆ ಪರಮಾತ್ಮನಲ್ಲಿ ಈ ವಿಧವಾದ ಭಕ್ತಿಯು ಹುಟ್ಟುವುದೆಂದರೇನು ? ಮುಖ್ಯವಾಗಿ ಕರುಣಾನಿಧಿಯಾದ ಭಗವಂತನು, ತನ್ನ ಸ್ವರೂಪವನ್ನು ನಿಜವಾಗಿ ತಿಳಿಯಲಾರದ ಮೂರ್ಖರಿಗೂ, ಅವರು ಯಾವುದೋ ಒಂದುಭಾವದಿಂದ ತನ್ನನ್ನು ಭಜಿಸಿದಾಗ, ಸಾಯುವ ರೋಗಿಗೆ ಜೀವಾಮೃತವನ್ನು ಕುಡಿಸಿದಂತೆ, ಅವರಲ್ಲಿ ಅನುಗ್ರಹವನ್ನುತೋರಿಸಿ ಶ್ರೇಯಸ್ಸನ್ನು ಕೈಗೂಡಿಸುವನು. ಈ ಗೋಪಾಂಗನೆಯರಿಗೆ ಲಭಿಸಿದ ಈಭಾಗ್ಯವು,! ಸದಾಭಗವಂತನ ವಕ್ಷಸ್ಥಲದಲ್ಲಿ ನೆಲೆಗೊಂಡಿರತಕ್ಕ ಲಕ್ಷ್ಮೀದೇವಿಗಾಗಲಿ, ಕಮಲದಂತೆ ದೇಹಕಾಂತಿಯುಳ್ಳ ಪದ್ಮಗಂಧಿನಿಯರಾದ ದೇವಸ್ತ್ರೀಯರಿಗಾಗಲಿ ಲಭಿಸಲಾರದು! ಇನ್ನು ಇತರಸಾಮಾನ್ಯಸ್ತ್ರೀಯರ ಮಾತೇನು! ಹಿಂದೆ ರಾಸಕ್ರೀಡಾಮಹೋತ್ಸವದಲ್ಲಿ, ಆ ಪರಮಪುರುಷನ ಭುಜಗಳಿಂದಾಲಿಂಗಿಸಲ್ಪಟ್ಟ ಕಂಠವುಳ್ಳವರಾಗಿ, ಆತನ ಶರೀರಸ್ಪರ್ಶದಿಂದಾದ ಸೌಖ್ಯವನ್ನನುಭವಿಸಿದ ಈ ಗೋಪಿಯರ ಭಾಗ್ಯವು ಬೇರೆಯಾರಿಗೆತಾನೇ ಲಭಿಸುವುದು? ಆಹಾ! ಈ ಗೋಪಿಯರು, ತಮ್ಮ ಪತಿಪುತ್ರಾದಿಗಳನ್ನೂ ತೊರೆದು, ಆರ್ಯಧರ್ಮವನ್ನೂ ಅನಾದರಿಸಿ, ವೇದಗಳಿಗೂ ಅಗೋಚರನಾದ ಆ ಕೃಷ್ಣನೊಡನೆ ಕಲೆತಿದ್ದರಲ್ಲವೆ? ಇಂತಹ ಮಹಾಭಾಗ್ಯವತಿಯರ ಪಾದ,

ಧೂಳಿಯ ಸಂಬಂಧವುಂಟಾಗುವಂತೆ, ನನಗೆ ಈ ಬೃಂದಾವನದಲ್ಲಿರುವ ತರು ಗುಲ್ಮತಾದಿಗಳಲ್ಲಿ ಯಾವುದಾದರೂ ಒಂದುಜನ್ಮವು ಲಭಿಸಿದರೆ ಸಾಕು ! ಅದೇ ನನಗೆ ಪರಮಭಾಗ್ಯವು ! ಯಾವುದನ್ನು ಲಕ್ಷ್ಮೀದೇವಿಯು ಭಕ್ತಿಯಿಂ ದರ್ಶಿಸುವಳೋ, ಮತ್ತು ಆಪ್ತಕಾಮರಾದ ಬ್ರಹ್ಮಾದಿದೇವತೆಗಳೂ, ಮು ನಿಗಳೂ, ತಮ್ಮ ಮನಸ್ಸಿನಲ್ಲಿಟ್ಟು ಧ್ಯಾನಿಸುವರೋ, ಅಂತಹ ಶ್ರೀಕೃಷ್ಣ ನ ಪಾದಾರವಿಂದವನ್ನು, ಆಗಾಗ ತಮ್ಮ ಎದೆಯಮೇಲಿಟ್ಟು ಒತ್ತಿಕೊಳ್ಳು ತ್ತಿರುವ ಈ ಗೋಪಿಯರ ಭಾಗ್ಯಕ್ಕಿಂತಲೂ ಭಾಗ್ಯವುಂಟೆ?ಯಾರಬಾಯಿಂದ ಹೊರಟ ಹರಿಕಥಾಗಾನವು, ತ್ರೈಲೋಕ್ಯವನ್ನೂ ಪಾವನಮಾಡುತ್ತಿರು ವುದೋ, ಆ ಗೋಪಾಂಗನೆಯರ ಪಾದರೇಣುವನ್ನು ಬಾರಿಬಾರಿಗೂ ವಂದಿ ಸುವೆನು."

ಹೀಗೆಂದು ಹೇಳಿ ಉದ್ಧವನು, ಆ ಗೋಪಿಯರ ಮಹಿಮೆಯನ್ನು ಮನ ಸ್ಸಿನಲ್ಲಿಯೇ ಕೊಂಡಾಡುತ್ತ, ಆ ಗೋಪಿಯರಿಗೂ, ನಂದಯಶೋದೆಯರಿಗೂ ಇತರಗೋಪಾಲಕರಿಗೂ, ತಾನು ಹೋಗಿಬರುವುದಾಗಿ ತಿಳಿಸಿ, ತನ್ನ ರಥವ ನ್ನೇರಿದನು. ಆಗ ನಂದಾದಿಗಳೆಲ್ಲರೂ ಪ್ರಯಾಣಸನ್ನದ್ಧನಾಗಿರುವ ಆ ಉ ದ್ಧವನಿಗೆ ಕೈಕಾಣಿಕೆಗಳನ್ನು ತಂದೊಪ್ಪಿಸಿ, ಕಣ್ಣುಗಳಲ್ಲಿ ಪ್ರೇಮಬಾಷ್ಪವ ನ್ನು ಸುರಿಸುತ್ತ ಹೀಗೆಂದು ಹೇಳುವರು " ಉದ್ಧವಾ ! ಸೌಮ್ಯಾ ! ಇನ್ನು ನಾವು ಹೇಳಬೇಕಾದುದೇನಿದೆ ! ಮುಖ್ಯವಾಗಿ ನಮ್ಮ ಮನೋವ್ಯಾಪಾರಗ ಳೆಲ್ಲವೂ ಆ ಶ್ರೀಕೃಷ್ಣನ ಪಾದಾರವಿಂದದಲ್ಲಿಯೇ ನೆಲೆಯಾಗಿ ನಿಲ್ಲಲಿ ! ನ ಮ್ಮ ವಾಕ್ಕುಗಳೆಲ್ಲವೂ ಆತನ ನಾಮಗಳನ್ನೇ ನುಡಿಯುತ್ತಿರಲಿ ! ನಮ್ಮ ದೇ ಹವು ಆತನ ಪಾದವಂದನಾದಿಕಾರ್ಯಗಳಲ್ಲಿಯೇ ನಿರತವಾಗಿರಲಿ ! ಕರ್ಮಾ ನುಗುಣವಾದ ಈಶ್ವರೇಚ್ಛೆಯಿಂದ, ಸಂಸಾರಮಾರ್ಗದಲ್ಲಿ ತೊಳಲುತ್ತಿರುವ ನಾವು, ಏನಾದರೂ ಶುಭಕರ್ಮವನ್ನು ನಡೆಸಿದ್ದರೆ, ದಾನಧರ್ಮಗಳನ್ನೇನಾದ ರೂ ಮಾಡಿದ್ದರೆ, ಅದರ ಫಲದಿಂದ ನಮಗೆ ಆ ಕೃಷ್ಣನಲ್ಲಿಯೇ ಅನುರಾಗವು ಶಾಶ್ವತವಾಗಿರಲಿ !" ಎಂದರು. ಹೀಗೆ ಗೋಪಾಲಕರು ಕೃಷ್ಣನಲ್ಲಿರುವ ಭಕ್ತಿ ಯಿಂದ,ಆತನಿಗೆ ದೂತನಾಗಿ ಬಂದ ಉದ್ಧವನನ್ನು ಸಮ್ಮಾನಿಸಲು,ಆ ಉದ್ಧ ವನು ಅಲ್ಲಿಂದ ಹೊರಟು ಮಥುರೆಗೆ ಬಂದನು. ಕೃಷ್ಣನಿಗೆ ಸಂತೋಷದಿಂದ

ನಮಸ್ಕರಿಸಿ, ತಾನು ಹೋಗಿ ಬಂದ ವೃತ್ತಾಂತವನ್ನೂ, ಗೋಕುಲದವರಿಗೆ ಆ ಕೃಷ್ಣನಲ್ಲಿರುವ ಭಕ್ತ್ಯತಿಶಯವನ್ನೂ ತಿಳಿಸಿದನು. ಕೃಷ್ಣನಿಗೂ, ಬಲರಾಮನಿಗೂ, ಉಗ್ರಸೇನರಾಜನಿಗೂ ನಂದಾದಿಗಳು ಕಳುಹಿಸಿಕೊಟ್ಟ ಕಾಣಿಕೆಗಳನ್ನೊಪ್ಪಿಸಿದನು. ಇದು ನಾಲ್ವತ್ತೇಳನೆಯ ಅಧ್ಯಾಯವು.

---

## ಕೃಷ್ಣನು ಕುಬ್ಜೆಯ ಮತ್ತು ಅಕ್ರೂರನ ಮನೆಗೆ ಹೋದುದು

ಆಮೇಲೆ ಕೃಷ್ಣನು, ಹಿಂದೆ ತಾನು ತ್ರಿವಕ್ರೆಯೆಂಬ ವೇಶ್ಯೆಗೆ ಮಾಡಿದ್ದ ವಾಗ್ದಾನವನ್ನು ಜ್ಞಾಪಿಸಿಕೊಂಡು, ತನ್ನನ್ನು ನೋಡಬೇಕೆಂಬ ಕುತೂಹಲದಿಂದ ಕೊರಗುತ್ತಿರುವ ಆವಳ ಮನಸ್ಸಿಗೆ ಸಂತೋಷವನ್ನುಂಟು ಮಾಡುವುದಕ್ಕಾಗಿ, ಆ ದಾಸಿಯ ಮನೆಗೆ ಹೊರಟನು. ಅವಳಾದರೋ ಮೊದಲೇ ವೇಶ್ಯೆ! ಕೃಷ್ಣನು ತನ್ನ ಮನೆಗೆ ಯಾವಾಗ ಬರುವನೋ ಎಂಬ ನಿರೀಕ್ಷೆಯಿಂದ ಮನೆಯನ್ನು ಚೆನ್ನಾಗಿ ಅಲಂಕರಿಸಿ, ಬೇಕುಬೇಕಾದ ಸಾಮಗ್ರಿಗಳೆಲ್ಲವನ್ನೂ ಸಿದ್ಧಪಡಿಸಿದ್ದಳು. ಆ ಮನೆಯಲ್ಲಿ ಬೇಕುಬೇಕಾದ ಅಮೂಲ್ಯಪದಾರ್ಥಗಳೆಲ್ಲವೂ ತುಂಬಿದ್ದುವು. ಕ್ರೀಡಾಸಾಮಗ್ರಿಗಳೆಲ್ಲವೂ ಸಿದ್ಧವಾಗಿದ್ದುವು. ಅಂದವಾದ ಮೇಲ್ಕಟ್ಟುಗಳು! ಅದರ ಸುತ್ತಲೂ ವಿಚಿತ್ರವರ್ಣದ ಜಾಲರಿಗಳು! ಅಲ್ಲಲ್ಲಿ ಮುತ್ತಿನ ಕುಚ್ಚುಗಳು! ಬೆಲೆಯುಳ್ಳ ಹಾಸಿಗೆಗಳು! ಸುಖವಾದ ಆಸನಗಳು! ಅಲ್ಲಲ್ಲಿ ಸುಗಂಧಧೂಪಗಳು, ದೀಪಗಳು, ಪುಷ್ಪಮಾಲಿಕೆಗಳು, ಇವುಗಳಿಂದ ಮನೆಯೆಲ್ಲವೂ ಅತ್ಯಂತಶೋಭಾಯಮಾನವಾಗಿರುವುದು. ಮತ್ತು ಮನೆಯಸುತ್ತಿನ ಗೋಡೆಗಳಲ್ಲಿ, ಕಾಮಶಾಸ್ತ್ರದಲ್ಲಿ ಹೇಳಲ್ಪಟ್ಟ ನಾನಾಬಗೆಯ ರತಿಬಂಧಗಳನ್ನು ತೋರಿಸತಕ್ಕ ವಿಚಿತ್ರವರ್ಣದ ಚಿತ್ರಗಳು ಬರೆಯಲ್ಪಟ್ಟಿರುವುವು. ಕೃಷ್ಣನು ಈ ಸನ್ನಿವೇಶಗಳೆಲ್ಲವನ್ನೂ ನೋಡುತ್ತ, ಬರುತ್ತಿರುವಾಗ, ಆ ದಾಸಿಯು ದೂರದಿಂದಲೇ ಅವನನ್ನು ಕಂಡು, ಪರಮಸಂಭ್ರಮದಿಂದ ತಟ್ಟನೆ ಮೇಲೆದ್ದು, ತನ್ನ ಗೌಡಿಯರೊಡನೆ, ಆಸನಾದಿಗಳನ್ನು ಸಿದ್ಧಪಡಿಸಿ, ಮುಂದೆಬಂದು ಕೃಷ್ಣನನ್ನು ಕರೆದುಕೊಂಡುಹೋಗಿ ಕುಳ್ಳಿರಿಸಿ ಪೂಜಿಸಿದಳು. ಹಾಗೆಯೇ ಕೃಷ್ಣನಸಂಗಡ ಬಂದಿದ್ದ ಉದ್ಧವನನ್ನೂ ಯಥೋಚಿತವಾಗಿ ಸತ್ಕರಿಸಿ, ಅವನಿಗೂ ಒಂದು ಉತ್ತಮಾಸನವನ್ನು ಕೊಡಲು, ಅವನು, ಅದ

ನ್ನು ಕೈಯಿಂದಮಾತ್ರ ಮುಟ್ಟಿ, ಕೃಷ್ಣನಕಾಲಿನ ಬಳಿಯಲ್ಲಿ ನೆಲದಮೇಲೆ ಯೇ ಕುಳಿತನು. ಆಮೇಲೆ ಕೃಷ್ಣನು, ಆದಾಸಿಯ ಮನೋಭಿಪ್ರಾಯವನ್ನು ತಿಳಿದು, ಲೋಕದಲ್ಲಿ ಕಾಮುಕರ ಲೀಲೆಯನ್ನು ನಟಿಸುತ್ತ, ತಾನೇಮುಂಪಾ ಗಿ ಅವಳ ಶಯ್ಯಾಗೃಹಕ್ಕೆ ಹೋಗಿ, ಅಲ್ಲಿ ಆಗಲೇ ಹೊಸದಾಗಿ ತರಿಸಿ ಅಲಂ ಕರಿಸಲ್ಪಟ್ಟಿದ್ದ ಮಂಚದಮೇಲೆ ಕುಳಿತನು. ಇಷ್ಟರಲ್ಲಿ ಆ ದಾಸಿಯೂಕೂ ಡ, ಬಹಳ ಸಡಗರದಿಂದ ಶುದ್ಧವಾಗಿ ಮೈತೊಳೆದು ಸ್ನಾನಮಾಡಿ, ಝರ ತಾರಿಯ ಪಟ್ಟೆಸೀರೆಯನ್ನುಟ್ಟು, ಮನೆಯಲ್ಲಿದ್ದ ಉತ್ತಮಾಭರಣಗಳೆಲ್ಲವನ್ನೂ ಮೈಮೇಲೆ ಧರಿಸಿಕೊಂಡಳು. ಘುಮಘುಮಿಸುವ ಗಂಧವನ್ನು ಮೈಗೆ ಲೇಪಿ ಕೊಂಡು, ತಲೆಗೆ ಪುಷ್ಪವನ್ನು ಮುಡಿದು, ಅಮೃತಸಮಾನವಾದ ಮಧುವ ನ್ನು ಕುಡಿದು, ಕರ್ಪೂರಮಿಶ್ರಿತವಾದ ತಾಂಬೂಲವನ್ನಗಿಯುತ್ತ, ಅತ್ಯಾ ತುರದಿಂದ ಆ ಶಯ್ಯಾಗೃಹದ ಬಾಗಿಲಿಗೆ ಬಂದು ನಿಂತಳು! ಅವಳು ಅಷ್ಟೊಂ ದಾತುರದಿಂದ ದೇಹವನ್ನು ಶೃಂಗರಿಸಿಕೊಂಡು ಬಂದಿದ್ದರೂ, ಸ್ತ್ರೀಯರಿಗೆ ಸಹಜವಾದ ಲಜ್ಜೆಯಿಂದ ಮುಂದೆ ಬಿದ್ದುಹೋಗಲಾರದೆ, ಮಂದಹಾಸ ವಿಶಿಷ್ಟವಾದ ಮುಖದಿಂದಲೂ, ವಿಲಾಸವೊಡಗೂಡಿದ ನೋಟದಿಂದಲೂ ಆ ಕೃಷ್ಣನನ್ನು ನೋಡುತ್ತ ಅಲ್ಲಿಯೇ ನಿಂತಳು. ಹೊಸಪುರುಷರನ್ನು ಕಂಡಾ ಗ ಸ್ತ್ರೀಯರಿಗೆ ಸಹಜವಾದ ಲಜ್ಜೆಯಿಂದ, ಹೀಗೆ ಅವಳು ಸಂಕೋಚಪ ಡುತ್ತಿರುವುದನ್ನು ನೋಡಿ ಕೃಷ್ಣನು, ತಾನಾಗಿಯೇ ಬಂದು, ಕಂಕಣ ಭೂಷಿತವಾದ ಅವಳ ಕೈಹಿಡಿದು ಕರೆದು, ತಾನು ಕುಳಿತಿದ್ದ ಮಂಚದಮೇಲೆ ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡನು. ಓ ಪರೀಕ್ಷಿದ್ರಾಜಾ! ಆದಾಸಿಯ ಭಾ ಗ್ಯವನ್ನು ನೋಡಿದೆಯಾ? ಭಗವದನುಗ್ರಹವನ್ನು ಸಂಪಾದಿಸುವುದಕ್ಕೆ ತ ಕ್ಕಂತೆ, ಶಾಸ್ತ್ರಜ್ಞಾನವನ್ನಾಗಲಿ, ವ್ರತನಿಯಮಗಳನ್ನಾಗಲಿ, ಯಾವುದ ನ್ನೂ ಕಂಡರಿಯದ ಅವೇಶ್ಯೆಯು, ಹಿಂದೆ ತನ್ನ ಕೈಯಲ್ಲಿದ್ದ ಗಂಧದ ಬಟ್ಟ ಲನ್ನು, ಕೃಷ್ಣನಮುಂದೆ ನೀಡಿದ ಲೇಶಮಾತ್ರಪುಣ್ಯದಿಂದ, ಅವಳಲ್ಲಿ ಕೃಷ್ಣನಿಗುಂಟಾದ ಅನುಗ್ರಹವನ್ನು ನೋಡು! ಹೀಗೆ ಕೃಷ್ಣನು ತನ್ನಲ್ಲಿ ತೋರಿಸಿದ ಸಲಿಗೆಯಿಂದ.ಅವಳಿಗೆ ಕ್ರಮಕ್ರಮವಾಗಿ ಲಜ್ಜೆಯು ಬಿಟ್ಟುಹೋ ಗಿ ಧೈರ್ಯವುಂಟಾಯಿತು. ಆಮೇಲೆ ಅವಳು, ಆ ಶ್ರೀಕೃಷ್ಣನ ಪಾದಗಳನ್ನು

ಆಗಾಗ ಮುತ್ತಿಕ್ಕುವುದು, ಮತ್ತು ತನ್ನ ಹೃದಯತಾಪವು ನೀಗುವಂತೆ, ಸ್ತ ನಗಳಿಗೂ, ಎದೆಗೂ, ಕಣ್ಣಿಗೂ ಅವುಗಳನ್ನೊತ್ತಿಕೊಳ್ಳುವುದು, ಆನಂದ ಮೂರ್ತಿಯಾದ ಆತನನ್ನು ತೋಳುಗಳಿಂದಪ್ಪುವುದು, ಈರೀತಿಯಾಗಿ ತನ್ನ ಆಸೆಯನ್ನು ತೀರಿಸಿಕೊಂಡಳು! ಹೀಗೆ ಆ ದಾಸಿಯು ತಾನು ಮಾಡಿದ ಪುಣ್ಯಲೇಶದಿಂದ, ಕೈವಲ್ಯನಾಥನಾಗಿಯೂ, ಯೋಗಿಗಳಿಗೂ ದು ರ್ಲಭನಾಗಿಯೂ ಇದ್ದ ಆ ಸರ್ವೇಶ್ವರನ ಸಾನ್ನಿಧ್ಯವನ್ನು ಸೇರಿರುವಾಗಲೂ ಭಾಗ್ಯಹೀನೆಯಾದುದರಿಂದ, ಅವನಿಂದ ತಾನು ಪಡೆಯಬೇಕಾದ ಉತ್ತಮ ಫಲವೇನೆಂಬುದನ್ನು ತಿಳಿಯದೆ,ತಿರುಗಿ ವಿಷಯಸುಖವನ್ನೇ ಯಾಚಿಸುತ್ತ ಹೀ ಗೆಂದು ಹೇಳುವಳು “ಓ ಪ್ರಿಯಾ? ನೀನು ಇನ್ನೂ ಕೆಲವು ದಿನಗಳವರೆಗೆ ನನ್ನ ಮನೆಯಲ್ಲಿಯೇ ಇದ್ದು, ನನ್ನಮನಸ್ಸನ್ನು ಸಂತೋಷಪಡಿಸಬೇಕು! ನಾನು ನಿನ್ನನ್ನು ಬಿಟ್ಟಿರಲಾರೆನು.” ಎಂದಳು. ಆಗ ಕೃಷ್ಣನು ಅವಳಿಗೆ ಪ್ರಿ ಯವಾಕ್ಯದಿಂದ ಸಮಾಧಾನಪಡಿಸಿ, ಅವಳು ಕೇಳಿದಂತೆ, ಅವಳಲ್ಲಿಗೆ ತಿರುಗಿ ಬರುವುದಾಗಿ ಹೇಳಿ, ಉದ್ಧವನೊಡನೆ ಅಲ್ಲಿಂದ ಹೊರಟು ತನ್ನ ಅರಮನೆಗೆ ಬಂದು ಸೇರಿದನು. ರಾಜೇಂದ್ರಾ! ಹೀಗೆ ಸರ್ವೇಶ್ವರನಾದ ಪರಮ ಪುರುಷನು,ತನ್ನಲ್ಲಿ ಪ್ರಸನ್ನನಾಗಿರುವಾಗಲೂ, ಅವನಿಂದ ಹೊಂದಬೇಕಾದ ಉತ್ತಮಫಲವನ್ನು ಹೊಂದದೆ, ಅತ್ಯಲ್ಪವಾದ ವಿಷಯಸುಖಕ್ಕೇ ಆಸೆಪಡ ತಕ್ಕವರು ಅಲ್ಪಭಾಗ್ಯರೆಂಬುದರಲ್ಲಿ ಸಂದೇಹವೇನಿದೆ!

ಆಮೇಲೆ ಕೃಷ್ಣನು,ಹಿಂದೆ ತಾನು ಅಕ್ರೂರನಿಗೆ ಕೊಟ್ಟ ಭಾಷೆಯ ನ್ನು ಜ್ಞಾಪಿಸಿಕೊಂಡು, ಅವನಲ್ಲಿ ಬೇರೊಂದು ಕಾರ್ಯವನ್ನೂ ಉ ದ್ದೇಶಿಸಿ, ಉದ್ಧವಬಲರಾಮರೊಡನೆ ಹೊರಟು, ಅಕ್ರೂರನ ಮನೆಗೆ ಬಂದನು. ಪುರುಷಶ್ರೇಷ್ಠರಾದ ಆಮೂವರೂ ಬರುತ್ತಿರುವುದನ್ನು ಕಂಡೊಡ ನೆ, ಅಕ್ರೂರನು ಸಂತೋಷದಿಂದ ಇದಿರೆದ್ದುಬಂದು,ಅವರನ್ನಾಲಿಂಗಿಸಿ ಸತ್ಕ ರಿಸಿ, ರಾಮಕೃಷ್ಣರಿಗೂ ಉದ್ಧವನಿಗೂ ನಮಸ್ಕರಿಸಿದನು ಅವರೂ ಅಕ್ರೂ ರನಿಗೆ ಪ್ರತಿನಮಸ್ಕಾರವನ್ನು ಮಾಡಿದರು. ಆಮೇಲೆ ಅಕ್ರೂರನು ಅವರಿಗೆ ಆಸನವನ್ನುಕೊಟ್ಟು ಕುಳ್ಳಿರಿಸಿ, ಅವರ ಕಾಲನ್ನು ತೊಳೆದು, ಆನೀರ ನ್ನು ತನ್ನ ತಲೆಗೆ ಪ್ರೋಕ್ಷಿಸಿಕೊಂಡನು. ಅವರಿಗೆ ದಿವ್ಯವಸ್ತ್ರಾಭರಣಗಳನ್ನೂ,

ಗಂಧಪುಷ್ಪಗಳನ್ನೂ, ಕಾಣಿಕೆಯಾಗಿ ಒಪ್ಪಿಸಿ, ಪ್ರಣಾಮಮಾಡಿದ ನು. ಮತ್ತು ಕೃಷ್ಣನ ಪಾದಗಳನ್ನು ತೊಡೆಯಮೇಲಿಟ್ಟುಕೊಂಡು,ತನ್ನ ಕೈಯಿಂದೊತ್ತುತ್ತ, ಆ ರಾಮಕೃಷ್ಣರನ್ನು ಕುರಿತು ವಿನಯಪೂರ್ವಕವಾಗಿ ವಿಜ್ಞಾಪಿಸುವನು.” ಮಹಾತ್ಮರೆ ! ನಮ್ಮ ಭಾಗ್ಯವಶದಿಂದ ಪಾಪಿಯಾದ ಕಂಸನು ತನ್ನ ಪರಿವಾರಗಳೊಡನೆ ನಿಮ್ಮಿಂದ ಹತನಾದನು. ನಮ್ಮ ಯದುಕುಲವು ನಿಮ್ಮಿಂದ ಉದ್ಧರಿಸಲ್ಪಟ್ಟಿತು. ಅದಕ್ಕೆ ಕಂಸನಿಂದ ಬಂದೊದಗಿದ್ದ ದುರಂತವಾದ ಸಂಕಟವು ನಿಮ್ಮಿಂದ ತಪ್ಪಿತು. ಇವೆಲ್ಲವೂ ನಮ್ಮ ಭಾಗ್ಯವು! ನಿಮ್ಮ ಮಹಿಮೆಗೆ ಈ ಕಾರ್ಯವೊಂದು ದೊಡ್ಡದಲ್ಲ! ಏಕೆಂದರೆ, ನೀವಿಬ್ಬರೂ ಪ್ರಕೃತಿಪುರುಷರು ! ನೀವೇ ಜಗತ್ಕಾರಣಭೂತರು ! ನೀವೇ ಜಗನ್ಮಯರು ! ನಿಮ್ಮನ್ನು ಬಿಟ್ಟು ಬೇರೆ ವಸ್ತುವೊಂದಿಲ್ಲ ! ನಿಮಗಿಂತಲೂ ಉತ್ತಮವಾದುದೊಂದಿಲ್ಲ ! ಓ ಪರಬ್ರಹ್ಮಸ್ವರೂಪಾ ! ಕೃಷ್ಣಾ ! ನೀನು ಪ್ರಕೃತಿ, ಪುರುಷ, ಕಾಲಗಳೆಂಬ ನಿನ್ನ ಶಕ್ತಿಗಳಿಂದಲೇ ಈ ಪ್ರಪಂಚವನ್ನು ಸೃಷ್ಟಿಸಿ, ನೀನೂ ಅದರಲ್ಲಿ ಅಂತರಾತ್ಮನಾಗಿ, ಆಯಾಕಾರ್ಯಗಳಲ್ಲಿ ನಿಯಮಿಸುತ್ತ, ಕಿವಿಗೂ, ಕಣ್ಣಿಗೂ ಗೋಚರಿಸತಕ್ಕ ನಾನಾರೂಪಗಳಿಂದ ನೀನೇ ತೋರುತ್ತಿರುವೆ ? ಇವೆಲ್ಲವೂ ವೇದಪ್ರಾಮಾಣ್ಯದಿಂದಲೂ, ಆತ್ಮಸಾಕ್ಷಾತ್ಕಾರದಿಂದಲೂ ತಿಳಿಯಬೇಕಲ್ಲದೆ ಬೇರೆಯಲ್ಲ! ಭೂಮಿ ಮೊದಲಾದ ಭೂತಗಳು, ತಮ್ಮಿಂದುಂಟಾಗತಕ್ಕ ಚರಾಚರಾತ್ಮವಾದ ವ್ಯಷ್ಟಿಭೂತಗಳಲ್ಲಿ ತಾವೂ ಸೇರಿ. ನಾನಾರೂಪದಿಂದ ತೋರುತ್ತಿರುವಹಾಗೆಯೇ,ನೀನೂ ಏಕರೂಪನಾಗಿದ್ದರೂ, ನಿನ್ನಿಂದ ಹುಟ್ಟತಕ್ಕ ಸಮಷ್ಟಿವ್ಯಷ್ಟಿಭೂತಗಳಲ್ಲಿ ಸೇರಿ ಆಯಾ ಅನೇಕರೂಪದಿಂದ ನೀನೇ ತೋರುತ್ತಿರುವೆ! ಅವುಗಳಿಗೆ ಅಂತರಾತ್ಮನಾಗಿ ನಿಯಮಿಸತಕ್ಕವನೂ ನೀನೇ!ಹೀಗೆ ನೀನು ಅನೇಕರೂಪಗಳಿಂದ ತೋರುತ್ತಿದ್ದರೂ, ಜೀವನಂತೆ ಕರ್ಮಾಧೀನನಾಗಿ ಈ ರೂಪಗಳನ್ನು ಹೊಂದತಕ್ಕವನಲ್ಲ ! ನೀನು ಸರ್ವಸ್ವತಂತ್ರನಾದುದರಿಂದ ಲೀಲಾರ್ಥವಾಗಿ ಈ ರೂಪಗಳನ್ನು ನೀನಾಗಿಯೇ ಕೈಕೊಳ್ಳುವೆ ! ಮತ್ತು ರಜಸ್ಸು, ಸತ್ವ, ತಮಸ್ಸುಗಳೆಂಬ ನಿನ್ನ ಶಕ್ತಿಗಳಿಂದಲೇ ನೀನು, ಈ ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರಕಾರ್ಯಗಳನ್ನು ನಡೆಸತಕ್ಕವನಾದ

ರೂ, ಜೀವನಂತೆ ನೀನು ಆ ಗುಣಗಳಿಗಾಗಲಿ, ಕರ್ಮಗಳಿಗಾಗಲಿ ಕಟ್ಟುಬಿದ್ದವ ನಲ್ಲ! ಕೇವಲಶುದ್ಧಜ್ಞಾನಾನಂದಸ್ವರೂಪನಾದ ನಿನಗೆ,ಆ ವಿಧವಾದ ಕರ್ಮ ಬಂಧವುಂಟಾಗುವ ಕಾರಣವೆಲ್ಲಿಯುದು ? ಹೀಗೆ ಸತ್ವಾದಿಗಳ ಮತ್ತು ಕರ್ಮ ಗಳ ಕಟ್ಟಿಗೇ ನೀನು ಸಿಕ್ಕದಿರುವಾಗ, ಅವರಿಂದ ಹೊಂದಬೇಕಾದ ಶರೀರ ಸಂಬಂಧವೂ ನಿನಗಿರುವುದಿಲ್ಲ! ಶರೀರವುಳ್ಳ ಸಮಸ್ತಜೀವಗಳಲ್ಲಿಯೂ ನೀನು ಅಂತರಾತ್ಮನಾಗಿದ್ದರೂ, ಬಂಧಮೋಕ್ಷಗಳೆಂಬಿವು, ನಿನಗೆ ಶರೀರವಾದ ಆ ಯಾ ಜೀವನಿನಗಲ್ಲ!ದೆ ನಿನಗಲ್ಲ! ಹಾಗಿಲ್ಲದೆ ಬೇರೆವಿಧವಾಗಿ ತಿಳಿಯುವು ದು ಅವರವರ ಅವಿವೇಕದಿಂದಲ್ಲದೆ ಬೇರೇಯಲ್ಲ! ಆದರೆ "ನಾನೂ ರಾಮಕೃ ಷ್ಣಾದಿಶರೀರಗಳಿಂದ ತೋರುತ್ತಿರುವೆನಲ್ಲವೆ?"ಎಂದರೆ, ದೇವಾ! ಲೋಕಹಿತ ಕ್ಕಾಗಿ ಮೊದಲು ನೀನು ಉಪದೇಶಿಸಿದ ಪುರಾತನವಾದ ವೇದಮಾರ್ಗವು (ಧರ್ಮಮಾರ್ಗವು)ಪಾಷಂಡಮಾರ್ಗದಿಂದ ಯಾವಾಗ ಕೆಡುತ್ತ ಬರುವುದೋ ಆಗ ನೀನು, ಧರ್ಮಸಂಸ್ಥಾಪನಾರ್ಥವಾಗಿ, ಶುದ್ಧಸತ್ವಮಯವಾದ ಇಂತಹ ಅವತಾರಗಳನ್ನೆತ್ತುವೆ? ಈಗಲೂ ನೀನು ರಾಕ್ಷಸಪ್ರಕೃತಿಯುಳ್ಳ ಕ್ಷತ್ರಿಯರ ಅನೇಕಾಕ್ಷೌಹಿಣೀಸೈನ್ಯಗಳನ್ನು ಕೊಂದು, ಅದರಿಂದುಂಟಾದ ಭೂಭಾರ ವನ್ನು ಪರಿಹರಿಸುವುದಕ್ಕಾಗಿಯೂ, ಈ ಯದುಕುಲದ ಕೀರ್ತಿಯನ್ನು ವಿಸ್ತ ರಿಸುವುದಕ್ಕಾಗಿಯೂ ಈ ರೂಪದಿಂದ ವಸುದೇವನ ಮನೆಯಲ್ಲಿ ಅವತರಿಸಿ ರುವೆ! ಓ ಈಶಾ! ಯಾವನಿಗೆ ಸಮಸ್ತದೇವತೆಗಳೂ, ಪಿತೃದೇವತೆಗಳೂ, ಭೂತಗಳೂ, ರಾಜರೂ, ಶರೀರವೆನಿಸಿರುವರೋ, ಯಾವನ ಪಾದಗಳನ್ನು ತೊಳೆದ ತೀರ್ಥವು ಮೂರುಲೋಕವನ್ನೂ ಪಾವನಮಾಡುತ್ತಿರುವುದೋ, ಅಂತಹ ಜಗದ್ಗುರುವಾದ ನೀನು ಕಾಲಿಟ್ಟುದರಿಂದ, ಈಗ ನಮ್ಮ ಗೃಹಗಳು ಭಾಗ್ಯಸಮೃದ್ಧಗಳಾದುವು! ಕೃಷ್ಣಾ! ಭಕ್ತಪ್ರಿಯನಾಗಿಯೂ, ಸತ್ಯವಾದಿ ಯಾಗಿಯೂ, ಸರ್ವಸುಹೃತ್ತಾಗಿಯೂ, ಕೃತಜ್ಞನಾಗಿಯೂ ಇರುವ ನಿನ್ನ ನ್ನು ಬಿಟ್ಟು, ವಿವೇಕಿಯಾದವನು ಬೇರೆ ಯಾವದೇವತೆಗಳನ್ನು ತಾನೇ ಶರ ಣುಹೊಂದುವನು ? ನೀನು ನಿನ್ನನ್ನು ಭಜಿಸಿದವರಿಗೆ ಸರ್ವಾಭೀಷ್ಟಗಳನ್ನೂ ಕೈಗೂಡಿಸಬಲ್ಲವನು. ಅಭೀಷ್ಟಗಳುಮಾತ್ರವೇ ಅಲ್ಲ! ವೃದ್ಧಿಕ್ಷಯಗಳಿಲ್ಲವೆ ನಿ ರತಿಶಯಾನಂದರೂಪವಾದ ನಿನ್ನ ಆತ್ಮವನ್ನೇ ನೀನು ನಿನ್ನ ಭಕ್ತರಿಗಾಗಿ

ಒಪ್ಪಿಸಬಿಡತಕ್ಕವನು. ಓ ಜನಾರ್ದನಾ ! ಬ್ರಹ್ಮಾದಿದೇವತೆಗಳಿಗೂ ಮಹಾಯೋಗಿಗಳಿಗೂ ಅಗೋಚರವಾದ ಮಹಿಮೆಯುಳ್ಳ ನೀನು, ಈಗ ನನ್ನ ಕಣ್ಣಮುಂದೆ ಗೋಚರಿಸುವುದು ನಮ್ಮ ಭಾಗ್ಯವಿಶೇಷವಲ್ಲವೆ? ಈಗ ನೀನು ನಮಗೆ ಪ್ರತ್ಯಕ್ಷನಾಗಿರುವಾಗಲೇ, ನಿನ್ನ ಮಾಯೆಯಿಂದ ನಮಗೆ ತಗುಲು ಕಟ್ಟಿರುವ, ಪುತ್ರ, ಕಳತ್ರ, ಧನ, ಗೃಹಾದಿ ಮೋಹಪಾಶವನ್ನು ಬಿಡಿಸಿ, ನಮ್ಮನ್ನು ಸಂಸಾರದಿಂದುದ್ಧರಿಸು!" ಎಂದು ಪ್ರಾರ್ಥಿಸಿದನು.

ಹೀಗೆ ಅಕ್ರೂರನು ತನ್ನನ್ನು ಪೂಜಿಸಿ ಸ್ತುತಿಸುತ್ತಿರುವುದನ್ನು ನೋಡಿ ಕೃಷ್ಣನು, ತನ್ನ ಮಾತುಗಳಿಂದ ಅವನನ್ನು ಮೋಹಗೊಳಿಸುತ್ತ, ಮಂದಹಾಸಪೂರ್ವಕವಾಗಿ ಹೀಗೆಂದು ಹೇಳುವನು. "ಓ ಸೌಮ್ಯಾ ! ಅಕ್ರೂರಾ! ನೀನು ನನಗೆ ಆಗಾಗ ಹಿತವನ್ನು ಹೇಳತಕ್ಕವನಾದುದರಿಂದ, ನನಗೆ ನೀನೇ ಗುರುವು ! ಇದರಮೇಲೆ ನನ್ನ ತಂದೆಗೆ ನೀನು ಸಹೋದರನಾದುದರಿಂದ ಸಮೀಪಬಂಧುವರ್ಗದಲ್ಲಿಯೂ ಸೇರಿದವನು. ನಾವು ನಿನಗೆ ಮಕ್ಕಳಂತಿರುವುದರಿಂದ, ನಮ್ಮನ್ನು ರಕ್ಷಿಸುವುದೂ, ಪೋಷಿಸುವುದೂ ನಮ್ಮಲ್ಲಿ ದಯೆತೋರಿಸುವುದೂ, ನಿನ್ನ ಭಾಗಕ್ಕೆ ಸೇರಿದೆ. ನಮಗೆ ನೀನೇ ಪೂಜ್ಯನಾಗಿರುವಾಗ, ನೀನು ನಮ್ಮಲ್ಲಿ ಇಷ್ಟೊಂದು ಗೌರವವನ್ನು ತೋರಿಸುವುದುಚಿತವೆ ? ಶ್ರೇಯಃಕಾಂಕ್ಷಿಗಳಾದ ಜನರು, ನಿಮ್ಮಂತಹ ಭಾಗವತೋತ್ತಮರ ಸೇವೆಯಿಂದಲೇ ಆತ್ಮಶುದ್ಧಿಯನ್ನು ಪಡೆಯಬೇಕಾಗಿರುವುದು. ದೇವತೆಗಳೆಲ್ಲರೂ ಸ್ವಾರ್ಥಪರರು! ನಿಮ್ಮಂತಹ ಸಾಧುಗಳು ಹಾಗಲ್ಲ! ಯಾವಾಗಲೂ ನೀವು ಪರೋಪಕಾರದಲ್ಲಿಯೇ ಆಕ್ಕರೆಯುಳ್ಳವರು. ಜಲಮಯವಾದ ಗಂಗಾದಿಪುಣ್ಯತೀರ್ಥಗಳಾಗಲಿ, ಕಲ್ಲುಮಣ್ಣುಗಳಿಂದಾಗಿರುವ ದೇವಾದಿಪ್ರತಿಮೆಗಳಾಗಲಿ, ನಿಮಗೆ ಈಡಾಗಲಾರವು. ಏಕೆಂದರೆ, ಅವೆಲ್ಲವೂ ಬಹುಕಾಲದವರೆಗೆ ಸ್ನಾನಪಾನಪೂಜಾಪರಿಚರ್ಯಾದಿಗಳಿಂದಲೇ ಆಶ್ರಿತರನ್ನು ಪಾವನಮಾಡುವುವು. ನಿಮ್ಮಂತಹ ಸಾಧುಗಳಾದರೋ, ದರ್ಶನಮಾತ್ರದಿಂದಲೇ ಲೋಕವನ್ನು ಪಾವನಮಾಡತಕ್ಕವರು. ಆದುದರಿಂದ ನಿಮ್ಮಂತಹ ಸುಹೃತ್ತುಗಳೊಡನೆ ನಮಗೆ ಸಹವಾಸವು ಲಭಿಸಿದುದೇ ನಮ್ಮ ಭಾಗ್ಯವು! ನೀನು ನಮಗೆ ಹಿತೈಷಿಯಾದುದರಿಂದ, ಈಗ ನಮಗಾಗಿ ಒಂದು ಕಾರ್ಯವನ್ನು ನಡೆಸಬೇಕು. ಹಸ್ತಿ

ನಾವತಿಗೆ ಹೋಗಿ, ಪಾಂಡವರ ಯೋಗಕ್ಷೇಮಗಳನ್ನು ತಿಳಿದು ಬರಬೇಕು. ಅವರ ತಂಡೆಯಾದ ಪಾಂಡುರಾಜನು ಮೃತನಾದಮೇಲೆ, ದುಃಖಿತರಾದ ಆ ಬಾಲಕರನ್ನೂ, ಅವರ ತಾಯಿಯಾದ ಕುಂತೀದೇವಿಯನ್ನೂ, ಧೃತರಾಷ್ಟ್ರನು ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗಿ, ತನ್ನಲ್ಲಿಟ್ಟುಕೊಂಡು ಪೋಷಿಸುತ್ತಿರುವುದಾಗಿ ಕೇಳುವೆನು. ಆದರೆ ಆ ಧೃತರಾಷ್ಟ್ರನು ಮೊದಲೇ ವೃದ್ಧನು. ಇದರಮೇಲೆ ಕಣ್ಣಿಲ್ಲದ ಕುರುಡನು. ಆದುದರಿಂದ ತನ್ನ ಬುದ್ಧಿಯನ್ನು ತನ್ನ ಸ್ವಾಧೀನದಲ್ಲಿಟ್ಟುಕೊಳ್ಳಲಾರದೆ, ದುಷ್ಟಸ್ವಭಾವವುಳ್ಳ ತನ್ನ ಮಕ್ಕಳಾದ ದುರ್ಯೋಧನಾದಿಗಳ ಮಾತನ್ನು ಕೇಳಿಕೊಂಡು, ಪಾಂಡವರಲ್ಲಿ ಭೇದಬುದ್ಧಿಯನ್ನು ತೋರಿಸಬಹುದು. ಅವನು ಪಾಂಡವರನ್ನೂ, ತನ್ನ ಮಕ್ಕಳನ್ನೂ ನಿಷ್ಪಕ್ಷಪಾತವಾದ ಸಮಬುದ್ಧಿಯಿಂದ ನೋಡುವನೆಂಬುದು ಸುಳ್ಳು! ಆದುದರಿಂದ ಈಗಲೇ ನೀನು ಹೋಗಿ, ಅಲ್ಲಿ ಪಾಂಡವರ ಸ್ಥಿತಿಯು ಸಮರ್ಪಕವಾಗಿರುವುದೇ ಇಲ್ಲವೇ ಎಂಬುದನ್ನು ತಿಳಿದು ಬರಬೇಕು! ಮೊದಲು ನಾವು ಅದನ್ನು ತಿಳಿದುಕೊಂಡು, ಮುಂದೆ ಅವರಿಗೆ ಕ್ಷೇಮವುಂಟಾಗುವ ರೀತಿಯನ್ನು ಯೋಚಿಸುವೆವು." ಎಂದನು. ಹೀಗೆ ಕೃಷ್ಣನು ಅಕ್ರೂರನನ್ನು ಹಸ್ತಿನಾವತಿಗೆ ಹೋಗುವಂತೆ ನಿಯಮಿಸಿ, ಉದ್ಧವಬಲರಾಮರೊಡನೆ ಹಿಂತಿರುಗಿ ತನ್ನ ಮನೆಗೆ ಬಂದನು. ಇದು ನಾಲ್ವತ್ತೆಂಟನೆಯ ಅಧ್ಯಾಯವು.

---

{ ಅಕ್ರೂರನು ಹಸ್ತಿನಾವತಿಯಲ್ಲಿ ಪಾಂಡವರ ಯೋಗಕ್ಷೇಮವನ್ನು ವಿಚಾರಿಸಿದುದು. }

ಕೃಷ್ಣಾಜ್ಞೆಯಂತೆ ಅಕ್ರೂರನು ಒಡನೆಯೇ ಅಲ್ಲಿಂದ ಹೊರಟು, ಕುರುವಂಶದ ಪುರಾತನರಾಜರ ಕೀರ್ತಿಯನ್ನು ಸೂಚಿಸುವಂತೆ, ಅನೇಕ ದೇವಾಲಯಗಳಿಂದಲೂ, ಬ್ರಾಹ್ಮಣರ ಅಗ್ರಹಾರಗಳಿಂದಲೂ ಶೋಭಿತವಾದ ಹಸ್ತಿನಾವತಿಗೆ ಬಂದನು. ಅಲ್ಲಿ ಮೊದಲು ಕುರುಪಿತಾಮಹನಾದ ಭೀಷ್ಮನನ್ನೂ, ಧೃತರಾಷ್ಟ್ರನನ್ನೂ, ವಿದುರನನ್ನೂ, ಕುಂತೀದೇವಿಯನ್ನೂ ಕಂಡು ನಮಸ್ಕರಿಸಿ, ಅವರ ಕ್ಷೇಮಲಾಭಗಳನ್ನು ವಿಚಾರಿಸಿದನು. ಆಮೇಲೆ

ಕ್ರಮವಾಗಿ, ಅಲ್ಲಿ ತನಗೆ ಪರಿಚಿತರಾದ,ಬಾಹ್ಲೀಕ, ಸೋಮದತ್ತ, ದ್ರೋಣ, ಕೃಪ, ಅಶ್ವತ್ಥಾಮ, ಕರ್ಣ, ದುರ್ಯೋಧನಾದಿಗಳನ್ನೂ, ಪಾಂಡವರನ್ನೂ, ಇನ್ನೂ ತನಗೆ ಆಪ್ತರಾದವರನ್ನೂ ನೋಡಿ,ಅವರ ಕುಶಲಪ್ರಶ್ನವನ್ನುಮಾಡಿ, ಅವರು ತಮ್ಮತಮ್ಮ ಬಂಧುಮಿತ್ರರ ವಿಷಯವಾಗಿ ಕೇಳಿದ ಕುಶಲವಾರ್ತೆಗಳನ್ನೂ ಅವರವರಿಗೆ ತಿಳಿಸಿದನು. ವಾರ್ಧಕದಿಂದ ಅರುಳುಮರುಳಾಗಿ, ಚಂಚಲಬುದ್ಧಿಯುಳ್ಳ ಧೃತರಾಷ್ಟ್ರನು, ದುಷ್ಟರಾದ ತನ್ನ ಮಕ್ಕಳಮೇಲಿನ ಮೋಹದಿಂದಲೂ,ಕರ್ಣ ಶಕುನಿ ಮೊದಲಾದವರ ದುರ್ಬೋಧನೆಯಿಂದಲೂ ಪಾಂಡವರನ್ನು ಹೇಗೆ ಕಾಣುತ್ತಿರುವನೋ ಎಂಬುದನ್ನು ಚೆನ್ನಾಗಿ ತಿಳಿಯಬೇಕೆಂಬ ಉದ್ದೇಶದಿಂದ, ಅಲ್ಲಿಯೇ ಕೆಲವುತಿಂಗಳವರೆಗೆ ವಾಸಮಾಡುತಿದ್ದನು. ಮತ್ತು ಅಲ್ಲಿನ ಪ್ರಜೆಗಳಿಗೆ ಪಾಂಡವರಲ್ಲಿರುವ ಅನುರಾಗವನ್ನೂ, ಆ ಪಾಂಡವರಲ್ಲಿ ಸಹಜವಾಗಿರುವ ತೇಜಸ್ಸು, ಬಲ, ವೀರ್ಯ, ವಿನಯ, ಮೊದಲಾದ ಸದ್ಗುಣಗಳನ್ನೂ ನೋಡಿ ಸಹಿಸಲಾರದೆ, ದುರ್ಯೋಧನಾದಿಗಳು, ಅವರಮೇಲೆ ಹಗೆತೀರಿಸಿಕೊಳ್ಳುವುದಕ್ಕಾಗಿ ನಡೆಸಿದ ಕ್ರೂರಕಾರ್ಯಗಳನ್ನೂ, ಮುಂದೆ ಅವನು ಮಾಡಬೇಕೆಂದಿರುವ ಕೇಡುಗಳನ್ನೂ, ಕುಂತಿಯೂ, ವಿದುರನೂ ಅಕ್ರೂರನಿಗೆ ರಹಸ್ಯವಾಗಿ ವಿವರಿಸಿ ತಿಳಿಸಿದರು. ಆಗ ಕುಂತಿಯು ತನ್ನ ತಮ್ಮನಾದ ಅಕ್ರೂರನನ್ನು ಕಂಡೊಡನೆ, ತೌರುಮನೆಯನ್ನು ನೆನೆಸಿಕೊಂಡು ಕಣ್ಣೀರುಬಿಡುತ್ತ, “ಸೌಮ್ಯಾ! ಅಕ್ರೂರಾ! ನನ್ನ ತಾಯ್ತಂದೆಗಳೂ, ನನ್ನ ಸಹೋದರರೂ, ಸಹೋದರಿಯರೂ, ಅವರ ಮಕ್ಕಳೂ, ಸಹೋದರಪತ್ನಿಯರೂ, ನನ್ನನ್ನು ನೆನಪಿನಲ್ಲಿಟ್ಟಿರುವರೆ? ಭಕ್ತವತ್ಸಲನಾದ,ಮತ್ತು ನನ್ನಣ್ಣನ ಮಗನಾದ ಕೃಷ್ಣನೂ, ಬಲರಾಮನೂ, ತಮ್ಮ ಅತ್ತೆಯ ಮಕ್ಕಳಾದ ಪಾಂಡವರನ್ನು ನೆನಪಿನಲ್ಲಿಟ್ಟಿರುವರಷ್ಟೆ? ತೋಳಗಳನಡುವೆ ಸಿಕ್ಕಿಬಿದ್ದ ಜಿಂಕೆಗಳಂತೆ, ನಾವೆಲ್ಲರೂ ಇಲ್ಲಿ ಶತ್ರುಗಳನಡುವೆ ಸಿಕ್ಕಿ ಕಷ್ಟಪಡುತ್ತಿರುವೆವು.ಅನಾಥೆಯಾದ ನನ್ನನ್ನೂ,ತಂದೆಯಿಲ್ಲದೆ ತಬ್ಬಲಿಗಳಾದ ನನ್ನ ಮಕ್ಕಳನ್ನೂ ಕೃಷ್ಣನು ಆಗಾಗ ಕನಿಕರದಿಂದ ವಿಚಾರಿಸುತ್ತಿರುವನೆ? ಆಕೃಷ್ಣನು ನಮಗೇನಾದರೂ ದುಃಖಸಮಾಧಾನವಾದ ಮಾತುಗಳನ್ನುಹೇಳಿ ಕಳುಹಿಸಿರುವನೆ!” ಎಂದು ಕೇಳುತ್ತಿರುವಾಗಲೇ ಕುಂತಿಯು

ಕೃಷ್ಣನನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡು “ಹಾ ಕೃಷ್ಣಾ! ಕೃಷ್ಣಾ! ಮಹಾಯೋಗೀ! ವಿಶ್ವಾತ್ಮಾ! ವಿಶ್ವಕಾರಣಾ! ಗೋವಿಂದಾ! ಐದುಮಕ್ಕಳನ್ನು ಕಟ್ಟಿಕೊಂಡು ಅನಾಥೆಯಾಗಿ ಇಲ್ಲಿ ದುಃಖಿಸುತ್ತಿರುವ ನನ್ನನ್ನು ರಕ್ಷಿಸು! ನೀನೇ ನಮಗೆ ದಿಕ್ಕು! ನನಗೆ ಮಾತ್ರವೇನು? ಲೋಕದ ಸಮಸ್ತಪ್ರಾಣಿಗಳಿಗೂ ನಿನ್ನ ಪಾದಾರವಿಂದವೇ ಆಶ್ರಯವು! ಮೃತ್ಯುರೂಪವಾದ ಸಂಸಾರಪಾಶದಲ್ಲಿ ಸಿಕ್ಕಿ ನರಳುತ್ತಿರುವ ಪ್ರಾಣಿಗಳಿಗೆ, ಸರ್ವೇಶ್ವರನಾದ ನಿನ್ನ ಪಾದಾರವಿಂದಗಳಲ್ಲದೆ, ಬೇರೆ ಯಾವುದುತಾನೇ ಆ ಕಷ್ಟವನ್ನು ತಪ್ಪಿಸಿ, ಉತ್ತಮಪುರುಷಾರ್ಥವಾದ ಅಪವರ್ಗವನ್ನು ಕೈಗೂಡಿಸಬಹುದು! ಓ ಶುದ್ಧಾತ್ಮಾ! ಪರಬ್ರಹ್ಮಾ! ಯೋಗೇಶ್ವರಾ! ಯೋಗಸ್ವರೂಪಾ! ಕೃಷ್ಣಾ! ನಿನಗೆ ನಮಸ್ಕಾರವು. ಶರಣಾಗತೆಯಾದ ನನ್ನನ್ನು ರಕ್ಷಿಸು!” ಎಂದು ಜಗದೀಶ್ವರನಾದ ಆ ಕೃಷ್ಣನನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡಹಾಗೆಲ್ಲಾ, ದುಃಖವನ್ನು ತಡೆಯಲಾರದೆ ರೋದಿಸತೊಡಗಿದಳು. ಅದನ್ನು ನೋಡಿ, ಅಕ್ರೂರನೂ, ವಿದುರನೂ, ಅವಳ ದುಃಖಕ್ಕೆ ತಾವೂ ಸಮಭಾಗಿಗಳಾಗಿ, ಅವಳನ್ನು ಸಮಾಧಾನಪಡಿಸುತ್ತ “ಅಮ್ಮಾ! ಅಳಬೇಡ! ಧರ್ಮಾದಿದೇವತೆಗಳ ಅನುಗ್ರಹದಿಂದ, ಅವರಿಗೆ ಮಕ್ಕಳಾಗಿ ಜನಿಸಿರುವ ನಿನ್ನ ಪುತ್ರರನ್ನು ಆ ದೇವತೆಗಳಾದರೂ ಕಾಪಾಡದಿರುವರೆ! ನೀನು ಹೆದರಬೇಡ!” ವೆಂದು ಸಮಾಧಾನಪಡಿಸಿದರು. ಆಮೇಲೆ ಅಕ್ರೂರನು, ಅಲ್ಲಿನ ಸ್ಥಿತಿಗತಿಗಳೆಲ್ಲವನ್ನೂ ಚೆನ್ನಾಗಿ ಮನಸ್ಸಿಗೆ ತಿಳಿದುಕೊಂಡು, ಅಲ್ಲಿಂದ ಹೊರಡುವಸಂದರ್ಭದಲ್ಲಿ, ತನ್ನ ಮಕ್ಕಳಮೇಲಿನ ಅಭಿಮಾನದಿಂದ, ಪಾಂಡವರವಿಷಯದಲ್ಲಿ ವಿಷಮಬುದ್ಧಿಯನ್ನೇ ತೋರಿಸುತ್ತಿರುವ ಧೃತರಾಷ್ಟ್ರನಿಗೆ, ಅವನ ಬಂಧುಗಳೂ, ಮತ್ತು ಕೃಷ್ಣನೂ ಹೇಳಿಕಳುಹಿಸಿರುವ ಹಿತವಾದಗಳನ್ನು ತಿಳಿಸುವುದಕ್ಕಾಗಿ, ತಿರುಗಿ ಅವನಬಳಿಗೆ ಬಂದನು. ಇಷ್ಟಬಂಧುಗಳೆಲ್ಲರೂ ನೆರೆದಿರುವಾಗ ಆಧೃತರಾಷ್ಟ್ರನನ್ನು ಕುರಿತು ಹೀಗೆಂದು ಹೇಳುವನು. “ಓ ಕುರುರಾಜಾ! ಧೃತರಾಷ್ಟ್ರಾ! ನೀನು ಹುಟ್ಟುಕುರುಡನಾದುದರಿಂದ, ಮೊದಲು ನಿನ್ನ ತಮ್ಮನಾದ ಪಾಂಡುವೇ ಈ ರಾಜ್ಯಕ್ಕೆ ಅಧಿಕಾರಿಯಾದನು. ಆತನು ಕಾಲಾಧೀನನಾದುದರಿಂದ, ತಿರುಗಿ ನಿನ್ನನ್ನೇ ಸಿಂಹಾಸನದಲ್ಲಿ ಕೆಂದುಕುಳ್ಳಿರಿ

ಸಬೇಕಾಯಿತು. ಈಗ ನೀನು ಕುರುರಾಜರ ಸಿಂಹಾಸನವನ್ನೇರಿರುವೆ? ಮುಂದೆ ಕುರುವಂಶದ ಕೀರ್ತಿಯು ಕೆಡದಂತೆ ಕಾಪಾಡಬೇಕಾದ ಭಾರವು ನಿನ್ನದು! ಅದುದರಿಂದ ಭೂಮಿಯನ್ನು ಧರ್ಮದಿಂದ ಪಾಲಿಸು! ನಿನ್ನ ಗುಣಗಳಿಂದ ಪ್ರಜೆಗಳನ್ನು ಸಂತೋಷಗೊಳಿಸು! ನಿನ್ನ ಬಂಧುವರ್ಗವೆಲ್ಲವನ್ನೂ ಸಮದೃಷ್ಟಿಯಿಂದ ನೋಡು! ಇದರಿಂದ ಮುಂದೆ ನೀನು ಕೀರ್ತಿಯನ್ನೂ, ಶ್ರೇಯಸ್ಸನ್ನೂ ಹೊಂದುವೆ! ಹಾಗಿಲ್ಲದೆ ಇದಕ್ಕೆ ವ್ಯತಿರಿಕ್ತವಾಗಿ ನಡೆದರೆ, ಲೋಕಾಪವಾದಕ್ಕೊಳಗಾಗಿ, ಕೊನೆಗೆ ನರಕದಲ್ಲಿಯೂ ಬೀಳುವೆ? ಅದುದರಿಂದ ಮುಖ್ಯವಾಗಿ ನೀನು ನಿನ್ನ ಮಕ್ಕಳನ್ನೂ, ಪಾಂಡವರನ್ನೂ ಸಮಬುದ್ಧಿಯಿಂದ ನೋಡುತ್ತಿರಬೇಕು." ಸ್ವಂತಮಕ್ಕಳಿಗೆ ಸಮಾನವಾಗಿ, ಇತರರ ಮಕ್ಕಳನ್ನು ನೋಡುವುದಕ್ಕಾಗುವುದೇ!"ಎಂದು ನೀನು ಹೇಳಬಹುದು! ಈ ಲೋಕದಲ್ಲಿ ಸ್ವಂತವೆಂಬುದೊಂದೂ ಇಲ್ಲ! ನಮ್ಮ ದೇಹವೇ ನಮ್ಮೊಡನೆ ಬರಲಾರದಿರುವಾಗ, ಇನ್ನು ಮನೆಮಂದಿಮಕ್ಕಳನ್ನು ಸ್ವಂತವೆಂದು ನಂಬುವುದು ಹೇಗೆ? ಈ ಪ್ರಪಂಚದಲ್ಲಿ ಒಬ್ಬನಿಗೆ ಇನ್ನೊಬ್ಬನೊಡನೆ ಎಡೆಬಿಡದ ಸಂಬಂಧವೆಂಬುದೇ ಸುಳ್ಳು! ಮನುಷ್ಯನು ಹುಟ್ಟುವಾಗಲೂ ತಾನೊಬ್ಬನೇ ಹುಟ್ಟುವನು! ಸಾಯುವಾಗಲೂ ತಾನೊಬ್ಬನೇ ಸಾಯುವನು! ಪುಣ್ಯಪಾಪಗಳ ಫಲವನ್ನನುಭವಿಸುವಾಗಲೂ ತಾನೊಬ್ಬನೇ ಅನುಭವಿಸುವನು' ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಾದರೇನು? ಕೈಹಿಡಿದ ಹೆಂಡತಿಯಾದರೇನು! ಸಾಯುವಾಗ ಯಾರೂ ತನ್ನೊಡನೆ ಸಾಯುವರಿಲ್ಲ! ಮನುಷ್ಯನು ತನ್ನ ಹೆಂಡಿರುಮಕ್ಕಳನ್ನು ಪೋಷಿಸಬೇಕೆಂಬ ನೇವವನ್ನಿಟ್ಟುಕೊಂಡು, ತಿಳುವಳಿಕೆಯಿಲ್ಲದೆ, ಎಷ್ಟೋ ಅಧರ್ಮಗಳನ್ನು ಮಾಡಿ ಗಳಿಸಿದ ಹಣವನ್ನು, ಕಿತ್ತು ತಿನ್ನುವುದಕ್ಕಾಗಿ ಮಕ್ಕಳೇ ಹೊರತು ಬೇರೆಯಲ್ಲ! ದೊಡ್ಡಮೀನುಗಳಿಗೆ ಜೀವನಾಧಾರವಾದ ನೀರನ್ನು ಮರಿಮೀನುಗಳು ಕುಡಿದುಬಿಡುವಂತೆ, ತಂದೆಯ ಹಣವನ್ನು ಕಿತ್ತು ತಿನ್ನುವುದೇ ಮಕ್ಕಳ ಕೆಲಸವು. ಅದುದರಿಂದ ಮಕ್ಕಳನ್ನು ಒಂದುವಿಧದಿಂದ ಶತ್ರುಗಳೆಂದೇ ಹೇಳಬಹುದು! ಮನುಷ್ಯನು ಮೂಢಬುದ್ಧಿಯುಳ್ಳವನಾಗಿ, ತನ್ನದೆಂಬ ಮಮತೆಯಿಂದ, ಯಾವ ಪ್ರಾಣಗಳನ್ನೂ, ಧನವನ್ನೂ, ಹೆಂಡಿರುಮಕ್ಕಳನ್ನೂ ಅಕ್ಕರೆಯಿಂದ ಪೋಷಿಸುತ್ತಿರುವನೋ, ಅವೆಲ್ಲವೂ ಮಧ್ಯಕಾಲದಲ್ಲಿ

ಎಂದರೆ, ತವ್ಮಿಂದ ಅವನು ಅನುಭವಿಸಬೇಕಾದ ಸುಖವನ್ನು ಪೂರ್ಣವಾಗಿ ಅನುಭವಿಸುವುದಕ್ಕೆಮೊದಲೇ ಬಿಟ್ಟುಹೋಗುವುವು. ಇವೆಲ್ಲವನ್ನೂ ಪೋಷಿಸುವುದಕ್ಕಾಗಿ, ಮಾಡಬಾರದ ಅಧರ್ಮಗಳನ್ನುಮಾಡಿ, ಅದರಿಂದ ಪಾಪವನ್ನು ಕಟ್ಟಿಕೊಳ್ಳುವುದೊಂದೇ ಅವನಿಗೆ ಲಾಭವಲ್ಲವೆ ಬೇರೆಯಲ್ಲ. ಕೊನೆಗೆ ಅವನು ಆ ಪಾಪದಿಂದ ಅಂಧತಮಸ್ಸಿನಲ್ಲಿ ಮುಳುಗಬೇಕಾಗುವುದು. ಆದುದರಿಂದ ಓರಾಜಾ! ನೀನು ಈ ನಿನ್ನದೇಹವನ್ನಾಗಲಿ,ದೇಹಸಂಬಂಧಿಗಳನ್ನಾಗಲಿ, ಕನಸಿನ ಕೋರಿಕೆಗಳೆಂದೇ ತಿಳಿ!ಇವೊಂದರಲ್ಲಿಯೂ ತನ್ನದೆಂಬ ಮಮತೆಯನ್ನಿಡಬೇಡ! ಸರ್ವಸಮನಾಗಿ ವರ್ತಿಸು! ರಾಗದ್ವೇಷಾದಿಗಳನ್ನು ಬಿಟ್ಟು ಸ್ವಬುದ್ಧಿಯಿಂದ ನಿನ್ನ ಮನಸ್ಸನ್ನು ನಿಗ್ರಹಿಸಿ ಶಾಂತಚಿತ್ತನಾಗಿರು!" ಎಂದನು.

ಧೃತರಾಷ್ಟ್ರನು ಅಕ್ರೂರನ ಬುದ್ಧಿವಾದಗಳನ್ನು ಕೇಳಿ ಸಂತೋಷಪಟ್ಟು "ಓ ದಾನಪತೀ! ನಿನ್ನಬುದ್ಧಿವಾದಕ್ಕೆ ನಾನು ಕೃತಜ್ಞನಾಗಿರುವೆನು. ಆದರೇನು? ನೀನು ನನ್ನ ಶ್ರೇಯಸ್ಸಿಗಾಗಿ ಹೇಳಿದ ಈ ಬುದ್ಧಿವಾದಗಳು,ಮನುಷ್ಯನಿಗೆ ಅಮೃತವು ಲಭಿಸಿದಂತೆ, ಎಷ್ಟೆಷ್ಟು ಕೇಳುತಿದ್ದರೂ ತೃಪ್ತಿಯಿಲ್ಲವೆ ಆಸೆಯನ್ನು ಹೆಚ್ಚಿಸುತ್ತಿರುವುವು. ನಿನ್ನವಾಕ್ಯಗಳು ಪರಮಶ್ರೇಯಸ್ಕರವೆಂಬುದರಲ್ಲಿ ಸಂದೇಹವಿಲ್ಲ. ಈ ನಿನ್ನ ಬುದ್ಧಿವಾದಗಳು ಮಧುರವಾಗಿಯೂ ಹಿತವಾಗಿಯೂ ಇದ್ದರೂ,ಪುತ್ರಮೋಹದಿಂದ ಮಿಂಚಿನಂತೆ ಚಂಚಲವಾದ ನನ್ನಮನಸ್ಸಿನಲ್ಲಿ ಅವು ಸ್ಥಿರವಾಗಿ ನಿಲ್ಲುವಂತೆ ತೋರಲಿಲ್ಲ?"ಅಜ್ಞಾನವಿದ್ದಮೇಲೆ ನಿನ್ನ ಮನಸ್ಸನ್ನು ನೀನೇ ನಿಗ್ರಹಿಸಬಾರದೆ" ಎಂದರೆ, ಈಶ್ವರಸಂಕಲ್ಪವನ್ನು ಮೀರಲು ಯಾರಿಗೆತಾನೇ ಸಾಧ್ಯವು! ಭೂಭಾರಪರಿಹಾರಾರ್ಥವಾಗಿ ಯದುಕುಲದಲ್ಲಿ ಅವತರಿಸಿರುವ ಆ ಶ್ರೀಕೃಷ್ಣನ ಸಂಕಲ್ಪವೇ ಹೀಗಿರುವುದೆಂದೆಣಿಸುವೆನು. ಅವನು ನನ್ನನ್ನು ಈ ಸ್ಥಿತಿಯಲ್ಲಿರಿಸಿರುವಾಗ, ನಾನು ಅದಕ್ಕೆ ವ್ಯತಿರಿಕ್ತವಾಗಿ ನಡೆಯಬಲ್ಲೆನೆ?ಯಾವನು ಬೇರೊಬ್ಬರಿಗೆ ದುರೂಹ್ಯವಾದ ತನ್ನ ಮಾಯೆಯಿಂದ ಈಪ್ರಪಂಚವನ್ನು ಸೃಷ್ಟಿಸಿ,ತಾನೂ ಅದರಲ್ಲಿ ಅಂತರಾತ್ಮನಾಗಿದ್ದು, ಬ್ರಹ್ಮಾದಿಗಳಿಗೂ ಆಯಾಗುಣಕ್ಕೆ ತಕ್ಕಕಾರ್ಯವನ್ನು ನಿಯಾಮಿಸಿ ಕೊಟ್ಟು, ಬೇರೆ ಯಾರಿಗೂ ಗೋಚರವಲ್ಲದ ತನ್ನ ಲೀಲೆ

ಯಿಂದ ಸಂಸಾರಚಕ್ರವನ್ನು ಸುತ್ತಿಸುತ್ತಿರುವನೋ, ಆ ಪರಮೇಶ್ವರನಿಗೆ ನಮಸ್ಕಾರವು. ಅಕ್ರೂರಾ! ಆ ಕೃಷ್ಣನು ನನ್ನ ಬುದ್ಧಿಯನ್ನು ಹೇಗೆ ಪ್ರೇರಿಸುವನೋ ಹಾಗೆ ನಡೆಯಲಿ! ನನ್ನ ಯತ್ನವೇನಿದೆ?" ಎಂದನು. ಓ ಪರೀಕ್ಷಿದ್ರಾಜಾ! ಹೀಗೆ ಧೃತರಾಷ್ಟ್ರನ ಮಾತಿನಿಂದ, ಅಕ್ರೂರನು, ಅವನ ಮನೋಭಿಪ್ರಾಯವನ್ನು ತಿಳಿದುಕೊಂಡು, ಹೊರಡುವಾಗ ಅಲ್ಲಿ ತನ್ನ ಇಷ್ಟಮಿತ್ರರನ್ನು ಮತ್ತೊಮ್ಮೆ ನೋಡಿ, ಅವರ ಅನುಮತಿಯನ್ನು ಪಡೆದು, ಮಥುರಾಪುರಿಗೆ ಹಿಂತಿರುಗಿ ಬಂದನು. ಕೃಷ್ಣನು ತನ್ನನ್ನು ಯಾವ ಉದ್ದೇಶದಿಂದ ಹಸ್ತಿನಾವತಿಗೆ ಕಳುಹಿಸಿದ್ದನೋ, ಅದರಂತೆ, ಪಾಂಡವರವಿಷಯದಲ್ಲಿ ಧೃತರಾಷ್ಟ್ರನು ನಡೆದುಕೊಳ್ಳುತ್ತಿರುವ ರೀತಿಯೆಲ್ಲವನ್ನೂ ಬಲರಾಮಕೃಷ್ಣರಮುಂದೆ ವಿವರಿಸಿ ಹೇಳಿದನು.

ಇದು ನಾಲ್ವತ್ತೊಂಬತ್ತನೆಯ ಅಧ್ಯಾಯವು.



ಇಲ್ಲಿಗೆ ದಶಮಸ್ಕಂಧದಲ್ಲಿ ಪೂರ್ವಾರ್ಧವು.



ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ.

ಶ್ರೀ.

